



# ರಂಗಗೀತೆಗಳು

## (ಪೌರಾಣಿಕ)




ಸಂಪಾದಕರು

ಹೆಚ್.ಎಸ್. ಗೋವಿಂದ ಗೌಡ





# ರಂಗಗೀತೆಗಳು

## (ಪೌರಾಣಿಕ)

**ಹೆಚ್. ಎಸ್. ಗೋವಿಂದಗೌಡ**
ಸಂಪಾದಕರು

ಪ್ರಕಾಶಕರು :
**ಹನ್ಯಾಳು ಪ್ರಕಾಶನ**
ನಂ. 1. ನ್ಯೂ ಕಾಂತರಾಜ ಅರಸ್ ರಸ್ತೆ,
ಕುವೆಂಪುನಗರ, ಮೈಸೂರು

ರಂಗಗೀತೆಗಳು (ಪೌರಾಣಿಕ)

ರಂಗಗೀತೆಗಳ ಸಂಗ್ರಹಕಾರರು : **ಹೆಚ್.ಎಸ್. ಗೋವಿಂದಗೌಡ**

ಪ್ರಕಾಶಕರು :

**ಹನ್ಯಾಳು ಪ್ರಕಾಶನ**

ನಂ. 1. ನ್ಯೂ ಕಾಂತರಾಜ ಅರಸ್ ರಸ್ತೆ,
ಕುವೆಂಪುನಗರ, ಮೈಸೂರು

ಮೊದಲ ಮುದ್ರಣ : 2002

ಪುಟ ಸಂಖ್ಯೆ : 560 + xxxii

ಬೆಲೆ : ರೂ. 300



ಮುದ್ರಕರು :

**ಸ್ಪ್ಯಾನ್ ಪ್ರಿಂಟ್**

ನಂ. 72, 24ನೇ 'ಎ' ಕ್ರಾಸ್,
ಕರೇಸಂದ್ರ
ಬನಶಂಕರಿ 2ನೇ ಹಂತ
ಬೆಂಗಳೂರು - 70
ದೂರವಾಣಿ : 6718831

# ಅರ್ಪಣೆ

ಪೌರಾಣಿಕ ನಾಟಕಗಳ ಗೀಳು ಹಚ್ಚಿದ ನನ್ನ ಚಿಕ್ಕಪ್ಪಂದಿರಾದ

ದಿವಂಗತ ಕುಂಟೇಗೌಡರ ಅಣ್ಣೇಗೌಡರು

ಮತ್ತು

ದಿವಂಗತ ಸಿದ್ದೇಗೌಡರ ಸುಬ್ಬೇಗೌಡರು

ಅವರ ನೆನಪಿಗೆ

# ಮುನ್ನುಡಿ

ಇಪ್ಪತ್ತನೆಯ ಶತಮಾನದ ಪ್ರಾರಂಭದಿಂದ ದೇಶಕ್ಕೆ ಸ್ವಾತಂತ್ರ್ಯ ಬರುವವರೆಗೆ ನಾಟಕ ಕಂಪನಿಗಳು ಹೆಚ್ಚಾಗಿ ಪ್ರದರ್ಶಿಸುತ್ತಿದ್ದುದು ಪೌರಾಣಿಕ ನಾಟಕಗಳನ್ನು. ರಾಮಾಯಣ. ಮಹಾಭಾರತಗಳು ಓದುಬರಹ ಬರದವರಿಗೂ ಚಿರಪರಿಚಿತ. ಆದ್ದರಿಂದಲೇ ಕಂಪನಿಗಳು ಪ್ರದರ್ಶನಗಳಿಗೆ ಪೌರಾಣಿಕ ವಸ್ತುಗಳನ್ನು ಆರಿಸಿಕೊಳ್ಳುತ್ತಿದ್ದುವು. ಈ ವಸ್ತುಗಳಿಗೆ ಜನ ಸುಲಭವಾಗಿ ಸ್ಪಂದಿಸುತ್ತಿದ್ದರು.

ಕಾಲ ಬದಲಾದಂತೆ, ಸಾಮಾಜಿಕ ನಾಟಕಗಳು ಜನಪ್ರಿಯವಾದಂತೆ ಕಂಪನಿಗಳು ಪೌರಾಣಿಕ ನಾಟಕಗಳನ್ನು ಪ್ರದರ್ಶಿಸುವುದು ಕಡಿಮೆಯಾಗುತ್ತಾ ಬಂದಿತು. ಈಗಿರುವ ಏಳೆಂಟು ಕಂಪನಿಗಳಲ್ಲಿ ಯಾವುದೂ ಪೌರಾಣಿಕ ನಾಟಕಗಳನ್ನು ಪ್ರದರ್ಶಿಸುತ್ತಿಲ್ಲ. ಆದರೆ ಹಳ್ಳಿ ಹಳ್ಳಿಗಳಲ್ಲಿ ಪೌರಾಣಿಕ ನಾಟಕಗಳನ್ನು ಪ್ರದರ್ಶಿಸುವುದು ಈಗಲೂ ಮುಂದುವರಿದಿದೆ. ಇವರು ಹೆಚ್ಚಾಗಿ ಗುಬ್ಬಿ ಕಂಪನಿ ಹಿಂದೆ ಪ್ರದರ್ಶಿಸುತ್ತಿದ್ದ ಪೌರಾಣಿಕ ನಾಟಕಗಳನ್ನೇ ಪ್ರದರ್ಶಿಸುತ್ತಿದ್ದಾರೆ.

ಮಂಡ್ಯ ಜಿಲ್ಲೆಯ ಪ್ರಮುಖ ರಾಜಕಾರಣಿ ಕೆ.ವಿ. ಶಂಕರಗೌಡರು ಒಬ್ಬ ನಾಟಕಕಾರ. ಇವರು ಅನೇಕ ಪೌರಾಣಿಕ ಮತ್ತು ಸಾಮಾಜಿಕ ನಾಟಕಗಳನ್ನು ಪ್ರಯೋಗಿಸುತ್ತಿದ್ದರು. ಇವರ ಅತ್ಯಂತ ಜನಪ್ರಿಯ ನಾಟಕವೆಂದರೆ 'ಪಾದುಕಾ ಪಟ್ಟಾಭಿಷೇಕ', ಶಂಕರಗೌಡರು ಮಂಡ್ಯದಲ್ಲಿ ಪಿ.ಇ.ಎಸ್. ಶಿಕ್ಷಣ ಸಂಸ್ಥೆಯನ್ನು ಪ್ರಾರಂಭಿಸಿ ಎಂಜಿನಿಯರಿಂಗ್ ಸೇರಿದಂತೆ ಅನೇಕ ಕಾಲೇಜುಗಳನ್ನು ಪ್ರಾರಂಭಿಸಿದರು. ಈಗ ಪಿ.ಇ.ಎಸ್. ಒಂದು ದೊಡ್ಡ ಶಿಕ್ಷಣ ಸಂಸ್ಥೆಯಾಗಿ ರೂಪುಗೊಂಡಿದೆ. ಪಿ.ಇ. ಎಸ್ ಶಿಕ್ಷಣ ಸಂಸ್ಥೆಯ ಕೆಲವು ಕಟ್ಟಡಗಳನ್ನು ಕಟ್ಟಲು ಶಂಕರಗೌಡರು ನಾಟಕಗಳನ್ನು ಪ್ರದರ್ಶಿಸಿ ಹಣ ಸಂಗ್ರಹ ಮಾಡುತ್ತಿದ್ದರು. 'ಪಾದುಕಾ ಪಟ್ಟಾಭಿಷೇಕದ,ಒಂದು ಪ್ರದರ್ಶನಕ್ಕೆ ಒಂದು ಲಕ್ಷ ರೂಪಾಯಿಗಳ ಕಲೆಕ್ಷನ್ನಾಗಿದ್ದುದು ಈಗಲೂ ನನ್ನ ನೆನಪಿನಲ್ಲಿದೆ. ಶಂಕರಗೌಡರು ಸಾರ್ವಜನಿಕರಿಂದ ಹಣ ಸಂಗ್ರಹಿಸಿ ಕಾಲೇಜುಗಳ ಕಟ್ಟಡಗಳನ್ನು ಕಟ್ಟುತ್ತಿದ್ದರು. ಇದರ ಪರಿಣಾಮವಾಗಿ ಮಂಡ್ಯ ಜಿಲ್ಲೆಯಲ್ಲಿ ಶಿಕ್ಷಣ ಪಡೆದವರ ಸಂಖ್ಯೆ ಗಮನಾರ್ಹವಾಗಿ ಬೆಳೆದಿದೆ.

ಶಂಕರಗೌಡರು ಶಿಕ್ಷಣ ಕ್ಷೇತ್ರದ ಮೇಲೆ ಮಂಡ್ಯ ಜಿಲ್ಲೆಯಲ್ಲಿ ಯಾವ ರೀತಿಯ ಪರಿಣಾಮ ಬೀರಿದರೋ ರಂಗಭೂಮಿಯಲ್ಲಿಯೂ ಅಷ್ಟೇ ಪರಿಣಾಮ ಬೀರಿದ್ದಾರೆ. ಈ ಜಿಲ್ಲೆಯ ಹಳ್ಳಿ ಹಳ್ಳಿಗಳಲ್ಲಿ ಶಂಕರಗೌಡರು ಪ್ರದರ್ಶಿಸಿದ ನಾಟಕಗಳನ್ನು ಪ್ರಯೋಗಿಸುತ್ತಿದ್ದಾರೆ. ಕರ್ನಾಟಕದ ಎಲ್ಲೆಡೆಯೂ ಪೌರಾಣಿಕ ನಾಟಕಗಳು ಪ್ರದರ್ಶಿತವಾಗುತ್ತಿವೆ.

ಪ್ರೇಕ್ಷಕರು ಹೆಚ್ಚಾಗಿ ನಾಟಕಗಳಿಗೆ ಬರುತ್ತಿಲ್ಲ ಎನ್ನುವ ನೆಪವೊಡ್ಡಿ ಕಂಪನಿ ನಾಟಕಗಳವರು ದ್ವಂದ್ವಾರ್ಥದ ಸಂಭಾಷಣೆಗಳುಳ್ಳ ಸಾಮಾಜಿಕ ನಾಟಕಗಳನ್ನು ಪ್ರದರ್ಶಿಸುತ್ತಿದ್ದಾರೆ. ಈಗಲೂ ಕಂಪನಿಗಳವರು ಪ್ರಬುದ್ಧ ರೀತಿಯಲ್ಲಿ ಪೌರಾಣಿಕ ನಾಟಕಗಳನ್ನು ಪ್ರಯೋಗಿಸಲು ಪ್ರಾರಂಭಿಸಿದರೆ ಪ್ರೇಕ್ಷಕರ ಸಂಖ್ಯೆ ಖಂಡಿತವಾಗಿಯೂ ಹೆಚ್ಚುತ್ತದೆ.

ಪೌರಾಣಿಕ ನಾಟಕಗಳನ್ನು ಪ್ರಯೋಗಿಸಬೇಕಾದರೆ ಕಂಪನಿಗಳವರು ಹೆಚ್ಚು ಹಣ ಖರ್ಚು ಮಾಡಬೇಕಾಗುತ್ತದೆ. ಮುಖ್ಯವಾಗಿ ರಂಗಸಜ್ಜಿಕೆ ಮತ್ತು ವೇಷ ಭೂಷಣಗಳಿಗಾಗಿ ಹೆಚ್ಚು ವೆಚ್ಚವಾಗುತ್ತದೆ. ಎರಡನೆಯದಾಗಿ ಪೌರಾಣಿಕ ನಾಟಕಗಳಲ್ಲಿ ಅಭಿನಯಿಸುವವರು ಸಂಗೀತವನ್ನು ಬಲ್ಲವರಾಗಿರಬೇಕು.

ಹಿನ್ನೆಲೆಯಲ್ಲಿ ರೆಕಾರ್ಡ್ ಹಾಕಿ ಪಾತ್ರಗಳು ತುಟಿಗಳನ್ನು ಚಲಿಸುತ್ತಿದ್ದರೆ ಅನೇಕ ವೇಳೆ ಆಭಾಸವಾಗುತ್ತದೆ. ಆದ್ದರಿಂದ ಪಾತ್ರಧಾರಿಗಳು ಸಂಗೀತವನ್ನು ಬಲ್ಲವರಾಗಿದ್ದರೆ ಪ್ರದರ್ಶನದ ಮಹತ್ವ ಹೆಚ್ಚುತ್ತದೆ. ಆದರೆ ಸಂಗೀತಬಲ್ಲ ನಟನಟಿಯರು ಈಗ ಎಷ್ಟು ಮಂದಿ ಸಿಕ್ಕುತ್ತಾರೆ ? ಹೀಗಾಗಿ ಕಂಪನಿಗಳು ಪೌರಾಣಿಕ ನಾಟಕಗಳನ್ನು ಪ್ರಯೋಗಿಸುತ್ತಿಲ್ಲ.

ಪಾರ್ಸಿ ಕಂಪನಿಯ ಪ್ರಭಾವದಿಂದಾಗಿ ಕನ್ನಡದಲ್ಲಿ ಪ್ರೊಸಿನಿಯಂ ರಂಗಭೂಮಿಯ ಮೇಲೆ ನಾಟಕಗಳನ್ನು ಪ್ರದರ್ಶಿಸಲು ಪ್ರಾರಂಭಿಸಿದ ಮೇಲೆ ಪೌರಾಣಿಕ ನಾಟಕಗಳ ರಚನೆ ಪ್ರಾರಂಭವಾಯಿತು. ಅರಮನೆಯ ಕಂಪನಿ ಮತ್ತು ವರದಾಚಾರ್ಯರ ರತ್ನಾವಳಿ ಥಿಯೇಟ್ರಿಕಲ್ಸ್ ಸಂಸ್ಥೆಗಳು ಬಸವಪ್ಪ ಶಾಸ್ತ್ರಿಗಳ ಸಂಸ್ಕೃತ ನಾಟಕಗಳ ಅನುವಾದಗಳನ್ನು ಮತ್ತು ಶೇಕ್ಸ್‌ಪಿಯರ್ ನಾಟಕಗಳ ರೂಪಾಂತರಗಳನ್ನು ಪ್ರಯೋಗಿಸುತ್ತಿದ್ದವು. ಅನಂತರ

ಖಾಯಂ ಆಗಿ ನಾಟಕಗಳನ್ನು ಪ್ರದರ್ಶಿಸುವ ಕಂಪನಿಗಳು ಹುಟ್ಟಿಕೊಂಡ ಮೇಲೆ ಪೌರಾಣಿಕ ನಾಟಕಗಳ ಪ್ರಯೋಗಗಳು ಹೆಚ್ಚಾಗುತ್ತಾ ಬಂದವು. ತಿರುಮಲೆ ಶ್ರೀನಿವಾಸ ಅಯ್ಯಂಗಾರ್ ಅವರ 'ಮನ್ಮಥ ವಿಜಯ' ಮತ್ತು 'ಭಕ್ತ ಪ್ರಹ್ಲಾದ', ತೋರಣಗಲ್ ರಾಜಾರಾಯರ 'ರಾಮಾಂಜನೇಯ ಯುದ್ಧ' ಮತ್ತು 'ಸುಭದ್ರಾ ಕಲ್ಯಾಣ' ಮುಂತಾದ ಪೌರಾಣಿಕ ನಾಟಕಗಳ ಪ್ರಯೋಗಗಳು ಜನಪ್ರಿಯವಾದುವು.

ವೃತ್ತಿ ರಂಗಭೂಮಿಯ ಸುಪ್ರಸಿದ್ಧ ಗುಬ್ಬಿ ಕಂಪನಿ ಪೌರಾಣಿಕ ನಾಟಕಗಳು ಪ್ರಯೋಗಗಳಿಗೆ ಹೆಸರುವಾಸಿಯಾದವು. ಈ ಕಂಪನಿ ಪ್ರಯೋಗಿಸಿದ ಬಿ. ಪುಟ್ಟಸ್ವಾಮಯ್ಯನವರ 'ಕುರುಕ್ಷೇತ್ರ' ಮತ್ತು 'ದಶಾವತಾರ' ವೈಭವದ ರಂಗಸಜ್ಜಿಕೆ, ಪ್ರತಿಭಾನ್ವಿತ ನಟರ ಪ್ರಬುದ್ಧ ಅಭಿನಯ ಮತ್ತು ಒಳ್ಳೆಯ ಸಂಗೀತದಿಂದಾಗಿ ವೃತ್ತಿ ರಂಗಭೂಮಿಯ ಇತಿಹಾಸದಲ್ಲೇ ಮಹತ್ವದ ಸ್ಥಾನ ಪಡೆದವು. ಇದಕ್ಕೆ ಮುಂಚೆ ಮತ್ತು ಅನಂತರವೂ ಬೆಳ್ಳಾವೆ ನರಹರಿಶಾಸ್ತ್ರಿಗಳ 'ಸಂಪೂರ್ಣ ರಾಮಾಯಣ', 'ಕಂಸವಧೆ', 'ಶ್ರೀಕೃಷ್ಣಲೀಲೆ', 'ಶ್ರೀ ಕೃಷ್ಣ ಗಾರುಡಿ', 'ಶ್ರೀಕೃಷ್ಣ ಪಾರಿಜಾತ', 'ಶ್ರೀ ರುಕ್ಮಿಣೀ ಸ್ವಯಂವರ', ಮತ್ತಿತರ ನಾಟಕಗಳನ್ನು ಗುಬ್ಬಿ ಕಂಪನಿ ಪ್ರಯೋಗಿಸುತ್ತಿತ್ತು. ಕರ್ನಾಟಕದ ಇತರ ಕಂಪನಿಗಳು ಬೇರೆ ಬೇರೆ ನಾಟಕಕಾರರಿಂದ ನಾಟಕಗಳನ್ನು ಬರೆಯಿಸಿ ಪ್ರಯೋಗಿಸುತ್ತಿದ್ದವು. ಹೀಗಾಗಿ ಕರ್ನಾಟಕದ ಇಡೀ ವೃತ್ತಿ ರಂಗಭೂಮಿ ಪೌರಾಣಿಕ ನಾಟಕಗಳಮಯವಾಗಿತ್ತು.

ಬೆಳ್ಳಾವೆ ನರಹರಿಶಾಸ್ತ್ರಿಗಳು, ಪುಟ್ಟಸ್ವಾಮಯ್ಯನವರು ಅಥವಾ ಮತ್ತೊಬ್ಬರು ಬರೆದ ನಾಟಕಗಳನ್ನು ಕಂಪನಿಗಳು ಪ್ರಯೋಗಿಸುತ್ತಿದ್ದ ರೀತಿ ಹಸ್ತಪ್ರತಿಯ ಯಥಾವತ್ತಾಗಿರುತ್ತಿರಲಿಲ್ಲ. ಒಮ್ಮೆ ಕಂಪನಿಗಳು ಒಂದು ನಾಟಕವನ್ನು ಕೈಗೆತ್ತಿಕೊಂಡರೆ ಪಾತ್ರಧಾರಿಗಳ ಉಚ್ಚಾರಣೆಗೆ ಅನುಗುಣವಾಗಿ ಸಂಭಾಷಣೆಗಳು ಬದಲಾಗುತ್ತಿದ್ದವು. ನಾಟಕಗಳಲ್ಲಿ ಪಾತ್ರವಹಿಸುವವರು ಹೆಚ್ಚಾಗಿ ಅವಿದ್ಯಾವಂತರು. ಅವರಿಗೆ ಕ್ಲಿಷ್ಟ ಪದಗಳನ್ನು ಹೇಳಲು ಕಷ್ಟವಾಗುತ್ತಿತ್ತು. ಆದ್ದರಿಂದ ಪಾತ್ರಧಾರಿಗಳು ಹೇಳುವುದಕ್ಕೆ ಸುಲಭವಾಗುವಂತೆ ಸಂಭಾಷಣೆಗಳಲ್ಲಿ ಬದಲಾವಣೆ ಮಾಡಲಾಗುತ್ತಿತ್ತು ಎಂದು ಗುಬ್ಬಿ ವೀರಣ್ಣನವರೇ ಭಾಷಣವೊಂದರಲ್ಲಿ ಹೇಳಿದ್ದರು.

ಸಂಭಾಷಣೆಗಳು ಬದಲಾಗುವುದು ಮಾತ್ರವಲ್ಲದೇ ಅನೇಕ ವೇಳೆ ದೃಶ್ಯಗಳೂ ಬದಲಾಗುತ್ತಿದ್ದುವು. ಒಂದು ನಾಟಕದ ಪ್ರಯೋಗಗಳು ಹೆಚ್ಚಾಗುತ್ತಾ ಬಂದಂತೆ ಕೆಲವು ದೃಶ್ಯಗಳನ್ನು ಮೊಟಕು ಮಾಡುವುದು. ಚಿಕ್ಕ ದೃಶ್ಯಗಳನ್ನು ಹಿಗ್ಗಿಸುವುದು ಮಾಮೂಲಾಗಿರುತ್ತಿತ್ತು. ಒಂದು ದೃಶ್ಯಕ್ಕೂ ಮತ್ತೊಂದು ದೃಶ್ಯಕ್ಕೂ ಬೆಸುಗೆ ಸರಿಯಾಗಿಲ್ಲ ಎನಿಸಿದಾಗ ಕೆಲವು ಹೊಸ ದೃಶ್ಯಗಳನ್ನು ಸೇರಿಸಬೇಕಾಗುತ್ತಿತ್ತು. ಒಂದು ನಾಟಕದ ನೂರು ಪ್ರಯೋಗಗಳಾದ ಮೇಲೆ ಹಸ್ತಪ್ರತಿಗೂ ಪ್ರಯೋಗಕ್ಕೂ ಸಾಮರಸ್ಯವೇ ಇಲ್ಲ ಎನಿಸುವಷ್ಟು ಬದಲಾವಣೆಗಳಾಗಿರುತ್ತಿದ್ದವು.

ಹವ್ಯಾಸಿ ರಂಗಭೂಮಿಯಲ್ಲಿ ಅಭಿನಯಿಸುತ್ತಿದ್ದ ಕೊಂಡಕ್ಕಿ ರಾಜಶೇಖರ್ ಅವರು 'ಸದಾರಮೆ' ನಾಟಕವನ್ನು ಈಗಿನ ಕಾಲಕ್ಕೆ ಹೊಂದುವಂತೆ ನೀವು ಬದಲಾಯಿಸಿಕೊಟ್ಟರೆ ಪ್ರಯೋಗಿಸುತ್ತೇನೆ ಎಂದು ಹೇಳಿದ್ದರು. ಗುಬ್ಬಿ ಕಂಪನಿ ಪ್ರಯೋಗಿಸುತ್ತಿದ್ದ 'ಸದಾರಮೆ' ನಾಟಕವನ್ನು ನಾನು ನೋಡಿದ್ದೆ. ಮಾರುಕಟ್ಟೆಯಲ್ಲಿ ದೊರಕುವ ಪ್ರತಿಯನ್ನು ನಾನು ಕೊಂಡುಕೊಂಡು ಓದಿದಾಗ ಗುಬ್ಬಿ ಕಂಪನಿಯ ಪ್ರಯೋಗಕ್ಕೂ ಇದಕ್ಕೂ ಸಂಬಂಧವೇ ಇಲ್ಲ ಎನಿಸಿತ್ತು. ವೀರಣ್ಣನವರ ಮಗ ಜಿ.ವಿ. ಶಿವಾನಂದ್ ಅವರ ಬಳಿ ಈ ವಿಷಯವನ್ನು ಪ್ರಸ್ತಾಪಿಸಿದಾಗ "ನೀವು ಹೇಳುವುದು ನಿಜ ಗುಬ್ಬಿ ಕಂಪನಿ ಕೊನೆ ಕೊನೆಗೆ ಪ್ರಯೋಗಿಸುತ್ತಿದ್ದ ಸದಾರಮೆ ನಾಟಕದ ಕೈಬರಹದ ಪ್ರತಿಯೊಂದು ನನ್ನ ಬಳಿ ಇದೆ ಅದನ್ನು ನಿಮಗೆ ಕೊಡುತ್ತೇನೆ" ಎಂದಿದ್ದರು. ಶಿವಾನಂದ ಅವರನ್ನು ಭೇಟಿಯಾದಾಗಲೆಲ್ಲಾ ಕೈಬರಹದ ಪ್ರತಿಯನ್ನು ಕೇಳುತ್ತಿದ್ದೆ. ಅವರು ಎಲ್ಲೋ ಅದು ಸೇರಿಕೊಂಡಿದೆ ಹುಡುಕಿ ಕೊಡುತ್ತೇನೆ ಎನ್ನುತ್ತಿದ್ದರು. ಇನ್ನು ಅದು ನನಗೆ ದೊರಕುವ ಸಂಭವವಿಲ್ಲ. ಏಕೆಂದರೆ ಶಿವಾನಂದ ಅವರು 2002ರ ಮಾರ್ಚ್ 25 ರಂದು ಈ ಲೋಕದಿಂದ ದೂರವಾದರಲ್ಲ.

ಪ್ರಯೋಗದಲ್ಲಿ ಮೂಲ ನಾಟಕ ಬದಲಾಗುತ್ತಿದ್ದ ರೀತಿಯಲ್ಲೇ ಹಾಡುಗಳೂ ಬದಲಾಗುತ್ತಿದ್ದವು. ಅಭಿನವ ಕಾಳಿದಾಸ ಎನಿಸಿಕೊಂಡ ಬಸವಪ್ಪ ಶಾಸ್ತ್ರಿಗಳ ಶಾಕುಂತಲ ನಾಟಕದ ಮುದ್ರಿತ ಪ್ರತಿಯನ್ನು ಇದಕ್ಕೆ ಉದಾಹರಣೆಯಾಗಿ ನೋಡಬಹುದು. ಕಾಳಿದಾಸನ ಪದ್ಯಗಳನ್ನು ಬಸವಪ್ಪ ಶಾಸ್ತ್ರಿಗಳು ಕಂದ ಮತ್ತು ವೃತ್ತಗಳಲ್ಲಿ ಅನುವಾದಿಸಿದ್ದಾರೆ. ಆದರೆ ಮುದ್ರಣವಾಗಿರುವ ಪುಸ್ತಕದ ಅಡಿ ಟಿಪ್ಪಣಿಗಳಲ್ಲಿ ಕಂದ ಮತ್ತು ವೃತ್ತಗಳಿಗೆ

ಪರ್ಯಾಯವಾಗಿ ಬರೆದಿರುವ ಹಾಡುಗಳನ್ನು ಕೊಟ್ಟಿದ್ದಾರೆ. ಪ್ರಯೋಗ ಮಾಡುವವರು ಕಂದ ಮತ್ತು ವೃತ್ತಗಳನ್ನು ಬೇಕಾದರೂ ಹಾಡಬಹುದು ಅಥವಾ ಈ ಹಾಡುಗಳನ್ನಾದರೂ ಹಾಡಬಹುದು ಎನ್ನುವುದು ಬಸವಪ್ಪ ಶಾಸ್ತ್ರಿಗಳ ಉದ್ದೇಶವಾಗಿತ್ತು. ಕಾಲಕ್ರಮೇಣ ನಾಟಕಕಾರರು ಬರೆಯದ, ಬೇರೆಯವರು ಬರೆದ ಹಾಡುಗಳನ್ನು ಪ್ರಯೋಗ ಮಾಡಲು ಬಳಸಿಕೊಳ್ಳುತ್ತಿದ್ದರು. ಇದರಿಂದಾಗಿ ಅನೇಕ ಹಾಡುಗಳನ್ನು ನಾಟಕಕಾರರೇ ರಚಿಸಿದ್ದುದು ಎಂದು ಹೇಳಲು ಬರುವುದಿಲ್ಲ. ಈ ಹಾಡುಗಳನ್ನೆಲ್ಲಾ ಸಂಗ್ರಹಿಸಿದರೆ ರಂಗಸಂಗೀತದ ಇತಿಹಾಸ ನಮ್ಮ ಕಣ್ಣ ಮುಂದೆ ತೆರೆದುಕೊಳ್ಳುತ್ತದೆ.

ಕೆಲವು ವರ್ಷಗಳ ಹಿಂದೆ ಕನ್ನಡ ಸಾಹಿತ್ಯ ಪರಿಷತ್ತು ರಂಗಗೀತೆಗಳ ಒಂದು ದೊಡ್ಡ ಸಂಗ್ರಹವನ್ನು ಪ್ರಕಟಿಸಿತು. ಆದರೆ ಈ ಗೀತೆಗಳ ಸ್ವರಪ್ರಸ್ತಾರ ಹಾಕಿರಲಿಲ್ಲ. ನಾನು ಕರ್ನಾಟಕ ನಾಟಕ ಅಕಾಡೆಮಿ ಅಧ್ಯಕ್ಷನಾಗಿದ್ದಾಗ (1986-88) ರಂಗಗೀತೆಗಳ ಒಂದು ಸಂಕಲನವನ್ನು ಪ್ರಕಟಿಸಿದೆ. ಅವುಗಳನ್ನು ಹಾಡಲು ಬಯಸುವವರಿಗೆ ಅನುಕೂಲವಾಗಲೆಂದು ಯೋಗಾ ನರಸಿಂಹ ಅವರಿಂದ ಸ್ವರಪ್ರಸ್ತಾರವನ್ನು ಹಾಕಿಸಿದೆ. ಈ ಸಂಕಲನ ಎಲ್ಲರ ಮೆಚ್ಚುಗೆ ಗಳಿಸಿತು. ಹಾಡುವವರಿಗೂ ಅನುಕೂಲವಾಯಿತು. ಇದೀಗ ಮತ್ತೊಂದು ರಂಗಗೀತೆಗಳ ಸಂಕಲನ ಪ್ರಕಟವಾಗುತ್ತಿದೆ.

ಶ್ರೀ ಹೆಚ್.ಎಸ್. ಗೋವಿಂದಗೌಡರು ವಾಣಿಜ್ಯ ತೆರಿಗೆ ಇಲಾಖೆಯಲ್ಲಿ ಡೆಪ್ಯುಟಿ ಕಮಿಷನರ್ ಆಗಿರುವವರು. ಆದರೆ ಇವರಿಗೆ ಪೌರಾಣಿಕ ನಾಟಕಗಳು ಮತ್ತು ಅವುಗಳಲ್ಲಿಯ ಹಾಡುಗಳೆಂದರೆ ಪ್ರಾಣ. ಸುಮಾರು ಮೂರು ವರುಷಗಳ ಹಿಂದೆ ಕಂಪನಿಗಳು ಪ್ರಯೋಗಿಸುತ್ತಿದ್ದ ಪೌರಾಣಿಕ ನಾಟಕಗಳಲ್ಲಿಯ ಹಾಡುಗಳನ್ನು ಸಂಗ್ರಹಿಸಿ ಒಂದು ಸಂಕಲನವನ್ನು ಪ್ರಕಟಿಸಬೇಕು ಎನಿಸಿತು. ಈ ಹಾಡುಗಳು ಜನರ ನೆನಪಿನಿಂದ ಮರೆಯಾಗಬಾರದು ಎನ್ನುವುದು ಅವರ ಉದ್ದೇಶ. ಹೆಚ್.ಎಸ್ ಗೋವಿಂದಗೌಡರು ತಕ್ಷಣವೇ ಕಾರ್ಯಪ್ರವೃತ್ತರಾದರು. ಆದರೆ ತಮ್ಮ ಕೆಲಸ ಸುಲಭದ್ದಲ್ಲ ಎಂದು ಅವರಿಗೆ ಮನವರಿಕೆಯಾಗಲು ತಡವಾಗಲಿಲ್ಲ. ಏಕೆಂದರೆ ಹಳೆಯ ನಾಟಕಗಳ ಮುದ್ರಿತ ಪ್ರತಿಗಳು ದೊರಕುತ್ತಿರಲಿಲ್ಲ. ದೊರಕಿದರೂ ಪ್ರಯೋಗಗಳಲ್ಲಿ ಬಳಸುತ್ತಿದ್ದ ಹಾಡುಗಳು ಇವುಗಳಲ್ಲಿ ಇರುತ್ತಿರಲಿಲ್ಲ. ಹೀಗಾಗಿ ಹಿರಿಯ ಕಲಾವಿದರನ್ನು ಹುಡುಕಿಕೊಂಡು ಹೋಗುವುದು ಅವರಿಗೆ

ಅನಿವಾರ್ಯವಾಯಿತು. ಕಲಾವಿದರು ಹಾಡುತ್ತಾ ಹೋದಂತೆ ಇವರು ಬರೆದುಕೊಳ್ಳಲಾರಂಭಿಸಿದರು. ಹೀಗೆ ಸುಮಾರು ಎರಡು ವರ್ಷಗಳ ಕಾಲ ಕಷ್ಟಪಟ್ಟು ಗೋವಿಂದಗೌಡರು ಈ ಸಂಕಲನವನ್ನು ಸಿದ್ಧಪಡಿಸಿದ್ದಾರೆ. ಅನೇಕ ಬಾರಿ ಇವರು ನನ್ನನ್ನು ಭೇಟಿಯಾಗಿ ಚರ್ಚಿಸಿದ್ದಾರೆ. ಹೀಗಾಗಿ ಅವರು ಪಟ್ಟಿರುವ ಶ್ರಮವನ್ನು ನಾನು ಹತ್ತಿರದಿಂದ ಬಲ್ಲೆ.

ಇಲ್ಲಿ ಗೋವಿಂದಗೌಡರು ಸಂಗ್ರಹಿಸಿರುವ ರಂಗಗೀತೆಗಳಲ್ಲಿ ನಾಟಕಕಾರರೇ ಎಷ್ಟು ಬರೆದಿದ್ದಾರೆ ? ಬೇರೆಯವರು ಎಷ್ಟನ್ನು ಬರೆದಿದ್ದಾರೆ - ಎನ್ನುವುದು ಸ್ಪಷ್ಟವಾಗುವುದು. ಏಕೆಂದರೆ ಬೇರೆಯವರು ಹಾಡುಗಳನ್ನು ಬರೆದಿದ್ದರೆ ಅವರು ಯಾರು ಎನ್ನುವುದಕ್ಕೆ ದಾಖಲೆಯಿಲ್ಲ. ಆದ್ದರಿಂದ ಗೋವಿಂದಗೌಡರು ನಾಟಕದ ಹೆಸರು ಮತ್ತು ಅದನ್ನು ಬರೆದಿರುವವರ ಹೆಸರುಗಳನ್ನು ಹಾಕಿದ್ದಾರೆ.

ರಂಗಗೀತೆಗಳಿಗೆ ಸ್ವರ ಪ್ರಸ್ತಾರ ಹಾಕಬೇಕೆ ? ಅಥವಾ ಬೇಡವೇ ? ಎನ್ನುವ ಬಗೆಗೆ ನಾನು ಮತ್ತು ಗೋವಿಂದಗೌಡರು ಚರ್ಚಿಸಿದೆವು. ಇಷ್ಟೊಂದು ಗೀತೆಗಳಿಗೆ ಸ್ವರ ಪ್ರಸ್ತಾರ ಹಾಕುವುದು ಸುಲಭದ ಕೆಲಸವಲ್ಲ. ಸ್ವರ ಪ್ರಸ್ತಾರ ಹಾಕಬಲ್ಲವರನ್ನು ಹುಡುಕುವುದೂ ಕಷ್ಟ. ಆದ್ದರಿಂದ ರಾಗ ಮತ್ತು ತಾಳಗಳನ್ನು ಮಾತ್ರ ಗೋವಿಂದಗೌಡರು ನಮೂದಿಸಿದ್ದಾರೆ. ಇಷ್ಟು ಸಾಕು ಎನಿಸುತ್ತದೆ.

ರಂಗಗೀತೆಗಳನ್ನು ಸಂಗ್ರಹಿಸಿದ ಮೇಲೆ ಇವುಗಳ ಕಾಪಿರೈಟ್ ಸಮಸ್ಯೆ ಗೋವಿಂದಗೌಡರಿಗೆ ಎದುರಾಯಿತು. ಒಬ್ಬ ಲೇಖಕ ಅಥವಾ ನಾಟಕಕಾರ ನಿಧನರಾದರೆ ಕೃತಿಸ್ವಾಮ್ಯದ ಪ್ರಶ್ನೆ ಇರುವುದಿಲ್ಲ ಎಂಬ ಕಾನೂನು ಮೊದಲು ಇತ್ತು. ಐವತ್ತು ವರ್ಷ ಎನ್ನುವುದನ್ನು ಈಗ ಅರವತ್ತು ವರ್ಷ ಎಂದು ಬದಲಾಯಿಸಲಾಗಿದೆಯಂತೆ. ಈ ಸಂಕಲನದಲ್ಲಿರುವ ಅನೇಕ ಹಾಡುಗಳಿರುವ ನಾಟಕಗಳನ್ನು ಬರೆದವರು ನಮ್ಮಿಂದ ದೂರವಾಗಿ ಇನ್ನೂ ಅಷ್ಟು ವರ್ಷಗಳಾಗಿಲ್ಲ. ಆದ್ದರಿಂದ ನಾಟಕಕಾರರ ವಂಶಸ್ಥರಲ್ಲಿ ಕೃತಿಸ್ವಾಮ್ಯವಿರಬಹುದು. ಆದರೆ ಅನೇಕ ನಾಟಕಕಾರರ ವಂಶಸ್ಥರು ಎಲ್ಲೆಲ್ಲಿಯೋ ಇದ್ದಾರೆ. ಅವರನ್ನು ಹುಡುಕುವುದು ಪ್ರಯಾಸದ ಕೆಲಸವಾಯಿತು. ಆದರೆ ತಾಳ್ಮೆಯ ಮೂರ್ತಿಯಂತಿರುವ ಗೋವಿಂದಗೌಡರು ನಾಟಕಕಾರರ ವಂಶಸ್ಥರನ್ನು ಹುಡುಕಿಕೊಂಡು ಹೋಗಿ ಅವರಿಂದ ಅನುಮತಿಯನ್ನು ಪಡೆದಿದ್ದಾರೆ.

ವಾಣಿಜ್ಯ ತೆರಿಗೆ ಇಲಾಖೆಯಲ್ಲಿ ದೊಡ್ಡ ಅಧಿಕಾರಿಯಾಗಿರುವ ಗೋವಿಂದಗೌಡರು ಲಾಭವಿಲ್ಲದೇ ಈ ಕೆಲಸ ಮಾಡುತ್ತಾರೆಯೇ ಎನ್ನುವ ಸಂಶಯ ಕೆಲವು ನಾಟಕಕಾರರ ವಂಶಸ್ಥರಿಗೆ ಬಂದದ್ದು ಸುಳ್ಳಲ್ಲ. ಏಕೆಂದರೆ ಈಗ ಜನ ಸಾಮಾನ್ಯವಾಗಿ ಲಾಭ-ನಷ್ಟಗಳ ದೃಷ್ಟಿಯಿಂದಲೇ ಎಲ್ಲವನ್ನೂ ನೋಡುತ್ತಾರಲ್ಲ! ಆದರೆ ಗೌಡರು ಈ ಕೆಲಸ ಮಾಡಿ ಸಾಕಷ್ಟು ಹಣ ಕಳೆದುಕೊಂಡಿದ್ದಾರೆ.

ಈ ಸಂಕಲನವನ್ನು ಪ್ರಕಟಿಸಿ ಗೋವಿಂದಗೌಡರು ಸಾಕಷ್ಟು ನಷ್ಟ ಅನುಭವಿಸಿದ್ದಾರೆ. ಇದು ಸಾಲದು ಎನ್ನುವಂತೆ ಕ್ಯಾಸೆಟ್ಟುಗಳನ್ನು ಸಿದ್ಧಪಡಿಸಿದ್ದಾರೆ. ನಾಟಕಗಳು ಮತ್ತು ರಂಗ ಸಂಗೀತದ ಮೇಲೆ ಗೋವಿಂದ ಗೌಡರಿಗಿರುವ ಅದಮ್ಯ ಪ್ರೀತಿ ಅವರಿಂದ ಈ ಕೆಲಸವನ್ನು ಮಾಡಿಸಿತು. ಮೊದಲ ಸಾರಿ ಗೋವಿಂದಗೌಡರು ನನ್ನನ್ನು ಭೇಟಿಯಾದಾಗ ಇದು ತುಂಬಾ ಪ್ರಯಾಸದ ಕೆಲಸ ಗೌಡರೇ ಯೋಚನೆ ಮಾಡಿ ಎಂದು ಹೇಳಿದೆ. ಆದರೆ ಅವರು ಮುಂದಿಟ್ಟ ಹೆಜ್ಜೆಯನ್ನು ಹಿಂದಕ್ಕೆ ಇಡಲಿಲ್ಲ. ಅವರ ಶ್ರದ್ಧೆ, ಸಾಹಸಗಳು ನನ್ನನ್ನು ಮೂಕವಾಗಿಸಿತು. ಇಂತಹ ಬೃಹತ್ ಸಂಕಲನವನ್ನು ರಂಗಪ್ರೇಮಿಗಳಿಗೆ ಉಡುಗೊರೆಯಾಗಿ ನೀಡಿರುವ ಗೋವಿಂದಗೌಡರನ್ನು ನಾನು ಹೃತ್ಪೂರ್ವಕವಾಗಿ ಅಭಿನಂದಿಸುತ್ತೇನೆ.

ದಿನಾಂಕ : 4.4.2002

ಸ್ಥಳ : ಬೆಂಗಳೂರು

ಡಾ. ಬಿ.ವಿ. ವೈಕುಂಠರಾಜು

# ಪ್ರಸ್ತಾವನೆ

ಹಿಂದಿನ ಕಾಲದಲ್ಲಿ ಗ್ರಾಮೀಣ ಜನತೆಯ ಏಕೈಕ ಮನೋರಂಜನೆಯ ಮಾಧ್ಯಮವಾಗಿದ್ದ ಕನ್ನಡ ರಂಗಭೂಮಿಯ ಪೌರಾಣಿಕ ನಾಟಕಗಳು ಇತ್ತೀಚೆಗೆ ಗ್ರಾಮಾಂತರ ಪ್ರದೇಶದಲ್ಲೂ ತಮ್ಮ ಅಸ್ತಿತ್ವವನ್ನು ಕಳೆದುಕೊಳ್ಳುತ್ತಿವೆ. ಅಷ್ಟೇ ಏಕೆ ಆಧುನಿಕ ರಂಗಭೂಮಿಯಿಂದ ಹೇಳ ಹೆಸರಿಲ್ಲದಂತೆ ಮಾಯವಾಗುತ್ತಿವೆ. ಆದರೆ ರಂಗ ಭೂಮಿಯ ಇತರ ವಿಭಾಗಗಳಲ್ಲಿ ಅನೇಕ ಚಟುವಟಿಕೆಗಳು ನಡೆಯುತ್ತಿದ್ದರೂ, ರಂಗ ಭೂಮಿ ಪರಂಪರೆಯ ಅಮೂಲ್ಯವಾದ ಒಂದು ಭಾಗವಾದ ಪೌರಾಣಿಕ ನಾಟಕಗಳ ಪ್ರದರ್ಶನ ಮಾತ್ರ ಕ್ಷೀಣಿಸುತ್ತಿರುವುದು ಮತ್ತು ಮರೆಯಾಗುತ್ತಿರುವುದು ವಾಸ್ತವ. ನಮ್ಮ ನಾಡಿನ ಭವ್ಯ ಸಾಂಸ್ಕೃತಿಕ ಪರಂಪರೆಯ ದ್ಯೋತಕವಾಗಿರುವ ಪೌರಾಣಿಕ ನಾಟಕ ಕಲೆಯ ಸಂಪ್ರದಾಯವನ್ನು ಸಂಪೂರ್ಣವಾಗಿ ಉಳಿಸಿ, ರಕ್ಷಿಸಿ ಬೆಳೆಸಿಕೊಳ್ಳುತ್ತೇವೆ ಎಂಬುದು ನಮ್ಮ ಅಳವಿಗೂ ಮೀರಿದ ವಿಚಾರ. ಆದರೆ ಪೌರಾಣಿಕ ನಾಟಕಗಳ ರಂಗ ಗೀತೆಗಳ ಮಾಧುರ್ಯವನ್ನಾದರೂ ಸಮಗ್ರವಾಗಿ ಸಂಗ್ರಹಿಸಿ, ವ್ಯವಸ್ಥಿತವಾಗಿ ಸಂಕಲಿಸಿ ಉಳಿಸಿಕೊಳ್ಳಬೇಕೆಂಬ ಪ್ರಯತ್ನವನ್ನಾದರೂ ಮಾಡಬೇಕೆನ್ನುವುದು ನನ್ನ ಮಹದಾಸೆ. ವೃತ್ತಿನಾಟಕ ಮಂಡಳಿಗಳು ಅಥವಾ ನಾಟಕ ಸಭಾಗಳು ಈ ಹಿಂದೆ ಪ್ರಯೋಗಿಸಿ ಆಡುತ್ತಿದ್ದ ಕೆಲ ಪೌರಾಣಿಕ ನಾಟಕಗಳು ಮುದ್ರಣಗೊಂಡಿದ್ದಾಗ್ಯೂ, ಇನ್ನೂ ಅನೇಕ ನಾಟಕಗಳು ಮುದ್ರಣವನ್ನೇ ಕಂಡಿಲ್ಲ. ಮುದ್ರಣಗೊಂಡ ಸುಮಾರು ನಾಟಕಗಳ ಪ್ರತಿಗಳು ಸಹ ಈಗ ದೊರೆಯುತ್ತಿಲ್ಲ. ಆದ್ದರಿಂದ ಕೊನೆಯ ಪಕ್ಷ ಪೌರಾಣಿಕ ನಾಟಕಗಳ ಹಾಡುಗಳನ್ನು ಮತ್ತು ಕಂದಗಳನ್ನು ಸಂಗ್ರಹಿಸಿ ಪ್ರಕಟಿಸುವ ಮೂಲಕ ಮುಂದಿನ ಪೀಳಿಗೆಗೆ ಅದರಿಂದ ಅನುಕೂಲವಾಗಲೆಂಬ ಉದ್ದೇಶದಿಂದ ಈ ಕಾರ್ಯದಲ್ಲಿ ತೊಡಗಿಸಿಕೊಂಡಿದ್ದೇನೆ. ಪೌರಾಣಿಕ ನಾಟಕಗಳ ರಂಗ ಸಂಗೀತವನ್ನು ಬೇರೆಯವರೂ ಕೇಳಲಿ, ಮುಂದಿನ ಪೀಳಿಗೆಗೂ ನೆರವಾಗಲಿ, ಅಲ್ಲದೆ ರಂಗ ಸಂಗೀತ ಪ್ರಪಂಚದಲ್ಲಿ ಇದು ದಾಖಲಾಗಲಿ ಎಂಬುದೂ ನನ್ನ ಆಶಯ.

೧೯೬೨-೬೬ ನಾನು ಹಾಸನ ಜಿಲ್ಲಯ ಅರಕಲಗೂಡು ತಾಲ್ಲೂಕಿನ ಗುದ್ರಪಟ್ಟಣ ಗ್ರಾಮದಲ್ಲಿ ಮಾಧ್ಯಮಿಕ - ಪ್ರೌಢಶಾಲೆಗಳಲ್ಲಿ ವ್ಯಾಸಂಗ ಮಾಡುತ್ತಿದ್ದ ವರ್ಷಗಳು

ನಮ್ಮ ಪಕ್ಕದ ಮನೆ ನಮ್ಮ ಚಿಕ್ಕಪ್ಪಂದಿರಾಗಿದ್ದ ಶ್ರೀ ಹೆಚ್.ಎಸ್. ಸುಬ್ಬೇಗೌಡರ ಮನೆ. ಅವರು ಊರಿನಲ್ಲಿ ಪೌರಾಣಿಕ ನಾಟಕಗಳಲ್ಲಿ ಅಭಿನಯಿಸುತ್ತಿದ್ದು, ಅವರ ಮನೆಯಲ್ಲಿ ಒಂದು ಹಾರ್ಮೋನಿಯಂ ಪೆಟ್ಟಿಗೆ ಇದ್ದು, ಅದನ್ನು ಅವರು ನುಡಿಸುತ್ತಿದ್ದರು. ಸಾಯಂಕಾಲವಾದ ಕೂಡಲೇ ಅವರು ಅವರ ಮನೆಯ ಕೆಲಸದವನ ಹತ್ತಿರ 'ಗೋವಿಂದನ ಕರ್ಕಂಬಾ' ಎಂದು ಹೇಳಿ ಕಳುಹಿಸಿ, ನಾನು ಹೋದ ಕೂಡಲೇ ಹಾರ್ಮೋನಿಯಂ ನುಡಿಸುತ್ತಾ 'ಗಿರಿಜಾವರ - ಗಂಗಾಧರ' ಮತ್ತು 'ಕಮಲಾವಿಲಾಸಕರ' ಹಾಡುಗಳನ್ನು ನನ್ನಿಂದ ಹಾಡಿಸುತ್ತಿದ್ದರು. ಅವುಗಳು ಯಾವ ನಾಟಕದ ಹಾಡುಗಳು ಎಂದೂ ಸಹ ಆಗ ನನಗೆ ಗೊತ್ತಿರಲಿಲ್ಲ. ಅವು 'ರಾಜಸೂಯಯಾಗ' ಮತ್ತು 'ಶ್ರೀ ಕೃಷ್ಣಲೀಲೆ' ನಾಟಕಗಳ ಹಾಡುಗಳೆಂದು ಕೆಲವು ವರ್ಷಗಳ ನಂತರ ತಿಳಿಯಿತು. ಹೀಗೆ ಪ್ರತಿನಿತ್ಯ ನನ್ನನ್ನು ಕರೆಸಿ ಹಾಡಿಸುತ್ತಿದ್ದರು.

ಇನ್ನೊಬ್ಬ ಚಿಕ್ಕಪ್ಪನವರ ಹೆಸರು ಕುಂಟೇಗೌಡರ ಅಣ್ಣೇಗೌಡರು. ಇವರು ಹಾರ್ಮೋನಿಯಂ ಮಾಸ್ತರಾಗಿದ್ದು, 'ದಾನಶೂರ ಕರ್ಣ' ಮತ್ತು 'ರಾಮಾಯಣ' ನಾಟಕಗಳನ್ನು ನಮ್ಮ ಊರಿನಲ್ಲಿ ಹಾಗೂ ಸುತ್ತಮುತ್ತಲಿನ ಹಳ್ಳಿಗಳಲ್ಲಿ ಕಲಿಸುತ್ತಿದ್ದರು. ಇವರೂ ಕೂಡ ನನಗೆ ಕೆಲವು ಹಾಡುಗಳನ್ನು ಹೇಳಿಕೊಟ್ಟು ಸರಿಯಾಗಿ ಹಾಡುವವರೆಗೂ ಬಿಡುತ್ತಿರಲಿಲ್ಲ. ದಾನಶೂರ ಕರ್ಣದ 'ಪರಮಾತ್ಮ ಹರೇ' ಹಾಡನ್ನು ಸುಮಾರು ೫ ನಿಮಿಷಗಳ ಕಾಲ ಹಾಡುತ್ತಿದ್ದರು. ಅವರು ಸಂಗೀತವನ್ನು ಅಷ್ಟಾಗಿ ಕಲಿಯದಿದ್ದರೂ ಅವರಲ್ಲಿ ಆಲಾಪನೆ, ಲಯಜ್ಞಾನ, ತಾಳದ ಬಿಗಿ ಇದ್ದವು. ನಮ್ಮ ಊರಿನಲ್ಲಿ ರಾಮಾಯಣ, ದಾನಶೂರ ಕರ್ಣ ಮೊದಲಾದ ನಾಟಕಗಳನ್ನು ಆ ಕಾಲಕ್ಕೆ ಆಡುತ್ತಿದ್ದು, ಶಾಲೆಯ ರಜೆಯ ದಿನಗಳಲ್ಲಿ ನಾನು ಭರತ, ರಾಮ ಹಾಗೂ ಕರ್ಣನ ಪಾತ್ರಗಳನ್ನು ಅಭಿನಯಿಸಿ 'ಸೈ' ಎನಿಸಿಕೊಂಡಿದ್ದುಂಟು. ರಾತ್ರಿಯಿಂದ ಪ್ರಾರಂಭವಾದ ಮೇಳಗಳು ಬೆಳಕು ಹರಿಯುವವರೆಗೂ ಆಗುತ್ತಿದ್ದವು. ನಾಟಕ ಕಲಿಸುವ ಮಾಸ್ತರರ ಕಷ್ಟಗಳನ್ನು ಹಾಗೂ ಅವರ ಆರ್ಥಿಕ ಪರಿಸ್ಥಿತಿಗಳನ್ನು ಕಣ್ಣಾರೆ ಕಂಡು ಅರಿತಿದ್ದೇನೆ.

ಈ ಮೊದಲೇ ತಿಳಿಸಿರುವಂತೆ, ನಾನು ಓದಿದ್ದು ಹಾಸನ ಜಿಲ್ಲೆಯ, ಅರಕಲಗೂಡು ತಾಲ್ಲೂಕು, ರುದ್ರಪಟ್ಟಣದ ಮಾಧ್ಯಮಿಕ ಶಾಲೆ ಹಾಗೂ ಶ್ರೀ ವಿದ್ಯಾಶಂಕರ

ಪ್ರೌಢಶಾಲೆಗಳಲ್ಲಿ. ರುದ್ರಪಟ್ಟಣ ಊರು ಪುಟ್ಟದಾದರೂ ಸಾಂಸ್ಕೃತಿಕವಾಗಿ ನಮ್ಮ ಸಮಾಜಕ್ಕೆ ಅದು ಕೊಟ್ಟಿರುವ ಕೊಡುಗೆ ಅಪಾರ, ಅನುಪಮ. ಊರಿನ ಒಂದೊಂದು ಮನೆಯೂ ವೇದಾಧ್ಯಯನ ಪಂಡಿತರು ಹಾಗೂ ಸಂಗೀತ ವಿದ್ವಾಂಸರನ್ನು ಹೊಂದಿದ್ದು, ವೇದ, ನಾದ, ತರಂಗಗಳ ಸಮಾಗಮದ ಒಂದು ದೈವಿಕತೆಯ ದೇಗುಲವೆನಿಸಿಕೊಂಡಿತ್ತು. ಸಂಗೀತ ಕ್ಷೇತ್ರಕ್ಕೆ ಈ ಗ್ರಾಮ ಕೊಟ್ಟಿರುವ ಕಲಾಪುತ್ರರ ಸಂಖ್ಯೆ ಹತ್ತು ಹಲವಾರು.

ಮುಖ್ಯೋಪಾಧ್ಯಾಯರಾಗಿದ್ದ ಶ್ರೀ ರಾಮಯ್ಯನವರು ವಿದ್ಯಾರ್ಥಿಗಳಾದ ನಮ್ಮಲ್ಲಿ ಸುಸಂಸ್ಕೃತಿಯ ಬೀಜ ಬಿತ್ತುವುದನ್ನು ಮುಂದುವರಿಸಿದರು. ಮುಂದೆ ಅದು ಹೆಮ್ಮರವಾಗಿ ಹಿಂದಿನ ಸಂಸ್ಕಾರ, ಸಂಗೀತ ಗಂಧದ ಸಮ್ಮಿಲನದ ಪ್ರಭಾವದಿಂದ ಹಾಗೂ ನಮ್ಮ ಚಿಕ್ಕಪ್ಪಂದಿರು ಕಲಿಸಿದ ಹಾಡುಗಾರಿಕೆಯ ಪ್ರಭಾವದಿಂದ ರಂಗಗೀತೆಗಳ ಬಗ್ಗೆ ಒಲವು ಉಂಟಾಗಿ ಅವುಗಳನ್ನು ಸಂಗ್ರಹಿಸ ಬೇಕೆಂಬುದು ಬಹು ಕಾಲ ನನ್ನಲ್ಲಿ ಹುದುಗಿದ್ದ ಮಹದಾಸೆ.

ಈ ಆಸಕ್ತಿ ಕಳೆದ ಎರಡು ಮೂರು ವರ್ಷಗಳಲ್ಲಿ ತೀವ್ರತರವಾಗಿ ಪ್ರಾರಂಭವಾಗಿ ನಾನು ರಂಗ ಗೀತೆಗಳ ಸಂಗ್ರಹಣೆಯಲ್ಲಿ ಕಾರ್ಯೋನ್ಮುಖನಾದೆ. ಇದಕ್ಕಾಗಿ ಸಮಯ ಸಿಕ್ಕಾಗಲೆಲ್ಲ ರಾಜ್ಯದ ವಿವಿದೆಡೆ ಸಂಚರಿಸಿ, ಹಲವಾರು ನಾಟಕದ ಪುಸ್ತಕಗಳನ್ನು ಸಂಗ್ರಹಿಸಿ ನಂತರ ನಾಟಕಕಾರರನ್ನು ಹಾಗೂ ನಟರನ್ನು ಭೇಟಿ ಮಾಡಿ ಅವರಿಂದಲೂ ಹಲವು ಪೌರಾಣಿಕ ನಾಟಕಗಳ ಪುಸ್ತಕಗಳನ್ನು (ಕೆಲವು ನಾಟಕಗಳು ಮುದ್ರಣಗೊಂಡಿರುವವು ಮತ್ತೆ ಕೆಲವು ಮುದ್ರಣಗೊಂಡಿಲ್ಲದಿರುವುವು) ಸಂಗ್ರಹಿಸುವ ಕಾರ್ಯದಲ್ಲಿ ತೊಡಗಿದೆ. ಹಲವು ಬಾರಿ ನಾನು ಅವರನ್ನು ಭೇಟಿ ಮಾಡಿ, ಚರ್ಚಿಸಿ, ಅವರಿಂದ ಹಾಡುಗಳನ್ನು ಹಾಡಿಸಿ ಯಥಾವತ್ ಬರೆದುಕೊಂಡಿದ್ದೇನೆ.

ಈ ನಿಟ್ಟಿನಲ್ಲಿ ನಾನು ಕಾರ್ಯೋನ್ಮುಖನಾಗಿದ್ದಾಗ ರಂಗಗೀತೆ ಗಾಯಕರಾದ ಹುಲಿಕಲ್ ನಾಗರಾಜ್ ಅವರು ರಾಮಾಯಣ ನಾಟಕದ ಕ್ಯಾಸೆಟ್ಟಿಗೆ ಆಂಜನೇಯ ಪಾತ್ರಕ್ಕೆ ಹಾಡಿದ್ದ ಹಾಡುಗಳ ಪ್ರಭಾವದಿಂದ ಅವರನ್ನೊಮ್ಮೆ ಭೇಟಿ ಮಾಡಿ, ನನ್ನ ಕಾರ್ಯ ಚಟುವಟಿಕೆಗಳ ಬಗ್ಗೆ ಹೇಳಿದಾಗ, ಅವರು ನನ್ನೊಡನೆ ಸಹಕರಿಸುವುದಾಗಿ ಹೇಳಿ, ಸಂಗೀತ ವಿದ್ವಾನ್ ಶ್ರೀ ಲಕ್ಷ್ಮೀನಾರಾಯಣರಾಯರನ್ನು ನನಗೆ ಭೇಟಿ ಮಾಡಿಸಿ.

ಅವರಿಂದ ತುಂಬಾ ಅನುಕೂಲವಾಗುವುದೆಂದು ಹೇಳಿದರು. ರಾಯರ ಪರಿಚಯವಾದದ್ದು ನನಗೆ ದೊಡ್ಡ ನಿಧಿ ಸಿಕ್ಕಿದ ಹಾಗೆ ಆಯಿತು. ಕಾರಣ ರಾಯರು ರಂಗ ಸಂಗೀತದಲ್ಲಿ ಹಾಗೂ ಸಾಹಿತ್ಯದಲ್ಲಿ ಅಪಾರ ಜ್ಞಾನ ಹೊಂದಿರುವ ಅದ್ವಿತೀಯರು. ಅವರು ಹೆಚ್ಚಿನ ಪೌರಾಣಿಕ ನಾಟಕಗಳ ಹಾಡುಗಳಿಗೆ ಸಾಹಿತ್ಯವನ್ನು ಒದಗಿಸಿದ್ದಲ್ಲದೆ, ಈ ಸಂಗ್ರಹ ಕಾರ್ಯದಲ್ಲಿ ಮಹತ್ತರವಾದ ಪಾತ್ರವಹಿಸಿದ್ದಾರೆ. ಇನ್ನೂ ಮುದ್ರಣ ಕಾಣದ ಅಂಬರೀಷ, ಭೂಕೈಲಾಸ, ಮಹಾಕವಿ ಕಾಳಿದಾಸ, ರಾಜಾ ವಿಕ್ರಮ, ಚಂದ್ರಹಾಸ, ನಾಟಕಗಳಿಗಾಗಿ ಬರೆದ ಹಾಡುಗಳ ಮತ್ತು ಕಂದಗಳ ಸಾಹಿತ್ಯವನ್ನು ಅವರು ನನಗೆ ಒದಗಿಸಿ ಮಹದುಪಕಾರ ಮಾಡಿದ್ದಾರೆ. ಅದೂ ಅಲ್ಲದೆ ಇವರು ಕೆಲವೊಂದು ಹಾಡುಗಳನ್ನು ರಚಿಸಿ ರಂಗ ಸಾಹಿತ್ಯವನ್ನು ಸಮೃದ್ಧಗೊಳಿಸಿದ್ದಾರೆ. ಮುಂದುವರಿದು, ಮುದ್ರಣಗೊಳ್ಳದ ಕೆಲವು ಹಾಡುಗಳು ಹಾಗೂ ಮುದ್ರಣಗೊಂಡಿರುವ ಕೆಲವು ನಾಟಕದ ಹಾಡುಗಳಿಗೆ ರಾಗ, ತಾಳಗಳನ್ನು ಒದಗಿಸಿಕೊಟ್ಟಿರುವುದಲ್ಲದೆ, ಕೆಲವೊಂದು ಹಾಡುಗಳಿಗೆ ಪಲ್ಲವಿ, ಅನುಪಲ್ಲವಿ, ಚರಣಗಳನ್ನು ನಿರ್ಧರಿಸುವಿಕೆಯಲ್ಲಿ ತಮ್ಮ ಪಾತ್ರ ವಹಿಸಿದ್ದಾರೆ.

ಇವರಷ್ಟೇ ಸಹಕಾರವನ್ನು ಗಾಯಕ ನಟರಾದ ಹುಲಿಕಲ್ ನಾಗರಾಜ್ ಅವರು ಸಹ ಕೊಟ್ಟಿರುತ್ತಾರೆ. ಪ್ರತಿಯೊಂದು ಹಾಡು ಹಾಗೂ ಕಂದವನ್ನು ಬರೆದುಕೊಳ್ಳುವುದರಲ್ಲಿ, ತಿದ್ದುವುದರಲ್ಲಿ ಹಾಗೂ ಪರಿಷ್ಕರಣ ಮಾಡುವುದರಲ್ಲಿಯೂ ಸಹ ಅವರು ರಾಯರೊಡನೆ ಹಾಗೂ ನನ್ನೊಡನೆ ಶ್ರಮಿಸಿದ್ದಾರೆ. ಸಂಗೀತ ವಿದ್ವಾನ್ ನರಸಿಂಹಮೂರ್ತಿ, ಡಿ. ಕಲ್ಕೆರೆ ಹಾಗೂ ಇತರ ಸಂಗೀತ ನಿರ್ದೇಶಕರನ್ನು ನನಗೆ ಪರಿಚಯಿಸುವಲ್ಲಿ ಮತ್ತು ಈ ಪುಸ್ತಕ ಅಚ್ಚುಗೊಳ್ಳುವ ಸಮಯದಲ್ಲಿ ನನಗೆ ತಮ್ಮ ಅಮೂಲ್ಯ ಸಹಕಾರ ನೀಡಿದ್ದಾರೆ.

ಈ ಹಿನ್ನೆಲೆಯಲ್ಲಿ ನನ್ನ ಸಂಗ್ರಹ ಕಾರ್ಯದ ಬಗ್ಗೆ ಎರಡು ಮಾತು. 'ರತ್ನಾವಳಿ ಥಿಯೇಟರ್ ಕಂಪನಿ'ಯನ್ನು 'ನಾಟಕ ಶಿರೋಮಣಿ' ಎ.ವಿ.ವರದಾಚಾರ್ಯರು ೧೮೯೦ರಲ್ಲಿ ಪ್ರಾರಂಭಿಸಿ 'ಮನ್ಮಥ ವಿಜಯ' ಮತ್ತು 'ಭಕ್ತ ಪ್ರಹ್ಲಾದ' ನಾಟಕಗಳನ್ನು ರಾಜಕವಿ ಪಂಡಿತ ಶ್ರೀ ತಿರುಮಲೆ ಶ್ರೀನಿವಾಸ ಅಯ್ಯಂಗಾರ್ ಅವರಿಂದ ಬರೆಯಿಸಿ

ನೂರಾರು ಪ್ರದರ್ಶನಗಳನ್ನು ಕೊಟ್ಟಿರುತ್ತಾರೆ. (೧೯೦೪-೧೯೧೦). ಈ ನಾಟಕಗಳ ಹಾಡುಗಳನ್ನು ಸಂಗ್ರಹಿಸಿ ಈ ಪುಸ್ತಕದಲ್ಲಿ ಮುದ್ರಿಸಲಾಗಿದೆ. 'ಅಂಬರೀಷ' ಮತ್ತು 'ಭೂಕೈಲಾಸ' ನಾಟಕಗಳು ದಿ: ಎಂ.ಪಿ.ಸುಬ್ಬಯ್ಯ ನಾಯ್ಡು ಅವರ ಶ್ರೀ ಸಾಹಿತ್ಯ ಸಾಮ್ರಾಜ್ಯ ನಾಟಕ ಮಂಡಳಿಗಾಗಿ ರಚಿಸಿರುವ ನಾಟಕಗಳಾಗಿದ್ದು, ಈ ನಾಟಕಗಳು ಮುದ್ರಣಗೊಂಡಿಲ್ಲ. ಈ ನಾಟಕಗಳ ಹಾಡುಗಳ ಪೂರ್ಣ ಸಾಹಿತ್ಯ ದೊರಕದಿದ್ದರೂ ಸಾಧ್ಯವಾದಷ್ಟು ಮಟ್ಟಿಗೆ ಅವುಗಳನ್ನೆಲ್ಲ ಇಲ್ಲಿ ಸಂಗ್ರಹಿಸಿ ಮುದ್ರಿಸಲಾಗಿದೆ. ಭೂಕೈಲಾಸ ನಾಟಕಕ್ಕಾಗಿ ನಾಟಕಕಾರರಾದ ಶ್ರೀ ಹೆಚ್.ಕೆ. ಯೋಗಾನರಸಿಂಹ ಅವರು ರಚಿಸಿದ ಹಾಡುಗಳನ್ನು ಹಾಗೂ ಈ ನಾಟಕಕ್ಕಾಗಿ ಇತರರು ರಚಿಸಿದ ಕೆಲವೊಂದು ಹಾಡುಗಳನ್ನು ಸಂಗ್ರಹಿಸಲಾಗಿದೆ. ಇವುಗಳು ಶ್ರೀ ನಾಗಾಲಿಂಗಾಚಾರ್ಯ, ಕೊಳ್ಳೇಗಾಲ ಹಾಗೂ ರಾಘವನ್, ಪಾಂಡವಪುರ ಇವರು ರಚಿಸಿರುವ ಹಾಡುಗಳೆಂದು ತಿಳಿದು ಬಂದಿದೆ.

'ಶಾಕುಂತಲ' ನಾಟಕದ ಹಾಡುಗಳು 'ಅಭಿನವ ಕಾಳಿದಾಸ' ದಿ: ಬಸವಪ್ಪ ಶಾಸ್ತ್ರಿಗಳಿಂದ ೧೮೭೭ರಲ್ಲಿ ರಚಿತವಾಗಿದ್ದು ಅವುಗಳನ್ನು ಯಥಾವತ್ತು ಮುದ್ರಿಸಲಾಗಿದೆ. 'ಸತ್ಯ ಹರಿಶ್ಚಂದ್ರ' ನಾಟಕದ ಕೆಲವು ಹಾಡುಗಳನ್ನು ಶ್ರೀ ಎಸ್.ಡಿ. ಬಜ್ಜಣ್ಣ ನೆಲವಾಗಲು, ಹೊಸಕೋಟೆ ತಾಲ್ಲೂಕು ಇವರು ಬರೆದಿದ್ದು, ಈ ಹಾಡುಗಳು ಮುದ್ರಣಗೊಂಡಿಲ್ಲ. ಕೆಲವೊಂದು ಷಟ್ಪದಿಗಳನ್ನು ರಾಘವಾಂಕ ಕವಿಯ ಹರಿಶ್ಚಂದ್ರ ಕಾವ್ಯದಿಂದ ಹೆಕ್ಕಿ ಸಮರ್ಪಕವಾಗಿ ಅಳವಡಿಸಿ, ಮುದ್ರಿಸಲಾಗಿದೆ.

'ಶ್ರೀ ರಾಮಾಂಜನೇಯ ಯುದ್ಧ' ಮತ್ತು 'ಸುಭದ್ರ ಕಲ್ಯಾಣ' ನಾಟಕಗಳನ್ನು ಶ್ರೀ ತೋರಣಗಲ್ ರಾಜಾರಾವ್ ಅವರು ಬಹಳ ಹಿಂದೆ ರಚಿಸಿದ್ದು, ಅವುಗಳ ಹಾಡುಗಳನ್ನು ಮತ್ತು ಕಂದಗಳನ್ನು ಯಥಾವತ್ತು ಸಂಗ್ರಹಿಸಿ ಮುದ್ರಿಸಲಾಗಿದೆ.

'ಧರ್ಮರಾಜ ರಾಜಸೂಯಯಾಗ' ನಾಟಕವು ನಂಜನಗೂಡು ಶ್ರೀ ಕಂಠ ಶಾಸ್ತ್ರಿಗಳಿಂದ ಸರಿ ಸುಮಾರು ೧೯೩೦ ರಲ್ಲಿ ರಚಿತಗೊಂಡಿದ್ದು ಇದರ ಹಾಡುಗಳು ಮತ್ತು ಕಂದಗಳನ್ನು ಯಥಾವತ್ತು ಸಂಗ್ರಹಿಸಿ ಅಚ್ಚು ಹಾಕಸಲಾಗಿದೆ. ಶಾಸ್ತ್ರಿಗಳ ಮೊಮ್ಮಕ್ಕಳಾದ ಪ್ರೊಫೆಸರ್ ಶ್ರೀ ತಾರಾನಾಥ್ ಅವರು ಅವರ ಅಜ್ಜನವರ ಒಂದು ಭಾವಚಿತ್ರ ಒದಗಿಸಿ ಈ ಹಾಡುಗಳನ್ನು ಮುದ್ರಿಸಲು ಅನುಮತಿ ಕೊಟ್ಟು ಉಪಕರಿಸಿರುತ್ತಾರೆ

ಗುಬ್ಬಿ ಕಂಪನಿ ಕನ್ನಡ ರಂಗಭೂಮಿಯ ಶಿಖರಪ್ರಾಯ ಸಂಸ್ಥೆ ಎಂಬುದು ನಿರ್ವಿವಾದದ ಮಾತು. ಅದು ಶತಮಾನ ಕಾಲ ಬಾಳಿ ಕನ್ನಡ ರಂಗಭೂಮಿಯನ್ನು ಬೆಳಗಿಸಿತು. ಹೀಗೆ ನೂರು ವರ್ಷಗಳ ಕಾಲ ಸತತವಾಗಿ ನಡೆದ ಮತ್ತೊಂದು ನಾಟಕ ಸಂಸ್ಥೆಯ ಉದಾಹರಣೆ ಭಾರತದ ರಂಗಭೂಮಿ ಇತಿಹಾಸದಲ್ಲೇ ವಿರಳ. "ಲವಕುಶ" ನಾಟಕವು ಗುಬ್ಬಿ ಚನ್ನಬಸವೇಶ್ವರ ಥಿಯೇಟ್ರಿಕಲ್ ಕಂ. ಅವರದಾಗಿದ್ದು, ಬಿ. ಪುಟ್ಟ ಸ್ವಾಮಯ್ಯ, ಕು.ರಾ.ಸೀತಾರಾಮಶಾಸ್ತ್ರಿ ಮತ್ತು ದ. ಅಗ್ನಿಹೋತ್ರಿ ಈ ನಾಟಕಕ್ಕಾಗಿ ಹಾಡುಗಳನ್ನು ರಚಿಸಿದ್ದಾರೆ. ಪ್ರಸಿದ್ಧ ಕಲಾವಿದ ಜಿ.ವಿ. ಶಿವಾನಂದ ಅವರನ್ನು ಭೇಟಿ ಮಾಡಿ ಲವಕುಶ ನಾಟಕದ ಹಾಡುಗಳ ಸಾಹಿತ್ಯವನ್ನು ಒದಗಿಸಲು ಕೇಳಿಕೊಳ್ಳಲಾಗಿ ಅವರು ಹಾಡುಗಳ ಪುಸ್ತಕದ ಒಂದು ಪ್ರತಿಯನ್ನು ನನಗೆ ಕೊಟ್ಟು ಸಹಕರಿಸಿದರು. ಅವರು ಇಂದು ನಮ್ಮೊಂದಿಗಿಲ್ಲ. ಅವುಗಳನ್ನು ಇಲ್ಲಿ ಯಥಾವತ್ತಾಗಿ ಮುದ್ರಿಸಲಾಗಿದೆ. "ದಾನಶೂರ ಕರ್ಣ" ನಾಟಕವನ್ನು ಮೈಸೂರು ಶಾರದಾವಿಲಾಸ ಕಾಲೇಜಿನ ಪ್ರಿನ್ಸಿಪಾಲರಾಗಿದ್ದ ಶ್ರೀ ಎಂ.ಎಸ್. ರಾಮಸ್ವಾಮಿಯವರು ಬರೆದಿದ್ದು, ಇತರ ಅನಾಮಧೇಯ ನಾಟಕಕಾರರೂ ಈ ನಾಟಕಕ್ಕಾಗಿ ಹಾಡುಗಳನ್ನು ಬರೆದಿದ್ದಾರೆ. ಅವುಗಳನ್ನು ಇಲ್ಲಿ ಮುದ್ರಿಸಲಾಗಿದೆ.

'ಪಾಂಡವ ವಿಜಯ' ('ವಿರಾಟ ಪರ್ವ' ಒಳಗೊಂಡ) ನಾಟಕ ಮೋಟಗಾನಹಳ್ಳಿ ಶಂಕರಶಾಸ್ತ್ರಿ ಹಾಗೂ ಗಿರಿಭಟ್ಟರ ತಮ್ಮಯ್ಯ ಅವರಿಂದ ಬಹಳ ಹಿಂದೆ (೧೯೨೮) ರಚಿತಗೊಂಡಿದ್ದು, ಆ ನಾಟಕದ ಹಾಡುಗಳನ್ನು ಯಥಾವತ್ತು ಮುದ್ರಿಸಲಾಗಿದೆ. 'ಚಂದ್ರಹಾಸ' ನಾಟಕದ ಹಾಡುಗಳು ಹೆಚ್ಚಾಗಿ ಯೋಗಾನರಸಿಂಹ ಅವರು ಬರೆದವುಗಳಾಗಿದ್ದು ಅವು ಮುದ್ರಣಗೊಂಡಿಲ್ಲ. ವೇ|| ಶ್ರೀ ಶಂಕರಶಾಸ್ತ್ರಿಗಳು ರಚಿಸಿರುವ "ಚಂದ್ರಹಾಸ" ನಾಟಕದ ಕೆಲವು ಹಾಡುಗಳನ್ನು ಹೆಕ್ಕಿ ಇಲ್ಲಿ ಮುದ್ರಿಸಲಾಗಿದೆ. "ಮಹಾಕವಿ ಕಾಳಿದಾಸ" ನಾಟಕದ ಹಾಡುಗಳನ್ನು ರಚಿಸಿದ ನಾಟಕಕಾರರು ಯಾರೆಂಬುದು ಸರಿಯಾಗಿ ತಿಳಿದಿಲ್ಲ. ಆದರೆ ಸಿ. ಹೊನ್ನಪ್ಪ ಭಾಗವತರ "ಮಹಾಕವಿ ಕಾಳಿದಾಸ" ಸಿನಿಮಾಕ್ಕಾಗಿ ಶ್ರೇಷ್ಠ ಸಾಹಿತ್ಯ ರಚಿಸಿರುವ ಶ್ರೀ ಕು.ರಾ. ಸೀತಾರಾಮಶಾಸ್ತ್ರಿ ಅವರ ಕೆಲವು ಹಾಡುಗಳನ್ನು ಈ ನಾಟಕಕ್ಕೆ ಸೇರಿಸಿದೆ.

"ರಾಜಾ ವಿಕ್ರಮ" ನಾಟಕದ ಹಾಡುಗಳನ್ನು ಶ್ರೀ ಬಿ.ಸಿ. ಶ್ರೀನಿವಾಸ ಹಾಗೂ ಯೋಗಾನರಸಿಂಹ ಬರೆದಿದ್ದು, ಕೆಲವನ್ನು ಕುಂಕುಮನಹಳ್ಳಿಯ ಅನಾಮಧೇಯ ನಾಟಕಕಾರರೊಬ್ಬರು ಬರೆದಿದ್ದಾರೆ. ಶ್ರೀ ಬಿ.ಸಿ. ಶ್ರೀನಿವಾಸ ರಚಿಸಿರುವ "ರಾಜಾ ವಿಕ್ರಮ" ನಾಟಕದ ಪ್ರಕಾಶಕರು ಎಂ.ಎಸ್. ಶಾಬಾದಿ ಮಠ ಬುಕ್ ಡಿಪೋ, ಗದಗ ಆಗಿದ್ದು, ಆ ನಾಟಕದಿಂದ ಕೆಲವು ಹಾಡುಗಳನ್ನು ಮುದ್ರಿಸಿಕೊಳ್ಳಲು ಅನುಮತಿ ಕೇಳಲಾಗಿದೆ.

'ಬಭ್ರುವಾಹನ' ನಾಟಕದ ಹಾಡುಗಳನ್ನು ಗಮಕಿ ನಂಜುಂಡಯ್ಯನವರು, ಬಾಳಗಂಚಿ, ಚನ್ನರಾಯಪಟ್ಟಣ ತಾಲ್ಲೂಕು, ಇವರು ರಚಿಸಿರುವರು ಎಂದು ತಿಳಿದಿದ್ದು ಅವುಗಳನ್ನು ಇಲ್ಲಿ ಮುದ್ರಿಸಲಾಗಿದೆ. ಕೆಲವು ಹಾಡುಗಳನ್ನು ಶ್ರೀ ಗುರುರಾಜುಲು ನಾಯ್ಡು ಅವರು ಬರೆದಿರುವರೆಂದು ತಿಳಿದಿದ್ದು ಅವುಗಳನ್ನು ಇಲ್ಲಿ ಮುದ್ರಿಸಲಾಗಿದೆ. ಸಾಹಿತ್ಯವನ್ನು ಸಂಗೀತವಿದ್ವಾನ್ ಶ್ರೀ ನರಸಿಂಹಮೂರ್ತಿ, ಡಿ.ಕಲ್ಕೆರೆ ಅವರು ಒದಗಿಸಿದ್ದಾರೆ ಹಾಗು ಹಸ್ತಪ್ರತಿ ತಿದ್ದುವಲ್ಲಿ ಸಹಕರಿಸಿದ್ದಾರೆ.

"ತ್ರಿಜನ್ಮ ಮೋಕ್ಷ" ನಾಟಕದ ಹಾಡುಗಳನ್ನು ಬರೆದ ನಾಟಕಕಾರರು ಯಾರೆಂಬುದು ಖಚಿತವಾಗಿ ತಿಳಿದಿಲ್ಲ. ಆದರೂ ಕೆಲವು ಹಾಡುಗಳನ್ನು ಶ್ರೀ ಹೆಚ್.ಕೆ. ಯೋಗಾನರಸಿಂಹ, ನಾಗರಾಜ ಶಾಸ್ತ್ರಿಗಳು, ಮಂಡ್ಯ ಹಾಗೂ ಇತರ ಅನಾಮಧೇಯ ರಚನಕಾರರು ಬರೆದಿದ್ದಾರೆ ಎಂದು ತಿಳಿದಿದೆ.

ಮೂವತ್ತಾರು ನಾಟಕಗಳು, ಹನ್ನೊಂದು ಪದ್ಯ ಗ್ರಂಥಗಳು, ಹದಿಮೂರು ಗದ್ಯ ಗ್ರಂಥಗಳನ್ನು, ಆರು ಚಲನಚಿತ್ರ ನಾಟಕಗಳನ್ನು, ಹನ್ನೊಂದು ಪಿನೋದ ಪ್ರಹಸನಗಳನ್ನು ರಚಿಸಿರುವ ಬೆಳ್ಳಾವೆ ನರಹರಿಶಾಸ್ತ್ರಿಗಳು "ಕರ್ನಾಟಕ ನಾಟಕ ಪಿತಾಮಹ" ಮಾತ್ರವಲ್ಲದೆ ಅವರು "ಕರ್ನಾಟಕದ ಷೇಕ್ಸ್‌ಪಿಯರ್" ಕೂಡ. ಪೌರಾಣಿಕ ನಾಟಕಗಳನ್ನು ಹೆಚ್ಚಾಗಿ ರಚಿಸಿ, ವಿಶೇಷವಾಗಿ ಕನ್ನಡ ರಂಗಭೂಮಿಗೆ ಶಾಸ್ತ್ರಿಗಳು ಮಹದುಪಕಾರ ಮಾಡಿದ್ದಾರೆ. ಕನ್ನಡ ರಂಗಭೂಮಿಗೆ ನರಹರಿಶಾಸ್ತ್ರಿಗಳು ಸಲ್ಲಿಸಿರುವ ದಿವ್ಯ ಸೇವೆಯನ್ನು ಚಿರಸ್ಥಾಯಿಗೊಳಿಸಲು ಕನ್ನಡ ಕಲಾರಸಿಕರು ಪ್ರಯತ್ನಪಡಬೇಕು. ಇವರು ರಚಿಸಿರುವ ಎಲ್ಲಾ ನಾಟಕಗಳೂ ಮುದ್ರಣಗೊಂಡಿದ್ದು ಅವುಗಳಲ್ಲಿ 'ಜಲಂಧರ' 'ಸಾವಿತ್ರಿ

ರಾಮಾಯಣ' 'ಶ್ರೀಕೃಷ್ಣ ಲೀಲೆ' 'ಕಂಸವಧೆ' 'ಶ್ರೀ ರುಕ್ಮಿಣೀ ಸ್ವಯಂವರ' 'ಶ್ರೀ ಕೃಷ್ಣಭಾಮಾ ಪರಿಣಯ' ಶ್ರೀ ಕೃಷ್ಣ ಪಾರಿಜಾತ', 'ಶ್ರೀ ಕೃಷ್ಣ ಗಾರುಡಿ' ಈ ನಾಟಕಗಳ ಎಲ್ಲಾ ಹಾಡುಗಳನ್ನು ಹಾಗೂ 'ದಶಾವತಾರ' ನಾಟಕದ ಕೆಲವು ಹಾಡುಗಳನ್ನು ಮಾತ್ರ ಇಲ್ಲಿ ಮುದ್ರಿಸಲಾಗಿದೆ. ವೃತ್ತ ಹಾಡು, ಹಾಗೂ ಕೆಲವು ಕಂದಗಳನ್ನು ಈ ನಾಟಕಗಳಿಂದ ಯಥಾವತ್ತಾಗಿ ಸಂಗ್ರಹಿಸಿ ಮುದ್ರಿಸಲಾಗಿದೆ. ಇವುಗಳನ್ನು ಮುದ್ರಿಸಲು ಬೆಳ್ಳಾವೆ ಪ್ರಕಾಶನಾಲಯದ ಶಾಸ್ತ್ರಿಗಳ ಮೊಮ್ಮಕ್ಕಳಾದ ಶ್ರೀ ರಾಮಕೃಷ್ಣ ಶಾಸ್ತ್ರಿಗಳು ಮತ್ತು ಶ್ರೀ ಸುಧಾಕರ ಶಾಸ್ತ್ರಿಗಳು ಅನುಮತಿಸಿದ್ದಾರೆ.

'ಕುರುಕ್ಷೇತ್ರ' ನಾಟಕ ಗುಬ್ಬಿ ಕಂಪನಿಯ ಇತಿಹಾಸದಲ್ಲಿ ಒಂದು ಮೈಲಿಗಲ್ಲು. ಅಷ್ಟೇ ಉತ್ತಮವಾದದ್ದು 'ದಶಾವತಾರ' ನಾಟಕ. ಇವೆರಡರ ನಿರ್ದೇಶಕರು ದಿ|| ಶ್ರೀ ಬಿ. ಪುಟ್ಟಸ್ವಾಮಯ್ಯನವರು. ಇವುಗಳಲ್ಲಿನ ಕೆಲವು ಹಾಡುಗಳನ್ನು ಮಾತ್ರ ಈ ಪುಸ್ತಕದಲ್ಲಿ ಅಚ್ಚು ಹಾಕಿಸಲಾಗಿದೆ. ದಿ|| ಪುಟ್ಟಸ್ವಾಮಯ್ಯನವರ ಮಗಳಾದ ಶ್ರೀಮತಿ ಉಷಾ ಸಹದೇವ ಅವರು ಅವರ ತಂದೆಯ ಒಂದು ಭಾವಚಿತ್ರ ನೀಡಿದ್ದಲ್ಲದೆ ಅವರ ಹಾಡುಗಳನ್ನು ಪ್ರಕಟಿಸಲು ಅನುಮತಿಯನ್ನು ಸಹ ಕೊಟ್ಟಿದ್ದಾರೆ.

ಈ ಮೇಲೆ ವಿವರಿಸಿದಂತೆ ಒಟ್ಟು ೧೭ ಪೌರಾಣಿಕ ನಾಟಕಗಳ ಬಹುತೇಕ ಹಾಡುಗಳನ್ನು ಇಲ್ಲಿ ಸಂಗ್ರಹಿಸಲಾಗಿದೆ. ಇವುಗಳಲ್ಲಿ ಮೂರನೇ ಒಂದು ಭಾಗ ನಾಟಕಗಳು ಮುದ್ರಣವನ್ನೇ ಕಂಡಿಲ್ಲ. ಈ ಅಪ್ರಕಟಿತ ನಾಟಕಗಳ ಹಾಡುಗಳನ್ನು ಮತ್ತು ಕಂದಗಳನ್ನು ಸಂಗ್ರಹಿಸಿ ಪ್ರಕಟಿಸುವುದರಲ್ಲಿ ನನ್ನ ಪರಿಶ್ರಮವಿದೆ. ಈ ರೀತಿ ಈ ಎಲ್ಲಾ ನಾಟಕದ ಹಾಡುಗಳನ್ನು ಮತ್ತು ಕಂದಗಳನ್ನು ಒಂದೆಡೆ ಸಂಗ್ರಹಿಸಿ ಮುದ್ರಿಸಬೇಕೆಂದು ಮನಸ್ಸು ಮಾಡಿದಾಗ, ಉಪಯೋಗವಾಗುವಂತಹ ಒಂದು ಕ್ರಮದಲ್ಲಿ ಏಕೆ ಮಾಡಬಾರದೆಂದು ಯೋಚಿಸಿದೆ. ಈ ದಿಕ್ಕಿನಲ್ಲಿ ರಂಗ ತಜ್ಞರಾದ ಶ್ರೀ ಬಿ.ವಿ. ವೈಕುಂಠರಾಜುರವರು ಕೇವಲ ರಂಗಗೀತೆಗಳನ್ನು ಪ್ರಕಟಿಸಿದರೆ ಒಂದು ಕವನ ಸಂಕಲನವನ್ನು ಪ್ರಕಟಿಸಿದಂತಾಗುತ್ತದೆ. ಅದರಿಂದ ಅಂತಹ ಪ್ರಯೋಜನವಾಗುವುದಿಲ್ಲ ಎಂದು ಹೇಳಿರುವುದನ್ನು ಮನದಲ್ಲಿರಿಸಿಕೊಂಡು (ಅವರು ಕೆಲವು ಹಾಡುಗಳಿಗೆ ಸ್ವರ ಪ್ರಸ್ತಾರ ಹಾಕಿಸಿ, ಪ್ರಕಟಿಸಿ, ಹಾಡುವವರಿಗೆ ಅನುಕೂಲವಾಗುವಂತೆ ಮಾಡಿದ್ದಾರೆ) ಈ ಸಂಗ್ರಹ ಕ್ರಮ ವಿಶೇಷ ರೂಪದಲ್ಲಿದ್ದರೆ

ಅದು ಮುಂದಿನ ಪೀಳಿಗೆಗೆ ಅನುಕೂಲವಾಗುತ್ತದೆಂದು ಭಾವಿಸಿ ಪ್ರತಿಯೊಂದು ನಾಟಕದಲ್ಲಿ ದೃಶ್ಯವಾರು ಬರುವಂತಹ ಎಲ್ಲ ಹಾಡುಗಳನ್ನು ಒಂದೆಡೆ ಬರುವಂತೆ ಸಂಗ್ರಹಿಸಿ ಮುದ್ರಿಸಲಾಗಿದೆ. ಹೀಗೆ ಮಾಡುವಾಗ ಪ್ರತಿಯೊಂದು ನಾಟಕವನ್ನು ಬರೆದಷ್ಟು ಅನುಭವ, ಶ್ರಮ ಹಾಗೂ ಖುಶಿ ನನಗೆ ಆಗಿದೆ. ಪ್ರತಿ ದೃಶ್ಯಗಳಲ್ಲಿ ಬರುವಂತಹ ಹಾಡು, ಕಂದ, ಸೀಸ ಪದ್ಯಗಳನ್ನು ಸೇರಿಸಿರುವುದಲ್ಲದೆ ಮುದ್ರಣ ಗೊಂಡಿರದ ನಾಟಕಗಳಲ್ಲಿರುವ ಅದೇ ಸಂದರ್ಭದ ಬದಲೀ ಹಾಡುಗಳನ್ನು (ಸಾಹಿತ್ಯ ಮತ್ತು ಉಪಯೋಗದ ದೃಷ್ಟಿಯಿಂದ) ಸೇರಿಸಿದೆ. ಈ ಹಾಡುಗಳು ಕಾಲಾಂತರದಲ್ಲಿ ಅನೇಕ ನಾಮಧೇಯ ಹಾಗೂ ಅನಾಮಧೇಯ ನಾಟಕಕಾರರಿಂದ ರಚಿಸಲ್ಪಟ್ಟವುಗಳಾಗಿರುತ್ತವೆ.

ಒಳ್ಳೆಯ ಸಾಹಿತ್ಯ, ಔಚಿತ್ಯ ಹಾಗೂ ಮನರಂಜನಾ ದೃಷ್ಟಿಯಿಂದ ಕೆಲವು ಪೌರಾಣಿಕ ಸಿನಿಮಾಗಳ ಕೆಲವು ಹಾಡುಗಳನ್ನು ಹೆಕ್ಕಿ ಈ ಸಂಗ್ರಹದಲ್ಲಿ ಕೆಲವು ನಾಟಕಗಳ ಸಂಕಲನದಡಿಯಲ್ಲಿ ಸೇರಿಸಿದೆ. ಇಷ್ಟೇ ಅಲ್ಲದೆ ಈ ಹಾಡುಗಳ ಸಂಗ್ರಹಣೆ ವಿಶೇಷ ರೀತಿಯಲ್ಲಿರಲಿ ಮತ್ತು ಉಪಯೋಗಕ್ಕೆ ಬರಲಿ ಎಂದು ಪ್ರತಿಯೊಂದು ನಾಟಕದಡಿಯಲ್ಲೂ ಪ್ರಾರ್ಥನೆ, ಸೂತ್ರಧಾರನಿಗೆ ಎರಡು ಹಾಡುಗಳು, ಹಾಗೂ ಮಂಗಳದ ಹಾಡುಗಳನ್ನು ಸೇರಿಸಲಾಗಿದೆ. ಮುದ್ರಣಗೊಂಡ ನಾಟಕಗಳಲ್ಲಿರುವಂತೆ ಸೂತ್ರಧಾರನ ಹಾಗೂ ಮಂಗಳದ ಹಾಡುಗಳನ್ನು ಯಥಾವತ್ತು ಉಳಿಸಿಕೊಂಡಿದ್ದಾಗ್ಯೂ ಸೂತ್ರಧಾರನಿಗೆ ಮತ್ತೊಂದು ಹಾಡು ಸೇರಿಸಲಾಗಿದೆ. ಪ್ರತಿಯೊಂದು ನಾಟಕಕ್ಕೂ ಪ್ರಾರ್ಥನೆಯೊಂದನ್ನು ನಿಗದಿಪಡಿಸಿದ್ದರೂ, ಅದೇ ಪ್ರಾರ್ಥನೆ ಹಾಡನ್ನು ಅದೇ ನಾಟಕಕ್ಕೆ ಹಾಡಬೇಕೆಂದೇನಿಲ್ಲ. ಅವರವರ ಅನುಕೂಲಕ್ಕೆ ತಕ್ಕಂತೆ ಅವರುಗಳನ್ನು ಉಪಯೋಗಿಸಿ ಹಾಡಬಹುದು. ವೈವಿಧ್ಯತೆಯ ದೃಷ್ಟಿಯಿಂದ ಹಾಗೂ ಪೌರಾಣಿಕ ನಾಟಕಗಳ ಸಾಹಿತ್ಯ ಉಳಿಯಲಿ ಎಂಬ ಆಸೆಯಿಂದ ಮೇಲಿನ ಒಂದು ವಿಧಾನವನ್ನು ಅನುಸರಿಸಿ, ಸಂಗ್ರಹಿಸಲಾಗಿದೆ. ಮುದ್ರಣ ಕಂಡಿರುವ ಕೆಲವು ನಾಟಕಗಳನ್ನು ಬಿಟ್ಟು ಉಳಿದ ನಾಟಕಗಳಲ್ಲೂ ಸಂಬಂಧಪಟ್ಟ ನಾಟಕಕಾರರು ಆಯಾಯಾ ನಾಟಕಗಳಿಗೆ ಬರೆದಿರುವ ಹಾಡುಗಳನ್ನು ಸಂಗ್ರಹಿಸಿರುವುದಲ್ಲದೆ ಬೇರೆ ನಾಮಧೇಯ ಮತ್ತು ಅನಾಮಧೇಯ ನಾಟಕಕಾರರು ರಚಿಸಿರುವ ಹಾಡುಗಳನ್ನು ಸಂಗ್ರಹಿಸಿ ಮುದ್ರಿಸಲಾಗಿದೆ.

ಇನ್ನು ಪೌರಾಣಿಕ ನಾಟಕಗಳ ಇಂದಿನ ಸ್ಥಿತಿಗತಿ ಬಗ್ಗೆ ಒಂದೆರಡು ಮಾತು.

ಜೂನ್ ೧, ೧೯೭೮ ರಲ್ಲಿ ಡಾ|| ಹಾ.ಮಾ.ನಾಯಕ್‌ರವರು ಮತ್ತೊಬ್ಬ ಹಿರಿಯ ರಂಗತಜ್ಞ ಡಾ|| ಎಚ್.ಕೆ. ರಂಗನಾಥರು ಬರೆದಿರುವ 'ಕರ್ನಾಟಕ ರಂಗಭೂಮಿ' ಪುಸ್ತಕದ 'ನಾಂದಿ' ಯಲ್ಲಿ ಬರೆಯುತ್ತಾ "ಸಂಗೀತ, ನೃತ್ಯಗಳಿಗಿರುವ ತರಬೇತಿಯ ಅವಕಾಶ ನಾಟಕಕ್ಕಿಲ್ಲ ಇದರ ಕಡೆ ಗಮನ ಕೊಡಬೇಕು. ಈಚಿನ ವರ್ಷಗಳಲ್ಲಿ ವಿಶ್ವ ವಿದ್ಯಾಲಯಗಳಲ್ಲಿ ನಾಟಕ ತರಗತಿಗಳು ಆರಂಭವಾಗಿವೆ. ಆದರೆ ಅವುಗಳು ಹೆಚ್ಚು ಹೆಚ್ಚು ವಿದ್ಯಾರ್ಥಿಗಳನ್ನು ಆಕರ್ಷಿಸಲು ಅನುಕೂಲಗಳನ್ನು ಕಲ್ಪಿಸಬೇಕು. ಶಾಲಾ - ಕಾಲೇಜುಗಳ ಶಿಕ್ಷಣದಲ್ಲಿಯೇ ತಕ್ಕಮಟ್ಟಿನ ತರಬೇತಿಗಾದರೂ ಅವಕಾಶವಿರಬೇಕು. ರಾಜ್ಯಮಟ್ಟದ ಒಂದು ಶಿಕ್ಷಣ ಶಾಲೆಯನ್ನು ಪ್ರಾರಂಭಿಸಬೇಕು. ಅಲ್ಲಿ ವಿವಿಧ ಅವಧಿಯ ಬಗೆಯ ತೀವ್ರ ತರಬೇತಿಗೆ ವ್ಯವಸ್ಥೆ ಮಾಡಬೇಕು. ನಾಟಕ ಸುಸಂಸ್ಕೃತ ಅಭಿರುಚಿಯ ದ್ಯೋತಕ ಎಂಬುದನ್ನು ಜನ ಅರಿಯಲು ಅಗತ್ಯವಾದ ವಾತಾವರಣವನ್ನು ನಿರ್ಮಿಸಬೇಕು. ಜಗತ್ತಿನ ಬೇರೆ ಬೇರೆ ಭಾಷೆಗಳ ನಾಟಕಗಳು ಕನ್ನಡಕ್ಕೆ ಬರಲು. ಹಳೆಯ ಕನ್ನಡ ನಾಟಕಗಳಲ್ಲಿ ಉತ್ತಮವಾದವು ಮರುಮುದ್ರಣಗೊಂಡು ಸದಾ ಮಾರುಕಟ್ಟೆಯಲ್ಲಿರಲು ಪ್ರಕಟಣೆ ವ್ಯವಸ್ಥೆ ಆಗಬೇಕು". ಎಂದು ರಂಗಭೂಮಿಯ ಪುನರುಜ್ಜೀವನಕ್ಕೆ ಅಗತ್ಯವಾದ ಬೇಕುಗಳ ಪಟ್ಟಿಯನ್ನು ಬೆಳೆಸುತ್ತಾ ಹೋಗುತ್ತಾರೆ.

ಹಿರಿಯ ರಂಗತಜ್ಞರಾದ ಶ್ರೀ ಬಿ.ವಿ. ವೈಕುಂಠರಾಜು ಅವರು ರಂಗಸಂಗೀತ ಪುಸ್ತಕದ ಮುನ್ನುಡಿಯಲ್ಲಿ ಬರೆಯುತ್ತಾ ನಮ್ಮಲ್ಲಿ ರಂಗಭೂಮಿಗೆ ದುಡಿದ ಮಹನೀಯರ ಸಾಧನೆ, ವೃತ್ತಿ ರಂಗಭೂಮಿಯ ವೈಭವದ ದಿನಗಳ ವಿವರಣೆ, ಮುಚ್ಚಿ ಹೋದ ಕಂಪನಿಗಳ ಸೀನರಿ ಸಾಮಾಗ್ರಿಗಳ ಸಂಗ್ರಹಣೆ ಮತ್ತು ಅನೇಕ ನಾಟಕ ಸಂಸ್ಥೆಗಳು ಪ್ರಯೋಗಿಸುತ್ತಿದ್ದ ನಾಟಕಗಳ ಮುದ್ರಣ ಇವುಗಳ ಬಗ್ಗೆ ಗಮನಹರಿಸಬೇಕಾಗಿದೆ ಎಂದು ಹೇಳುತ್ತಾ, ಮುಂದಿನ ತಲೆಮಾರಿಗೆ ಇವು ಪ್ರಯೋಜನಕ್ಕೆ ಬರಲಿವೆ ಎಂದಿದ್ದಾರೆ.

೨೦೦೧ರ ಮಾರ್ಚ್ ೧ ಮತ್ತು ೨ ರಂದು ನಾಣೇಹಳ್ಳಿಯಲ್ಲಿ ನಡೆದ ಗುಬ್ಬಿ ವೀರಣ್ಣ ಪ್ರಶಸ್ತಿ ಪುರಸ್ಕೃತರ 'ಸಮ್ಮಿಲನ' ಸಮಾರಂಭ ಗೋಷ್ಠಿಯಲ್ಲಿ ಶ್ರೀ ಗುಡಿಹಳ್ಳಿ ನಾಗರಾಜ ಅವರು ಮಾತನಾಡುತ್ತಾ ಹಳ್ಳಿಗಾಡಿನಲ್ಲಿ ನಾಟಕ ಕಲಿಸುತ್ತಿರುವ ಹಾರ್ಮೋನಿಯಂ

ಮಾಸ್ತರಿಗೆ ಸಂಭಾವನೆ, ಸುಲಭವಾಗಿ ಸಿಗುವಂತಹ ಡ್ರಾಮಾ ಸೀನರಿ ಸಾಮಾನುಗಳನ್ನು ಒದಗಿಸುವ ಕಡೆ ಸರ್ಕಾರ ಗಮನ ಕೊಡಬೇಕೆಂದು ಹೇಳಿದ್ದಾರೆ. 'ಗುಬ್ಬಿವೀರಣ್ಣ' ಪ್ರಶಸ್ತಿ ವಿಜೇತರಾದ 'ಶ್ರೀ ಕೃಷ್ಣ ಗಾರುಡಿಯ ಭೀಮ' ಮತ್ತು 'ಸ್ತ್ರೀ ನಾಟಕ ಮಂಡಳಿಯ ರತ್ನ' ಎಂಬ ಬಿರುದನ್ನು ಪಡೆದಿರುವ ಆರ್. ನಾಗರತ್ನಮ್ಮ ಅವರು 'ಇಂದು ಕೂತರೆ ನಿಂತರೆ ಚಳುವಳಿಗಳು ಹುಟ್ಟಿಕೊಳ್ಳುತ್ತವೆ. ದುರಂತವೆಂದರೆ ಕಲಾವಿದರಿಗಾಗಿ ಚಳುವಳಿ ಇನ್ನೂ ಜನಿಸಲೇ ಇಲ್ಲ. ಸ್ವಾರ್ಥಕ್ಕಾಗಿ ಮಾತ್ರ ಕಲೆ ಬಳಕೆಯಾಗುತ್ತಿದೆ. ರಂಗಭೂಮಿಗಾಗಿಯೇ ಹಗಲಿರುಳು ದುಡಿಯುವ ಕಲಾವಿದರಿಗೊಂದು ಸಮರ್ಥ ನಾಯಕತ್ವ ಸಿಕ್ಕಿಲ್ಲ. ರಂಗದೆದುರು ರಂಜಿಸುವ ಒಬ್ಬನೇ ಒಬ್ಬ ನಾಯಕ ಚಳುವಳಿಯ ಮುಂದೆ ನಿಂತರೆ ನಾಕು ಎಲ್ಲ ಕಷ್ಟಗಳಿಗೆ ತೆರೆ ಬೀಳುವುದು ನಿಶ್ಚಿತ. ಹಾಗಾದಾಗ ಮಾತ್ರ ತೆರೆಯ ಮೇಲಿನ ನೋವುಗಳು ಬಯಲಿಗೆ ಬಂದಾವು' ಎಂದು ರಂಗಭೂಮಿಯ ಅಸ್ತಿತ್ವದ ಬಗ್ಗೆ ಕಳಕಳಿಯಿಂದ ಹೇಳಿದ್ದಾರೆ. ವಿಧಾನಪರಿಷತ್ತಿನ ಸಭಾಪತಿ ಶ್ರೀ. ಬಿ.ಎಲ್. ಶಂಕರ್ ಅವರು ರಂಗಭೂಮಿಯಲ್ಲಿ ಮತ್ತೊಮ್ಮೆ ಚಳುವಳಿ ಆರಂಭವಾಗಲಿ ಎಂದು ಹೇಳಿದ್ದಾರೆ. ಹಿರಿಯ ಕಲಾವಿದ ಶ್ರೀ ಏಣಗಿ ಬಾಳಪ್ಪನವರು ದಾವಣಗೆರೆಯಲ್ಲಿ ೧೯, ೨೦, ಡಿಸೆಂಬರ ೨೦೦೧ರಲ್ಲಿ ನಡೆದ ರಾಜ್ಯಮಟ್ಟದ 'ರಂಗ ಸಮಾಗಮ' ಹಾಗೂ ಮೈಸೂರಿನಲ್ಲಿ ನಡೆದ ಸಮಾರಂಭಗಳಲ್ಲಿ ರಂಗಗೀತೆಗಳ ಸಮಗ್ರ ಸಂಗ್ರಹ ಕಾರ್ಯ ಆಗಬೇಕಾಗಿದೆ ಎಂದು ಒತ್ತಿ ಹೇಳಿದ್ದಾರೆ. ಕನ್ನಡ ಚಳುವಳಿಯ ವಾಟಾಳ್ ಪಕ್ಷದ ವಾಟಾಳ್ ನಾಗರಾಜ್ ಅವರು ರಂಗಭೂಮಿಯ ಹಳೆಯ ಕಲಾವಿದರನ್ನು ಸನ್ಮಾನಿಸುತ್ತಾ ಕನ್ನಡ ರಂಗಭೂಮಿಯ ಉಳಿವಿಗೆ ಸರ್ಕಾರ ಮುಂದಾಗಿ ಧನ ಸಹಾಯ ಮಾಡಬೇಕೆಂದು ಹಾಗೂ ರಂಗಭೂಮಿಯ ಉಳಿವಿಗಾಗಿ ಹೋರಾಡಲು ತಾವು ಸಿದ್ಧವೆಂದು ಹೇಳಿರುತ್ತಾರೆ.

ಇತ್ತೀಚಿನ ದಿನಗಳಲ್ಲಿ ರಂಗಭೂಮಿಯ ಕಲಾವಿದರನ್ನು ಸನ್ಮಾನಿಸುತ್ತಿರುವುದು ಹಾಗೂ ರಂಗಭೂಮಿಯ ಉಳಿವಿನ ಬಗ್ಗೆ ಚಿಂತನೆ ಮಾಡುತ್ತಿರುವುದು ಒಳ್ಳೆಯ ಲಕ್ಷಣ. ಆದರೆ ಪೌರಾಣಿಕ ನಾಟಕಗಳ ಉಳಿವಿನ ಬಗ್ಗೆ ಹೆಚ್ಚು ಚಿಂತಿಸುವುದು ಸೂಕ್ತ ಎಂದು ನನ್ನ ಅನಿಸಿಕೆ. ಕಾರಣ, ಅವು ಆಧುನಿಕ ರಂಗಭೂಮಿಯಿಂದ ಮಾಯವಾಗುತ್ತಿವೆ. 'ಗುಬ್ಬಿ ವೀರಣ್ಣ' ಪ್ರಶಸ್ತಿ ಬಂದ ಸಂದರ್ಭದಲ್ಲಿ ಶ್ರೀಮತಿ ನಾಗರತ್ನಮ್ಮನವರು ರಂಗಭೂಮಿಯ ಹಿರಿಮೆ-ಪರಂಪರೆಗಳನ್ನು ಕುರಿತಂತೆ ಮಾತನಾಡುತ್ತಾ 'ಪೌರಾಣಿಕ ನಾಟಕಗಳು'

ಇತ್ತೀಚಿನ ದಿನಗಳಲ್ಲಿ ಕನ್ನಡ ರಂಗಭೂಮಿಯಿಂದ ಮಾಯವಾಗುತ್ತಿವೆ. ಈ ನೋವು ನನ್ನಲ್ಲಿದೆ. ಆದರೆ ಪೌರಾಣಿಕ ನಾಟಕಗಳನ್ನು ಆಡುವ ಯೋಗ್ಯತೆ - ಸಾಮರ್ಥ್ಯ ಈಗ ಯಾರಿಗಿದೆ ? ಎಂಬ ನೇರ ಸವಾಲನ್ನು ಅವರು ರಂಗತಜ್ಞರಿಗೆ ಒಡ್ಡಿದ್ದಾರೆ.

ಇದರರ್ಥ ಪೌರಾಣಿಕ ನಾಟಕಗಳನ್ನು ಅಭಿನಯಿಸಲು ನಮ್ಮ ಕಲಾವಿದರಲ್ಲಿ ಸಾಹಿತ್ಯ ಜ್ಞಾನ, ಸಂಗೀತ ಜ್ಞಾನ ಇದೆಯೇ ? ಇವುಗಳನ್ನು ಪಡೆಯಲು ನಮ್ಮಲ್ಲಿ ಸಾಕಷ್ಟು ಪ್ರಯತ್ನ ನಡೆದಿದೆಯೇ ? ಈಗ ಪೌರಾಣಿಕ ನಾಟಕಗಳನ್ನು ಕಲಿಸುತ್ತಿರುವವರಲ್ಲಿ ಎಷ್ಟು ಜನರಿಗೆ ಎಷ್ಟರ ಮಟ್ಟಿಗೆ ಮೇಲೆ ತಿಳಿಸಿರುವ ವಿಷಯಗಳ ಬಗ್ಗೆ ಅರಿವಿದೆ ? ಅವುಗಳ ಜ್ಞಾನವಿಲ್ಲದಿದ್ದರೆ ಪೌರಾಣಿಕ ನಾಟಕಗಳನ್ನು ಕಲಿಯುವವರಿಗೆ ಕಲಿಸಲು ಆಗುತ್ತದೆಯೇ? ಉತ್ತಮ ಪ್ರದರ್ಶನಗಳನ್ನು ಕೊಡಲು ಆಗುತ್ತದೆಯೇ ? ಎಂಬ ಪ್ರಶ್ನೆಗಳು ಎದುರಾಗುತ್ತವೆ.

ನನಗೆ ತಿಳಿದಿರುವ ಹಾಗೆ ರಾಜ್ಯದಲ್ಲಿ ಪೌರಾಣಿಕ ನಾಟಕಗಳ ಸಾಹಿತ್ಯ ಹಾಗೂ ಸಂಗೀತ ಬಲ್ಲವರು ಬೆರಳೆಣಿಕೆಯಷ್ಟು ಇದ್ದಾರೆ. ಹೀಗಿದ್ದಾಗ ಪೌರಾಣಿಕ ನಾಟಕಗಳ ಪ್ರದರ್ಶನ ಗುಣಮಟ್ಟ ಹೇಗಿರುತ್ತದೆ ? ಹಾಗಾದಾಗ ಅವುಗಳನ್ನು ನೋಡುವವರ ಸಂಖ್ಯೆ ಕಡಿಮೆಯಾಗುವುದಿಲ್ಲವೆ ? ಆಗ ಈ ನಾಟಕ ಪ್ರದರ್ಶನ ಅವನತಿಯ ದಾರಿ ಹಿಡಿಯುವುದಿಲ್ಲವೆ ? (ಇತ್ತೀಚಿನ ವಿದ್ಯಮಾನಗಳಿಂದ ಹೇಳುವುದಾದರೆ ಪೌರಾಣಿಕ ನಾಟಕಗಳನ್ನು ಆಡುವವರು, ನೋಡುವವರ ಸಂಖ್ಯೆ ಕಡಿಮೆಯಾಗಿದ್ದರೂ ಉತ್ತಮ ಗುಣ ಮಟ್ಟದ ನಾಟಕಗಳನು ಪ್ರದರ್ಶಿಸಿದರೆ ಅವುಗಳನ್ನು ನೋಡಲು ಜನರು ಈಗಲೂ ಖಂಡಿತ ಬರುವರೆಂಬುದು ನನ್ನ ಅನಿಸಿಕೆ)

ಇದ್ದುದರಲ್ಲಿ ಪೌರಾಣಿಕ ನಾಟಕಗಳ ರಂಗ ಸಾಹಿತ್ಯ ಸಿಗಬಹುದಾಗಿದ್ದು, ಅದನ್ನು ಉಪಯೋಗಿಸಲು ಸಾಧ್ಯವಾಗಿದ್ದರೂ 'ರಂಗಸಂಗೀತ'ದಲ್ಲಿ ನಾವು ಈಗ ಹಿಂದೆ ಬಿದ್ದಿದ್ದೇವೆ. ರಂಗಸಂಗೀತ ಬಲ್ಲವರು ಈಗ ಬಹಳ ಕಡಿಮೆ ಇರುವುದರಿಂದ ರಂಗಸಂಗೀತದ ಬಗ್ಗೆ ತರಗತಿಗಳನ್ನು ನಡೆಸಬೇಕು. ಸಾಧ್ಯವಾದರೆ ರಾಜ್ಯಮಟ್ಟದಲ್ಲಿ ರಂಗ ಸಂಗೀತ ಕಲಿಯಲು ಶಾಲಾ-ಕಾಲೇಜುಗಳಲ್ಲಿ ಅನುವು ಮಾಡಿಕೊಡುವುದು ಅಗತ್ಯವಿದೆ. ಕಾರಣ, ಜಾನಪದ, ಯಕ್ಷಗಾನ, ನೃತ್ಯ, ಶಾಸ್ತ್ರೀಯ ಸಂಗೀತ, ಸುಗಮ ಸಂಗೀತ, ಹಾಗೂ

ಇತರೆ ವಿಭಾಗಗಳಲ್ಲಿ ಕಲಿಕೆ ಬಗ್ಗೆ ಸಾಕಷ್ಟು ತರಬೇತಿ, ಪ್ರೋತ್ಸಾಹ ದೊರಕುತ್ತಿದ್ದರೂ ರಂಗಸಂಗೀತದ ಕಲಿಕೆ ಬಗ್ಗೆ ಎಳ್ಳಷ್ಟೂ ಕಾರ್ಯ ನಡೆಯುತ್ತಿಲ್ಲ. ಈ ರೀತಿ ಈ ಒಂದು ರಂಗಸಂಗೀತದ ಕಲಿಕೆ ಕಾರ್ಯ ಮುಂದುವರಿಸದಿದ್ದರೆ ಈ ಜ್ಞಾನ ಉಳ್ಳ ಬೆರಳೆಣಿಕೆಯಷ್ಟು ಮಾಸ್ತರರ ತರುವಾಯ–ಪೌರಾಣಿಕ ನಾಟಕಗಳ ಅಂತ್ಯವನ್ನು ಅನಿವಾರ್ಯವಾಗಿ ಕಾಣಬಹುದಾಗಿದೆ. ಏಕೆಂದರೆ ಈಗ ಯಾವೊಬ್ಬ ಕಲಾವಿದನೂ ರಂಗಸಂಗೀತವನ್ನು ಕಲಿಯುತ್ತಿಲ್ಲ. ಈ ದೃಷ್ಟಿಯಿಂದ ಪೌರಾಣಿಕ ನಾಟಕಗಳ ಉಳಿವು ಖಂಡಿತವಾಗಿಯೂ ರಂಗಸಂಗೀತದ ಉಳಿವಿನಲ್ಲಿ ಅಡಗಿದೆ ಹಾಗೂ ಇವೆರಡರ ಉಳಿವು ಮಹಾಜನತೆಯ ಮತ್ತು ಸರ್ಕಾರದ ಪ್ರೋತ್ಸಾಹದಲ್ಲಿ ಅಡಗಿದೆ ಎಂಬುದು ನಿಸ್ಸಂಶಯ.

ಇಷ್ಟೆಲ್ಲಾ ಆದ ಮೇಲೆ ಈ ಹಂತದಲ್ಲಿ ಒಂದು ವಿಷಯವನ್ನು ನಾನು ಸ್ಪಷ್ಟಪಡಿಸಲು ಇಚ್ಚಿಸುತ್ತೇನೆ. ಈ ರಂಗಗೀತೆಗಳ ಪುಸ್ತಕದ ಯೋಜನೆಯಿಂದ ಉಳಿಯಬಹುದಾದ ಹಣವನ್ನು 'ಕೆರೆಯ ನೀರನ್ನು ಕೆರೆಗೆ ಚೆಲ್ಲಿ' ಎನ್ನುವಂತೆ ರಂಗಭೂಮಿಗೇ ಅರ್ಪಿಸಲು ತೀರ್ಮಾನಿಸಿ ಅದನ್ನು 'ರಂಗ ರತ್ನಾಕರ' ಸಾಂಸ್ಕೃತಿಕ ಸಂಘಕ್ಕೆ ಕೊಡಲಾಗುವುದು. ಈ ಸಂಘದ ಮೊದಲ ಆದ್ಯತೆ ರಂಗ ಸಂಗೀತದ ಪುನರುಜ್ಜೀವನ, ಎರಡನೆಯದು ರಂಗಭೂಮಿಯ ಅಶಕ್ತ ಕಲಾವಿದರ ಕಲ್ಯಾಣ ಯೋಜನೆ ಹಾಗೂ ಮೂರನೆಯದು ಪೌರಾಣಿಕ ರಂಗಭೂಮಿಯಲ್ಲಿ ಗಣನೀಯ ಸೇವೆ ಸಲ್ಲಿಸಿದವರನ್ನು ಸನ್ಮಾನಿಸುವುದು.

ಉತ್ತರ ಕರ್ನಾಟಕದ ರಂಗಗೀತೆಗಳನ್ನೂ ಸಂಗ್ರಹಿಸಿ ಸಮಗ್ರವಾಗಿ ಪುಸ್ತಕ ಹೊರತರಬೇಕೆಂಬ ಆಸೆ ಮೊದಲಿತ್ತು. ಆದರೆ ಅವುಗಳನ್ನೆಲ್ಲಾ ಸೇರಿಸಿದರೆ ಪುಸ್ತಕ ಬಹು ದೊಡ್ಡದಾಗುವುದೆಂದೂ, ಅವುಗಳನ್ನೇ ಬೇರೆ ಸಂಗ್ರಹಿಸಿ ಪುಸ್ತಕ ಹೊರತಂದರೆ ಒಳ್ಳೆಯದೆಂದು ಭಾವಿಸಿ ಅವುಗಳನ್ನು ಇಲ್ಲಿ ಸೇರಿಸಿಲ್ಲ.

ಕೊನೆಯದಾಗಿ ಈ ಪುಸ್ತಕ ಹೊರಬರಲು ನೆರವಾದವರನ್ನು ನೆನೆಯುವುದು. ಡಾ|| ಮಂಜುಳ ಹುಲ್ಲಹಳ್ಳಿ ಅವರು ಲೇಖಕರಾಗಿದ್ದು ವಾಣಿಜ್ಯ ತೆರಿಗೆ ಇಲಾಖೆಯಲ್ಲಿ ಕೆಲಸ ನಿರ್ವಹಿಸುತ್ತಿರುವರು. ಇವರು ಇಲ್ಲಿ ಸಂಗ್ರಹಿಸಿರುವ ೨೭ ನಾಟಕಗಳಲ್ಲಿ ಮುದ್ರಣಗೊಂಡಿರುವ ಪ್ರತಿ ಹಾಗೂ ಮುದ್ರಣ ಕಂಡಿರದ ಹಸ್ತಪ್ರತಿಗಳನ್ನು ಆಮೂಲಾಗ್ರವಾಗಿ ತಿದ್ದುವುದರಲ್ಲಿ, ಸಿದ್ಧಗೊಳಿಸುವುದರಲ್ಲಿ ಹಾಗೂ ಸೂಕ್ತ ಸಕಾಲಿಕ ಸಲಹೆಯನ್ನು ಕೊಡುವುದರಲ್ಲಿ ಸಹಕರಿಸಿದ್ದಾರೆ.

ಈ ಮೊದಲೇ ಹೇಳಿದಂತೆ ಸಂಗೀತ ವಿದ್ವಾನ್ ಹಾಗೂ ಸಂಗೀತ ನಿರ್ದೇಶಕರಾದ ಶ್ರೀ ಲಕ್ಷ್ಮೀನಾರಾಯಣರಾಯರು ಹಾಗೂ ಗಾಯಕ ನಟರಾದ ಹುಲಿಕಲ್ ನಾಗರಾಜ್‌ರವರ ಸಹಕಾರವಿಲ್ಲದಿದ್ದರೆ ಇಷ್ಟು ನಾಟಕ ಗೀತೆಗಳ ಸಾಹಿತ್ಯವನ್ನು ಸಂಗ್ರಹಿಸಲಾಗುತ್ತಿರಲಿಲ್ಲ. ನಮ್ಮ ಊರಿನ ಪಕ್ಕದ ಊರಾದ ಹುಲಿಕಲ್ ಡ್ರಾಮ ಮಾಸ್ತರು ಶ್ರೀ ಎಸ್.ಪಿ. ಕೃಷ್ಣಾಚಾರ್‌ರವರು ನನಗೆ ೨೧ ನಾಟಕಗಳ ಪುಸ್ತಕಗಳನ್ನು ಕೊಟ್ಟು ಸಹಕರಿಸಿದ್ದಲ್ಲದೆ ಅವರು ೨-೩ ಬಾರಿ ಬೆಂಗಳೂರಿಗೆ ಬಂದು ಕೆಲವು ಹಾಡುಗಳನ್ನು ಹಾಡಿ ಕೆಲವು ಹಾಡುಗಳಿಗೆ ಸಾಹಿತ್ಯವನ್ನು ಒದಗಿಸಿದ್ದಾರೆ. ಮಂಡ್ಯದ ಡ್ರಾಮಾ ಮಾಸ್ತರು ಲಕ್ಷ್ಮಯ್ಯನವರು ಕೆಲವು ನಾಟಕಗಳ ಪ್ರತಿ ಒದಗಿಸಿದ್ದಾರೆ.

ಡಾ|| ಚಿಕ್ಕ ಹೆಜ್ಜಾಜಿ ಮಹದೇವಪ್ಪನವರು ಬೆಳ್ಳಾವೆ ನರಹರಿಶಾಸ್ತ್ರಿಗಳ ಬಗ್ಗೆ ಪ್ರಬಂಧ ಬರೆದು ಡಾಕ್ಟರೇಟ್ ಪಡೆದಿದ್ದಾರೆ. ಇವರನ್ನು ಭೇಟಿಯಾಗಿ ನನ್ನ ಕಾರ್ಯದ ಬಗ್ಗೆ ವಿವರಿಸಿದಾಗ ಬೆಳ್ಳಾವೆ ನರಹರಿಶಾಸ್ತ್ರಿಗಳು ಬರೆದಿರುವ ಅನೇಕ ನಾಟಕಗಳ ಪುಸ್ತಕಗಳನ್ನು ಒದಗಿಸಿದರಲ್ಲದೆ ದಿ|| ಶಾಸ್ತ್ರಿಗಳ ಕೃತಿಗಳ ಬಗ್ಗೆ ಹಾಗೂ ಅವರ ಬಗ್ಗೆ ವಿವರವಾದ ಮಾಹಿತಿ ಒದಗಿಸಿರುವರು.

ರಂಗಗೀತೆಗಳ ಸಂಗ್ರಹ ಮಾಡಿ ಪುಸ್ತಕ ರೂಪದಲ್ಲಿ ಹೊರತರಬೇಕೆಂಬ ಹೆಬ್ಬಯಕೆ ಇದೆ ಎಂದು ನನ್ನ ಪ್ರಿಯಮಿತ್ರರಾದ ಶ್ರೀ ಹೆಚ್.ಪಿ. ಈರಪ್ಪನವರಲ್ಲಿ ತೋಡಿಕೊಂಡಾಗ ಅದು ಒಳ್ಳೆಯ ಕೆಲಸವೆಂದು ಹೇಳಿ ನನ್ನ ಬೆನ್ನು ತಟ್ಟಿ ಪ್ರೋತ್ಸಾಹ ಕೊಟ್ಟು ನನ್ನನ್ನು ಹುರಿದುಂಬಿಸಿ ಈ ಹೊತ್ತಿಗೆ ಬರಲು ಕಾರಣರಾಗಿದ್ದಾರೆ. ಮಿತ್ರರಾದ ಶ್ರೀ ಬಿ. ರಾಮಲಿಂಗೇಗೌಡರು ನನ್ನೊಡನೆ ಮಂಡ್ಯ, ಹಾಸನ ಹಾಗೂ ಮೈಸೂರು ಜಿಲ್ಲೆಗಳಲ್ಲಿ ಕೆಲವು ಗ್ರಾಮಗಳಿಗೆ ಬಂದು ನನ್ನ ಈ ಸಂಗ್ರಹ ಕಾರ್ಯದಲ್ಲಿ ಸಹಕರಿಸಿ ಪ್ರೋತ್ಸಾಹಿಸಿದ್ದಾರೆ. ನನ್ನ ಹಿತೈಷಿಗಳಾದ ಶ್ರೀಯುತರಾದ ಪುಟ್ಟೇಗೌಡರು ಮತ್ತು ಎ.ಕೆ. ವೆಂಕಟಪ್ಪನವರು 'ನಿಮ್ಮ ಕೆಲಸ ಎಲ್ಲಿಗೆ ಬಂತು' ಎಂದು ನನ್ನನ್ನು ಹಲವು ಬಾರಿ ಕೇಳಿ ಈ ಕೆಲಸ ಮುಂದುವರಿಯಲು ಪ್ರೋತ್ಸಾಹಿಸಿದ್ದಾರೆ. ಹಿತೈಷಿ ಶ್ರೀ ಎಮ್.ವಿ. ವೆಂಕಟೇಶ್‌ರವರು ಕೂಡ ಪ್ರೋತ್ಸಾಹಿಸಿದ್ದಾರೆ. ಮಿತ್ರರಾದ ಶ್ರೀ ನಾಗರಾಜ ದೀಕ್ಷಿತ್‌ರವರು ಈ ಸಂಗ್ರಹಕ್ಕೆ ಸಂಬಂಧಪಟ್ಟಂತೆ ಕೆಲವು ಸಾಹಿತ್ಯದ ಪುಸ್ತಕಗಳನ್ನು

ಒದಗಿಸಿ ಈ ನನ್ನ ಕೆಲಸದಲ್ಲಿ ಸಹಕರಿಸಿದ್ದಾರೆ. ಇದೇ ರೀತಿ ಶ್ರೀ ಕೆ. ಪಿ. ಬಸವರಾಜು ಅವರು ಪದೇ ಪದೇ ನನ್ನ ಕೆಲಸದ ಬಗ್ಗೆ ವಿಚಾರಿಸಿ, ನಾವೆಲ್ಲ ನಿಮ್ಮ ಹಿಂದೆ ಇದ್ದೇವೆ, ಮುಂದುವರಿಸಿ ಎಂದು ಹುರಿದುಂಬಿಸಿರುತ್ತಾರೆ. ಮತ್ತೊಬ್ಬ ಮಿತ್ರರಾದ ಶ್ರೀ ಜಿ.ಆರ್. ಮಂಜೇಶ್ ಅವರು ಅವರ ಮಿತ್ರರಾದ ಶ್ರೀ ಆರ್. ನಾಗೇಶ್, ಅಧ್ಯಕ್ಷರು ನಾಟಕ ಅಕಾಡೆಮಿ ಅವರನ್ನು ಪರಿಚಯಿಸಿ ನನ್ನ ಕಾರ್ಯದಲ್ಲಿ ನೆರವಾಗಿದ್ದಾರೆ.

ಮಿತ್ರರಾದ ಪರಮೇಶ್ವರಯ್ಯ, ವೈ.ಬಿ. ಹರಳಿ, ಪಿ. ಪುಟ್ಟರಾಜು, ಹೆಚ್. ಎನ್. ಜಯಪಾಲ್, ಎಸ್.ಎ. ಮಾನ್ವಿ, ಎನ್.ಕೆ. ನಾಯ್ಕರ್, ವಿರೂಪಾಕ್ಷಯ್ಯ, ಶಿವಪ್ಪ ನೀರಾವರಿ, ಎಂ.ಜಿ. ಬ್ರಹ್ಮಪ್ರಕಾಶ, ಡಿ. ಪಾರ್ಥಿಬನ್, ಸಿದ್ಧರಾಮಯ್ಯ, ನಿಜಲಿಂಗಪ್ಪ, ನಾಗರಾಜಪ್ಪ, ಎಂ.ಬಿ. ಬಸವರಾಜಪ್ಪ, ಕೆ. ಜವರೇಗೌಡ, ಹೆಚ್.ಪಿ. ವಸಂತ್, ಕೃಷ್ಣಮೂರ್ತಿ, ಹೆಚ್.ವಿ. ಶಿವರಾಮೇಗೌಡ, ಬಸವೇಗೌಡ, ರುದ್ರೇಗೌಡ, ಪ್ರಭಾಕರ್, ತಟ್ಟೇಕೆರೆ ವಿಶ್ವನಾಥ್, ಸತ್ಯನಾರಾಯಣ, ಇವರುಗಳು ನನ್ನ ಕೆಲಸದಲ್ಲಿ ಆಸಕ್ತಿ ತೋರಿಸಿ, ಪ್ರೋತ್ಸಾಹಿಸಿದ್ದಾರೆ.

ಮಿತ್ರರಾದ ಡಿ.ಕೆ. ಸುರೇಶ್, ಮೈಸೂರು ಇವರು ಈ ಪುಸ್ತಕ ಹೊರತರುವಲ್ಲಿ ಸೂಕ್ತ ಸಲಹೆಗಳನ್ನಿತ್ತಿದ್ದಾರೆ. ಆಯಾಯ ನಾಟಕದ ನಾಟಕಕಾರರ ಹಾಗೂ ಆ ನಾಟಕದಲ್ಲಿ ಹೆಸರು ಮಾಡಿರುವ ಕಲಾವಿದರ ಭಾವಚಿತ್ರಗಳನ್ನು ಪ್ರಕಟಿಸಿದರೆ ಒಳ್ಳೆಯದು ಎಂದು ಸಲಹೆ ಕೊಟ್ಟವರೇ ಅವರು. 'ನಿಮ್ಮ ರಂಗಗೀತೆಗಳ ಪುಸ್ತಕ ಎಲ್ಲಿಗೆ ಬಂತ್ರಿ?' ಎಂದು ಸಿಕ್ಕಾಗಲೆಲ್ಲಾ ಕೇಳಿ ಪ್ರೋತ್ಸಾಹಿಸಿದ್ದಾರೆ ಶ್ರೀಮತಿ ವಸಂತಿ ಹೆಚ್.ಪಿ. ಈರಪ್ಪ ಹಾಗೂ ಶ್ರೀಮತಿ ಮಂಜುಳಾ ರಾಜು ಅವರು.

ಡ್ರಾಮಾ ಮಾಸ್ತರುಗಳಾದ ಶ್ರೀ ಚಿಕ್ಕಲಿಂಕಾಚಾರ್, ಮಂಡ್ಯ, ತಿಮ್ಮೇಗೌಡರು, ಕೋಡಿಹಳ್ಳಿ, ನಾರಾಯಣಪ್ಪ ಗೋಪಾಲಪುರ, ಸಿಡ್ಲಮರಿ ಸಿದ್ಧಲಿಂಗಪ್ಪ, ಬೊಮ್ಮಲಾಪುರ ಹಾಗೂ ನಂಜುಂಡಸ್ವಾಮಿ, ಪಾದರಾಯನಪುರ, ಬೆಂಗಳೂರು ಇವರು ನಮ್ಮಲ್ಲಿಗೆ ಬಂದು ಹಲವು ನಾಟಕಗಳ ಹಾಡುಗಳನ್ನು ಪ್ರಾಯೋಗಿಕವಾಗಿ ಹಾಡಿ ಸಹಕರಿಸಿದ್ದಾರೆ ಇವರಲ್ಲಿ ಚಿಕ್ಕಲಿಂಕಾಚಾರ್ ಕೆಲವು ನಾಟಕಗಳ ಹಾಡುಗಳ ಸಾಹಿತ್ಯ ಒದಗಿಸಿದ್ದಾರೆ.

ಹಿರಿಯ ರಂಗತಜ್ಞರೂ, ಖ್ಯಾತ ಪತ್ರಕರ್ತರು ಹಾಗೂ ನನ್ನ ಹಿತೈಷಿಗಳೂ ಆದ ಶ್ರೀ ಬಿ.ವಿ. ವೈಕುಂಠರಾಜು ಅವರು ನನಗೆ ಸೂಕ್ತ ಸಲಹೆ ಕೊಟ್ಟು ನನ್ನನ್ನು ಪ್ರೋತ್ಸಾಹಿಸಿರುವರಲ್ಲದೆ, ಈ ಗ್ರಂಥಕ್ಕೆ ಮುನ್ನುಡಿಯನ್ನು ಬರೆದು ಉಪಕಾರ ಮಾಡಿದ್ದಾರೆ. ಮೈಸೂರಿನ ನಿವೃತ್ತ ಕನ್ನಡ ಪ್ರಾಧ್ಯಾಪಕರಾದ ಶ್ರೀ ಸೂರ್ಯನಾರಾಯಣ ಸ್ವಾಮಿ, ಅವರು 'ರಾಜಾವಿಕ್ರಮ'ದ ಹಾಡಿನ ಕ್ಯಾಸೆಟ್ ಒದಗಿಸಿ, ಸಹಕರಿಸಿದ್ದಾರೆ.

ಈ ಗ್ರಂಥವನ್ನು ನಮ್ಮ ಚಿಕ್ಕಪ್ಪಂದಿರಾದ ಡ್ರಾಮಾ ಮತ್ತು ಹಾರ್ಮೋನಿಯಂ ಮಾಸ್ತರು ಕುಂಟೇಗೌಡರ ಅಣ್ಣೇಗೌಡರು ಹಾಗೂ ಸಿದ್ದೇಗೌಡರ ಸುಬ್ಬೇಗೌಡರ ನೆನಪಿಗೆ ಅರ್ಪಿಸುತ್ತಿದ್ದೇನೆ. ಕಾರಣ, ಅವರು ಪೌರಾಣಿಕ ನಾಟಕಗಳ ಗಂಧಗಾಳಿಯನ್ನು ನನ್ನೆಡೆಗೆ ಬೀಸುವಂತೆ ಮಾಡಿ ನಾಟಕಗಳಲ್ಲಿ ಅಭಿನಯಿಸಲು ನನ್ನ ಎಳೆ ವಯಸ್ಸಿನಲ್ಲಿಯೇ ಪ್ರೋತ್ಸಾಹಿಸದಿದ್ದರೆ, ಈ ಒಂದು ಸಂಗ್ರಹಣೆಯ ಆಸಕ್ತಿ ನನಗೆ ಯಾವತ್ತಿಗೂ ಬರುತ್ತಿರಲಿಲ್ಲವೇನೋ.

ಅರಕಲಗೂಡಿನ ಶಾಸಕ ಎ. ಮಂಜು ಅವರು ಈ ನನ್ನ ಕಾರ್ಯಕ್ಕೆ ಪ್ರೋತ್ಸಾಹಿಸಿ ಸಹಕರಿಸಿದ್ದಾರೆ. ನಾಟಕಕಾರರ ಭಾವಚಿತ್ರಗಳನ್ನು ಒದಗಿಸುವುದರಲ್ಲಿ ಹಾಗೂ ಇತರೆ ಕೆಲಸದಲ್ಲಿ ಡಬ್ಲ್ಯು ಎಚ್. ಶಾಂತಕುಮಾರ್ ಮತ್ತು ಹೆಚ್.ಜಿ. ಶಿವಲಿಂಗಮೂರ್ತಿ ಸಹಕರಿಸಿದ್ದಾರೆ.

ರಂಗಗೀತೆಗಳ ಡಿ.ಟಿ.ಪಿ. ಕಷ್ಟದ ಕೆಲಸ. ಆದರೂ ಸ್ಕ್ಯಾನ್ ಪ್ರಿಂಟ್ ಮಾಲೀಕರಾದ ಶ್ರೀ ಕೆ. ನಾರಾಯಣರವರು ಅವರ ಸಿಬ್ಬಂದಿಯವರ ಮುಖಾಂತರ ಡಿ.ಟಿ.ಪಿ., ಮುದ್ರಣ ಮತ್ತು ಪುಸ್ತಕದ ಮುಖಪುಟವನ್ನೂ ಸಹ ಬಹಳ ಸುಂದರವಾಗಿ ಮಾಡಿರುತ್ತಾರೆ. ಈ ಪುಸ್ತಕದ ಮುದ್ರಣ ಕಾರ್ಯವನ್ನು ಹನ್ಯಾಳು ಪ್ರಕಾಶನ, ಮೈಸೂರು ಇವರು ಮಾಡಿಸಿಕೊಟ್ಟಿದ್ದಾರೆ.

ಈ ಮೊದಲೇ ತಿಳಿಸಿರುವಂತೆ ಮೂರನೇ ಒಂದುಭಾಗ ನಾಟಕಗಳು ಮುದ್ರಣವನ್ನೇ ಕಂಡಿಲ್ಲ. ಅಪ್ರಕಟಿತ ಹಾಡುಗಳನ್ನು ಸಂಗ್ರಹಿಸಿ ಅಚ್ಚು ಹಾಕಿಸಲಾಗಿದೆ. ಇವುಗಳ ಸಾಹಿತ್ಯದಲ್ಲಿ ತಪ್ಪುಗಳು ನುಸುಳಿರಲೂ ಸಾಕು. ಸಹೃದಯರೂ

ರಂಗಾಭಿಮಾನಿಗಳೂ ಆದ ತಾವು ತಪ್ಪುಗಳನ್ನು ಗುರುತಿಸಿ ತಿಳಿಸಿದರೆ ಆ ದೋಷಗಳನ್ನು ಮುಂದೆ ಸರಿಪಡಿಸಿಕೊಳ್ಳಲಾಗುವುದು.

ಮೇಲೆ ತಿಳಿಸಿರುವ ಎಲ್ಲಾ ಮಹನೀಯರಿಗೆ, ಹಿರಿಯರಿಗೆ, ಮಿತ್ರರಿಗೆ, ಕಿರಿಯರಿಗೆ ಹಾಗೂ ಅನಾಮಧೇಯ ನಾಟಕಕಾರರಿಗೆ ನಾನು ಕೃತಜ್ಞನಾಗಿದ್ದೇನೆ. ಒಟ್ಟಿನಲ್ಲಿ ಈ ಒಂದು ಪುಸ್ತಕ ಹೊರಬರಲು ಪ್ರತ್ಯಕ್ಷವಾಗಿ, ಹಾಗೂ ಪರೋಕ್ಷವಾಗಿ ಸಹಕರಿಸಿದ ಎಲ್ಲರಿಗೂ ನಾನು ಕೃತಜ್ಞನಾಗಿದ್ದೇನೆ.

ಬೆಂಗಳೂರು
೩೦-೪-೨೦೦೨

**ಹೆಚ್. ಎಸ್. ಗೋವಿಂದಗೌಡ**
ಸಂಪಾದಕ

# ಗ್ರಂಥ ಋಣ

| ನಾಟಕ / ಗ್ರಂಥ | | ನಾಟಕಕಾರರು / ಪ್ರಕಾಶಕರು |
|---|---|---|
| ಜಲಂಧರ | | |
| ಸಂಪೂರ್ಣ ರಾಮಾಯಣ | | |
| ಶ್ರೀಕೃಷ್ಣಲೀಲಾ | | |
| ಕಂಸವಧೆ | | |
| ಶ್ರೀ ರುಕ್ಮಿಣೀ ಸ್ವಯಂವರ | | ಆಸ್ಥಾನ ವಿದ್ವಾನ್ ಬೆಳ್ಳಾವೆ ನರಹರಿ ಶಾಸ್ತ್ರಿಗಳು |
| ಶ್ರೀ ಕೃಷ್ಣಭಾಮಾ ಪರಿಣಯ | | |
| ಶ್ರೀಕೃಷ್ಣಪಾರಿಜಾತ | | |
| ಶ್ರೀಕೃಷ್ಣಗಾರುಡಿ | | |
| ದಶಾವತಾರ | | |
| ಸದಾರಮೆ ನಾಟಕಂ | | |
| ಪಾಂಡವ ವಿಜಯ | | ಮೋಟಗಾನಹಳ್ಳಿ ಶಂಕರ ಶಾಸ್ತ್ರಿಗಳು |
| ವಿರಾಟಪರ್ವ | | ಗಿರಿಭಟ್ಟರ ತಮ್ಮಯ್ಯ |
| | | ಕರ್ನಾಟಕ ನಾಟಕ ಅಕಾಡೆಮಿ, ಬೆಂಗಳೂರು |
| ಸತ್ಯಹರಿಶ್ಚಂದ್ರ | - | ಕವಿರಾಘವಾಂಕರ ಹರಿಶ್ಚಂದ್ರ ಕಾವ್ಯ |
| ಮನ್ಮಥ ವಿಜಯ | | ರಾಜಕವಿ ಪಂಡಿತ |
| ಭಕ್ತಪ್ರಹ್ಲಾದ | | ಶ್ರೀ ತಿರುಮಲೆ ಶ್ರೀನಿವಾಸ ಅಯ್ಯಂಗಾರ್ |
| | | ಕರ್ನಾಟಕ ನಾಟಕ ಅಕಾಡೆಮಿ, ಬೆಂಗಳೂರು |
| ರಾಮಾಂಜನೇಯ ಯುದ್ಧ | | |
| ಸುಭದ್ರಾ ಕಲ್ಯಾಣ | | ತೋರಣಗಲ್ ರಾಜಾರಾವ್ |
| ರಾಜಾವಿಕ್ರಮ | | ಬಿ.ಸಿ. ಶ್ರೀನಿವಾಸ್ |
| | | ಎಂ.ಎಸ್. ಶಾಬಾದಿಮಠ, ಬುಕ್ ಡಿಪೋ, ಗದಗ |

| | |
|---|---|
| ದಶಾವತಾರ<br>ಕುರುಕ್ಷೇತ್ರ | } ಬಿ. ಪುಟ್ಟಸ್ವಾಮಯ್ಯ |
| ಧರ್ಮರಾಜ ರಾಜಸೂಯಯಾಗ | - ನಂಜನಗೂಡು ಶ್ರೀಕಂಠಶಾಸ್ತ್ರಿಗಳು |
| ಲವಕುಶ | - ಗುಬ್ಬಿ ಶ್ರೀ ಚನ್ನಬಸವೇಶ್ವರ ಥಿಯೇಟ್ರಿಕಲ್ ಕಂ. |
| ಭೂಕೈಲಾಸ | - ಎಚ್.ಕೆ. ಯೋಗಾನರಸಿಂಹರವರ ಐದು ನಾಟಕಗಳು ಪುಸ್ತಕ |
| ರಂಗಸಂಗೀತ | - ಕರ್ನಾಟಕ ಅಕಾಡೆಮಿ, ಬೆಂಗಳೂರು |
| ರಂಗ ಗೀತೆಗಳು | - ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು |
| ಕರ್ನಾಟಕ ರಂಗಕಲಾವಿದರು | - ಕಲಾ ಸಾಹಿತ್ಯ ಪ್ರಕಾಶನ, ಬೆಂಗಳೂರು |
| ಇಂದಿನ ರಂಗ ಕಲಾವಿದರು | - ಕರ್ನಾಟಕ ನಾಟಕ, ಅಕಾಡೆಮಿ, ಬೆಂಗಳೂರು |
| ಕರ್ನಾಟಕ ರಂಗಭೂಮಿ | - ಎಚ್.ಕೆ. ರಂಗನಾಥ್ |
| ಕನ್ನಡ ರಂಗಭೂಮಿ | - ಬಿ.ವಿ. ವೈಕುಂಠರಾಜು |
| ಗುಬ್ಬಿಕಂಪೆನಿ | - ಡಾ॥ ಸಿಂಧುವಳ್ಳಿ ಅನಂತಮೂರ್ತಿ |
| ಸಮ್ಮಿಲನ | - ಶ್ರೀ ಶಿವಕುಮಾರ ಹವ್ಯಾಸಿ ಕಲಾಸಂಘ, ಸಾಣೇಹಳ್ಳಿ |
| ವೃತ್ತಿರಂಗದರ್ಶನ | - ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು |
| ಕುಮಾರವ್ಯಾಸ ಭಾರತ | - ಪ್ರಸಾರಾಂಗ ಮೈಸೂರು ವಿಶ್ವವಿದ್ಯಾಲಯ, ಮೈಸೂರು |
| ಕನ್ನಡ ಜೈಮಿನಿ ಭಾರತ | - ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು |
| ನಟರತ್ನ | - ಇಳಾ ಪ್ರಕಾಶನ, ಬೆಂಗಳೂರು |

# <u>ಪರಿವಿಡಿ</u>


| | ಪುಟ ಸಂಖ್ಯೆ |
|---|---|
| ಮನ್ಮಥ ವಿಜಯ | ೧ |
| ಭಕ್ತಪ್ರಹ್ಲಾದ | ೨೪ |
| ಶಿವ ಜಲಂಧರ | ೫೨ |
| ಅಂಬರೀಷ | ೭೨ |
| ಶಾಕುಂತಲ | ೭೭ |
| ಸತ್ಯಹರಿಶ್ಚಂದ್ರ | ೮೧ |
| ಭೂಕೈಲಾಸ | ೯೮ |
| ಸಂಪೂರ್ಣ ರಾಮಾಯಣ | ೧೧೬ |
| ರಾಮಾಂಜನೇಯ ಯುದ್ಧ | ೧೬೨ |
| ಲವಕುಶ | ೧೭೯ |
| ದಾನಶೂರ ಕರ್ಣ | ೧೯೧ |
| ಶ್ರೀಕೃಷ್ಣಲೀಲೆ | ೨೧೧ |
| ಕಂಸವಧೆ | ೨೪೩ |
| ಶ್ರೀ ರುಕ್ಮಿಣೀ ಸ್ವಯಂವರ | ೨೬೫ |
| ಶ್ರೀಕೃಷ್ಣಭಾಮಾಪರಿಣಯ | ೨೮೫ |
| ಸುಭದ್ರಾ ಕಲ್ಯಾಣ | ೩೦೨ |
| ಶ್ರೀಕೃಷ್ಣ ಪಾರಿಜಾತ | ೩೨೨ |
| ಧರ್ಮರಾಜ ರಾಜಸೂಯ ಯಾಗ | ೩೪೦ |
| ಪಾಂಡವ ವಿಜಯ | ೩೫೮ |
| ಕುರುಕ್ಷೇತ್ರ | ೩೯೮ |
| ಶ್ರೀಕೃಷ್ಣ ಗಾರುಡಿ | ೪೩೦ |
| ಬಭ್ರುವಾಹನ | ೪೪೮ |
| ಚಂದ್ರಹಾಸ | ೪೬೩ |
| ದಶಾವತಾರ | ೪೭೫ |
| ತ್ರಿಜನ್ಮ ಮೋಕ್ಷ | ೪೯೭ |
| ಮಹಾಕವಿ ಕಾಳಿದಾಸ | ೫೨೭ |
| ರಾಜಾವಿಕ್ರಮ ಅಥವಾ ಶನಿಪ್ರಭಾವ | ೫೪೨ |

# ಮನ್ಮಥವಿಜಯ



ನಾಟಕಕಾರರು :
**ರಾಜಕವಿ ಪಂಡಿತ**
**ತಿರುಮಲೆ ಶ್ರೀನಿವಾಸ ಅಯ್ಯಂಗಾರ್**



ಅಗ್ರಪಂಕ್ತಿಯ ಗಾಯಕ ನಟ
**ಜಿ. ನಾಗೇಶರಾಯರು**

**ಪ್ರಾರ್ಥನೆ : ಹಾಡು** **ರಾಗ : ಕಲ್ಯಾಣಿ - ಆದಿತಾಳ**

ಪಾಲಿಸು ಶಂಕರ ಪರಮದಯಾಕರ
ಫಾಲಲೋಚನ ಪಾಪವಿದೂರ ॥ ಪ ॥
ಹಾಲಾಹಲವಲೀಲೆಯಿಂ ಕುಡಿದೆ
ನೀಲಕಂಠನೆಂಬ ಬಿರುದನು ಪಡೆದೆ ॥ ಅ.ಪ. ॥
ನಂದಿವಾಹನನೆ ನತ ಜನಪಾಲನೆ
ಇಂದು ಶೇಖರನೆ ಗಂಗಾಧರನೆ ॥ ೧ ॥
ಅಗಜಾರಮಣನೆ ಅಹಿಭೂಷಣನೆ
ಅಘಗಳ ಕಳೆದು ಅಂಗಜಹರನೆ ॥ ೨ ॥

## ದೃಶ್ಯ : ರಸ್ತೆ

**ಸೂತ್ರಧಾರ : ವೃತ್ತ ॥** **ರಾಗ : ನಾಟಿ**

ಶ್ರೀಮತ್ಕೈಲಾಸವಾಸಂ ಶ್ರಿತಸುಖಕಲನಾನಂತ ಲೀಲಾವಿಲಾಸಂ ।
ಸೋಮಾರ್ಧಾಂಚತ್ಕಿರೀಟಂ ಸುರನರ ಭುಜಗಾಸೇವ್ಯನಾಕಾಶಜೂಟಂ ॥
ಕಾಮಾಶಾ ಭಂಗತಾಮ್ಯದ್ರತಿಹಿತಫಲದಂ ಸಾಮಗಾನೈಕಮೋದಂ ।
ಪ್ರೇಮಂಬೆತ್ತೀಗೆನಿಚ್ಚಂ ಶುಭವಿಭವಗಳಂ ಶ್ರೀಗಿರೀಶಂ ಮಹೇಶಂ ॥ ೧ ॥

**ಸೂತ್ರಧಾರ : ಹಾಡು** **ರಾಗ : ಶ್ರೀರಾಗ - ಆದಿತಾಳ**

ವಿಜಯ ಶಂಕರಾ - ಅಜಿತ - ಸುಧಾಂಶುಧರಾ ॥ ಪ ॥
ರಜತಾದ್ರೀಂದ್ರವಾಸಾ - ಭಜಕ ನಿಕರಭಾವವಶಾ ॥
ವಿಜಯವಿಹಿತ ವೀತಭಯಾ - ನಿಜಪರಮಾನಂದಮಯಾ ॥ ೧॥
ಘನವೇದಾಂತಸಾರಾ - ವಿನಿತ ವಿಬುಧ ತಾಪಹರಾ ॥
ಅನಘಚರಿತ ಶೂಲಧರಾ - ಮುನಿಹೃದಯಾವಾಸಪರಾ ॥ ೨ ॥
ವರಚಾಮೇಂದ್ರ ಪಾಲಾ - ನಿರುತ ನಿಖಿಲಪಾಲಕಲಾ ॥
ಪರಮಪುರುಷ ಸದ್ವಿಮಲಾ - ಗರಳಪುರೀಪುಣ್ಯಫಲಾ ॥ ೩ ॥

**ನಟಿ : ಹಾಡು** **ರಾಗ : ಬೇಹಾಗ್ - ಆದಿತಾಳ**

ಸ್ವಾಂತಭೋಗಕಾಂತಂ - ವಸಂತಂ ॥ ಪ ॥
ಎಲ್ಲಿ ನೋಡಲುಂ ವನಂ - ಪಲ್ಲವಂಗಳಿಂ ಘನಂ ॥
ಲಲ್ಲೆವಾತಿನೊಳ್ ಯೌವನಂ - ಸೊಲ್ಲುತ್ತಿರ್ಕುಮೆಲ್ಲಾಜನಂ ॥ ೧ ॥
ಕೋಗಿಲಂಗಳಿಂಚರಂ - ರಾಗಭೋಗದಾಸರಂ ॥
ನಾಗವೇಣಿಯುರೋಳ್ ಸ್ವರಂ - ಬೀಗುವಂದದಿಂ ಮಾಮರಂ ॥ ೨ ॥
ಪಂಚಬಾಣ ನಾಟದಿಂ - ಸಂಚುತೋರ್ಪ ಬೇಟದಿಂ ॥
ಮಿಂಚುತಿರ್ಪ ಸ್ಥೈಯಾಟದಿಂ - ಚಂಚಲಾಕ್ಷಿಯುಕೂರ್ಟದಿಂ ॥ ೩ ॥
ಮಂದಮಾರುತಂಗಳಿಂ - ಚೆಂದಮಾಗೆ ವೆಣ್ಗಳಿಂ ॥
ನಿಂದುತೋರ್ಪ ಬೆಳ್ದಿಂಗಳಿಂ - ಬೃಂದಮಿರ್ಪ ವಣ್ಪುಗಳಿಂ ॥ ೪ ॥

**ಸೂತ್ರಧಾರ : ಹಾಡು** **ರಾಗ : ಕಲ್ಯಾಣಿ - ಆದಿತಾಳ**

ಸಂಪತ್ಪ್ರದೇ ಚಾಮುಂಡೇಶ್ವರಿ
ಸಲಹೆನ್ನನು ಸರ್ವೇಶ್ವರಿ ॥ ಪ ॥
ಸೊಂಪಾದ ನಿನ್ನ ಸುಗುಣಾವಳಿಯ
ಇಂಪಾ ಬಣ್ಣಿಪೆ ಇಂದೀವರಾಕ್ಷಿ ॥ ಅ.ಪ. ॥
ಮಂಗಳಾಂಗಿ ಶಿವೇ ಮಹಾನುಭಾವೆ ॥ ಸಂಗೀತ ರಸ
ನಾಗಾನುಭಾವೆ । ಭೃಂಗ ಕುಂತಳೆ ಬಾಲ ವೈರಿನುತೆ
ಅಂಗಜಾ ಹರೇ ಹರಿಕೇಶವಿನುತೆ ॥ ೧ ॥

## ದೃಶ್ಯ : ಶಿವಸಭೆ

**ಮುನಿಗಳು : ಹಾಡು** **ರಾಗ : ಪೂರ್ವಕಲ್ಯಾಣಿ - ಆದಿತಾಳ**

ವಿಜಯಪರೇಶ ಗಿರೀಶಶಿವಾ । ನಿಜಮಹಿಮಾಯುತ ಸದ್ವಿಭವಾ ॥
ಸಕಲ ಜಗನ್ಮಯ ಸತ್ಯಯುತಾ । ಸುಕರಸುರಾರ್ಚಿತ ಸಾಧುಹಿತಾ ॥ ೧ ॥
ನಿಗಮವಿರಾಜಿತ ತತ್ವಕಲಾ । ನಗಧರ ಪೂಜಿತಧರ್ಮ ಬಲಾ ॥ ೨ ॥
ಯೋಗಿಜನಾತ್ಮವಿಭಾವಿತನೇ । ರಾಗರಹಿತ ಬುಧಸೇವಿತನೇ ॥ ೩ ॥
ಶಂಕರ ಸರ್ವವಶಂಕರನೇ । ಕಿಂಕರವರಿಕರ ಶಂಕರನೇ ॥ ೪ ॥

**ಭೃಂಗಿ : ಹಾಡು** **ರಾಗ : ವಸಂತ - ಆದಿತಾಳ**

ಜಯಜಯ ಮೃತ್ಯುಂಜಯಾ - ಜೇಯಾ ॥ ಪ ॥
ವೇದವೇದಾಂತವೇದ್ಯ - ವೇದ
ಪದಬೋಧ್ಯಾ ॥ ಸಾಧುಜನಸಂಸೇವಿತಾ - ಶಾಂತಾ ॥ ೧ ॥
ಬ್ರಹ್ಮಾದಿಸೇವ್ಯ ಬ್ರಹ್ಮಸುಖಭಾವ್ಯಾ ॥ ಬ್ರಹ್ಮಮುನಿಸಂಭಾವಿತಾಖ್ಯಾತಾ ॥ ೨ ॥
ಯೋಗೀಂದ್ರವಂದ್ಯಾ - ಭೋಗಿಪತಿನಂದ್ಯಾ ॥ ನಾಗಧರ ಗಂಗಾಧರಾಘೋರಾ॥

**ನಾರದ : ಹಾಡು** **ರಾಗ : ಶಂಕರಾಭರಣ - ಆದಿತಾಳ**

ಹರಿನಾರಾಯಾಣ ಹರಿನಾರಾಯಣ । ಹರಿನಾರಾಯಣ ನತಕರುಣಾ ॥ ಪ ॥
ವಾರಿಜಭವ ಬೃಂದಾರಕಪತಿನುತ । ನೀರಜನಾಭನೆ ನಿರ್ಮಲನೇ ॥
ಸೂರಿಜನಾವನ ಸುರಚಿರಪಾವನ । ಭೂರಿದಯಾಪರಗಭ್ಯಕರಾ ॥ ೧ ॥
ನಿಗಮವಿರಾಜಿತ ನಗರಧರಪೂಜಿತ । ಖಗಪತಿವಾಹನ ಕಲಿಹರನೇ ॥
ಜಗದಧಿನಾಯಕ ಸುಗತಿವಿಧಾಯಕ । ಭೃಗುತನಯಾಯುತ ಭೂತಹಿತಾ ॥ ೨ ॥
ರಾಗವಿದೂರನೆ ಆಗಮಸಾರನೆ । ಭೋಗಿಸಮಾಶ್ರಯ ಭೋಗಮಯಾ ॥
ಸಾಗರವಾಸನೆ ಸಗುಣವಿಭಾಸನೆ । ವಾಗಧಿನಾಯಕ ವಂದಿತನೇ ॥ ೩ ॥

**ದಾಕ್ಷಾಯಿಣಿ : ಕಂದ**

ನಿನ್ನೀನುಡಿಯಂ ಕೇಳುತ ।
ಲೆನ್ನಮನಂ ತಲ್ಲಣಿವುದು ಸನ್ಮುನಿವರನೇ ॥

ಇನ್ನೊರೆವ ನಿನ್ನ ನುಡಿಗಳೆ ।
ಎನ್ನೆಯ ಸುಖದುಃಖಗಳ್ಗೆ ಕಾರಣಮಲ್ತೇ ॥

**ಶಂಕರ : ಕಂದ**

ಯಜ್ಞೇಶನೆನಿಪಹರಿಯಂ ।
ಯಜ್ಞಾದಿಗಳಿಂದೆ ಭಜಿಸಬೇಕೆಂದೆನುತಂ ॥
ಪ್ರಾಜ್ಞರ್ ಮೆಚ್ಚುವಿನಂ ಪಿರಿ ।
ದಾಜ್ಞಾಪಿವತೆರದಿ ವೇದಗಳೆ ಬೋಧಿಸುಗುಂ ॥

**ದಾಕ್ಷಾಯಿಣಿ : ಹಾಡು** — **ರಾಗ : ಕಾನಡ - ರೂಪಕತಾಳ**

ಹರನೇ ಸುಜನಾನಂದಕರನೇ ॥ ಪ ॥
ಯಾಗಶಾಲೆಗೆ ನಾನು ಹೋಗಿದರ್ಶನ ಮಾಡಿ ।
ಬೇಗನೆ ಬರುವಂತೆ ಆಜ್ಞೆಯ ಪಾಲಿಸು ॥ ೧ ॥
ಹರನೇ ನಿನ್ನಾಜ್ಞೆಯ ಶಿರದಿಂದ ಧರಿಸುತ ॥
ಭರದಿಂದಲ್ಲಿಗೆ ಪೋಗಿ ಬರುವಂತೆ ದಯ ದೋರು ॥ ೨ ॥
ಬೇರೊಂದು ಸಮಯವು ತೋರದದಲ್ಲಿಗೆಪೋಗೆ ॥
ಮೀರಿ ಪೇಳುವಳಲ್ಲ ಕಾರುಣ್ಯಾಂಬುಧಿದೇವ ॥ ೩ ॥
ಪ್ರಿಯನೆ ನಿನ್ನೀಪಾದದ್ವಯವ ನಾಶ್ರಯಿಸಿರ್ಪೆಂ ॥
ದಯದೋರಿ ಯೆನ್ನೊಳು ಪ್ರಿಯದಿಂದ ಕಳುಹಿಸು ॥ ೪ ॥
ಕ್ರತುಶಾಲೆಯೊಳು ನೀನೆ ಗತಿಯೆಂದು ಭಜಿಸುತ ॥
ಜತನದಿಂದಲಿ ಹೋಗಿ ಹಿತದಿಂದ ಬರುವೆನು ॥ ೫ ॥

**ದೃಶ್ಯ : ದಕ್ಷನಯಜ್ಞ ಶಾಲೆ**

**ಎಲ್ಲರೂ : ಕಂದ**

ಕೊಡದಿರೆ ಹವಿಯಂರುದ್ರಂ ।
ಕಡುರೌದ್ರವ ತಾಳಿ ತನ್ನ ವಣೆಗಣ್ಣುರಿಯಿಂ ॥
ಕಿಡಿಗಳಬೀರುತೆ ಜಗವನೆ ।
ಸುಡುವಂ ತಡಮಾಡಬೇಡ ಕೊಡುಕೊಡುಹವಿಯಂ ॥

**ದಾಕ್ಷಾಯಿಣಿ : ಹಾಡು** **ರಾಗ : ಕಾಪಿ - ಜಂಪೆತಾಳ**

ಮುದದಲಿ ನೋಡುವೆನು ನಾನು ।
ಸದಯನ ಜನಕನ ಪದಗಳ ಭಜಿಪೆನು ॥
ಆದರಿಸಿ ಹರಸುವನವನತಿದಯದಿ ।।೧ ॥
ಯಜನದ ಮಹಿಮೆಯನು ನೋಡಿ ।
ವೃಜಿನವಕಳೆಯುತೆ ಭುಜಿಪೆನು ಸುಕೃತವ ॥
ಯಾಜಕರ ಗಡಣದಿ ನಿಜಪಿತನನು ನಾಂ ॥ ೨ ॥
ಸುಮುಖತೆಯಲಿ ಮೆರೆವಾ ಮೌನಿ ।
ಸಮಿತಿಯನಡುವಿಹ ಸುಮನಸರೆರೆಯನ ॥
ಪ್ರೇಮದಲಿ ನಮಿಸುತೆ ಗಮಿಪೆನು ಬಳಿಕಾಂ ॥ ೩ ॥

**ದಾಕ್ಷಾಯಿಣಿ : ಕಂದ**

ವರವೇದ ಮಂತ್ರಘೋಷಂ ।
ಸುರುಚಿರ ಹವಿರಾಜ್ಯ ಹೋಮಧೂಮಜ್ವಲನಂ ॥
ಸುರಮುನಿ ಸಮಾಜಮಿಂತಿವು ।
ಪರಮಾನಂದವನೆ ಮನದಿ ವೆರ್ಚಿಸುತಿರ್ಕುಂ ॥

**ದಾಕ್ಷಾಯಿಣಿ : ಹಾಡು** **ರಾಗ : ನೀಲಾಂಬರಿ - ಆದಿತಾಳ**

ಏನನು ರಚಿಪೆನು ಇದಕೆ ಅಕಟಕಟ ವಿಧಿಯೆ ॥
ಮನದೊಳು ದೀನಳಾಗಿ ಹೀನಭಾವದಿ ॥ ೧ ॥
ಕಾಂತನ ನುಡಿಯನುತೊರೆದು ಕುಮತದಿಂ ನರಿದು ॥
ಸತತವು ಶೋಕದಿಂದ ಕ್ಲಾಂತಳಾಗುತಾ ॥ ೨ ॥
ಯಾರಿಗೆ ಉಸುರಲಿ ಇದನು ಕೊರಗುತಿರ್ಪುದನು ॥
ಹರಹರ ಪ್ರಾಣಕಾಂತ ಬಾರೋಬೇಗದಿ ॥ ೩ ॥

**ದಕ್ಷ : ಕಂದ**

ಎಡಗಣ್ಣುಪಾರುತಿರ್ಪುದು ।
ತಡವಿಲ್ಲದ ವಾಮಬಾಹು ಕಂಪಿಸುತಿರ್ಕುಂ ॥

ದಡಬಡಿಸುತಿಹುದು ಹೃದಯಂ ।
ಕಡುಗೇಡುಗಳಡಸದಿ ರ್ಕುಮೇನಿದರಿಂದಂ ॥

**ವೀರಭದ್ರ : ಕಂದ**

ಖೂಳನ ನೆತ್ತಿಯನೀಗಲೆ ।
ಸೀಳುತೆ ಹರನಾಜ್ಞೆಯಿಂದ ಯಜ್ಞವನೆಲ್ಲಂ ॥
ಪಾಳಾಗೆಮಾಡಿ ಕೋಪ ।
ಜ್ವಾಲೆಗೆ ಮೂಲೋಕಗಳನೆ ಆಹುತಿಮಾಳ್ಪೆಂ ॥

**ವೀರಭದ್ರ : ಹಾಡು** **ರಾಗ: ದೇಶಿ ಕಾಪಿ - ಛಾಪುತಾಳ**

ಛೀಮೂಢ ದುಷ್ಟಾತ್ಮ । ಛೀಮೂರ್ಖ ಛೀದುರ್ಗ್ರಹಿ ।
ಛೀಖೂಳನೇ ನಿನ್ನ । ಛೀ ತುಂಡುಗೈವೆಂ ॥ ಪ ॥
ಯಾರೆಂದು ನೀನಿಂದು । ದೂರುತ್ತ ಮಾತಾಡಿ ।
ಆರುದ್ರರೌದ್ರಕ್ಕೆ । ತೋರಾಗಿ ಪೋಪ್ಪೆ ॥ ೧ ॥
ಐಶ್ವರ್ಯದಿಂ ಮತ್ತ । ನಾಗಿರ್ಪನೇ ನಿನ್ನ ।
ವೈಶ್ವಾರನರಂಗಿತ್ತು । ತುತ್ತೊಂದಮಾಳ್ಪೆ ॥ ೨ ॥
ಈ ಬಾಲೆಯಂ ಬೈದನೀಂ । ಬಾಲನಾಗಿರ್ಪೆ ।
ಶಾಬಾಸು ಶಾಬಾಸು । ಹೋನಿನ್ನ ಕೊಲ್ವೆಂ ॥ ೩ ॥

**ವೀರಭದ್ರ : ಕಂದ**

ಫಡಫಡೆಲವೆಲವೊಖೂಳನೆ ।
ಮೃಡನೊಳು ವಗೆತನವನೆನಗಿನೀಂ ಬಾಳುವೆಯಾ ॥
ನುಡಿಯದಿರು ಪೌರುಷೋಕ್ತಿಯ ।
ಸುಡುನಿನ್ನೀಕೆಟ್ಟಬಾಳ ಜಡನೇ ಛೀ ಛೀ ॥

**ವೀರಭದ್ರ : ಹಾಡು** **ರಾಗ : ಖರಹರಪ್ರಿಯ - ಏಕತಾಳ**

ಕಡಿವೆನು ದುರಾತ್ಮನಿನ್ನ ಗೋಣನೀಕೃಪಾಣದಿಂ ॥ ಪ ॥
ಕೆಡಕಿಸ್ಮೃಡನಕೋಪವ । ದುಡುಕಿಬೈದಾಡುತ್ತಾನಿಂದ ।

ಕೆಡುಕನಾದ ನಿನ್ನನೇ । ಕಡಿದು ಕೆಡಹಿಬಿಡುವೆನಾಂ ॥ ೧ ॥
ಮಗಳಬಗೆದುನೋಡದೆ । ಜಗದಮಹಾದೇವನನೆ ।
ಹಗರಣವಾಮಾಡಿಕೆಟ್ಟೆ । ಜಗಳಗಂಟತುಂರನೇ ॥ ೨ ॥
ಹರನಯಜ್ಞಭಾಗವ । ತೊರೆಯುತ್ತಲೀಯಾಗವ ।
ತರಳತನದಿಮಾಡಿಕಟ್ಟೆ । ದುರುಳ ಮರುಳ ಭಂಡನೇ ॥ ೩ ॥

**ದಾಕ್ಷಾಯಿಣಿ : ಹಾಡು** **ರಾಗ : ತೋಡಿ - ಅಟ್ಟತಾಳ**

ಅಕಟಾಪತಿಯೇ ಕರುಣಾಕರನೇ ।
ಸುಕಟಾಕ್ಷದಿಪಾಲಿಸುನೀಂ ಹರನೇ ॥ ಪ ॥
ಪಿತನೀಪರಿಯಿಂ ಪಳಿದಿಂದೆನ್ನ ।
ವೃತಿಯಾಂತನಹಾಗತಿಯೇಂ ಮುನ್ನ ॥ ೧ ॥
ಅತಿಶೋಕವಸೈರಿಸದೀದೇಹ ।
ಹುತವಾಹನಸೇರುವೆನಾನಾಹ ॥ ೨ ॥

**ದಕ್ಷ : ಕಂದ**

ಇಳೆಯೊಳು ಧನಾದಿಮದದಿಂ ।
ಬಲಾಢ್ಯರೊಳ್ ಪಗೆಯಸಾಧಿಸುತ್ತಂ ಮೆರೆವಾ ॥
ಕಲುಷಾತ್ಮನಾತ್ಮ ಹಾನಿಗೆ ।
ತಲೆಗೊಡುತಂ ಕೆಡುವನೆಂಬುದೇ ನಿಜಮಲ್ತೇ ॥

**ಶಂಕರ : ಕಂದ**

ಏತಕೆ ಪರಿಜನಬಂಧುಗ ।
ಳೇತಕೆ ಮನೆಮಠಗಳೆಂಬ ತೊಡಕೇತಕೆ ಸಂ ॥
ಪ್ರೀತಿಯೊಳೊಪ್ಪುವ ಪತ್ನಿಯು ।
ಮಿಾತೆರದಿಂ ಮಡಿಯೆನಾಂ ವಿರಕ್ತನೆಯಪ್ಪೆಂ ॥

ಪರಿಜನರು : ಹಾಡು　　　　ರಾಗ : ಬಿಲಹರಿಕ್ರಿಯೆ - ಆದಿತಾಳ

ದೇವಾಮಾಯವಾದೆಯಾ ॥ ಪ ॥
ಸೇವಕರಂ ಬಿಟ್ಟುಪೋದೆಯಾ ॥ ಅ ॥
ಇನ್ನೆಮಗೆ ದಿಕ್ಕುಯಾರುಹಾ ॥ ಬಿನ್ನಿಪುದು ತಕ್ಕುದೇ ಆಹಾ ॥ ೧ ॥
ಬೊಂದಿಯೊಳಿಂ ನೇನಮಾಳ್ಪೆವು ॥ ಎಂದಿಗೆನಾವ್ ನಿನ್ನನೋಳ್ಪೆವೊ ॥ ೨ ॥
ಯಾರನುನಾವ್ ಸೇರಿಕೊಳ್ಳೆವು ॥ ಯಾರಿಗೆನಾವ್ ಸೇವೆಮಾಳ್ಪೆವೊ ॥ ೩ ॥

## ದೃಶ್ಯ : ಇಂದ್ರ ಸಭೆ

ಚಾರ : ಹಾಡು　　　　ರಾಗ : ಕಮಾಚ್ - ಆದಿತಾಳ

ಸಾಕುಸಾಕುಬೇಡಾ ಈಸೇವೆಯು ॥ ಪ ॥
ಸಾಕುಸಾಕು ಈ ಕರೆಕರೆಬಾಳಿನ । ವ್ಯಾಕುಲವೆನಗೇ ಹಗರಣವಾಗಿದೆ ॥ ಅ ನು ॥
ಬೇಡವೆಂಬೆನೇ ಬಡತನ ನೀಗದು । ನಾಡಿನೊಳಗೆ ಹೊಡಬಾಳೆಂತಹುದು ॥ ೧ ॥
ದೇಹವಲ್ಲವಾ ಪರರಿಗೆ ಮಾರುತ । ಆಹಾರವಸನಾದಿಗಳನು ಘಳಿಪುದು ॥ ೨ ॥
ಯಾವಯಾವುದನು ಧಣಿವೇಳಿದರು । ಜೀವನದಾಶೆಯೊಳೆಲ್ಲವಗೈವುದು ॥ ೩ ॥
ಅರಸರ ಸೇವೆಯೆ ಕಿರುಕೊಳವಾದುದು । ಪರರಿಗೆ ಒಡಲನುಮಾರುವ
ಬಾಳಿದು ॥ ೪ ॥

ರಂಭಾದಿಗಳು : ಹಾಡು　　　　ರಾಗ : ಹಿಂದುಸ್ತಾನಿ ಕಾಪಿ - ಅಟ್ಟತಾಳ

ಸುರಲೋಕನಾಯಕ ಪಾಕಶಾಸನ ನಾಕಪತಿಸುಗುಣಾನ್ವಿತಾ ॥
ಮೆರೆವಾಕೆವಾಳನೆ ಶ್ರೀಕರಾ ರಿಪುಭೀಕರಾ ಕರುಣಾಕರಾ ॥ ಪ ॥
ಮಣಿಹಾರಭೂಷಿತ ಮಂಜುಭಾಷಿತ । ಮಂಗಳಾಂಗಮನೋಹರಾ ॥
ಫಣಿರಾಜಪೀಠನೆ ಮೇಘವಾಹನ ಪಕ್ಷಿವಾಹನಸೋದರಾ ॥ ೧ ॥
ನತಲೋಕಪಾಲನ ನಿತ್ಯಪಾವನ । ನಿಖಿಲವಂದಿವೈಭವಾ ॥
ಶತಯಾಗದಶಶತನೇತ್ರ ಮಂಜುಳಗಾನಲೋಲನೆ ವಾಸವಾ ॥ ೨ ॥

ಇಂದ್ರ : ವೃತ್ತ॥　　　　ರಾಗ : ನಾಟಿ

ಕ್ಷೀರಸಮುದ್ರಮಂಮಥಿಸೆ ಪುಟ್ಟಿದ ದಿವ್ಯಸುಧಾರಸಂ ಮನಂ ।
ಗೋರುತಲೀಂಟಿ ಮತ್ತರೆನಿಸಿರ್ಪಖಿಲಾಮರರೀಗ ದುರ್ಬಲಂ ॥

ದೋರಿದಿಗಂತದೊಳ್ನಿಲದೆ ದೈತ್ಯರ ಹಾವಳಿಗಳ್ಕಿ ಸೋತರೆಂ।
ದಾರಯೆದೈವಮೇ ವಿಮುಖಮಾಗಿರೆ ಬಾಳ್ಕೆಯಕೆಟ್ಟುಪೋಗದೆ ॥

**ಇಂದ್ರ : ಕಂದ**

ಅಟ್ಟಿಸುರವೈರಿಕುಲಮಂ।
ಮೆಟ್ಟಿರಸಾತಲಕ್ಕೆ ಮರಳಿ ಕುಲಶೈಲಗಳಂ ॥
ಕುಟ್ಟುತೆ ಪಾತಾಳಬಿಲ।
ಕ್ಕೊಟ್ಟುವೆನೀವಜ್ರಮಿರ್ಕುಮೆನಗೆ ಸಹಾಯಂ ॥

**ಬೃಹಸ್ಪತಿ : ಹಾಡು** **ರಾಗ : ಮಧ್ಯಮಾವತಿ - ಅಟ್ಟತಾಳ**

ಏನೇನೋ ಬಗೆಯಾಗಿದೆ ದೇವರಾಜನ। ಅನುವೆಂತುಟೋ ಕಾಣೆನು ॥
ಹೀನಾನಂದದಲಿದೆ ಸುರಸಂತಾನಂ। ಇನಿತೆಲ್ಲವಿಪರೀತವು ॥ ೧ ॥
ರಂಭಾಸುರಸಾ। ತುಂಬುರಮುಖ್ಯರಿವರೀಗ ವಿಭವಂಗಳಂನೀಗಿರೆ ॥
ಸಂಭ್ರಮಂಗಳಿಲ್ಲ ಸಂಗೀತಂಗಳಿಲ್ಲ। ಸಭೆಯಿಂತುಬೆರಗಾಗಿದೆ ॥ ೨ ॥
ಭೇದಾಭೇದವಮೀರಿದ ಬ್ರಂಹಬೋಧೆಯ ವದದಂತೆನಿಶ್ಚಂಚಲ ॥
ವೇದಾಂತಂಗಳ ವಿಧಿಯೆಂದಾದುದು ಮುದಮಿಲ್ಲಮಿಗೆ ವ್ಯಾಕುಲ ॥ ೩ ॥
ಎಂತೂಹಿಸಿನೋಡಲು ಚಿತ್ತವೆನ್ನೊಳು ಹಿತವಾಗಿ ಮುಂತೋರದು ॥
ಇಂತಾಗಿನಿಂತಿರುತಿಹ ದೇವೇಂದ್ರನ ಮತಿಗಾವ ಕುಂದಾದುದೊ ॥ ೪ ॥

**ಬೃಹಸ್ಪತಿ : ಕಂದ**

ಭಯಮುಳಿದು ನೀಂ ತ್ರಿಲೋಕಾ।
ಶ್ರಯನಾಗುತ ವೈರಿಕುಲವಮರ್ದಿಸುತನಿಶಂ ॥
ಜಯಶೀಲನಾಗಿ ಬಾಳು।
ನಿಯತದೆ ಹರಿಹರರಕರುಣದಿಂ ಸುಖಿಯಾಗೈ ॥

## ದೃಶ್ಯ : ಕಾಮಲೋಕ

**ವಸಂತ : ಹಾಡು** **ರಾಗ : ಜಂಜೂಟಿ - ಚಾಪುತಾಳ**

ಬೇಗದೆಪೇಳುವೆನು - ಭೋಗವನು ॥ ಪ ॥
ಸುಖಯೋಗಾಭಿರಾಗವನೀಗ ಈರೀತಿಯಾ ॥ ಅನು॥

ಕಾಮೇಶನಲ್ಲಿಗೆ । ನೇಮದಿಂದಲೆಪೋಗಿ । ಪ್ರೇಮದಿ ನೆಲ್ಲವನೀಗ ॥ ೧ ॥
ಪೆಂಪಾದಕಾಡಿನಾ । ಸೊಂಪಾದಬಗೆಗಳ । ಇಂಪಾದ ವೈಭವಗಳಾ ॥ ೨ ॥
ಶೋಭಾಯಮಾನದ । ಸೌಭಾಗ್ಯತರುಗಳ್ । ಆಭವ್ಯಕರಗುಣವ ॥ ೩ ॥
ಎತ್ತೆತ್ತಪೂತಿಹ ಮುತ್ತುಗದಲರಿನ ವಿಸ್ತಾರವಾದ ಬಗೆಯ ॥ ೪ ॥
ಮಂದಾನಿಲಾವೃತ । ಮಂದಾರಕುಸುಮದ । ಚೆಂದಾದ ಪರಿಪರಿಯ ॥ ೫ ॥
ಸೀಮಾವೊಳೊಪ್ಪಿಹ ಸಾಮೋದದಳಿಗಳ । ಪ್ರೇಮಾಂ ಚಿತೋರುಗಾನವ ॥ ೬ ॥

**ಕೀರವಾಣಿ - ಕೋಕಿಲವಾಣಿ : ಹಾಡು** **ರಾಗ : ಕಮಾಚ್ - ಆದಿತಾಳ**

ರಸಿಕ ಜನನಿಚಯಾ । ವಿಜಯಾ ವಿಜಯಾ ॥ ಪ ॥
ಶ್ರೀಸುತ ಕಾಮೇಶ । ಪೂಸರ ಶುಭಕೋಶ ।
ಭಾಸಮಾನನೇ । ವಿಶದಸುಗುಣಾರತೀತಾ ॥ ಅನು ॥
ಸರಸಾಲಂಕಾರ । ಸಾರಗುಣಾಕರ । ಶೃಂಗಾರ - ವರಮೋದಾರ - ಶ್ರೀ ।
ರಮ್ಯಾಲಲಿತಾಕಾರಾ - ವರಮನೋವಿಹಾರಾ । ಪರಮಾದಾರಾ ॥ ೧ ॥
ಹೃದಯಾಶಾಮೂಲ । ಮೋದಸಿರಾಕುಲಾ ಶ್ರಿತಪಾಲಾರುಣಾಶೀಲಾ ।
ಪ್ರಥಿತಮೋಹನಜಾಲಾ । ಸುಮಬಾಣಲೀಲಾ । ರತಿಸಾನುಕೂಲಾ ॥ ೨ ॥
ಘನಘೋರಾವೇಶ । ಮೌನಿಗಜಾಂಕುಶಾ । ಸಾನಂದ ರಸಿಕಾಧೀಶಾ ।
ದಾನವಾಂತಕಸಂಕಾಶಾ ದಮಿತಬುದ್ಧಿ ಕೋಶಾ ಮಹಿಮಾನಿವೇಶಾ ॥ ೩ ॥

**ಬೃಹಸ್ಪತಿ : ಹಾಡು** **ರಾಗ : ಕುರಂಜಿ - ಆದಿತಾಳ**

ರಾರಾಜಿಪಾಸ್ಥಾನ ವಿರಾಜಿಸೆ ಈಗ ॥
ಸಾರಸೌಭಾಗ್ಯ ಯೋಗ ಮೀರಿದ ಭೋಗ ॥ ಪ ॥
ಸುಲಲಿತಹಾರಾ । ಲೀಲಾವಿಸರಾ । ಸಲೆ ಶೋಭಿಪಾಂಗನಾ ಲೀಲಾವಿಶಾಲ ॥ ೧ ॥
ಲಲನಾವಿಲಾಸ । ಲೋಲವಿಭಾಸ । ಕಲಿತಾನಂದ ವಿಶಾಲಾ - ಲೀಲಾಜಾಲಾ ॥ ೨ ॥
ಸೊಗಸಿನ ಬೃಂದ ಭೋಗಾನಂದ । ಮಿಗೆ ತೋರುವೀಚಂದ । ರಾಗಾನಂದ ॥
ಬಗೆಗೊಂಬವೇಷ । ಭಾಗ್ಯವಿಶೇಷ । ಜಗದೊಳೀಪರಿಹೃದ್ಯ । ವಿವರಿಚೋದ್ಯ ॥ ೩ ॥

**ಕಾಮ : ಹಾಡು** **ರಾಗ : ಬೇಹಾಗ್ - ಆದಿತಾಳ**

ಕ್ಷೇಮವೇನಯ್ಯಾ । ವಿಜಯುವೇ ಜೀಯ ॥ ಪ ॥
ಸುರರಾಜನೋಲಗ । ಪರಿವಾರಕೀಗ ॥

ಪರತರ ಸೌಖ್ಯೋದಯಂ । ವೈಭವಂ ॥ ೧ ॥
ಘನವಾದ ಸೌಭಾಗ್ಯ । ಅನುಕೂಲದೋಳ್ಯೋಗ್ಯ ।
ಅನುವೆನಲೊಪ್ಪಿರ್ಪುದೇ ಮಾನದೆ ॥ ೨ ॥
ಅಮರೇಂದ್ರನಾಸ್ಥಾನ । ಸಮವೆಂಬುದೇಂಮಾನ ।
ಕ್ರಮವೆನಿಸೆ ಸಂಭಾವನಾ ಪಾವನಾ ॥ ೩ ॥

**ರತಿ : ಹಾಡು** **ರಾಗ : ಕಾಪಿ - ಆದಿತಾಳ**

ಪ್ರಾಣೇಶಾ ಪೋಗಬೇಡವೊ ॥ ಪ ॥
ಪ್ರಾಣಕಾಂತನೀಂ ಪೋಗಬೇಡಾ ॥ ಅ.ಪ. ॥
ಎನ್ನಮಾತ ಕೇಳುದೇವಾ । ಮುನ್ನಿಸೀಗದಿವ್ಯಭಾವಾ ॥ ತನುಮನಕೀಗ ।
ಜನಿಸೆವಿಯೋಗ । ನಿನ್ನನಗಲಿರಲಾರೆನು । ಇನ್ನೇವೇ ಕಾಂತಾ ॥ ೧ ॥
ಈಶನೆಡೆಗೆ ಪೋಗೆನೀನು । ನಾಶವಾಗದಿರ್ಪೆಯೇನು ॥
ಕುಸುಮಶರಾಂಗ ಲಸಿತಾಪಾಂಗ ॥ ೨ ॥
ಭೋಗಭಾಗ್ಯವನ್ನು ನೀಗಿ । ಬೇಗದಿಂ ನೀನಲ್ಲಿಪೋಗೆ ॥
ಹಗರಣವೊಂದೇ ಪೊಗೆವುದುಮುಂದೆ ॥ ೩ ॥

**ಕಾಮ : ಹಾಡು** **ರಾಗ : ಕಮಾಚ್ - ಆದಿತಾಳ**

ಬೇಡನಿನಗೀಚಿಂತೆ । ನೋಡೆನ್ನಕಾಂತೆ ॥ ಪ ॥
ಪಂಚಬಾಣದಿಂದೆಲ್ಲಾ ಲೋಕಂ । ವಂಚಿತಮಪ್ಪುದು ಏಕೀಶೋಕಂ ॥ ೧ ॥
ಕಾಮನಶೌರ್ಯವನ್ನು ನೀಂ ನೋಡು ॥ ಕಾಮಿಸಿಪ್ರೇಮದಿಂದಾಡು ॥ ೨ ॥

## ದೃಶ್ಯ : ಹಿಮಾಚಲದ ವನ

**ಕಾಮ : ಹಾಡು** **ರಾಗ : ಕಮಾಚ್ - ಅಟ್ಟತಾಳ**

ವಿರಾಜಿಸಿರ್ಪುದು । ಸುರಮ್ಯಮಪ್ಪುದು ॥ ಪ ॥
ಲಲಿತಪವನ । ಚಲಿತ ವಿಪಿನ । ಕಲಿತತರುಕುಲಂ ।
ಫಲಾಳಿಕುಸುಮ ಗಂಧಮಿಳಿತ ವಲ್ಲವಾ ಕುಲಂ ॥ ೧ ॥
ಹಿತವಸಂತ । ಯುತನಿತಾಂತ ವಿತತಭೋಗದಿಂ ।

ಕೃತಾಲ ವಾಲಕಾಂತ ತರುಲತಾಭಿಯೋಗದಿಂ ॥ ೨ ॥
ಶುಕಪಿಕಾಳಿ । ನಿಕರದಾಳಿ । ಸುಕಲನಾದದಿಂ ॥
ವಿಕಾಸಮಾನ ಕುಸುಮಸುರಭಿ ಸುಖವಿನೋದದಿಂ ॥

**ಕಾಮ : ಹಾಡು** **ರಾಗ : ಜಂಜೂಟಿ - ಮಿಶ್ರಚಾಪುತಾಳ**

ಎಲ್ಲಿ ನೋಡಲು ಶೋಭಿತಂ ಅಲ್ಲಲ್ಲಿಯೂ ॥ ಪ ॥
ಮಲ್ಲೆ ಮಲ್ಲಿಗೆ ಜಾಜಿ ಬಳ್ಳಿಗಳೆಲ್ಲಿಯೂ
ಫುಲ್ಲ ಪುಷ್ಪವ ಚೆಲ್ಲಿರೇ ಅಲ್ಲಲ್ಲಿಯೂ ॥ ೧ ॥
ಗುಂಪು ಗುಂಪಿನೀ ಕಂಪಿನೀ ಪಿಂಪಿನೀಂ
ಇಂಪುಗಾನವ ಗೈದಿರೆ ಅಲ್ಲಲ್ಲಿಯೂ ॥ ೨ ॥

**ಪರಿಜನ : ಹಾಡು** **ರಾಗ : ಹಿಂದೂಸ್ಥಾನಿ - ಆದಿತಾಳ**

ಜಯಕಾಮಾಜಯಧಾಮಾದಯಿತಾ ಸುಪ್ರೇಮಾ ।
ನಯಗುಣಾರಾಮಾ ಜಯಕರಭೂಮಾ ॥ ಪ ॥
ಅತಿಸುಕುಮಾರಾ । ಯತಿಧೈರ್ಯಚೋರಾ ।
ರತಿಹಿತಾಕಾರಾ । ನತಪರಿವಾರಾ ॥ ೧ ॥
ಸಮದಷಟ್ಪ್ರಾಣಾ । ಯಮಿಧೀ ಕೃಪಾಣಾ ।
ಸಮರಾಳಿತೂಣಾ । ಸುಮಕೃತಬಾಣಾ ॥ ೨ ॥
ಮುದಿತ ವಸಂತಾ । ಮೃದುಪಾದಕಾಂತಾ ।
ಮದನಮಹಾಂತಾ । ವಿದಿತ ವಿಕ್ರಾಂತಾ ॥ ೩ ॥
ಅಳಿಗುಣಶೀಲಾ । ಅಳಕಾವಿಶಾಲಾ ।
ಮಿಳದಾಳಿಲೀಲಾ । ಲಲನಾನುಕೂಲಾ ॥ ೪ ॥

**ರತಿ : ಹಾಡು** **ರಾಗ : ವಸಂತ - ಆದಿತಾಳ**

ಅಗಲಿಪತಿಯಾ ನಾನಿರಲಾರೆ । ಮಿಗೆದುಗುಡುವ ಸೈಸಲಾರೆ ॥ ಪ ॥
ನಾಥಿಯ ನಗಲುತ ಘೋರತಪಮಾಡಿ ।
ಕ್ರೂರಸಾದವನಿಗೆ ದಯವುಂಟೆ । ನಾನು ಪತಿಯಬಿಟ್ಟಿರಲಾರೆ ॥ ೧ ॥
ಕಾಮನದಹಿಸುತ ಕಾಮಿನಿಯಳಲನ ।

ನೇಮದಿಂದಿರುವುದೇತರವಲ್ಲ ॥ ಆಹಾ ದುಗುಡವಸ್ಯೆರಿಸಲಾರೆ ॥ ೨ ॥
ಫಾಲಲೋ ಚನನಿನ್ನ ಶೂಲದಿಂದಿರಿದೆನ್ನ ।
ಕಾಲನ ನಗರಿಗೆ ಕಳುಹೀಗ । ತಡಿಯಲೆನ್ನಳವಲ್ಲ ॥ ೩ ॥

## ದೃಶ್ಯ : ಕಾಡಿನ ಒಂದು ಭಾಗ

**ಇಂದ್ರ, ಬೃಹಸ್ಪತಾದಿಗಳು : ಹಾಡು** **ರಾಗ : ಜಂಜೂಟಿ - ಅಟ್ಟತಾಳ**

ಶಂಭೋ । ದೇವ ಆಲಿಸೋ । ದೇವಲಾಲಿಸೊ ।
ಭಾವದಿಂದ ನೋಡಿ ಸುರರ ಭರದಿಪಾಲಿಸೋ ॥ ಪ ॥
ದುರುಳದೈತ್ಯರಾ । ಉರುಬೆಗಾರದೇ ।
ಶರಣುವೊಕ್ಕಯಮ್ಮ ಕಾಯೊ । ಪರಮಶಂಕರಾ ॥ ೧ ॥
ಸುಗತಿಪಾಲನೇ । ಸುಗುಣಶೀಲನೇ ।
ನಿಗಮಮೌಳಿ ನಿಗದಿತಾರ್ಥ ಮೃಗಧರಾಂಕನೇ ॥ ೨ ॥
ಭುಜಗಭೂಷಣಾ । ಸುಜನತೋಷಣಾ ।
ಭಜಿಪ ಸುರರಿಗಭಯವಿತ್ತು ಪೊರೆವರಾತ್ಪರಾ ॥ ೩ ॥

**ಇಂದ್ರ : ಕಂದ**

ಸೃಷ್ಟಿಸ್ಥಿತಿಲಯ ಕರ್ತನೆ ।
ದುಷ್ಟಧ್ವಂಸಕನೆ ಶಿಷ್ಟಪರಿಪಾಲಕನೇ ॥
ತುಷ್ಟಾತ್ಮನಾಗುತೆಮ್ಮಯ ।
ಕಷ್ಟವ ಪರಿಹರಿಸಿ ಪಾಲಿಸೈಪರಮೇಶಾ ॥

**ಬ್ರಹ್ಮ : ಕಂದ**

ಯೋಗೀಶ ಯೋಗಿವಂದಿತ ।
ಯೋಗಾನಂದೈಕರೂಪ ಭೋಗಿಕಲಾಪಾ ॥
ಆಗಮನಿಗಮಸ್ತುತ ಶರ ।
ಣಾಗತಜನಪಾಲ ಪಾಲಿಸೈ ಪರಮೇಶಾ ॥

**ಪರ್ವತ : ಹಾಡು** **ರಾಗ : ನಾದನಾಮ - ಮಿಶ್ರ ಭಾಪುತಾಳ**

ಶಂಭೋ । ದೇವದೇವ ॥ ಸರ್ವ ॥ ಜೀವಾತ್ಮರೂಪಚಿದ್ಭಾವ ॥
ನಿತ್ಯ । ಪರಿಪೂರ್ಣ ಪರತತ್ವ ಕೋಶ । ಸ್ತುತ್ಯ ।
ನಿರವದ್ಯ ಕರುಣಾ ನಿವೇಶ । ಭೃತ್ಯ । ದುರಿತಾಭಿ ಹರಣಾಭಿವೇಶ ॥
ಸತ್ಯ । ಚರಿತಾ ಪೊರೆಯೈ ವಿಶ್ವೇಶ ॥ ೧ ॥
ವರ ! ಯೋಗಿ ಸನ್ನುತಕಾಲ ಕಾಲ । ಗುರು । ಭೋಗಿ ಭೂಷಣ ತತ್ವಮೂಲ ॥
ಭೂರಿ । ಭೋಗದಾಯಕ ವಿಶ್ವಪಾಲಾ ॥ ಸಾರ । ಯೋಗ ಚಿದಾನಂದಲೀಲ । ೨ ॥

**ರತಿ : ಹಾಡು** **ರಾಗ : ಕಾಪಿ - ರೂಪಕತಾಳ**

ಹಾಹಾ ಕಾಂತಾ । ಹಾ ವಿಕ್ರಾಂತಾ । ದೇಹಾ ಭೋಗಾ । ನೀಗಿತಿಗಾ ॥ ಪ ॥
ಯಾರಿಗೆಸಾಂ । ದೂರುವೆನು ಮಾರಿತೆನ್ನ ಬಾಳೀಬಣ್ಣಾ ॥ ೧ ॥
ಕಷ್ಟಂ ಘೋರಂ । ಕಷ್ಟಂಕ್ರೂರಂ ॥ ದುಷ್ಟಂಜೀವಂ । ದುಷ್ಟಂದೈವಂ ॥ ೨ ॥
ಯಾಕೀದೇಹಾ । ಯಾಕೀಮೋಹಾ । ಯಾಕೀಲೋಕ । ನಾಕೋ ಹಾಹಾ ॥ ೩ ॥

**ರತಿ : ಹಾಡು** **ರಾಗ : ತೋಡಿ - ರೂಪಕತಾಳ**

ಶರೀರವೇಕೆ ಬರೀಮೋಹ ಹಾವಿಧೀ ।
ದುರಂತ ಶೋಕನಿರಾನಂದವಾರಿಧೀ ॥
ವಿಷಂಗಳನ್ನೆ ಮೆದ್ದು ಪ್ರಾಣವನ್ನೆ ನೀಗಿಕೊಂಬೆನೇ ।
ಮೃಷಾವಿಚಾರ ಪಿನ್ನಿದಕ್ಕೇನನೆಂಬೆನೋ ॥ ೧ ॥
ನದೀಪ್ರವಾಹದಲ್ಲಿ ಬೀಳ್ದು ನಾಶವೈದಿ ಪೋಪೆನೋ ।
ಇದೇಕೆ ದೇಹ ವೃಥಾ ತಾಳಲಾಪೆನೇ ॥ ೨ ॥
ಮಹಾಗ್ನಿಗೀ ಶರೀರವನ್ನೆ । ಹೋಮಗೈದುಸಾವೆನೋ ।
ಮಹಾದ್ರಿಯಿಂದೆ ಬೀಳುತಾಂತು ನೋವೆನು ॥ ೩ ॥
ಅಪಾರವಾದ ಶೋಕ ತೀವ್ರವೇಗದಿಂದ ದೇಹವು ।
ಅಪೋಹವಾಗದಹೋಯೇಕ ಮೋಹವು ॥ ೪ ॥

**ರತಿ : ಕಂದ**

ಪತಿದೈವವೆಂದು ಸತತಂ ।
ಪತಿಸೇವೆಯಗೈದು ಪತಿಗೆ ಹಿತಳಾಗಿರೆನಾಂ ॥
ಪ್ರತಿಜನ್ಮದೊಳಿಂಯೆನ್ನಯ ।
ಪತಿಯೊಡನಿರ್ಪತು ಕರುಣಿಸೈ ಶ್ರೀಪತಿಯೇ ॥

**ನಾರದ : ಹಾಡು** **ರಾಗ : ಪೂರ್ವಿ - ಅಟ್ಟತಾಳ**

ಭುವನಸುಖಾಧಾರಿ ಶೌರಿ ದೇವಶ್ರೀಹರೀ ॥ ಪ ॥
ಪರಮಪುರುಷ ಪಾಪಹರಾ ।
ಶರಣಮನೋಲ್ಲಾಸಪರಾ । ಕಾರುಣ್ಯಾನಂದಕರ ।
ಸುರನರವರನುತ ಚತುರಾ ॥೧॥

**ದೃಶ್ಯ : ಶಂಬರಾಸುರನ ದರ್ಬಾರು**

**ಶಂಬರ : ಹಾಡು** **ರಾಗ : ಶಂಕರಾಭರಣ - ಅಟ್ಟತಾಳ**

ಸರಿಯಾವುದೊ । ಕಾಣೆನು । ರಾಮರಸಕ್ಕೆ ॥ ಪ ॥
ಸುರನರ ಭುಜಗರಂಬರ ಲೋಕಂಗಳನೆಲ್ಲ ।
ಅರಸಿನೋಡಲು ಉಂಟೆ । ಪರಿಪೂರ್ಣರುಚಿಯೊಳು ॥ ೧ ॥
ಇದರ ಸೇವನೆಯಿಂದ । ಪದಿನಾಲ್ಕುಲೋಕವು ॥
ತುದಿಯಿಂದ ಬುಡಮಟ್ಟ ಮುದವೇ ಮುದವಾಹ್ವಾ ॥ ೨ ॥

**ನಾರದ : ಹಾಡು** **ರಾಗ : ಮೋಹನ - ಆದಿತಾಳ / ಛಾಪುತಾಳ**

ದೇವ ಸಲಹೈ ॥ ಪ ॥
ನಿನ್ನ ಸಹಾಯವನೆ । ನೆರೆ ಬೇಡುತಿಹೆನೈ ।
ಕೈಯ್ಯ ನೀಡುತಿಹೆನೈ । ಸ್ತುತಿಮಾಡುತಿಹೆನೈ ಶ್ರೀ ॥ ಅ.ಪ. ॥
ನಿಖಿಳಾಧಾರನೆ । ನೀತಿ ವಿಚಾರನೆ । ನಿರವಧಿ ನಿತ್ಯಾನಂದವಿಹಾರನೇ ॥ ದೇವ ।
ಪರಾತ್ಪರನೆ ಭವ ತಾರಕನೆ । ರಿಪು । ಮಾರಕನೇ । ಸುಖಪೂರಕನೇ । ನೀಂ ॥ ೧ ॥
ಪರಮೋದಾರನೆ । ಪಾಪವಿದೂರನೆ । ಪರತರ ತತ್ವಾಕಾರ ಪರೇಶಾ ॥ ಭಕ್ತ ॥
ಶರಣ್ಯನೇ ಪರಿಪಾಲಿಪುದೈ । ಮೊರೆಯಾಲಿಪುದೈ । ನೆರಲಾಲಿಪುದೈಮಾಂ ॥ ೨ ॥

**ಬೇಟೆಗಾರರು : ಹಾಡು** **ರಾಗ : ಪೂರ್ವಿ - ಆದಿತಾಳ**

ಭಲಾಭಲಾ ಇತ್ತಸಾರಿ ಬನ್ನೀ । ಭಲರೆ ಭಲರೆ ಯೆತ್ತತೋರಿತನ್ನೀ ॥ ಪ ॥
ಅಕ್ಕೋ ನೋಡಿ ಸಿಕ್ಕಿತರೆಜೋಡಿ ॥
ತಕ್ಕಂತೆ ಹಿಡಿದು ಬೇಗ ಕುಕ್ಕಿ ತುಂಡು ಮಾಡಿ ॥ ೧ ॥
ಅಟ್ಟಾಸದಿಂದ ಅಟ್ಟಕೊಂದ್ರೆ ಚಂದ ।
ಪಟ್ಟಂಗಹೊಡೆಯ ಲೇಕೆ ತಟ್ಟನ್ನೆ ಹೊಡದ್ರೆ ಅಂದ ॥ ೨ ॥
ಕಣ್ಣಿಟ್ಟು ನೋಡಿ ತಿಣ್ಣವೆನಬೇಡಿ ಮಿಣ್ಣಾನೆ ಹತ್ತಿರೆ ಹೋಗಿ
ದೊಣ್ಣೇಲಿ ಬಡಿದುಕಾಡಿ ॥ ೩ ॥

**ಬೇಟೆಗಾರರು : ಹಾಡು** **ರಾಗ : ಜಂಜೂಟಿ - ಆದಿತಾಳ**

ಬೇಟೆಗಾರರೆಲ್ಲ ಬನ್ನಿ ಬೇಟೆಯಾಡುವಾ ॥
ಸೂಟಿಯಿಂದ ಪರಿದು ಮೆರೆದು ಆಟವಾಡುವಾ ॥ ಪ ॥
ಕತ್ತಿ ಕೋವಿಬಿಲ್ಲುಬಾಣವೆತ್ತಿ ಬಡಿಯಿರಿ ।
ಮತ್ತ ಗಜವಸುತ್ತಿ ಮುತ್ತಿನೆತ್ತಿ ಕಡಿಯಿರಿ ॥ ೧ ॥
ಬಲೆಯನೊಡ್ಡಿ ಮೊಲದಹಿಂಡ ಕಲಕಿಕೊಲ್ಲಿರಿ ॥
ಬಲಿತಹಂದಿ ಕೋಣಗಳನು ನಲಿಸಿನಿಲ್ಲಿರಿ ॥ ೨ ॥
ಒಗ್ಗಿನಿಂದ ಪೊದೆಗಳೊಳಗೆ ನುಗ್ಗಿ ಅರಸಿರಿ ।
ಬಗ್ಗಗಳನು ನೆಗ್ಗಿ ತೊಲವ ದುಗ್ಗುಗೈಯಿರಿ ॥ ೩ ॥
ಕಂಡಕಂಡ ಮೃಗವಹಿಡಿದು ದಿಂಡುದರಿಯಿರಿ ॥
ಖಂಡಗಳನು ದಂಡಿದಂಡಿ ಉಂಡು ಮೆರೆಯಿರಿ ॥ ೪ ॥

**ಶಂಬರ : ಹಾಡು** **ರಾಗ : ದೇಶಿಕಾಪಿ - ಆದಿತಾಳ**

ಮೋಹನಾಕಾರೆನೀರೆ ಮೋಹಿಪಳಾಹಾ ಧೀರೆ ॥ ಪ ॥
ಅತಿಶಯರೂಪೋ ದಾರೆ । ಹಿತಕರಭೋಗಾಧಾರೆ ॥
ಪ್ರೀತಿಯದಾವುದು ಪೇಳೆ । ಸತತ ಕೋಮಲಗಾತ್ರೆ ॥ ೧ ॥
ರಸಿಕರಂಜನರೂಪ । ಮಿಸುಗಲೆದೆಯೊಳ ತಾಪ ।
ಬಿಸಿಯ ಬೇಗೆಯ ಮಾಳ್ಪುರು । ಅಸಿಯಳ ಚಲ್ವನೊಳು ॥ ೨ ॥

ಮನವಿದು ಸೂರೆಯಾಗೆ । ತನು ಬಡವಾಗಿ ಪೋಗೆ ॥
ಅನುಗತವಾದುದಾವಾ । ಅನುವು ಗೆಟ್ಟುದು ಆಹಾ ॥ ೩ ॥

**ಶಂಬರ : ಕಂದ**

ಪುರಹರನ ರಾಣಿಯೋ ಶ್ರೀ ।
ಹರಿ ಮೋಹನದರಸಿಯೋ ವಿರಿಂಚನಸತಿಯೋ ॥
ಸುರಪತಿವಲ್ಲಭೆಯೋ ನೀಂ ।
ಸ್ಮರಂಗೆ ಸತಿಯಾದರತಿಯೊ ಮೇಣಾವಳೋಪೇಳ್ ॥

**ರತಿ : ಹಾಡು** **ರಾಗ : ಹಿಂದೂಸ್ಥಾನಿ ಕಾಪಿ - ಆದಿತಾಳ**

ಏನುಮಾಡಲಿ ವಿಧಿಯೇ ॥ ಪ ॥
ಮಾನಹಾನಿಯಾಯ್ತೆ ಇಂದಿಗೆ । ಆಹಾ ।
ಹೀನತನಕ್ಕೇನಮಾಡಲಿ ವಿಧಿಯೇ ॥ ೧ ॥
ಭೋಗಭಾಗ್ಯವೆಲ್ಲ ನೀಗಿತೇ । ಆಹಾ ।
ಈಗ ದೇಹವಿಂತು ನಿಂದುದೇ ವಿಧಿಯೇ ॥ ೨ ॥
ಸಾಕುಸಾಕು ಹೆಣ್ಣು ಜನ್ಮವು । ಆಹಾ ।
ಶೋಕವೇಗಕೆಂತು ಸೈವೆನು ವಿಧಿಯೇ ॥ ೩ ॥

**ದೃಶ್ಯ : ಉದ್ಯಾನ**

**ಮಾಯಾವತಿ : ಹಾಡು** **ರಾಗ : ಜಂಜೂಟಿ - ಅಟ್ಟತಾಳ**

ಕಡುಮೋಹಗೊಂಡೆನೀಗ । ತಡೆಯಾದೆಬಾರೊಬೇಗ ॥ ಪ ॥
ಯುವತೀ ಚಿತ್ತ ಚೋರನೇ । ನವಮೋಹನಾಕಾರನೇ ॥
ಸುವಿಲಾಸದಿಂದನೋಡು । ಭಾವವಿತ್ತು ಮಾತನಾಡು ॥ ೧ ॥
ಅನುರಾಗಗೊಂಡೆನೀಗ । ಮನಗೊಂಡು ಬಾರೋಬೇಗ ॥
ಅನುಮಾನವೆಲ್ಲನೀಗೆ । ತನುಮಾನನಿನ್ನದಾಗೆ ॥ ೨ ॥
ದಯದಿಂದಯೆನ್ನ ನೋಡು । ಪ್ರಿಯದಿಂದ ಮಾತನಾಡು ॥
ನಯದಿಂದ ಬಂದುಯೆನ್ನ । ಬಯಕೆಯತೀರ್ಚುಮುನ್ನ ॥ ೩ ॥

**ಪ್ರದ್ಯುಮ್ನ : ಹಾಡು** **ರಾಗ : ಜಂಗಲ್ - ಆದಿತಾಳ**

ಸುರಪತಿನಂದನ । ದಿರವನು ಜರಿಯುತೆ । ಮೆರೆಯುವುದೀವನವೂ ॥
ಪರಿಪರಿಸೊಬಗಿನ । ತರಲತೆಸುಮಫಲ । ಸುರಚಿರವಿದೆಘನವೂ ॥ ೧ ॥
ಮರುಗವುಮಲ್ಲಿಗೆ । ಪರಿಮಳಿಸುತಲಿದೆ । ಇರುವಂತಿಗೆ ಜಾಜೀ ॥
ನಿರುಪಮವಾಟಲಿ । ವರಪುನ್ನಾಗವು । ಸರಹೊನ್ನೆಯರಾಜೀ ॥ ೨ ॥
ಸೊಗೆಯಿಪಸಂಪಿಗೆ । ಮಗಮಗಿಸುತಲಿದೆ । ಬಗೆಬಗೆಗುಣದಿಂದಾ ॥
ಖಗಮೃಗವಿತತಿಯು । ನಗೆಯೊಡನಿರುತಿದೆ । ಜಗಕಿದುಮಿಗೆಚಂದಾ ॥ ೩ ॥
ಗಿಳಿಗಳುಕುಟುಕಿದ । ಫಲಗಳರಸಗಳು । ಇಳೆಯೊಳೆ ಸುರಿದಿಹುದೂ ॥
ಸುಲಲಿತ ಕೋಕಿಲ । ಕಲಮಧುರಧ್ವನಿ । ವಿಲಸಿತಮೆನಲಹುದು ॥ ೪ ॥
ಮಾರನಘನತೆಯ । ಸಾರುವುದೆತ್ತಲು । ಮಾರಿದತಂಗಾಳೀ ॥
ಸಾರಸಯುತಕಾ । ಸಾರದಲೀಲೆಯು ತೋರುವುದಬಲಾಳೀ ॥ ೫ ॥
ತನುಮನಗಳಸುಖ । ಕನುಗುಣವೆನಿಸಿದೆ । ಘನತರುಗಳ ಪರಿಯೂ ॥
ವಿನುತಿಪಡಸದಳ । ವನಪಿಭವವು ಇದು । ಮನಸಿಜ ಜಯಸಿರಿಯೂ ॥ ೬ ॥

**ಪ್ರದ್ಯುಮ್ನ : ಕಂದ**

ಹರಿಹರವಿರಂಚಿಮುಖ ನಿ ।
ರ್ಜರರಂ ನರನಾಗಯಕ್ಷರಾಕ್ಷಸರಂ ದು ॥
ರ್ಭರತಪದ ಮುನಿಗಳಂ ಪಿಡಿ ।
ದರೆ ನಿಮಿಷದೆತಂದು ನಿನ್ನ ಪದಕರ್ಪಿಸುವೆಂ ॥

**ಪ್ರದ್ಯುಮ್ನ : ಹಾಡು** **ರಾಗ : ಮುಖಾರಿ - ಆದಿತಾಳ**

ನ್ಯಾಯವೇನಿದು ನಿನಗೆ । ಹೇಯವಾಡುವಬಗೆ ॥ ಪ ॥
ಕಾಯವಾಕ್ಕುಗಳಿಂದ । ತಾಯೆಂದಿರ್ಪನೊಳಿಂತು ।
ಮಾಯಾಜಾಲವ ಬೀರಿ ಜಾಯೆ ಯಾಗುವೀಪರಿ ॥ ೧ ॥
ಚಿಕ್ಕಂದಿನಿಂದೆನ್ನ । ಅಕ್ಕರಿಂದಲೆಸಾಕಿ ॥
ಮಿಕ್ಕು ಮೋಹವು ಮನ । ಸೊಕ್ಕಿ ಪೇಳುವನೀತ ॥ ೨ ॥

ಧರ್ಮವೆಂಬುದನೀಗಿ ಕರ್ಮಶುದ್ಧಿಯುಪೋಗಿ ॥
ಪೇರ್ಮೆಯಿಂದಲಿವೇಳ್ವ ಕೂರ್ಮೆಯ ನುಡಿಗಳು ॥ ೩ ॥
ಪರನಾರಿಸಂಗದಿ ನರಕಯಾತನೆಗೆನ್ನ।
ಗುರಿಮಾಡಿನುಡಿವುದು ತರವಲ್ಲವಿದು ಬನ್ನ ॥ ೪ ॥

/

**ಮಾಯಾವತಿ : ಹಾಡು** **ರಾಗ : ಹಿಂದೂಸ್ಥಾನಿ ಕಾಪಿ - ಆದಿತಾಳ**

ಆಹಾ ಎಂತುಮಾಳ್ಪೆನು ॥ ಕಾಂತನ ನಾನೆಂತು ನೋಳ್ಪೆನು ॥ ಪ ॥
ಸುಂದರನಂ ಸಾರಲಾಪೆನೇ । ಒಂದಿಗೆನಾಂ ಸೇರಲಾಪೆನೇ ॥ ೧ ॥
ಪ್ರಾಣಸಖಂ ಬಿಟ್ಟು ಪೋಗಿರೇ । ಪ್ರಾಣಗಳೇ ಬೆಟ್ಟತಾಗಿರೇ ॥ ೨ ॥
ತಾಪಗಳಂ ಸೈಸಲಾಪೆನೇ । ಓಪನಸಂತೈಸಲಾಪೆನೇ ॥ ೩ ॥

## ದೃಶ್ಯ : ವನದ ಒಂದು ಭಾಗ

**ಮಾಯಾವತಿ : ಹಾಡು** **ರಾಗ : ವರಾಳಿ - ಅಟ್ಟತಾಳ**

ನೀರನೆಲ್ಲಿ ತೋರೆ ॥ ಸಖಿ ಸಾರೆಬಾರೆ ॥ ಪ ॥
ದೀನಳಾಗಿರುವೆನ್ನ ಮಾನಸ ವನುಕದ್ದು।
ಸಾನುರಾಗವತೋರಿ ತಾನೆಲ್ಲಿಪೋದ ॥ ೧ ॥
ತುಂಬುಜವ್ವನ ನೆನ್ನ ಹಂಬಲವನು ನೋಡಿ ।
ಬಿಂಬಾಧರವನು ಚುಂಬಿಸದೋಡಿದ ॥ ೨ ॥
ಕಾಮಿಸಿದೆನ್ನಪ್ರೇಮವಕಂಡು ।
ಭ್ರಾಮಕವಾಡಿ ತಾಮಾಯವಾದ ॥ ೩ ॥

**ಶಾರಿಕೆ : ಹಾಡು** **ರಾಗ : ದೇಶಿಕಾಪಿ - ಆದಿತಾಳ**

**(ನೀರೆಯು ಎನ್ನಾವರಿಸಲಿಲ್ಲ ಎಂಬಂತೆ)**

ಕಾಂತನತೋರೆ ಕಾಂತಾಮಣಿಯೆ । ಕಂತುವು ಎನ್ನಂ ಭ್ರಾಂತಿಗೈವನೇ ॥ ಪ ॥
ನೀರನೀರೀತಿಯ ತೊರೆಯೆನಿರಾಶೆಯ ।
ತೋರುತಲೇ ಅಗಲಿಪೋಗಿ ಬಾರದೆ ಮರೆಯಾದ ॥ ೧ ॥
ಮಾತುಗಳಾಡದೆ ಮತಿಯೊಳುನೋಡದೆ ॥
ಪ್ರೀತಿಯನು ತೊರೆದೀರೀತಿ । ನೀತಿಯನೊರೆದೈದಿದ ॥ ೨ ॥

ಮಾರನ ಬಾಣಕೆ ಗುರಿಗೊಳಿಸುತಲಿ ।
ಸಾರಿಮರೆಯಾಗಿ ಪೋದ । ವೀರನಧೀರನ ॥ ೩ ॥

**ಮಾಯಾವತಿ : ಹಾಡು** **ರಾಗ : ಶಂಕರಾಭರಣ - ಅಟ್ಟತಾಳ**

ಏನನಾಡುವೆ ಮಾರನೆ ನೀಶೂರನೇ ॥ ಪ ॥
ಪ್ರೀತಿಯಿಂದವರಿಸದೆ ಮಾತನಾಡಿ ಮರೆಸದೆ ॥
ಸೋತಮನದಲಿ ಕಾತರಿಸುವೆನು ನೀತಿ ಪೇಳ್ವುದು ರೀತಿಯೇ ॥ ೧ ॥
ನೀರ ಕೇಳು ಸರಸದೆ । ಮೇರೆಮಿಾರಿ ಚರಿಸದೆ ॥
ಸಾರ ಸುಖದೊಳು ಸೇರದೀವರಿ । ಭೂರಿಚಿಂತಾಭಾರವೇನಿದು ॥ ೨ ॥
ಮಾರ ನಂಬು ಎದೆಯೊಳು । ಕೂರಿ ಕೂರಿ ಪುದಗಿರೆ ।
ಗಾರುಗೊಳಿಸುತ ಬೇರೆ ಗಣಿಪರೆ ನೀರನೇ ವೈಯಾರವೇನಿದು ॥ ೪ ॥

**ಪ್ರದ್ಯುಮ್ನ : ಹಾಡು** **ರಾಗ : ಕಲ್ಯಾಣಿ - ಆದಿತಾಳ**

ಬಿಡು ಬೇಡಬೇಡ ಕಡುಜಾಣೆ ॥ ಪ ॥
ಅಂಗವನಿದನಾಲಿಂಗಿಸಿ ನೀನು ಸಂಗವೆಳಸುತಿಹುದೇನು ॥ ೧ ॥
ಕಾತರಿಸುತನೀನೀತೆರದಿಂದ ನೀತಿಗೆಡಿಪಬಗೆ ಯೇನು ॥ ೨ ॥
ಬಾಲಕತನದಿಂ ಪಾಲಕಳಾಗಿಯು ಶೀಲವತೊರೆವುದಿದೇನು ॥ ೩ ॥
ಮೋಹದ ಕೆಡುಕನು ಊಹಿಸಿನೋಡದೆ ಸಾಹಸಗೈವುದಿದೇನು ॥ ೪ ॥

**ನಾರದ : ಹಾಡು** **ರಾಗ : ಕಾಂಭೋದಿ - ಝಂಪೆತಾಳ**

ಅಜಹರ ಸುರೇಂದ್ರ ಪೂಜಿತನ ರಾಜಿತಪದವ ॥ ಭಜಿಸುನಿಜದಲಿ ಭಾವವೇ ॥ಪ॥
ಅಜನ್ಮದಿಂದ ಗೈದಿರುವ ಪಾಪವನೀಗಿ ಈ ಜನ್ಮದೊಳಗೆ
ನೀಂಶುಚಿಯನ್ನೈದುವೆ ಜೀವ ॥ ಅ.ಪ. ॥
ವೇದಾಂತವಿದಿತ ತತ್ವವನೆ ಭಾವಿಸಿ ನೋಡು ॥
ಭೇದಾದಿಗಳನು ವಾದಿಸದೆ ಮನನವಮಾಡು ॥
ಶ್ರೀದೇವೀ ಯೊಡನೆಸೆವ ಹರಿಯಸೇವೆಯೆ ನಿನ್ನ ।
ಆದಾಯವೆನುತ ನೀನರಿತು ನೋಳ್ಪುದುಮುನ್ನ ॥ ೧ ॥

**ಪ್ರದ್ಯುಮ್ನ : ಹಾಡು** **ರಾಗ : ದೇಶಿಕಾಪಿ - ಆದಿತಾಳ**

ಪ್ರಾಣಕಾಂತೇ ನೀಮಾಣೀಚಿಂತೆ ॥ ಪ ॥
ಹರಕೋಪದಗ್ಧಾಂಗನು ಹರಿಸುತ ನಾಗಿ ।
ಶರೀರವಾಂತೆನು ಸರೋರುಹಾಕ್ಷಿಯೆ ॥ ೧ ॥
ರತಿಕೇಳಿನಿನ್ನಾಕೃತಿ । ವ್ರತಗೈದರೀತಿ ಕೃತಾರ್ಥವಾದುದು । ಹಿತಾಭಿಲಾಷಿಣಿ ॥ ೨ ॥
ಚಂಚಲಾಕ್ಷಿನೀ ನೆನ್ನನು । ಪಂಚಬಾಣನೆಂದು ।
ವಿಚಾರದಿಂದ ಕಂಡು ಕೊಂಡಾಯ್ತು ಮೋದವು ॥ ೩ ॥

**ಪ್ರದ್ಯುಮ್ನ : ಕಂದ**

ಮತಿವಿಭ್ರಮದಿಂದೆ ನಿಜ ।
ಸ್ಥಿತಿಯಂ ನಾನರಿಯದಿಂತು ಬಳಲಿಸಿದೆಂ ನೀ ।
ವಿತರೇತರಾನುರಾಗದಿ ।
ಹಿತಕಾರಿಣಿಯೆನಿಸಿ ಮನ್ನಿಸವರಾಧಗಳಂ ॥

## ದೃಶ್ಯ : ಲೀಲಾ ಮಂಟಪದ ಮುಂಭಾಗ

**ದುರ್ಮುಖ : ಹಾಡು** **ರಾಗ : ಜಂಜೂಟಿ - ಆದಿತಾಳ**

ಸುಡು ಗೋಳಿನಬಾಳಿದು ಬೇಡ ॥ ಹೊಡಬಾಳುಕೆಟ್ಟುದು ಅಪ್ಪಪ
ಜೀವನಕೆಂದೇ ಸೇವೆಗೆ ನಿಂದೆ । ತ್ಥಾವುತಾವಿಗೆ ಪೆಟ್ಟುತಿಂದೇ ॥ ೧ ॥
ಛೀ ಛೀ ದುಷ್ಟ ಸಹವಾಸ
ಖೂಳರತಂಟೆ ಕೇಳುವರುಂಟೆ । ಮೂಳೆಮುರಿದಿತ್ತು ಮೊದ್ದುಕೊಂಟೆ
ಕೆಟ್ಟದೆಬಾಳು ತಟ್ಟದೆಗೋಳು । ಗಟ್ಟಗಸಾವನು ಪೇಳು ॥ ೨ ॥

**ಶಂಬರ : ಹಾಡು** **ರಾಗ : ನೋಟ್**

ಭಳಿರೆ ಭಂಡರೆದೆಯ ಖಂಡಿಸುತಲಿ ದಿಂಡುದರಿವೆನು ॥ ಭಳಿರೆ ॥ ಪ ॥
ನಡೆನಡೆದು ತಡೆಬಡಿದು ಖಡುಗವ ಪಿಡಿದು ॥
ಉಡಿದು ಜಡಿದು ಬಡಿದು ಭರದಿ ಕಡಿದುಬಿಡುವೆನು ॥ ೧ ॥
ಧರೆ ಅರೆಯೆ ಗಿರಿಜರಿಯೆ ಸುರರೆದೆ ಬಿರಿಯೆ ॥

ಭರದಿ ಧುರದಿ ನೆರದ ವರರ ಕರುಳ ತೆಗೆವೆನು ॥
ಛಲಮನದಿ ಕಲಿತನದಿ ಬಲುಮೆಯ ಘನದಿ ।
ನೆಲೆಯ ಸೆಲೆಯ ಕಲೆಯನರಿತು ಬಲಿಯನಿಡುವೆನು ॥ ೩ ॥

ಶಂಬರ : ಕಂದ

ಕುಟ್ಟುವೆ ನಮರಾದ್ರಿಯ ನುರೆ ।
ಮೆಟ್ಟುವೆ ನೀ ಧರಣಿತಳವ ಪಾತಾಳಕೆ ಬೆ ।
ನ್ನಟ್ಟ ಸುರನಿಕರಮಂ ಹುಡಿ ।
ಗುಟ್ಟುವೆ ನೀರೇಳುಲೋಕಮಂ ಘಟ್ಟಿಸುವೇಂ ॥

## ದೃಶ್ಯ : ವಸಂತ ಮಂಟಪ

ಶಂಬರ : ಹಾಡು — ರಾಗ : ಕಮಾಚ್ - ಝಾಪುತಾಳ

ಛೀಛೀ ಖೂಳಾ ಛೀಛೀ ಖೂಳಾ ॥ ಪ ॥
ಖೂಳನೆ ನಿನ್ನ । ಬಾಳಿನ ಬನ್ನ । ಕಾಳಾಸುದನ್ನ । ಪೇಳಲೇಕಿನ್ನ ॥ ೧ ॥
ನಾರಿಯನಿಂತು ಸೇರಿದಯೆಂತು ಪೋರನೆ ಅಂತು । ಪೂರತಿ ಬಂತು ॥ ೨ ॥
ಭಂಡನೆ ನಿನ್ನ । ಖಂಡಿಪೆಮುನ್ನ । ಪುಂಡನೆ ಘೋರ । ಚಂಡಿಕೆ ತೋರ ॥ ೩ ॥

ಶಂಬರ : ಹಾಡು — ರಾಗ : ಮುಖಾರಿ - ಆದಿತಾಳ

ತರವಲ್ಲ ಮಾಯಾವತೀ । ಮರುಳಾಯ್ತು ನಿನ್ನೀಮತೀ ॥
ಅರಿವೆನು ನಿನ್ನೀ ನೀತಿ ಬೆರಗುಮಾಡುವರೀತಿ ॥ ಪ ॥
ಅತಿಮೋಹದಿಂದ ನಿನ್ನ । ರತಿಯೆಂದು ಭಾವಿಪೆನ್ನ ।
ಪ್ರತಿಭಟನೊಡನಿಂತು ಮಿತಿಯಮೀರಿರ್ಪೀ ಭ್ರಾಂತು ॥ ೧ ॥
ಅಗಡನೆನ್ನಾಜ್ಞೆ ಮೀರಿ । ಮಗನನೇನೀಂಸೇರಿ ।
ಬಗೆಯುವೀ ಭೋಗಾ ನಂದ । ಜಗದಿ ದೋಷಾನು ಬಂಧ ॥ ೨ ॥
ರಕ್ಕಮಾತಾಡುತಿಂತು । ಅಕ್ಕರಿಂ ಮೋಹವಾಂತು ।
ಸಿಕ್ಕಸಿಂದೆನ್ನ ನೀಗ । ಲೆಕ್ಕಿಸದಿಪೆನೀ । ಲೆಕ್ಕಿಸದಿರ್ಪೀ ಭೋಗ ॥ ೩ ॥

**ಪ್ರದ್ಯುಮ್ನ : ಹಾಡು** **ರಾಗ : ಹಿಂದೂಸ್ಥಾನಿ ಕಾಪಿ - ಆದಿತಾಳ**

ಪೌರುಷವ ಸುಡುವ ಭಂಡನೆ । ನರಿಯೇನೋ ಛೀ ಷಂಡನೇ ॥ ಪ ॥
ನಾರಿಯನೀಪರಿ ಬಾಧಿಸಿ । ಒರಿದಾಗಿನೀಂ ವಾದಿಸಿ ॥ ೧ ॥
ಎನ್ನಯ ಸಾಹಸದಿಂ ನೋಯುವೆ । ಅನುಗೆಟ್ಟೀಗಲೆ ಸಾಯುವೆ ॥ ೨ ॥
ಹೇಡಿಯೆ ಛೀ ಬರಿಭಂಡನೆ । ಪಿಡಿವಾದವೇನಿದು ಪುಂಡನೆ ॥ ೩ ॥

**ಪ್ರದ್ಯುಮ್ನ : ಕಂದ**

ಮಡಿದಂ ಶಂಬರನೆನ್ನೀ ।
ಖಡುಗದಿನವನೊಡಲು ತುಂಡು ತುಂಡಾದುದು ನೀಂ ॥
ಬಿಡುಚಿಂತೆಯನೆಲೆಭಾಮಿನಿ ।
ಕೊಡುಕೊಡು ನಿನ್ನಿಷ್ಟ ಸಖನಿಗಿಂದುಡುಗೊರೆಯಂ ॥

**ಮಂಗಳ**

**ರಾಗ : ಹಿಂದೂಸ್ಥಾನಿ ಕಾಪಿ - ಆದಿತಾಳ**

ಜಯಧೀರಾ ಜಯವೀರಾ ಜಯಶೂರಾ ಚತುರಾ ॥
ಜಯಭೂಸುರ ನುತಭಾಸುರ ಜಯಧೀವರಶೂರಾ ॥ ೧ ॥
ಕುಲಪಾಲ ಫಲಲೋಲಾ ನಲೆಲೀಲಾ ಕುಶಲಾ ॥
ಕಲಿತಾಮಲ ಬಲಕೋಮಲ ಲಲಿತಾಶಯ ನಿಲಯಾ ॥ ೨ ॥
ಜನಮೋದಾ ತನುವಾದಾ ಘನಬೋಧಾ ಸುಖದಾ ॥
ಮುನಿಕಾಮದ ವನಿತಾಮುದ ಜನಿತಾಮಿತ ವಿಭವಾ ॥ ೩ ॥



# ಭಕ್ತ ಪ್ರಹ್ಲಾದ


ರಾಜಕವಿ ಪಂಡಿತ
ತಿರುಮಲೆ ಶ್ರೀನಿವಾಸ ಅಯ್ಯಂಗಾರ್


ನಾಟಕ ಶಿರೋಮಣಿ
ಎ.ವಿ. ವರದಾಚಾರ್ಯರು

ಪ್ರಾರ್ಥನೆ : ಹಾಡು — ರಾಗ : ಉದಯಚಂದ್ರಿಕೆ - ಆದಿತಾಳ

ನಮೋ ಲಕ್ಷ್ಮೀ ನರಸಿಂಹ
ಓಂ ನಮೋ ಲಕ್ಷ್ಮೀ ನರಸಿಂಹ ॥ ಪ ॥
ಅಸುರನ ಒಡಲನು ಬಗೆದವನೆ
ಹಸುಳೆ ಪ್ರಹ್ಲಾದನ ಕಾಯ್ದವನೆ ॥ ಅ.ಪ. ॥
ವಸುಧೆಯೊಳಸುರರ ಗೆದ್ದವನೇ
ಪಶುಪತಿಗೆ ಪ್ರಿಯನಾದವನೇ
ಅಸಮ ಸಾಹಸಿ ಎನಿಸಿದನೇ
ಯಶವ ಪಡೆದು ರಾರಾಜಿಸುವವನೇ ॥ ೧ ॥
ಕಾಮಿತ ಫಲಗಳ ಕೊಡುವವನೇ
ಕಾಲಕಾಲಕೆ ಕಾಯುವನೇ
ಕಂಬದಿಂದ ಹೊರ ಬಂದವನೇ
ಖಾದ್ರಿ ಪುರಿಯಲಿನಿಂದವನೇ ॥ ೨ ॥

## ದೃಶ್ಯ : ರಸ್ತೆ

ಸೂತ್ರಧಾರ : ವೃತ್ತ ॥ — ರಾಗ : ನಾಟಿ

ಆವಂಲಕ್ಷ್ಮಿಯ ವಕ್ಷದೊಳ್ ನೆಲಸಿ ನಿತ್ಯಶ್ರೀಕನಾಗಿರ್ದಪಂ
ಆವಂನಿಳೆಯ ಲೀಲೆಯಾಂತು ಘನಯೋಗಾನಂದಮಂ ಸಾರ್ದಪಂ ।
ಆವಂಭಕ್ತರ ಭಕ್ತಿಗೊಲ್ದು ನಿಜರೂಪಾನೇಕಮಂ ತೋರ್ಪನಾ
ದೇವಂದುರ್ಜನತರ್ಜನಂ ಸಲಹುಗೆಮ್ಮಂ ಸಾದರಂ ಶ್ರೀಧರಂ ॥

**ಸೂತ್ರಧಾರ : ಹಾಡು** **ರಾಗ : ಕಲ್ಯಾಣಿ - ಆದಿತಾಳ**

ಶ್ರೀನರಹರಿಭಾಸುರಶೀಲ । ಧೃತತಿಲಕಾಗಾಜಿತಫಾಲ ॥ ಪ ॥
ನೀರಜದಳಮಾಲ । ಕಾರಣಕಾರಣ ಕರುಣಾಭರಣಾ । ಭಂಜಿತಖಲಜನ ।
ಮುಕುಂದಲೀಲಾಜಾಲ ॥ ಅ.ಪ. ॥
ಧೀರ ಕರುಣಾಲವಾಲ ಗಂಭೀರ । ಸರ್ವಾಧಿಕಸದ್ಗುಣ ಪೂರ ॥
ಸಾರಸಭವಭವವಂದಿತ ಸುರನುತ ॥ ನಿರುಪಮಶುಭಕರ ನಿರ್ಮಲಭಾವಾ
ದೇವಾ ॥ ೧ ॥

**(ಸೂತ್ರಧಾರ - ನಟಿ ಹಾಡು)**

**ರಾಗ : ಜಂಜೂಟಿ - ಆದಿತಾಳ**

**ಸೂತ್ರಧಾರ :** ಕಮಲಮುಖಿ ಕಲಿಸುಖೀ ಕಾಮನ ಕೇಳೀ ಸಖಿ
ಕುಂಜರಸಮ ಮಂಜುಗಮನೆ ಕಂಜದಳಾಕ್ಷೀ ಬಾರಾ ॥ ಪ ॥
**ನಟಿ :** ಪರಮಗುಣಾಕರ ರಮಣಾಭರದಿ ಬಂದಿರುವೆ ಪ್ರಿಯಾ
ಮೀರಿ ಮುದಂ ತೋರಲಿದೇಂ ಕಾರಣಮಾರ್ಯ ಪ್ರಿಯಾ ॥ ಪ ॥
**ಸೂತ್ರಧಾರ :** ವರ ವಿಬುಧರು ನೆರೆದಿರುವರು ಹರುಷದೆ ರಮಣೀ
ನೀರೆ ಶುಭಕಾರೆ ಗುಣಾಗಾರೇ ಪ್ರಿಯೇ ಸಖೀ ॥ ೧ ॥
**ನಟಿ :** ವಿಧುವದನನೆ ಬುಧಹೃದಯಕೆ ಮುದಮೊದಗಿಸುತ
ಮೋದವನಾಂತಾದರಧಾರಾದಿಸುವ ಪ್ರಿಯಾ ॥ ೧ ॥
**ಸೂತ್ರಧಾರ :** ಚತುರರಿವರ ವಿತತರಸಾನ್ವಿತ ಕೃತಿಯನು ಕೇಳ್
ಲತಾಂಗಿಯೆ ನೋಡಲತಿ ಪ್ರಮೋದದಿ ಕುತೂಹಲದಿರ್ಪರು ॥ ೨ ॥
**ನಟಿ :** ಶುಭಕರಗುಣ ಸಭಿಕರಗಣ ವಿಭವದೆ ನೆರೆಯಲ್
ಸುಭಾಗ್ಯವಿದಿಂತು ಲಭಿಸಿತೆಮ್ಮೊಳು ವಿಭಾಕರತೇಜನೆ ॥ ೨ ॥

**ದೃಶ್ಯ : ವೈಕುಂಠ**

**ಜಯವಿಜಯರು : ಹಾಡು** **ರಾಗ : ಕಮಾಚ್ - ಆದಿತಾಳ**

ಭಜ ಶರಣಂ ನಿಜಗುಣಂ ಭಜಕಾವನಂ ಪಾವನಂ । ಅಜಜನಕಂ
ಸುಜನೈಕಶರಣ್ಯಂ ॥ ಪ ॥

ವೇದಾಂತಾಗಮವೇದಿತಸತ್ಯಂ । ಶ್ರೀದಯಿತಾತ್ಮವಿನೋದಿತ ಕೃತ್ಯಂ ।
ಸಾಧಕಬಾಧಕನಿತ್ಯಂ ॥ ಅ.ಪ. ॥
ಗಾಥಾನಿಗದಿತ ಸಕಲವಿನಮಿತಂ । ಸರ್ವಾಧಾರಂ ಸರ್ವೋದ್ಧಾರಂ ।
ಪೂರ್ವಭಾವಪರಾತ್ಪರದೇವಂ ॥ ೧ ॥

(ಸನಕ, ಸನಂದ, ಸನತ್ಕುಮಾರ ಮೊದಲಾದ ಮುನಿಗಳು ಪ್ರವೇಶಿಸುವರು)

**ಮುನಿಗಳು : ಹಾಡು** **ರಾಗ : ಕಮಾಚ್ - ಆದಿತಾಳ**

ದೇವ ಜಗದಾಧಾರ । ಅಪಾರ ಕರುಣಾಕರ ॥ ಪ ॥
ದೇವಾಧೀಶ್ವರ ದಿವ್ಯಾಕಾರ ॥ ಅ.ಪ. ॥
ನಿಗಮವಿದಿತ ನಾರದಗದಿತ । ನಗಧರ ಹಿತಕರ ದೇವಾದೇವಾ ॥ ೧ ॥
ಸದಯಹೃದಯ ಸನ್ನುತವಿಜಯ । ವಿಧಿಹರಪಿನಮಿತ ವಾಸುದೇವ ॥ ೨ ॥

**ಶ್ಲೋಕ**

ನಮಸ್ತೇ ಸಕಲಾಧಾರ । ನಮಸ್ತೇ ಸಕಲೇಶ್ವರ ॥
ನಮಸ್ತೇ ಸರ್ವಸಂಪೂರ್ಣ । ನಮಸ್ತೇ ಸರ್ವಕಾರಣ ॥ ೧ ॥
ವಿಶ್ವರೂಪಾಯ ವಿಶ್ವಾಯ । ನಿರ್ಗುಣಾಯ ಗುಣಾತ್ಮನೇ ॥
ವಿಶುದ್ಧಜ್ಞಾನತತ್ವಾಯ । ವಿಷ್ಣವೇ ಜಿಷ್ಣವೇ ನಮಃ ॥ ೨ ॥
ನಾರಾಯಣಾಯ ನಿತ್ಯಾಯ । ನಿರ್ವಿಕಲ್ಪಾಯ ಭಾಸ್ವತೇ ॥
ಯೋಗಾಶ್ರಯಾಯ ಯೋಗ್ಯಾಯ । ಯೋಗಿನಾಂಪತಯೇ ನಮಃ ॥ ೩ ॥

**ಜಯವಿಜಯರು : ಹಾಡು** **ರಾಗ : ಕಲ್ಯಾಣಿ - ಆದಿತಾಳ**

ಪೋಗಬೇಡಿ ಜೋಕೆ ನಿಲ್ಲಿ ಪೋಗಿನೋಡಲೇಕೆ ಅಲ್ಲಿ ॥ ಪ ॥
ವ್ಯಾಜವಾಂತು ಅಂತು ಇಂತು ನುಗ್ಗಲೇಕೆ ಬಗ್ಗಲೇಕೆ ಪೂಜಿಸುವ ವೇಳೆಯಲ್ಲ ಪೋಗಿ
ಸುಮ್ಮನೆ । ಗುಜಗುಜಗೊಳುವೀ ಗಜಬಿಜ ತರವೇನು ॥

(ಸನಕಾದಿಗಳು ಮತ್ತು ಜಯವಿಜಯರ ದ್ವಂದ್ವಗೀತೆ)

**ಜಯವಿಜಯರು : ಹಾಡು** **ರಾಗ : ನೋಟ್ - ಆದಿತಾಳ**

ಸನಕಾದಿಗಳು : ದಾರಿಯಬಿಟ್ಟು ನಿಲ್ಲಿರಿ ಬೇಗ ಪಾರ್ವರ ಮಾನವ ಕಳೆಯುವಿರಿ
ಪಾರ್ವರ ಮಾನವ ಕಳೆಯುವಿರಿ, ಛೀ ಖೂಳರೇ ಕೆಟ್ಟು ಪೋಗುವಿರಿ

**ಜಯವಿಜಯರು :** ದಾರಿಯಬಿಡದೆ ನಿಲ್ವಿವು ನಾವು ಖೂಳರೇ ದೂರ ತೊಲಗಿರಿ ನೀವ್ ಖೂಳರೇ ದೂರ ತೊಲಗಿರಿ ನೀವ್. ಛೀ ಕ್ರೂರರೆ ಕೆಟ್ಟು ಪೋಗುವಿರಿ

**ಸನಕಾದಿಗಳು :** ವಿಧಿಯಪುತ್ರರು ವಿಬುಧಾರ್ಯರು ಮಧುಸೂಧನನಾ ಪರಮಭಕ್ತರು

**ಜಯವಿಜಯರು :** ಬೆದರುವೆವೆ ನಿಮ್ಮ ಮದದ ನುಡಿಗೆ ನಾವ್ ಅಧಮ ಖೂಳರೇ ಸದೆದುಬಿಡುವೆವು

**ಸನಕಾದಿಗಳು : ಕಂದ**

ಶ್ರೀಪತಿದರ್ಶನಕ್ಕೈದುವ
ತಾಪಸರಂ ತಡೆದ ದೋಷದಿಂ ನೀವೀಗಳ್ ।
ಭೂ ಪತಿತರಕ್ಕೆ ದುರ್ಗತಿ
ಕೂಪಂ ನಿಮಗಕ್ಕೆ ತಪ್ಪದೆಮ್ಮಾ ಶಾಪಂ ॥

**ಜಯವಿಜಯರು : ಹಾಡು** **ರಾಗ : ಕಾನಡ - ಆದಿತಾಳ**

ಹಾ ವಿಧಿ ವಿಧಿ ಮುನಿಶಾಪ ಘಟಿಸಿತೇ ॥ ಪ ॥
ಹಾ ವಿಧೀ ! ವಿಪುಲಾಧಿಸಂಕಟವಾದುದೇ ॥ ಏವುದೋ ಹಾ
ಜ್ಞಾನಹೀನರಾಗೆ ॥ಅ.ಪ.॥
ಜನಿಸಲೆಂತಕಟಾ । ಜನನವೇ ವಿಕಟಾ । ಇನಿತು ಸಂಕಟವಾಯ್ತು । ಸೈಸಲೆಂತು ॥೧॥
ದೊರೆದ ಸಂಪದವಾ । ಪರಿಪರಿ ಮುದವಾ । ತೊರೆದು ಚಿಂತೆಯ ಬೇಗ ।
ತಾಪವಾಗೆ ॥ ೨ ॥

**ಇಬ್ಬರೂ : ಹಾಡು** **ರಾಗ : ಮಾಂಡ್ - ಆದಿತಾಳ**

ಸಮವಿಲಾಸ ಸಲಹೈ । ದಯಾಶೀಲ । ಪ್ರೇಮಘನದ । ಭುವನಜನಪಾಲ ॥ ಪ ॥
ರಮಾಕಾಂತ ಶೌರೀ । ಶ್ರೀಮನೋವಿಹಾರಿ । ನಾಮಗಾನ್ಯಕಲೋಲ ।
ಸುಗುಣಶೀಲ । ಸರ್ವೇಶ ಸರ್ವಾತ್ಮ । ಸಮಭಾವ ದೇವ ಜೀವ । ಸಂಪೂರ್ಣ
ನಿರ್ಲೇಪರೂಪ। ಸರ್ವಭಾವ । ಸರ್ವಜೀವ । ಉರ್ವೀಧವ । ಪಾಹಿ ಪಾಹಿ ॥ ೧ ॥

**ವಿಜಯ : ಕಂದ**

ರಕ್ಷಿಸು ಲಕ್ಷ್ಮೀರಮಣಾ
ರಕ್ಷಿಸು ಭವಭೀತಿಹರಣ ಕರುಣಾಭರಣಾ ।
ರಕ್ಷಿಸು ದೀನದಯಾಪರ
ರಕ್ಷಿಸು ವೇದಾಂತಸಾರ ಜಗದಾಧಾರ ॥

**ಜಯ : ಕಂದ**

ದೀನದಯಾಪರ, ಸಲಹೈ
ದಾನವಕುಲವೈರಿ, ಶೌರಿ, ಹರಿ, ನೀಂ ಸಲಹೈ ।
ಮಾನಿತ, ಮಾಧವ, ಸಲಹೈ
ಮೌನಿಜನಸ್ತುತ್ಯ, ಸತ್ಯ, ನಿತ್ಯನೆ, ಸಲಹೈ ॥

**ಜಯವಿಜಯರು : ಶ್ಲೋಕ**

ಅನ್ಯಥಾ ಶರಣಂ ನಾಸ್ತಿ । ತ್ವಮೇವ ಶರಣಂ ಮಮ ।
ತಸ್ಮಾತ್ಕಾರುಣ್ಯಭಾವೇನ । ರಕ್ಷ ರಕ್ಷ ಜನಾರ್ಧನ ॥

**ವಿಷ್ಣು : ಕಂದ (ತೆರೆಯಲ್ಲಿ )**

ಬಿಡುವುದು ಭೀತಿಯ ನಿಮ್ಮಯ
ಕಡುದುಗುಡುವ ಹರಿಸಿ ಸಲಿಸುವಂ ಬಯಸಿದುದಂ
ದೃಢಭಕ್ತರೆನಿಪರಂ ಕೈ
ಬಿಡುವನೆ ಹರಿ ? ದೀನಭಕ್ತವತ್ಸಲನಲ್ತೇ ॥

**(ವಿಷ್ಣು ಪ್ರಸನ್ನನಾಗುವನು)**

**ಜಯವಿಜಯರು : ಹಾಡು** **ರಾಗ : ಮೋಹನ - ಆದಿತಾಳ**

ಶ್ರೀ ಲಲಾಮನೇ ಸ್ವಾಮಿಯೆ ಪ್ರೇಮಿಯೆ । ಆಲೈಸಿ ಕಾಯ್ಕೆ ಹರಿಯೆ ॥ ಪ ॥
ಶೈಲಬಾಲಫಾಲಪೂಜಿತ ಲಲಿತ । ಶೈಲಜೇಶನುತ ದೇವವಂದಿತ ॥ ಅ ಪ. ॥

ಲೀಲಾಪಾಲಿತವಿಪುಲಭುವನವೇಲಾ। ಜಲಜಾಂಬಕಜಿತಖಲಜಾಲ। ಶ್ರೀಲೋಲ
ಘನನೀಲ ವನಮಾಲ ನೀನಾಲಿಸು। ಕೇಳು ಕೇಳು ಮೇಲ ಪಾಲಿಸೈ ಕರುಣಾಲವಾಲ
ಪಾಲಿಸೀಗ ಪ್ರಭುವೆ ॥ ೧ ॥

## ದೃಶ್ಯ : ರಸ್ತೆ
## (ನಾರದ ಪ್ರವೇಶ)

**ನಾರದ : ಹಾಡು** **ರಾಗ : ಅಭೇರಿ - ಆದಿತಾಳ**

ಭುವನಭರಿತಾ। ಜಯ ನವಘನಸುಂದರಕಾಯ।
ಫಲದಾಯಕ ಸಕಲಾಧಾರ।
ಯೋಗೀಶಾ ಮಾಯಾದೂರ ॥ ಕಲಿಮಲಹರ ॥
ಸಕಲಭುವನಪಾಲಾ। ಸಾಧುಶೀಲಾ, ಸುಶೀಲಾ ॥
ಪ್ರಕಟಚರಿತ ಶಾಂತಾ। ಮಾಧವಾ, ವೇದಮೂಲಾ ॥
ಅಕುಟಿಲಗುಣಜಾಲ। ಆಶ್ರಯಾ, ಧರ್ಮಲೋಲಾ।
ವಿಕಸಿತಸುಮಮಾಲಾ। ಶ್ರೀಸತೀಪ್ರೀತಿಶೀಲಾ ॥
ಘನವೇದಾಂತಾಗಮಸಾರಾ। ಯೋಗೀಶಾ ಭೋಗಾಧೀಶಾ।
ಮುನಿಹಿತಮಾನಿತಾ। ಜಯ ನವಘನಸುಂದರಕಾಯ ॥ ೧ ॥

**ನಾರದ : ಕಂದ**

ಗರ್ವದೆ ಕಾಮಕ್ರೋಧಂ
ಗರ್ವದೆ ಮದಮೋಹಲೋಭಮತ್ಸರಗುಣಗಳ್।
ಗರ್ವದೆ ದುರಹಂಭಾವಂ
ಗರ್ವಮೇ ಬಹುದುರ್ಗುಣಕ್ಕೆ ಮೂಲಾಧಾರಂ ॥

**ನಾರದ : ಕಂದ**

ಕುಲಮುಂ ರೂಪೋತ್ಕರಮುಂ
ಬಲಮುಂ ಸಿರಿಯುಂ ಪ್ರಭುತ್ವಮುಂ ವಿದ್ಯೆಗಳುಂ।
ಚಲಚಿತ್ತರೆನಿಪ ಜನರೊಳು
ತಲೆದೋರುವ ಗರ್ವಗುಣಕೆ ಕಾರಣಮಲ್ತೆ ॥

ನಾರದ : ಹಾಡು — ರಾಗ : ದೇಶಿತೋಡಿ - ಆದಿತಾಳ

ಶ್ರೀ ವಸುಧಾ ರಮಣ । ನಾರಾಯಣ ॥ ಪ ॥
ದೇವಗಣಾರ್ಜಿತ । ಪಾವನ ಚರಣ ॥ ಅ.ಪ. ॥
ಭವ ಭಯ ದೂರ । ಭುವನಾಧಾರ ।
ನವ ಜಲದಾಕಾರ । ಶುಭಾಕರ ॥ ೧ ॥
ನತ ಜನ ಭರಣ । ಶ್ರುತ ಸುಗುಣ ।
ಪತಿತ ಪಾವನ ಕರುಣಾ । ನಾರಾಯಣ ॥ ೨ ॥

## ದೃಶ್ಯ : ರಸ್ತೆ
## (ಜಯ ವಿಜಯರ ಪ್ರವೇಶ)

ಜಯ ವಿಜಯರು : ಹಾಡು — ರಾಗ : ಕಾನಡ - ಆದಿತಾಳ

ಭ್ರಮೆಗೊಳಿಪ ಮಾಯೆ ಇದೇನಹಹಾ ।
ನೀಗಿಪೋದುದೀ ಸುಖದ ಪದವಿಯು ॥
ಹಗರಣವಾಗೆ ಭಂಗಪರಂಪರೆ ಹಾ ।
ವಾಸುದೇವಪದದಾಸಾಚರಣೆ । ಮೋಸವಾಗೇ । ಚಿತ್ತಕೆ ಕರುಣೆ ॥
ಘಾಸಿಯಾಗುತಾ । ವಸುಧೆಗಿಳಿವ ।
ವ್ಯಸನವಿದೇನೋ । ಸೈಸೆ ದುರಂತವು ಹಾ ॥ ೧ ॥

ನಾರದ : ಹಾಡು — ರಾಗ : ರಾಗಮೋಹನ - ಆದಿತಾಳ

ನಾರಾಯಣನೇ ಮಾಧವ ಪೊರೆಯೈ
ಸಾರಸಾಕ್ಷ ಮಹಾಪುರುಷ ದೇವ ।
ನಿರ್ಜಿತದಾನವ ಊರ್ಜಿತಭಾವಾ
ನಿರ್ಜರಪೋಷಣ ಸಜ್ಜನವಂದ್ಯ

**ಅಥವಾ**

ನಾರದ : ಹಾಡು — ರಾಗ : ಶುದ್ಧಸಾವೇರಿ - ಆದಿತಾಳ

ನೀರಜ ದಳ ನಯನ । ನಾರಾಯಣ ॥ ಪ ॥
ಧೀರನಿಗಮನುತ । ಸಾರಲೀಲ ಸುರ ।

ವಾರ ವಿನತಪದ । ಸಾರಜ ಜಯಜಯ ॥ ಅ.ಪ. ॥
ತುಂಗ ಮಹಿಮ ರುಚಿರ । ನತ । ಮಂಗಳದಾಯಕ ॥
ಸಂಗದೂರರಿಪು । ಸಂಘವವಾನಲ । ಭಂಗರಹಿತ
ಖಗ । ಪುಂಗವಗಮನ ॥ ೧ ॥
ಮಾಯಾಚರಿತಲೋಕ । ದಯಾಮಯ ।
ಮಾಯಾರಹಿತ ಶ್ರೀಶ ॥
ಮಾಯಾವಿದ್ವೈತ್ಯ ನಿ । ಕಾಯಾಂತಕಾಗಮ ।
ಗೇಯ ನೀಲಾಂಬುದ ॥ ಕಾಯಾಪ್ರಮೇಯ ॥ ೨ ॥

**ಜಯವಿಜಯರು : ಹಾಡು** **ರಾಗ : ಬೇಹಾಗ್ - ಆದಿತಾಳ**

ಮನಕಿದು ಮುದವಾದುದು ॥ ಪ ॥
ಎನಿತೋ ಘನತೇ । ಮುನಿಯಮಾತು ॥ ಅ.ಪ. ॥
ದಿತಿಸತಿಯುದರವ । ಕುತುಕದಿ ಸಾರುತೆ ।
ಸುತಾಕಾರದಿಂ । ಜನಿಸಿ ಭೂಮಿಯಲಿ ।
ಹಿತದಿಂ ಮತದಿಂ । ಮೆರೆವ ಪೆಂಪು ॥ ೧ ॥

## ದೃಶ್ಯ : ರಸ್ತೆ

**ನಾರದ : ಹಾಡು** **ರಾಗ : ಮೋಹನ - ಆದಿತಾಳ**

ಭವಭಯದೂರಾ । ಶ್ರೀಹರಿ ದಯಾಕರ ॥ ಪ ॥
ಶಿವಕರ । ಸರ್ವಾಕರಾ ॥ ಅ.ಪ. ॥
ಅನುಪಮ ವಿಭವಯುತಾ ಮುನಿಭಾವಿತ ವಿನುತ
ವಿಧಿತವಪೋಷಾ ಘನತರಸಂವದ । ಶೋಭಿಸದಾಮುದ
ಅನುಭವವಿದಿತವಿಶೇಷಾ ॥

**ಅಥವಾ**

**ನಾರದ : ಹಾಡು** **ರಾಗ : ಕಾನಡ - ಆದಿತಾಳ**

ದೇವ ದೇವ ದಿವ್ಯ ಭಾವ ।
ಭುವನ ವಂದಿತ ಗೋಪಾಲ ಮಾಧವ ॥ ಪ ॥

ಕಾರಣ ನೀನೆ । ಕಾರ್ಯ ನೀನೆ ।
ಕಾವನು ನೀನೆ । ಕಾಮಜನಕ ।
ನೀನೆ ಸಾಧು ಮಿತ್ರಾ । ನೀನೆ ಲೋಕನೇತ್ರಾ ।
ನೀನೆ ಮುಕ್ತಿಗೆ ವಿಜ್ಞಾನ । ನೀನೆ ಭಕ್ತಜನಕಧೀನ ॥ ೧ ॥

**ಇಂದ್ರ : ಕಂದ**

ಗರ್ಭದ ಶಿಶುವಂ ಕಡಿದೇ
ಳರ್ಭಕರಾದವರ ಸಪ್ತಮರುತುಗಳಿಂದೆ ।
ಲ್ಲರ್ಭಜಿಪಂತೆಸಗಿರೆಯುಂ
ದುರ್ಭಗೆ ದಿತಿ ಸವತಿಮತ್ಸರವ ಬಿಡದಿಹಳೆ ॥

**ಇಂದ್ರ : ಹಾಡು** **ರಾಗ : ಹಂಸಧ್ವನಿ - ಆದಿತಾಳ**

ಪ್ರತಿಭಟರೆನಿಪರೆ ದಿತಿಸುತರು ಈಗ ॥ ಪ ॥
ಘೋರವಜ್ರವ ಪಿಡಿದರೆ ನಾನು । ಧುರಕೆ ನಿಲ್ಲುವ ವೀರನಾವನು ॥ ಅ.ಪ. ॥
ಖೂಳದೈತ್ಯರ । ಸೀಳುತ ಹೂಳುತ । ಬಳಿಕ ಮೋದವಂ । ತಳೆದು ಬಾಳುವೆನು ॥

## ದೃಶ್ಯ : ಹಿರಣ್ಯ ಕಶಿಪು ಹಿರಣ್ಯಾಕ್ಷರ ದರ್ಬಾರು

**ಹಿರಣ್ಯಕಶಿಪು : ವೃತ್ತ ॥** **ರಾಗ : ನಾಟಿ**

ಪ್ರಿಯದಿಂ ಬಂದು ಚತುರ್ಮುಖಂ ಪರಸುಗುಂ ಮೊಮ್ಮಕ್ಕಳಪ್ಪೆಮ್ಮನಾ
ಶ್ರಯಿಸಿರ್ಕುಂ ಘನದೈತ್ಯದಾನವಗಣಂ ಪ್ರಖ್ಯಾತಮೆಮ್ಮನ್ವಯಂ ।
ಮಯನಿಂ ನಿರ್ಮಿತಮಪ್ಪ ಶೋಣಿತಪುರಕ್ಕಾಂ ರಾಜನಾಗಿರ್ದೊಡಂ
ಬಯಸಿರ್ಪೆಂ ಭುಜಸಂಧಿಬಂಧಿತಜಯಶ್ರೀಗಾತ್ರಮಂ ಜೈತ್ರಮಂ ॥

**ಹಿರಣ್ಯಕಶಿಪು : ಹಾಡು** **ರಾಗ : ಹಿಂದೂಸ್ಥಾನಿಕಾಪಿ - ಆದಿತಾಳ**

ಜಯಿಸುವೆ । ಜಲಜಾಕ್ಷನಂ ॥ ಪ ॥
ಭಯ ವಿದೂರ । ಸುಧೀರ ಪ್ರಧಾನ ನಾಂ ॥ ಅ.ಪ. ॥
ಸುರಾಳಿ ಕರಾಳ ಹಿರಣ್ಯಕಂ । ದುರಂತ ಪರಂತಪ ಸಾಯಕಂ ।

ತರಹರಿಸುತೆ ಹರಿದುರಾತ್ಮನಂ ॥ ೧ ॥
ವಿರೋಧಿ ಸುರಾಧಿಪ ಬಳ್ಕಿರೆ । ಸರೋಜ ಭವಾಂಡಗಳಳ್ಕಿರೆ ।
ಭರದ ಮರರನುರೆ ವಿದಾರಿಸಿ ॥ ೨ ॥

**ಹಿರಣ್ಯಾಕ್ಷ : ಹಾಡು** **ರಾಗ : ಮೋಹನ - ಆದಿತಾಳ**

ಛಲಂ ಬಲಂ ಕಲಂಕಲಂ ನೆಲಂ ಇದೆ ಅಲುಂಗದೆ ॥ ಪ ॥
ಧೀರತೆ ಮೆರೆದು ಘೋರತೆ ಪರಿದು ।
ಭೈರವನದಟನು ಮೆರೆಸುವೆನೈ ।
ಭಾರತಿಯರಸನ ಭರವಸವೇಕೈ ।
ಶೌರಿಯ ಗಿರಿಗಿರಿ ತಿರುಗಿಪೆನೈ ॥ ೧ ॥

**ಹಿರಣ್ಯಾಕ್ಷ : ಕಂದ**

ಕುಟ್ಟುತೆ ಹರಿಯಂ ಹರನಂ
ಕಟ್ಟುತೆ ಬ್ರಹ್ಮಾದಿ ಸುರರ ಹುಡಿಗುಟ್ಟುತ್ತಂ ।
ದಿಟ್ಟತನದಿಂದ ಲೋಗರ
ಪಟ್ಟಣಗಳ ಸೂರೆಗೈದು ತಟ್ಟನೆ ಬರ್ಪೆಂ ॥

**ಹಿರಣ್ಯಕಶಿಪು : ಕಂದ**

ಬೇರುಗಳಂ ಕೀಳ್ತಿಟ್ಟೊಡೆ
ಭೂರುಹಗಳ್ ತಮಗೆ ತಾವೆ ನಶಿಸುವ ತೆರದಿಂ ।
ಧಾರಿಣಿಯನೆ ಹರಸಿಟ್ಟೊಡೆ ।
ವೈರಿಗಳಹ ಸುರರು ತಮಗೆ ತಾವೇ ನಶಿವರ್ ॥

**ಭೀಷಣ : ವೃತ್ತ ॥** **ರಾಗ : ನಾಟಿ**

ಸುರರನುಮೊಕ್ಕಿ ಕಾಲನನು ಶೂಲದೊಳಿಕ್ಕಿ ಸುರಾಧಿರಾಜನಂ
ಧರಣಿಗೆ ಕುಕ್ಕಿ ಧಾರಿಣಿಯನಬ್ಧಿಗೆ ಸೆಕ್ಕಿ ಜಗಂಗಳೆಲ್ಲಮಂ ।
ತಿರಿಮುರಿಯೆಕ್ಕಿ ಸಪ್ತಕುಲಶೈಲವ ತಿಕ್ಕಿ ದುರಂತಶೌರ್ಯದಿಂ
ಪರಿವರಿದುಕ್ಕಿ ಸೊಕ್ಕಿ ಬರುವೆನ್ನಯ ಪಕ್ಕಿಯನೋಳ್ಪುದೆಲ್ಲರುಂ ॥

**ಹಿರಣ್ಯಕಶಿಪು : ಕಂದ**

ರಣರಂಗದೊಳಗೆ ನಿರ್ಜರ
ಗಣಮಂ ಹಣಿಹಣಿದು ವಿಜಯಲಕ್ಷ್ಮಿಯುಂ ಕರಮಂ ।
ಪ್ರಣಯದೆ ಪಿಡಿತರ್ಪುದಕೀ
ಕ್ಷಣದೊಳ್ ದೈತ್ಯರ್ಕಳಿರದೆ ಪೊರಮಡವೇಳ್ಕುಂ ॥

**ಹಿರಣ್ಯಕಶಿಪು : ಹಾಡು** **ರಾಗ : ಹಂಸಧ್ವನಿ - ಆದಿತಾಳ**

ಅಜೇಯಬಲರೆ ಬಲು ಕೆಣಕಿದ
ದುರಿತನಾಶಪೋದುದು ಅಜೇಯರೇ ॥ ಪ ॥
ಗಜೇಂದ್ರ ಸಮರ ಪಟುಭಟನಿಕರಾಳಿಗಳೊಳು
ಮೆರೆಯುತೆ ಧನಕನಕವುಮನೆಮನೆಯೊಳು
ಎಸೆಯುತೀಗಲೀಗಲೇ ॥ ಗಜೇಂದ್ರ ॥

**ಮಂತ್ರಿ ಸೇನಾಪತಿಗಳು : ಹಾಡು** **ರಾಗ : ಸಾರಂಗ - ಆದಿತಾಳ**

ಧಿಟಬಲ ಭಟಕುಲ ಪಟಲದ ದಣಿಯೇ
ಪಟುತರ ಘಟನೆಯ ನಟನೆಯ ಕಣಿಯೇ ॥ ಪ ॥
ಖಾಡಾಖಾಡಿಗೆ ಕೈಮಾಡಿ ಮೋಡಾಮೋಡಿಗೆ ಹೊಯ್ದಾಡಿ
ನೊಡ್ಡೈ ಬಲ್ಮೆಯ ದೈತ್ಯೇಂದ್ರ ॥ ಅ.ಪ. ॥
ಚರಣಕೆ ಮಣಿದಪವು ತೋಳ್ಳೈ ಯಾರೈ ನಿನಗಿದಿರು । ಧೀರ ವೀರ ಶೂರನೆ
ಧುರಧುರ ಪರಿಕರ ಹಹ್ಹ ಹ್ಹ ॥ ೧ ॥

**ದೃಶ್ಯ : ರಸ್ತೆ**

(ಭೂದೇವಿಯನ್ನು ಹಿಂಬಾಲಿಸಿ ಆಯುಧಪಾಣಿಯಾದ ಹಿರಣ್ಯಾಕ್ಷನ ಪ್ರವೇಶ)

**ಹಿರಣ್ಯಾಕ್ಷ : ಹಾಡು** **ರಾಗ : ಮೋಹನ - ಆದಿತಾಳ**

ತಡೆದುಬಿಡುವೆನು ಘಡ ಬಡ ಧರೆಯ ॥ ಪ ॥
ಖಡಾಖಡಿಯಲಿ ನಡೆದು ತಡೆದು

ಬಡಾಯಿಗೊಳುವಾ ಪೊಡವಿಯ ಪಿಡಿದು ॥ ೧ ॥
ಹಣಾಹಣಿಯಲಿ ಕುಣಿಸಿ ದಣಿಸಿ
ಕ್ಷಣಾರ್ಧದೊಳಗೆ ಅಣಕದೆ ಮಣಿಸಿ ॥ ೨ ॥

## ದೃಶ್ಯ : ರಸ್ತೆ
## (ಭೂದೇವಿ ಪ್ರವೇಶ)

**ಭೂದೇವಿ : ಹಾಡು** **ರಾಗ : ಯಮನ್ - ಏಕತಾಳ**

ಯಮಘಾತುಕನಿವನು । ಭೀತಿ ತೋರ್ವನು । ಸೋತುದಲಾ ಕೈಕಾಲು
ಅಮ್ಮ ಯನಗಿದು । ದುರ್ಮನ ಏನೆನೊ ದೇವ ॥ ಪ ॥
ದೀನಳಾಗೆ ಮಹಾಯಾಸಂ ಘಟಿಸಿತೆ ॥
ಮನದೆ ವಿಚಾರ ಘನವಾಗೆ ಈ ಬಗೆ । ಅನುವು ಅದಾವುದೊ ಕಾಣೆ ಏನೆನು ।
ವನಿತಾಜನವನು ಖಳನಾತನು ಮಹಾಕ್ರೂರ ॥
ವಿನಾಶಂಗೊಳಿಸೆ ಬರುವನೀಗ ವಿಧಿಯೆ । ಇದೇನು ಮೋಸ । ಆಹಾ ॥ ೧ ॥

**ಭೂದೇವಿ : ಹಾಡು** **ರಾಗ : ಶ್ರೀರಾಗ - ಆದಿತಾಳ**

ದೀನಪಾಲ ಮಾನಿನಿಯ ಮೊರೆಯ ಕೇಳಿ ಪಾಲಿಸು ।
ದೀನಳಾದೆನ್ನೈ ಮುರಾರಿ ಖಲವಿದಾರಿ ಶ್ರೀಹರಿ ॥ ಪ ॥
ಕಾವುದೈ ಕೃಪಾಳುಧವ । ಕಾವುದೆನ್ನ ಮಾಧವ ।
ಕಾವುದೈ ಗಜೇಂದ್ರಪಾಲ । ದಯಾಪಹಾ ಭಯಾಪಹಾ ॥ ೧ ॥
ರಕ್ಷಿಸೈ ಭಯಾರ್ತೆಯನು । ಪಕ್ಷಿವಾಹನಯೆನ್ನನು ।
ರಕ್ಷಿಸೈ ಅಮೇಯಮಾಯ । ಮಹೋದಯಾ ಮಹೀಪ್ರಿಯ ॥ ೨ ॥

**ಭೂದೇವಿ : ಹಾಡು** **ರಾಗ : ಮಾಂಡ್ - ಆದಿತಾಳ**

ಕಡುಧೀರನೇ ಶೂರನೇ । ನಾರಿಯನೀ ಪರಿ । ಕಾಡಬೇಡ ಬೇಡ ॥ ಪ ॥
ವನಿತೆಯ ತಡೆದು ಪಿಡಿದು ಕಾಡಿ ಬಾಧಿಪ ಪರಿಯಿದು ತರವೇ ನೋಡು
ಮಾನವತಿಯರಾ ಮನವನು ಕೊರಗಿಸೆ ನ್ಯಾಯವೇನೈ ನೋಡು ॥ ೧ ॥

ಭೂದೇವಿ : ಹಾಡು ರಾಗ : ಬೇಹಾಗ್ - ಆದಿತಾಳ

ಭರದೆ ಪೊರೆಯೈ । ಸಿರಿಯರಸನೆ ಸುಂದರ ರೂಪ ॥
ಪರಿಪಾಲಿಪ ದೊರೆಯಾರೀಗ । ಪ್ರಿಯ ಸೀನಾಗಿರೆ ॥ ಪ ॥
ಜಾಯೆ ಸಿಲುಕಿ ನೋಯುತಿರೆ । ಪರಮಪುರುಷ ದೇವಾ ।
ಈಶ್ವರಾ ವಿಶ್ವಭಾವಾ ॥ ಅ.ಪ. ॥
ಪರಿಯದಿರುವ ಚಿಂತಾ । ಕಾತರೀ ನಾಂದೀಶ
ನಿರುಪಮ ಕರುಣಾಳೂ । ಸಾಹ್ಯವಾಗೀಗ ಬೇಗ ॥ ೧ ॥
ವರಮುನಿ ಕೃತಸೇವಾ । ವಾಸುದೇವಾದಿದೇವಾ ।
ಉರುವೇದಾಂತಾಗಮಸಾರ ಶ್ರೀಲೀಲಾಲೋಲ । ಭಾರಹರನೆ ಬಾ
ಹರಿಯೆ ॥ ೨ ॥

## (ಭೂದೇವಿ - ವಿಷ್ಣು ಯುಗಳಗೀತೆ)

ಭೂದೇವಿ : ಪತೀ ಕಾಂತನೇ ಗತಿ । ಸತಿಗೀಗ ಸುನೀತಿ ॥ ಪ ॥
ದುಷ್ಟದಾನವಬಾಧೆ ತೊಲಗೆ । ಇಷ್ಟಾರ್ಥವದಾಗೆ ॥ ೧ ॥

ವಿಷ್ಣು : ಬಿಡುಭೀತಿಯನಿನ್ನು ಧರಣೀ । ದೃಢಾತ್ಮೆ ಸುವಾಣಿ ॥ ೨ ॥

ಭೂದೇವಿ : ಶುಭದಾಯಕ ನಿನ್ನ ಸದಯ । ಸಾಕಾರಸಹಾಯ ॥ ೩ ॥

ವಿಷ್ಣು : ಹಿತಕಾರಿಣಿ ನೀನು ಜಗದೆ । ಕೃತಾರ್ಥವಿನೋದೆ ॥ ೪ ॥

## ದೃಶ್ಯ : ರಸ್ತೆ

ನಾರದ : ಹಾಡು ರಾಗ : ಯಮನ್ - ಆದಿತಾಳ

ನಾರಾಯಣ ಹರಿ ಮುಕುಂದ ಜಯಜಯ ॥
ಸಾರಾದರಣಪರ ಗೋವಿಂದ ಜಯಜಯ ॥ ಪ ॥
ಶ್ರೀನಂದೀನಟ । ನಂದಿತ ವಾಂಛಿತ ॥
ಅನುಪಮಲೀಲಾ । ವಿಲೋಲ ಜಯ ಜಯ ॥ ೧ ॥

**ನಾರದ : ಹಾಡು** **ರಾಗ : ಕೇದಾರ - ರೂಪಕತಾಳ**

ಪರಮ ಪಾವನ ಶ್ರೀರಮಣ । ಸುರ ಸೇವ್ಯ ಚರಣ ॥ ಪ ॥
ಚರಣಸೇವಕಾದರಣ । ಚಾರು ಗುಣ ನತೋದ್ಧಾರಣ ॥ ಅ.ಪ. ॥
ಕಮಲಲೋಚನ । ಕಾಮಿತ ಸುರಾವನಿಜ । ಕಾಂಚನಭೂಷಣ।
ನಮದಮರ ಕುಲಾದರಣ । ನಾಕಿರಮಣ ಗೀತ ಗುಣ ॥ ೧ ॥

## ದೃಶ್ಯ : ಹಿರಣ್ಯಕಶಿಪುವಿನ ಪ್ರವೇಶ

**ಹಿರಣ್ಯಕಶಿಪು : ಹಾಡು** **ರಾಗ : ಹಂಸಧ್ವನಿ - ಆದಿತಾಳ**

ಹರಿ ಕರಗತನೆನಿಪಾ ದೊರೆತರೆ ಬಲಿಯೆ ಸರೀ ॥ ಪ ॥
ತೆರೆಮರೆ ಪರಿದಿರೆ ಮೀರಿ ಸಾರಿ ವಾರಿಸಿ । ಪಿಡಿತರ್ಪೆನು ॥ ಅ.ಪ. ॥
ನಿಸ್ಸಮಾನನಾದ ನಾನು । ಬಿಗಿದು ಸಿಗಿದುಬಿಡುವೆನು ।
ಹರಿಯು ಗಿರಿಯು । ಸರಿಯೆಯೆನಗೆ । ಅರಿವಧಕರನಿರಿವೆನು ।
ನಸ್ಸಹಾಯನೂ । ಅದಟ ಪಟುಭಟಾ ॥ ೧ ॥

**ಹಿರಣ್ಯಕಶಿಪು : ಹಾಡು** **ರಾಗ : ನವರೋಜು - ಆದಿತಾಳ**

ಖಡುಗಕಿದಿರೆ ಕೆಡುಕ ಹರಿಯು
ಪಿಡಿದು ಕಡಿದಪೆನಾಂ ॥ ಪ ॥
ಗೂಢವಾಗಿಪ್ಪೋದಡೇನು । ಒಡನಡೆಸುತೆ
ತಡೆದಪೆಂ । ಬಿಡದೆ ಪೊಡೆದಪೆಂ ॥

**ಹಿರಣ್ಯಕಶಿಪು : ಹಾಡು** **ರಾಗ : ಮಧ್ಯಮಾವತಿ - ಏಕತಾಳ**

ಫಡಫಡ ದೃಢಪಟುಭಟ ವೀರನು
ಖಡುಗಧರನು ಧುರದಿ ಧೀರನು ॥ ಪ ॥
ಮೃಢನೆದೆ ನಡುಗದೆ ಹಟದೆ ದಿಟದೆ ॥ ಅ.ಪ. ॥
ಧುರದೆ ಗೆಲಿದೆನು ಭರದೆ ಸುರನರರಾ
ಮೆರೆವ ಸಿರಿಯೊಳಾಂ ಪುರಾರಿಸಮಾನ ।

ಮೂರುಲೋಕ ವಶವಾದುದೀಗ
ದುರಾಕ್ರಮಾ ವರೋದ್ಯಮಾ ಪರಾಕ್ರಮಾ ॥ ೧ ॥

**ಹಿರಣ್ಯಕಶಿಪು : ಹಾಡು** **ರಾಗ : ನವರೋಜು - ಆದಿತಾಳ**

ದೊರಕಿದ ದುರುಳನ ಪಿಡಿಯದೆ ಪೋದೆ ॥ ಪ ॥
ಬೆರಗಿನ ನುಡಿಯಲ । ಮರೆತವನಾದೆ ॥ ಅ.ಪ. ॥
ಹರಿಯೆತ್ತ ಪೋದನು ನೆರೆ ಸುತ್ತಲಾಪೆನೇ ।
ಹರಿಯೆತ್ತ ಹರನೆತ್ತ । ಅರಸುತ್ತ ಕಾಂಬೆನು ॥ ೧ ॥

**ಹಿರಣ್ಯಕಶಿಪು : ಹಾಡು** **ರಾಗ : ಶ್ರೀರಾಗ - ಆದಿತಾಳ**

ವರವನು ಕರುಣಿಸು ದೇವ ॥ ಪ ॥
ದೇವ ಸದಾಶಿವ ಭುವನಾಧಾರಕ
ಭಾವಿತ ಕಾಮಿತ ಹಿತಫಲದಾಯಕ
ಪಾವನ ನೀಲಗ್ರೀವ ಕರುಣಿಸು ದೇವ ॥ ಅ.ಪ. ॥
ಪರಮದಯಾಕರ ವರಾನಂದಕರ
ಗಿರೀಶನೆ ಶಂಕರ ಮಹೇಶ ಕರಧೃತಶೂಲ ಭಕ್ತಪಾಲ ।
ಗೌರೀಕಾಂತ ಶಾಂತ ವರಭಾವ ಕರುಣಿಸುದೇವ ॥ ೧ ॥

**ಹಿರಣ್ಯಕಶಿಪು : ಕಂದ**

ಶೂಲಧರ ನೀಲಕಂಧರ
ಕಾಲಾಂತಕ ಫಾಲನೇತ್ರ ಪಾವನಗಾತ್ರ ।
ಬಾಲಶಶಿಮೌಳಿ ಯೆನ್ನಂ
ಪಾಲಿಸು ಭಯಹಾರಿ ಭಕ್ತಜನಹಿತಕಾರಿ ॥

**ಹಿರಣ್ಯಕಶಿಪು : ಕಂದ**

ಶೂಲಿಯ ಫಾಲದಿ ಪುಟ್ಟಿದ
ಕಾಲಾಗ್ನಿ ಸಮಸ್ತ ಭುವನಮಂ ದಹಿಸುವವೋಲ್ ।

ಮೇಲೊಗೆವೆನ್ನಯ ರೋಷ
ಜ್ವಾಲೆ ವಿಜೃಂಭಿಸುತಲೀಗ ಜಗಮಂ ದಹಿಕುಂ ॥

**ಹಿರಣ್ಯಕಶಿಪು : ಹಾಡು** **ರಾಗ : ಮೋಹನ - ಆದಿತಾಳ**

ಘಡ ಕಡಿದಿಡುವೆನು ಖಡ್ಗದಿ ॥ ಪ ॥
ಬಿಡು ತಡಬಡವನು ತೋರ್ಪೆನು ॥ ಅ.ಪ. ॥
ಸೆಡೆ ಕೇವಲಂ ಬಲಂ ಛಲಂ ಛಲಂ ।
ಬಡಾಯ್ ಗಿಡಾಯೆ ನಾಡೆ ಹಿಡಿವೆನು ಘಡ ಕಡಿವೆನು ॥ ೧ ॥

**ದೃಶ್ಯ : ಅಂತಃಪುರ**

**(ರಾಣಿ ಕಯಾದು ಅಂತಃಪುರದಲ್ಲಿ ಸಖಿಯರೊಡನೆ ಪ್ರವೇಶ)**

**ಕಯಾದು : ಹಾಡು** **ರಾಗ : ಭೈರವಿ - ಮಿಶ್ರಛಾಪುತಾಳ**

ಕಂದನಂ ಕಾಂತನಂ ಕಾಣದೆ । ಮಂದಾನೆ ಚಿಂತೆ ಮಾಣದೇ ॥ ಪ ॥
ಇಂದಾವ ಭೋಗಾಶೆ । ಪೇಳೀಗ ಸಖಿ ॥ ಅ.ಪ. ॥
ಏನೋ ಬೆಗಡು ಕೋಪ । ಏನೇನೊ ಪರಿತಾಪ ।
ದೀನಾತ್ಮಳಾಗಿರ್ಪೆ । ನಾನೇಕೆ ಸಖಿ ।

**ಕಯಾದು : ಹಾಡು** **ರಾಗ : ಯಮನ್ - ಆದಿತಾಳ**

ಪಸುಕಂದಾ ಸುಂದರಾ । ನಸುನಗೆಯ ತೋರು ಬಾರೋ
ಪಸುಕಂದಾ ಸುಂದರಾ ॥ ಪ ॥
ಅಂದದ ಚಂದದಾ ಗಿಣಿ । ಅಮಲಧೀಮಣಿ ॥
ಬಾಬಾ ಸುಕುಮಾರ ॥ ೧ ॥
ಆಡುವ ಪಾಡುವ ಗಿಣಿ । ಹಸುಳೆ ಬಾಗಿಣಿ
ಬಾಬಾ ಸುಕುಮಾರ ॥ ೨ ॥

**ಪ್ರಹ್ಲಾದ : ಹಾಡು** **ರಾಗ : ಬಿಲಹರಿ - ಆದಿತಾಳ**

ಹೇ ಜನನಿ ಕೇಳೆ ವಿನೋದ ॥
ಸೋಜಿಗವು ಮಿಗೆ ಬಗೆವರೆ ಮೋದ । ಭಜಿಪರಿಗಿರುವು ಭೇದಾ ॥ ಪ ॥

ಅಜಹರವಿನುತನ । ಭಜನೆಯೆ ಹಿತಕರ
ಸಾರುವುದಿಂತು ವೇದಾ ।
ಹರಿಯ ಮಹಿಮೆ ನೆರೆ । ಪರಮ ವೈಭವ
ಹರಿಪದಭಜನೆ । ಸುಖಭಾವಾ ।
ಹರಿಶುಭಚರಿತವೆ । ಭೂರಿ ವಿಭವ ॥ ೧ ॥

**ಪ್ರಹ್ಲಾದ : ಕಂದ**

ವನಜಾಕ್ಷ ನನ್ನೊಳಿರುತಿರೆ
ವಿನಯದೆ ಗುರುಗಳನು ಮೆಚ್ಚಿಸುತೆ ವಿದ್ಯೆಗಳಂ ।
ಅನುವಿಂದೆ ಕಲಿತು ನಿನ್ನಯ
ಮನವಂ ಸಂತೋಷಗೊಳಿಪುದೇನತಿಶಯಮೇ ॥

**ದೃಶ್ಯ : ಪಾಠಶಾಲೆ**

**ಶಂಡ : ಶ್ಲೋಕ**

ನಮಸ್ತೇ ವಿಘ್ನರಾಜಾಯ ಸರ್ವಸಿದ್ಧಿಪ್ರದಾಯಿನೇ ।
ವಿದ್ಯಾರಂಭಂ ಕರಿಷ್ಯಾಮಿ ಸರ್ವವಿಘ್ನಹರೋ ಭವ ॥ ೧ ॥

ನಮಸ್ತೇ ಶಾರದಾದೇವಿ ಸರ್ವವಾಗೀಶ್ವರೇಶ್ವರೀ ।
ವಿದ್ಯಾಸಿದ್ಧಿಂ ವಾಕ್ಪಟುತ್ವಂ ವಿಜ್ಞಾನಂ ಚ ಪ್ರದೇಹಿ ಮೇ ॥ ೨ ॥

**ದೃಶ್ಯ : ಅಂತಃಪುರ**

**(ರಾಣಿಯೂ - ಸಖಿಯೂ ಪ್ರವೇಶಿಸುವರು)**

**ಕಯಾದು : ಹಾಡು** **ರಾಗ : ತೋಡಿ - ಆದಿತಾಳ**

ಮೀರೆಮೀರೆ ವಿರಹಾನಲ ಸೈಪೆನೆ । ತೀರುವುದೇ ಪರಿತಾವ ॥ ಪ ॥
ಎಂದಿಗೆ ಮಿಗೆ ಸೊಂ । ಪಿಂದಲಿ ಬಂದಾ ।
ಕಂದನ ಪರಮಾ । ನಂದನ ನೋಳ್ಪೆನೊ ॥ ೧ ॥
ಮಾನಸವಿದು ತಾಸೀಗ ಬಳಲ್ದು ।
ದೀನತೆಯುಲಿ ದುಮ್ಮಾನವನೊಂದಿರೆ ॥ ೨ ॥

ಪ್ರಹ್ಲಾದ : ಹಾಡು                                        ರಾಗ : ಮಾಂಡ್ - ಆದಿತಾಳ

ವರಗುರುಗಳೆ ಆರಿವಿರಿ ಜರಿವಿರಿ ।
ಒರೆಯುವುದೇನ್ನೈ ಕರುಣದಿ ನಿರವಿಪುದಿದ ॥ ಪ ॥
ಅನುದಿನವೂ ಆರಾಧಿಪೆನ್ನೈಸೆ । ಮಾನಭಂಗವೆ ॥ ೧ ॥
ನುಡಿದನೇ ನಾಂ ಮಾಡುವೆನ್ನೈಸೆ । ಆಡಿಕೊಂಬಿರಿ ॥ ೨ ॥

## ದೃಶ್ಯ : ಪಾಠಶಾಲೆ

ಪ್ರಹ್ಲಾದ : ಹಾಡು                                        ರಾಗ : ಯಮನ್ - ಆದಿತಾಳ

ಘನಲೀಲ ಗಾನಲೋಲ । ಅನುಭಾವನೆ ಅಮೋಘ ॥ ಪ ॥
ಮನೋವಿಕಾಸ ಜನಿಸೆ । ಅನೇಕಬೋಧೆ ತಾನೆ ।
ಅನುವಾಗದೆ ಮನದೇ ॥ ೧ ॥
ಸದಾ ವಿಚಾರಪರನು । ತದೇಕಚಿತ್ತನಾಗೆ ॥
ಮುದವಾದುದು ಅದೇನು ॥ ೨ ॥

ಪ್ರಹ್ಲಾದ : ಶ್ಲೋಕ

ಸಶಂಖಚಕ್ರಂ ಸಕಿರೀಟಕುಂಡಲಂ
ಸಪೀತವಸ್ತ್ರಂ ಸರಸೀರುಹೇಕ್ಷಣಂ ।
ಸಹಾರವಕ್ಷಸ್ಥಲಶೋಭಿತಕೌಸ್ತುಭಂ
ನಮಾಮಿ ವಿಷ್ಣುಂ ಶಿರಸಾ ಚತರ್ಭುಜಂ ॥

ಪ್ರಹ್ಲಾದ : ಹಾಡು                                        ರಾಗ : ಮಾಂಡ್ - ಆದಿತಾಳ

ಒಲವಾ ಸಲಿಸು ದೇವಾ ತುಲಸೀವಿಮಲಮಾಲಾ
ಶ್ರೀಲೋಲ ಹರೀ ದಯಾಶೀಲ ॥ ಪ ॥
ಫಲವಾ ಕಲಿಸು ದೇವಾ ನಲವಾ ನಿಖಿಲಜೀವ
ಫಾಲಾಕ್ಷವಿನುತಾ ಚಿದಾನಂದನೆ ॥ ಅ.ಪ. ॥
ಪರಮಪುರುಷ ಹರಿ ನಿಗಮನುತಾ ಸರ್ವೇಶಾ ದೇವಾ
ವರ ಜೀವಭಾವ ವರಮಾಧವ ದೇವ ಪರಿಪೂತಭಾವಾ ।
ಹರಿ ನೀನೇ ತನುವು ಹರಿ ನೀನೇ ಧನವು
ಗಿರಿಧರ ಸಕಲಸುಖಕರಾ ಹರೀ ಪರಿಪಾಲಿಸೈ ॥ ೧ ॥

## ದೃಶ್ಯ : ಅರಮನೆ

(ಹಿರಣ್ಯಕಶಿಪು, ಕಾಲಜಿತು, ಶಂಡಾಮರ್ಕರೂ ಮಾತನಾಡುತ್ತಿರುವರು)

**ಹಿರಣ್ಯಕಶಿಪು : ಹಾಡು** **ರಾಗ : ಮೋಹನ - ಛಾಪುತಾಳ**

ಛೇ! ಪಡಿನುಡಿ ನುಡಿವೆಯ ಛೀ ಖಳ ॥ ಪ ॥
ಸೆಡಕ ಬಿಡೆಲೊ ಛೀ ಕಡುಖೂಳ ।
ದುಡುಕಿ ಪೇಳ್ವೆ ಫಡ ಛೀ ಕಠೋರ ।
ಹೇಡಿ ವಿಚಾರ ಛೀ ಕೇಡಿಗ ।
ಗೂಡದೆ ಪಗೆ ಗಡ ನೀಂ ಕಡುಜಡಾ ।
ಪೇಡಿ ಕಪಟ ಪಥಾ ಮೂಢ ॥ ೧ ॥

**ಪ್ರಹ್ಲಾದ : ಹಾಡು** **ರಾಗ : ಹಿಂದಸ್ಥಾನಿ ಕಾಫಿ - ಆದಿತಾಳ**

ಪೇಳುವೆ ತಾತ । ಸುನೀತಾ ಕೇಳೆನ್ನ ಮಾತು ॥ ಪ ॥
ಆಲಿಸಿ ತಾಯಿಯನು - ಜಾಲವ ಮಾಡದೆ ಮೋಹನ ॥ ಅ.ಪ. ॥
ಸಕಲ ಲೋಕೋದ್ಧಾರನು । ಅಖಿಳ ಸೌಖ್ಯವೀವ ರಮಾಕಾಂತನು
ಬೇಧವಾ ತೋರದೆ ನೀನು । ಪಾದದೊಳು ಕುಳ್ಳಿರಿಸಿ ಪ್ರೀತಿಸೆನನ್ನು ॥ ೧ ॥

(ಹಿರಣ್ಯಕಶಿಪು - ಪ್ರಹ್ಲಾದ ದ್ವಂದ್ವಗೀತೆ)

**ರಾಗ : ನವರೋಜು - ಆದಿತಾಳ**

**ಹಿರಣ್ಯಕಶಿಪು :** ಹರಿಗಿರಿಯಾರೆಲ ಜಡ ಫಡ ಖೂಳ
ಅರಿಯದೆ ಬೊಗಳುವೆ ಕಡುದುರುಳಾ ।
ಮರಣಕೆ ಕಾಲ ನಿನಗೆ ವಿಕಾಳ
ಬರಿಹರಟೆಯ ಬಿಡು ಅರೆಮರುಳಾ ।

**ಪ್ರಹ್ಲಾದ :** ಅರಿಯದೆ ಇರುವೆ ಬರಿದೆ ಮೆರೆವೆ ವಿರೋಧ ತರವೆ ॥ ೧ ॥

**ಹಿರಣ್ಯಕಶಿಪು :** ಕಪಟಗಾರನ ಜಠರ ಸೀಳೀ
ಹಟವನು ಗೆಲುವೆನು ದಿಟ ಮರುಳೇ ।

ಪಟುಭಟಕೇಳೀ ಘಟನೆ ಕರಾಳೀ
ಸಟೆ ಕಟಪಟೆ ಗಡ ಘಟಉರುಳೀ ।

ಪ್ರಹ್ಲಾದ : ಹಟವೇ ಪಟುವೇಕಟೆಲಾತ್ಮಕನೇ ಕಠೋರಹೃದಯ ॥ ೨ ॥

**ಪ್ರಹ್ಲಾದ : ಹಾಡು** **ರಾಗ : ಪೂರ್ವಿ ಕಲ್ಯಾಣಿ - ಆದಿತಾಳ**

ಖ್ಯಾತಶಂಖಚಕ್ರಕರನೆ ದೇವ ಪಾಲಿಸೈ ॥ ಪ ॥
ಪೀತಾಂಬರವರನ ಧರನೆ ದೇವ ಪಾಲಿಸೈ ॥ ಅ.ಪ. ॥
ಮಣಿಗಣರುಚಿಕೂಟಮಕುಟ ಮಂಗಳಾಂಗನೆ ।
ಪ್ರಣತಭಕ್ತಪಾಲ ಪರಮಪುಣ್ಯಸಂಗನೆ ॥ ೧ ॥
ನಿರುಪಮ ಕರುಣಾಳು ನಿಖಿಲಲೋಕನಾಯಕ ।
ಗರುಡವಾಹನ ವೇದವಿದಿತ ವಿಶ್ವದಾಯಕ ॥ ೨ ॥

**ದೃಶ್ಯ : ಬೆಟ್ಟ**
**(ಬೆಟ್ಟದ ಮೇಲೆ ಪ್ರಹ್ಲಾದನನ್ನು ನಿಲ್ಲಿಸಿಕೊಂಡು ವಿಕಟನು ನಿಂತಿರುವನು)**

**ಪ್ರಹ್ಲಾದ : ಹಾಡು** **ರಾಗ : ಹಂಸಧ್ವನಿ - ಆದಿತಾಳ**

ವಿಲಸಿತಲೀಲ ಶ್ರೀಲೋಲ ಸಲಹಿಕು ಈಗ ಈ ಶೈಲ ॥ ಪ ॥
ಮೇಲನು ಮಾಡೆ ಈ ಕಾಲ ಬಲಯುತನಾದನು ಈ ಬಾಲ ॥ ಅ.ಪ. ॥
ಶೀಲವಿಮಲ ಸಂತತಮಾಯಾವಿಪುಲ
ಲೀಲಾಕುಶಲ ಮುನಿನುತಮಾಲಾ ಸುಬಲ ।
ಲೋಲಕುಂತಲ, ಕೋಮಲ, ಕಾಲಸಂಧಿಕಲಾಫಲ
ಬಾಲಪಂಡಿತಜಾಲ ಸುಖಪಾಲ ದಂಡಿತಖಲ ಶ್ರೀಲೋಲ ॥ ೧ ॥

**ದೃಶ್ಯ : ಸ್ಮಶಾನ**
**(ಪ್ರಹ್ಲಾದ ಮತ್ತು ಕಟುಕರ ಪ್ರವೇಶ)**

**ಪ್ರಹ್ಲಾದ : ಶ್ಲೋಕ**

ಆವಾವ ಜನ್ಮದೊಳಮಿಾ
ಜೀವಾತ್ಮಂ ವಿಷ್ಣುಭಕ್ತಿ ಪರಿವರ್ಧಿತ ಸ ।

ದ್ಭಾವದೊಳಿರ್ಪಂತೆನ್ನಂ
ಗೋವಿಂದನೆ ಜೀವಿತೇಶ ಸಲಹು ಪರೇಶ ॥

**(ಶಾಕಿನಿ, ಡಾಕಿನಿ ಭೂತ, ಬೇತಾಳರ ಹಾಡು)**

**ರಾಗ : ನೋಟ್ - ಆದಿತಾಳ**

ಪಿಡಿವೆನು ಬಡಿವೆನು ಕೊಲ್ವೆ ಭಳಿರೇ ಮೆಲ್ವೆ ಭಳಿರೇ
ಹೊಡೆದು ಬಿಡುವೆ ಭಲಾರೆ ॥ ಪ ॥
ಅರಿದು ಪರಿದು ಇರಿದು ಸರಿದು ಕರುಳ ಬಗೆವೆನು
ಗೋಣ ಮುರಿವೆನು ಸುರಿವ ನೊರೆಯ ಜುರಿವೆನು ॥ ೧ ॥

**ಪ್ರಹ್ಲಾದ : ಕಂದ**

ದಶದಿಕ್ಕಿನೊಳುಂ ನೀನೆ
ದಶಗುಣಸಾಹಸ್ರ ನಾಮರೂಪನೆನಿಸುತಂ ।
ನಿಶಿತಾಯುಧಗಳ ಧರಿಸುತೆ
ನಿಶಾಚರರ ಹಿಂಸೆಯಿಂದ ತಪ್ಪಿಸಿ ಕಾಯ್ಕೆ ॥

**ಪ್ರಹ್ಲಾದ : ಹಾಡು** **ರಾಗ : ಸಿಂಧುಭೈರವಿ - ಆದಿತಾಳ**

ದಾಸಭಾವವೇ ಲೇಸೆನಿಸುವುದೈ ವಾಸುದೇವ ವರವಿಭವ ।
ಮೋಸದಾಸೆಯ ಮುಸುಡನು ಮುರಿದು ॥
ಆ ಸುರನಾ ನೆರೆ ತೊರೆವಾ ಮೆರೆವಾ ।
ಪೊಸ ಮಾನದೀ ಘನದೀ ವಾಸಿಸುವಾ ಹರಿಯಾ ॥ ೧ ॥

**ದೃಶ್ಯ : ಘೋರಾರಣ್ಯ**
**(ಆನೆಯ ಮುಂದೆ ಪ್ರಹ್ಲಾದನನ್ನು ಕೂರಿಸಿರುವರು - ವಿಕಟ ಮತ್ತು ಸೇವಕರು ನಿಂತಿರುವರು)**

**ಪ್ರಹ್ಲಾದ : ಹಾಡು** **ರಾಗ : ಕಾನಡ - ಆದಿತಾಳ**

ಮಂದರಗಿರಿಧರನೇ ಶ್ರೀ ವರನೆ ಬಾ ॥ ಪ ॥
ಲೋಕಾನೇಕಾ ಸಾಕುವ ದೇವಾ ನೀ ಕೃಪೆ ತೋರೀಗಾ ॥ ೧ ॥

ದೀನಾಧಾರೀ ದಾನವವೈರೀ ಧ್ಯಾನದಿ ಮೈತೋರೀ ॥ ೨ ॥
ಶಿಕ್ಷಾರಕ್ಷಾದಕ್ಷನೆ ದೇವಾ ರಕ್ಷಿಸು ಶ್ರೀವಕ್ಷಾ ॥ ೩ ॥

## ದೃಶ್ಯ : ಮಾರ್ಗ
## (ಕಾಲಜಿತು ಪ್ರವೇಶ)

**ಪ್ರಹ್ಲಾದ : ಶ್ಲೋಕ**

ಯಜ್ಞಮಯ ಯಜ್ಞಸುಪ್ರಿಯ
ಯಜ್ಞೋಜ್ವಲ ಯಜ್ಞ ಪಾಲ ಯಜ್ಞಾಧಾರಾ
ಯಜ್ಞಧನ ಯಜ್ಞಭೋಜನ
ಯಜ್ಞೇಶ್ವರ ಪಾಹಿಪಾಹಿ ಪಾವಕರೂಪ

**ಪ್ರಹ್ಲಾದ : ಹಾಡು** **ರಾಗ : ಹಂಸಾನಂದಿ - ರೂಪಕತಾಳ**

ಕ್ಷೀರಾಂಭೋಧಿವಿಹಾರ ಸೂರೀಂದ್ರಾತ್ಮವಿಚಾರ
ನಾರಾಯಣ ನಾರಾಯಣ ಪೊರೆಯೈ ಶ್ರೀರಮಣಾ ॥ ಪ ॥
ದೇವಾದೇವ ಪರೇಶ ಜೀವಾಜೀವವಿಲಾಸ ॥ ೧ ॥
ಭೇದಾಭೇದವಿದೂರ ವೇದಾಂತಾಗಮಸಾರ ॥ ೨ ॥

## ದೃಶ್ಯ : ಅಂತಃಪುರ

**ಕಯಾದು : ಹಾಡು** **ರಾಗ : ಸಾವೇರಿ - ಆದಿತಾಳ**

ಹೃದಯತಾಪವೇ ವಿಪರೀತವತಾಳಿ ಸೈಸಲಾಪೆನೆ ಹಾ ದೇವ ॥ ಪ ॥
ಬಾಧೆ ಭಯಾ ನುಡಿಯೇ ನಡುಕಾ ವಿಧಿವಿಧಾನವಿದ ಹಾ ದೇವ ॥ ಅ.ಪ. ॥
ಪತಿಯಾಜ್ಞೆಯ ನಾ ಮೀರುವೆನೆ ಸ್ತ್ರೀಧರ್ಮಭಂಗವೈ ದೇವಾ
ಸುತಗೆ ಹಿತಂ ನೆನೆಯೆ ದೇವಾ ಗತಿಯೇ ತೋರದೇನು ದೇವ ॥ ೧ ॥

**ಕಯಾದು : ಹಾಡು** **ರಾಗ : ಅಭೇರಿ - ಆದಿತಾಳ**

ಕುಲತಿಲಕಹಿತನ ಸುತನ ಕೊಲುವ !
ಛಲವ ನಿಲಿಸಿ ಪಾಲಿಸೈ ಪತೀ ॥ ಪ ॥

ಪ್ರೇಮಪಾತ್ರ ಪರಮಸಾಧು ಕೋಮಲ ವರಲೀಲಾ ॥ ಅ.ಪ. ॥
ಕೌಮಾರಾ ಮೋದಕರಾ ನೇಮಪರಾ ಕುಶಲಾ ॥
ಸಮಭಾಮತಿ ಸದ್ಗುಣಿ ಸುವಿಚಾರ ಸದಾಲೋಲಾ ।
ಭೂಮಿಸಹಿತಕಾಮಿ ವಿಮಲಶೀಲ ಸಾಮಪರಾ ಬಾಲಾ ॥ ೧ ॥

**ಕಯಾದು : ಹಾಡು** **ರಾಗ : ಪೀಲ್ - ಆದಿತಾಳ**

ಇದಾವ ಪಾಪಫಲಾ ಅಕಟಾ ವಿಧಿ ॥ ಪ ॥
ಎದೆ ಜರಿಯೇ ಬಿರಿಯೇ ಸರಿಯೇ ವಿಧಿ ॥ ಅ.ಪ. ॥
ಈವೆನೆ ದೇವಾ ವಿಷವಾ ನಾ ಹಾ ।
ಆವಾವ ದೋಷಕರ ಏವೆನು ಬಾಲಕಜೀವಹರ ॥ ೧ ॥
ಭಾವುಕದಾಯಿ ಭಜಕಾದಾಯಿ
ದೇವೇಶ ಕಿಂಕರತಾ ಭವಭಯಹಾರಕ ಭಾವಕೃತ ॥ ೨ ॥

**ಕಯಾದು : ಕಂದ**

ತೇಜೋಬಲಯುತನೆನಿಸುತೆ
ಮೂಜಗಕರಸಾಗಿ ಧರ್ಮಪರಿಪಾಲನದಿಂ ।
ರಾಜಿಪೆ ಕೀರ್ತಿಯ ಪಡೆದು ಮ
ಹಾಜಯದಿಂ ಬಾಳು ನೀಂ ಚಿರಾಯುವೆನಿಸುತಂ ॥

**ಪ್ರಹ್ಲಾದ : ಹಾಡು** **ರಾಗ : ಯಮನ್ - ಆದಿತಾಳ**

ನೆರೆಯೇ ಮೆರೆಯೇ ನರಿಯೇ ಬೆರಗನೊರೆವ ಪರಿ ಬಿಡು ತಾಯೆ ॥ ಪ ॥
ಕರುಣಾರಸಜಲಧಿ ಪರಮಪುರುಷ ಪೂರ್ಣವರೇಶಾ ।
ಸುರನರನುತ ಸರಸಪರ ಮುನಿಹೃದಯವಿಲಾಸ ॥ ೧ ॥
ಹೃದಯಾಂತರನಿಲಯ ಅದಯ ಸದಯ ಸರ್ವವಿಚಾರಿ ।
ಅಧಿಗತ ಶುಭಲಹರಿ ಮಧುಹರ ಮುದಿತವಿಹಾರಿ ॥ ೨ ॥

**ಕಯಾದು : ಕಂದ**

ಪತಿಯಾಜ್ಞೆಯ ಮೀರುವೆನೆ
ಸುತನಂ ಕೊಂದವೆನೆ ಪಟ್ಟದರಸಿಯೆನಿಸಿಯುಂ।
ಗತಿಗೆಟ್ಟು ಪುತ್ರಘಾತಿನಿ
ಹತಾಶೆ ನರಕಾಗ್ನಿಯಲ್ಲಿ ಬೀಳ್ವೆನೆ ದೇವಾ ॥

**ಪ್ರಹ್ಲಾದ : ಕಂದ**

ಜಗದೀಶನ ಬಲಮೊಂದಿರೆ
ಜಗದೊಳು ವಿಷಮಮೃತವಾಗಿ ಪರಿಣಮಿಕುಂ ಕೇಳ್ ।
ಜಗದೀಶನ ಬಲಮಿರದಿರೆ
ಬಗೆಯಲ್ಕಮೃತಮುಮದಲ್ತೆ ದುರ್ವಿಷಮಕ್ಕುಂ ॥

**ಕಯಾದು : ಹಾಡು** **ರಾಗ : ರಂಜಿನಿ - ಆದಿತಾಳ**

ಈ ವಿಚಾರ ಅಪಾರಾ ಅಧೀರಾ ॥ ಪ ॥
ಈವೇನೆ ವಿಷವನು ಏವೆ ಶ್ರೀದೇವನೆ ॥ ಅ.ಪ. ॥
ಕಂದನಾ ಹರಣವಾ ಕಾವೆನೇ ಸಾವೆನೇ ॥
ದುರ್ವಿಧೀ ಏನಿದೂ ದಹಿಸೆ ಚಿಂತಾನಲಾ ಮುಂದುಗಾಣೇ ॥
ಪರ್ವಿದೀ ಶೋಕದೀ ನಿರ್ವಹಿವೆನೇ ॥ ೧ ॥

**ದೃಶ್ಯ : ಹಿರಣ್ಯಕಶಿಪು ದರ್ಬಾರು**
**(ಆಸ್ಥಾನದಲ್ಲಿ ಮಂತ್ರಿ ಸೇನಾಪತಿಗಳು ಪರಿವಾರದೊಡನೆ ನಿಂತಿರುವರು)**

**ಸಮೂಹಗೀತೆ : ಹಾಡು** **ರಾಗ : ನೋಟ್ - ಏಕತಾಳ**

ಕ್ಷೇಮವಂ ಪಾಲಿಸೈ ಪ್ರೇಮಸುಗುಣಧಾಮಾ ॥ ಪ ॥
ಅಮೇಯಾ ಅಜೇಯಾ ವಿನೇಯಾ ದಯಾಮಯಾ ॥
ಪ್ರೇಮಸುಗುಣಧಾಮಾ ॥ ಅ.ಪ. ॥
ಮಹಾಮಹಿಮ ಸಾಹಸಿಗ ಆಹ ಅವಮಲ್ಲಾ
ವಿಶ್ವಾಧಿಕನೇ ಬಾಹುಬಲಾ ಆ ಹಿತಲೀಲಾ ॥ ೧ ॥

(ಹಿರಣ್ಯಕಶಿಪು ಪ್ರವೇಶ)

**ಹಿರಣ್ಯಕಶಿಪು : ಕಂದ**

ದಡದಡಿಸುವುದೆದೆಗುಂಡಿಗೆ
ಎಡಗಣ್ಣುಮೆಡದಭುಜಮದಿರೆ ಕಂಪಿಸುಗುಂ।
ಜಡತೆಯನ್ನೈದಿದೆ ಮತಿ ಬ
ರ್ಪಡರಾವುದೊ ಆಗುಹೋಗುಗಳನೆಂತರಿವೆಂ ॥

## ಹಿರಣ್ಯಕಶಿಪು - ಪ್ರಹ್ಲಾದರ ದ್ವಂದ್ವಗೀತೆ

**ರಾಗ : ಮಾಂಡ್ - ಆದಿತಾಳ**

**ಕಶಿಪು :** ಎಲ್ಲಿಹ ಶ್ರೀನಾಥ. ಮಾಧವನೆಲ್ಲಿಹ ಶ್ರೀನಾಥ।
**ಪ್ರಹ್ಲಾದ :** ಎಲ್ಲೆಲ್ಲೂ ಇಹನು ತಾತ। ಮಾಧವ ಎಲ್ಲೂ ಇಹನು ತಾತ।
**ಕಶಿಪು :** ಹೆಂಗಸೇನೊಜಾತ। ಮಾಧವ ಹೆಂಗಸೇನೋಜಾತ।
**ಪ್ರಹ್ಲಾದ :** ಭಂಗಗೈವ ತಾತ। ಮಾಧವ ಭಂಗಗೈವತಾತ।
**ಕಶಿಪು :** ಭಿಕ್ಷುವೇನೋಜಾತ। ಮಾಧವ ಭಿಕ್ಷುವೇನೊಜಾತ।
**ಪ್ರಹ್ಲಾದ :** ಪಕ್ಷಿಗಮನತಾತ। ತ್ರಿಜಗವನು। ರಕ್ಷಿಪನವ ತಾತ।
**ಕಶಿಪು :** ರಣಕೆಬೀರುವೆನುನಾಂ ಹರಿಯನು ರಣಕೆಬೀರುವೆನು ನಾಂ।
**ಪ್ರಹ್ಲಾದ :** ಕೆಣಕಿನೋಡುತಾತ। ಹರಿಯನು ಕೆಣಕಿನೋಡು ತಾತ।
**ಕಶಿಪು :** ಜಾರನೇನೊಜಾತ। ಮಾಧವ ಜಾರನೇನೊಜಾತ।
**ಪ್ರಹ್ಲಾದ :** ಬ್ರಹ್ಮಚಾರಿತಾತ। ಮಾಧವ ಬ್ರಹ್ಮಚಾರಿ ತಾತ।
**ಕಶಿಪು :** ಸಿಗಿದುಬಿಡುವೆಜಾತ। ಹರಿಯನು ಸಿಗಿದುಬಿಡುವೆ ಜಾತ।
**ಪ್ರಹ್ಲಾದ :** ಸುಲಿದು ಬಿಡುವ ತಾತ। ನಿನ್ನನು ಸುಲಿದು ಬಿಡುವ ತಾತ।

**ಪ್ರಹ್ಲಾದ : ಹಾಡು** **ರಾಗ : ದರ್ಬಾರಿ ಕಾನಡ - ಆದಿತಾಳ**

ಕರುಣಾಳು ಶರಣೆಂಬೆ ದಯತೋರೆಯಾ
ನೊಂದಾತ್ಮಕಾನಂದ ನೀತಾರೆಯಾ ॥ ಪ ॥

ಗತಿಯನ್ನು ಹೀನಜನಕೆ ನೀನೀಡಿದೆ ।
ಮತಿಯನ್ನು ದೀನಮನಕೆ ನೀ ತೋರಿದೆ ।
ನಿನ್ನಡಿಯನಂಬಿರುವ ನಿನ ಕಂದನಾ ।
ಎಡಬಿಡದೆ ಅಡಿ ಇಡಿಸೋ ನಿನ್ನ ಭಕುತ ನಾ ॥ ೧ ॥
ನವಜೀವ ನವ ಶಕ್ತಿ ನಾಬಯಸುವೇ ।
ಬದುಕೆಲ್ಲಮುದ ತುಂಬೆ ನಾ ಸುಖಿಸುವೇ ।
ಚೈತನ್ಯ ರೂಪಿಯು ನೀನಲ್ಲವೇ ।
ಈ ಬಾಳ ಸುಮವರಳಿ ನಾಂ ಕಾದಿಹೇ
ನಾಂ ಕಾದಿಹೇ, ನಾಂ ಕಾದಿಹೇ ॥ ೨ ॥

**ದೃಶ್ಯ : ಮಾರ್ಗ**

**(ಇಂದ್ರ, ನಾರದ, ಮೊದಲಾದವರು ಸ್ತೋತ್ರ ಮಾಡುತ್ತಾ ಪ್ರವೇಶ)**

**ಎಲ್ಲರೂ : ಹಾಡು** **ರಾಗ : ಸುರುಟಿ - ಆದಿತಾಳ**

ಸಕಲ ಭಯಹರಣಾ ಸುಖಕಾರಣಾ ॥ ಪ ॥
ಪ್ರಕಟಿತಗುಣಾ ಕರುಣಾಭರಣಾ ನಿಖಿಲಾದರಣಾ ॥ ಅ.ಪ ॥
ಖಲವಿದಾರಣಾ ಕಲಿಮಲಹರಣಾ
ಫಲಪೂರಣಾ ಶರಣಾವರಣಾ ಜಗತೀರಮಣಾ ॥ ೧ ॥

**ದೃಶ್ಯ : ಅರಮನೆ**

**ನಾರದ : ಹಾಡು** **ರಾಗ : ಹಿಂದೂಸ್ಥಾನಿಕಾಪಿ - ಆದಿತಾಳ**

ಪಾಲಿಸು ನಾರಾಯಣ ಪರಿ
ಪಾಲಿತಮಾದತ್ತು ಯಜ್ಞ ಕರ್ಮಾದಿಗಳುಂ ।
ಲೀಲಾರೂಪನೆ ರೌದ್ರ
ಜ್ವಾಲೆಯನುಪಶಾಂತಿಗೊಳಿಸು ದೇವನೃಸಿಂಹಾ ॥

**ಪ್ರಹ್ಲಾದ - ದಂಡಕ**

ಜಯ ಜಯ ಪ್ರತ್ಯಕ್ಷಪರಮೇಶ್ವರ ! ಜಯ ಜಯ ಪರಮಾದ್ಭುತಾಕರಾ ! ಜಯ ಜಯ ಜಗದಾಧಾರ ! ಜಯ ಜಯ ಜಗದ್ರಕ್ಷಣಾಧ್ಯಕ್ಷ ! ದೀನಾವನಾಪೇಕ್ಷ ದುರ್ದೈತ್ಯ

ಶಿಕ್ಷಾರ್ಥಸಂಭೂತ ದಿವ್ಯಾದ್ಭುತಾಕಾರ ! ದಿವ್ಯಪ್ರಭಾಪೂರ ಸರ್ವೇಶ್ವರಾ ! ಸರ್ವಧರ್ಮ ಪ್ರತಿಷ್ಠಾಪನಾಸಿದ್ಧಬದ್ಧಾದರ ! ಸಚ್ಚಿದಾನಂದಹೃದ್ಯಾ ! ಸದಾವೇದವೇದ್ಯಾ ! ಮಹಾ ರೋಷಭೀಷಾಯಿತಭ್ರೂ ಸಮಾಕುಂಚನೋಜ್ಜೃಂಭದುಗ್ರಾಗ್ನಿ ನಿರ್ಧೂತಧೂಮಚ್ಛ ಟಾಕೀರ್ಯಮಾಣ ಸ್ಫುಲಿಂಗಪ್ರತಿಚ್ಛನ್ನರಾಜಾಂಕಣಾ ! ಝುಂಝುಣತ್ಕಂಕಣಾ ! ಭೀಮ ದಂಷ್ಟ್ರಾಕರಾಳಾ ಸ್ಯಲೇಲಿಹ್ಯಮಾನೋರುಜಿಹ್ವಾಗ್ರಸಂಭೂತಘೋರಾನಲ ಜ್ವಾಲಕೀಲಾ ವಳೀತಪ್ತದುರ್ದೈತ್ಯಹೃತ್ಪಂಕಜಾ ! ದೀಪ್ತ ಲೋಕವ್ರಜಾ ! ತೀಕ್ಷ್ಣಧಾರಾನಖಕ್ಷುಣ್ಣ ದೈತ್ಯೇಂದ್ರನಾಭೀತಲೋತ್ಕ್ಷಿಪ್ತ ಸಾರ್ದ್ರಾಂತ್ರ ರಕ್ತಾಂಚಿತೋರಸ್ಥಲಾಲಂಬಿಮಾಲಾ ನ್ವಿತಾ! ಮೌನಿಹೃತ್ಸಮ್ಮತಾ ! ಭೂರಿಸೌದಾಮಿನೀಕಾಂತಿಪೂರಾಯಿತೋದ್ಯತ್ಸಟಾಕೇಸರ ಧ್ವಸ್ತ ಲೋಕಾಂಧಕಾರಕ್ರಮಾ ! ವರ್ಧಿತೋದ್ವಿಕ್ರಮಾ ! ಜಾತಕಲ್ಪಾಂತಮೇಘಾವಳೀ ಧ್ವಾನ ಗಂಭೀರಭೀಮಾಟ್ಟಹಾಸಾಸಕೃತ್ಪೂರ್ಣಬ್ರಹ್ಮಾಂಡೋಪತಂಡಾ ! ಪ್ರಕಾಂಡ ಪ್ರಚಂಡಾ ! ಶರಣ್ಯಾ ! ವರೇಣ್ಯಾ ! ಸಮಸ್ತಾಗ್ರಗಣ್ಯಾ ! ಪರೇಶಾ ! ರಮೇಶಾ ! ನಮಸ್ತೇ ನೃಸಿಂಹಾ ! ನೃಸಿಂಹಾ ! ನಮಸ್ತೇ ! ನಮಸ್ತೇ ! ನಮಸ್ತೇ .

**ಶ್ಲೋಕ**

ಪ್ರಸೀದ ಪ್ರಸೀದ ಪ್ರಭೋ ವಿಶ್ವರೂಪಾ ಪ್ರಸೀದ ಪ್ರಸೀದ ಪ್ರಪನ್ನಾರ್ತಿದೀಪಾ
ಪ್ರಸೀದ ಪ್ರಸೀದ ಪ್ರಸನ್ನಾತ್ಮಭಾವಾ ಪ್ರಸೀದ ಪ್ರಸೀದ ಸ್ವಯಂದೇವದೇವಾ ॥

**ಮಂಗಳ : ಹಾಡು** **ರಾಗ : ಮಧ್ಯಮಾವತಿ - ಆದಿತಾಳ**

ಶುಭವಿಭವಕರನೆನಿಸು ದೇವ ಪರಿಪಾಲಿಸು ॥ ಪ ॥
ದೇವ ಜಗತೀಧವಾ ಭಯಹರ ಜಯಾಕರ ।
ಜೀವಪರಭಾವ ಮಹದೇವ ಹರಿ ಶ್ರೀವರಾ ॥ ೧ ॥

**ಅಥವಾ**

**ರಾಗ : ಅಠಾಣ - ಛಾಪುತಾಳ**

ಮಂಗಳಂ ನರಸಿಂಹಗೆ । ಸದಾ ಜಯಮಂಗಳಂ ಪರಬ್ರಹ್ಮಗೆ ॥ ಪ ॥
ಮಂಗಳಂ ಪರಮಾತ್ಮನಿಗೆ ಜಯ । ಮಂಗಳಂ ಮಹಿತಾತ್ಮನಿಗೆ ಸುರ ।

ಪುಂಗವಾದಿ ವಿನುತ್ಯನಿಗೆ ವೇ । ದಾಂಗವೇದ್ಯ ಚಿದಾತ್ಮನಿಗೆ ಜಯ ॥ ಅ.ಪ ॥
ಅಣುರೇಣು ತೃಣಕಾಷ್ಟದಿ । ಅಣಿಯುರ ಮಿಪನ । ಪ್ರಣವ ಸ್ವರೂಪನಿಗೆ ॥
ಪ್ರಣಕಪಾಲನ ದಕ್ಷನಿಗೆ ನಿ । ರ್ಗುಣ ನಿರಾಮಯ ನಿತ್ಯ ಮೂರ್ತಿಗೆ ।
ತ್ರಿಯಣ ನಾಂಬುಜ ಗರ್ಭ ನಾರಾ । ಯಣರೆನಿಪ ಮೂರ್ತಿ ತ್ರಯಾತ್ಮಗೆ ॥ ೧ ॥



# ಜಲಂಧರ



ನಾಟಕ ಪಿತಾಮಹ
**ಬೆಳ್ಳಾವೆ ನರಹರಿಶಾಸ್ತ್ರಿಗಳು**

**ನಾಂದಿ : ಹಾಡು** **ರಾಗ : ಕೇದಾರ** -

ನಮೋ ನಮೋ ನಟರಾಜ
ಓಂ ನಮೋ ನಮೋ ನಟರಾಜ ॥ ಪ ॥
ಹರ ಜಟಾಜೂಟಧರ ಶಂಭೋ
ನಮೋ ನಮೋ ನಟರಾಜ
ಓಂ ನಮೋ ನಮೋ ನಟರಾಜ ॥ ಅ.ಪ. ॥
ಗಂಗಾಗೌರಿ ಹೃದಯ ವಿಹಾರಿ
ಲೀಲಾ ಕಲ್ಪಿತ ಸಂಸಾರಿ
ಭಳಿರೆ ಭಾಸುರ ಬ್ರಹ್ಮಚಾರಿ
ಭಾವಜಮದ ಸಂಹಾರಿ ॥ ೧ ॥
ಫಣಿಭೂಷಾ ಭಿಕ್ಷುಕವೇಷ
ಈಶಾತ್ರಿಭುವನ ಸಂಪೋಷ
ಅಖಿಲ ಚರಾಚರ ಮಂಗಳಕಾರಿ
ಲೀಲಾಕಲ್ಪಿತ ಸಂಸಾರಿ ॥ ೨ ॥

**ದೃಶ್ಯ : ರಸ್ತೆ**

**ಸೂತ್ರಧಾರ : ವೃತ್ತ ॥** **ರಾ**

ಶ್ರೀ ವಾರಾಶಿ ಪರಿಕ್ಷಿಪನ್ನಿಜ ಲಲಾಟಾಗ್ನಿ ಪ್ರಚಂಡ ಪ್ರಕಾ ।
ಶಾವಿರ್ಭೂತ ಜಲಂಧರಂ ಗಿರಿಸುತಾನಂದಾಬ್ಧಿ ಚಂದ್ರೋದಯಂ

ದೇವಾಧೀಶ್ವರ ಭಾಗ್ಯದಾನ ಕೃತಧರ್ಮೋದ್ಧಾರ ಲೀಲಂ ಮಹಾ ।
ದೇವಂ ನೀಡುಗೆ ಭವ್ಯಮಂ ಶುಭಕರಂ ಶ್ರೀ ದೇವಗಂಗಾಧರಂ ॥

**ಸೂತ್ರಧಾರ : ಹಾಡು** **ರಾಗ : ಕಲ್ಯಾಣ - ಆದಿತಾಳ**

ಸೋಮಾಭರಣ । ಸುರನುತಚರಣ । ಸೌಮ್ಯಪಂಚವದನ ॥ ಪ ॥
ಸೀಮಾತೀತ . ಸಾಮಾಗಮನುತ । ಹೇಮಾಚಲಚಾಪ । ಸೋಮೇಶ ॥ ಅ.ಪ. ॥
ಹೈಮಗಿರೀಂದ್ರ ತನುಭವಾಲೋಲ ॥ ಶ್ರೀ ಮನೋಜ್ಞ ಲೀಲಾ ಶ್ರಿತಿಪಾಲ ॥
ಕಾಮವಿತರಣ । ಘನಶುಭಕಾರಣ । ಗಂಗಾಧರ ಲೋಕಾವಳಿಶರಣ ॥ ೧ ॥

## ಪ್ರಥಮಾಂಕ

### ದೃಶ್ಯ : ಕೈಲಾಸ ಮಂದಿರ

**ಶಿವಗಣಗಳು : ಹಾಡು** **ರಾಗ : ಸಾರಂಗ - ಏಕತಾಳ**

ಶಂಕರ ಭೋಂ ಭೋಂ ಭೋಂ ಭೋಂ ಭೋಂ ಭವತರಣ ಘನಕರುಣ ।
ಶಂಭೋ ಸದಾಶಿವ ಮಹೇಶ್ವರ ॥ ಪ ॥
ಸಂಧ್ಯಾನಾಟ್ಯ ವೈಭವಮಹಿತ । ಶುಭಚರಿತ ।
ಚಂದ್ರಾರ್ಧಶೇಖರ ಶುಭಾಕರ ॥ ೧ ॥
ಗಂಧರ್ವಾಮರಾರ್ಚಿತಚರಣ । ಮುನಿಶರಣ ।
ವಂದಾರುಭವಭಯ ನಿವಾರಣ ॥ ೨ ॥
ಗಜೇಂದ್ರಾಸ್ಯಶರಭವ ಜನಕ । ಪಂಚಮುಖ ।
ನಿಜಾನಂದಸುಖ ವಿಧಾಯಕ ॥ ೩ ॥
ನಗೇಂದ್ರಾತ್ಮಜಾನ್ವಿತ ಕಾಯ । ಜಿತಮಾಯ ।
ಜಗತ್ಕಾರಣಾಮರಗೇಯ ॥ ೪ ॥

**ದೇವೇಂದ್ರ : ಕಂದ**

ವಂದಿಪೆನಾಂ ಪರಮೇಶ್ವರ ।
[illegible]ರು ಸುಪರ್ವಲೋಕ ಕುಶಲಾಧಾರಾ ॥
ಇಂದುಕಲಾಧರ ಮುನಿಹೃ ।
ನ್ಮಂದಿರ ಗಿರಿನಂದನಾಂತರಂಗ ವಿಹಾರಾ ॥

ದೇವೇಂದ್ರ : ಹಾಡು                                                        ರಾಗ : ಮೋಹನ - ಆದಿತಾಳ

ಜಯಶಂಕರ । ಜಗದೇಕನಾಥ ॥ ಪ ॥
ಭಯವಾರಣ । ಜಯಕಾರಣ ॥ ಅ.ಪ. ॥
ಅನಿಲಾನಲಾಕಾ ಶಾದಿ ನಾನಾ । ತನುಭಾ ಸಮಾನ । ತತ್ವ ಸನ್ನಿಧಾನ ॥
ಮುನಿವರ್ಯ ಮನೋವನಜಾಸನ । ವನಜಾರಿಲೇಖಾಲಂಕೃತ ॥
ಘನವಾಹನಾದ್ಯಾರಾದಿತಾಂಘ್ರಿ ।
ವನಜಾತಪಾಹಿ । ವಾಮದೇವ ಶಂಭೋ ॥ ೧ ॥

## ದೃಶ್ಯ : ಅಂತರಿಕ್ಷಮಾರ್ಗದಲ್ಲಿ ನಾರದನ ಪ್ರವೇಶ

ನಾರದ : ಹಾಡು                                                        ರಾಗ : ಮಾಂಡ್ - ಆದಿತಾಳ

ಶ್ರೀ ರಮಾಮೋಹನ । ಪಾವನ ॥
ಚಾರಣಾನತಪದ । ಸರಸಿಜ ಪಾಲಯ ॥ ಪ ॥
ನಿಗಮಾಂತನುತ । ತ್ರಿಗುಣಭಾಸಿತ । ನಿತ್ಯಸುಖಂಕರ ಪಾಪಹರ ॥ ೧ ॥
ಚರಣ ಶರಣ ಭವ । ತಾರಣನಿಪುಣ । ತರಣಿ ಸುಧಾಕರ ಲೋಚನ ॥ ೨ ॥

## ದೃಶ್ಯ : ಗಂಗಾಸಮುದ್ರ ಸಂಗಮಸ್ಥಾನ
## (ಸಮುದ್ರ ರಾಜ ತಪಸ್ಸಿನಲ್ಲಿ ಕುಳಿತಿರುವನು)

ಗಂಗಾದೇವಿ : ಹಾಡು                                                        ರಾಗ : ಕಲ್ಯಾಣಿ - ಆದಿತಾಳ

ಇದನೀಕ್ಷಿಸು ನೀಂಪ್ರಿಯಾ ॥
ಮುದಾ । ಸ್ವದವು । ಸದಯಾ । ತನಯನ ನಾಂತೆ ॥ ಪ ॥
ಮುದನಾರಿ ತಾ । ನೊದಗಿಸಿದಂ ।
ಮುದದೀಸುತಸಂ । ಪದವನು ಕಾಂತಾ ॥ ಅ.ಪ ॥
ಅತಿಧೈರ್ಯದಿಂ । ಶಿತಿಕಂಠನಂ । ನುತಿಸಲ್ಕೆ ನಾಂ । ಸುತಕಾಂಕ್ಷೆಯಿಂ ॥
ಹಿತದಿಂದಲೀ । ಸುತನನು ಕೊಟ್ಟ । ನತುಳಾದರದಿಂದ ।
ನುತಪಾರ್ವತೀಶನಿದ ॥ ೧ ॥

ಸಮುದ್ರರಾಜ, ಗಂಗಾದೇವಿ : ಹಾಡು ರಾಗ ..... ತಾಳ ........

ಪಾಲಯಗಿರಿಜಾ । ಲೋಲಶಂಕರ ।
ಬಾಲಸುಧಾಕರ । ಭಾಗಶೇಖರ ॥ ಪ ॥
ದಾಸಜನಾಭಯ । ದಾನದಯಾಮಯ ।
ವಾಸವಮುಖನುತ । ವರಗುಣನಿಲಯ ॥ ೧ ॥

## ದ್ವಿತೀಯಾಂಕ

### ದೃಶ್ಯ : ಆಕಾಶಮಾರ್ಗ

ನಾರದ : ಹಾಡು ರಾಗ : ಬೇಹಾಗ್ - ಆದಿತಾಳ

ಇಂದಿರಾಲೋಲ । ವಂದಿತ ಬೃಂದಾರಕ ॥ ಪ ॥
ಸಿಂಧುರ ವರದ । ಸಿಂಧು ಶಯನ ॥ ಅ.ಪ. ॥
ಸರ್ವಜೀವಾತ್ಮಕ । ಪರ್ವತೋದ್ಧರಣ ।
ದುರ್ವಹರಿಪುಗಣ । ಗರ್ವಹರಣ ॥ ೧ ॥
ನಿತ್ಯನಿರಾಮಯ । ಸತ್ಯ ಶುಭೋದಯ ।
ಭೃತ್ಯಸುಖಾಸ್ಪದ । ಕೃತ್ಯಜಯ ॥ ೨ ॥

### ದೃಶ್ಯ : ಚಿತ್ರಾವತಿ ನಗರದ ಮುಂದಣ ಪರ್ವತ ಪ್ರದೇಶ

ಜಲಂಧರ : ಕಂದ

ಸಮರದೊಳಿನ್ನತುಳಪರಾ ।
ಕ್ರಮಮಂ ಜಯಲಕ್ಷ್ಮಿ ಮೆಚ್ಚಿ ವರಿಸಿದಳೆನ್ನಂ ॥
ಅಮಿತಯಶೋಬಲ ವಿಭವದೆ ।
ಸಮನೆನಿಸಿದನಾವನಿರ್ಪನೆನಗೀಜಗದೊಳ್ ॥

ಜಲಂಧರ : ಹಾಡು ರಾಗ : ಹಂಸಧ್ವನಿ - ಆದಿತಾಳ

ಭಲ ! ಸಮನಾರೆನಗಿನ್ನು ॥ ಪ ॥
ನಭಕೆ ವಾರ್ಧಿಗಳ್ ಮಿಗೆ ತುಳ್ಕಡೆ । ರಭಸದಿಂದೆ ಭುಜಗಳುಳ್ಕಡೆ ॥
ವಿಭವೋದ್ಧತರಂ । ಪ್ರಬಲೋರ್ವಿಪರಂ । ಗೆಲ್ದನಿಂದು ರಣದಲ್ಲಿ ನಿಂದು ॥ ೧ ॥

(ಬೃಂದೆ ಮತ್ತು ಬೃಂದೆಯ ಸಖಿಯರ ಸಮೂಹ ಗೀತೆ)

**ರಾಗ : ಹಿಂದುಸ್ಥಾನಿಕಾಪಿ - ಆದಿತಾಳ**

**ಬೃಂದೆಯ ಸಖಿಯರು :** ಮಧುರಮಾದ । ಮದಕೋಕಿಲಗಾನವ ।
ಮುದದಿ ಲಾಲಿಸೆಲೆ । ವಿಧುವದನೇ ॥ ಪ ॥
ಮಧುವ ಪೀರುತ । ಮದಾಳಿಕುಲವು ।
ಮಧುರಗಾನಮಾಳ್ಪುದು ಚತುರೇ ।
ಸುದತಿ ಕೇಳು ಮಧುಕರ ಚಿಕುರೇ ॥ ಅ.ಪ. ॥

**ಬೃಂದೆ :** ನಲಿದು ಯೌವ್ವನದ ವಿಲಾಸಮದದಿಂ
ನಾಟ್ಯಮಾಳ್ಪನವಿಲಂದವಿದು ॥
ನೆರೆ । ನೋಟಕಚ್ಚರಿಯ ಬೀರುವುದು ॥ ೧ ॥

**ಎಲ್ಲರೂ :** ಸರಸಿಜಂಗಳ ಪರಾಗಭರದಿಂ ।
ಸಾರಗಂಧವನು ಮಾರುತನು ।
ನೆರೆ ಬೀರುವ ಪರಿಮಳಪೂರಿತನು ॥ ೨ ॥

**ಜಲಂಧರ : ಹಾಡು**

**ರಾಗ : ಕೇತಾರ - ಆದಿತಾಳ**

ಅವಳೀ ಶುಭಾಂಗಿಯಾಹ । ಭಾವಭವನ ಶರ ಮೆರಚುವ ನಾರಿ ॥ ಪ ॥
ನೀರೆ ಚಂಚರೀಕಚಿಕುರೆ । ಚಾರುಸ್ವರ್ಣಕಾಂತಿ ರುಚಿರೆ ॥
ಕೀರವಾಗ್ವಿಲಾಸ ಚತುರೆ । ಮಾರಮೋಹನಾಕಾರ ॥ ೧ ॥
ಇಂದುಕಾಂತಿ ಹಾಸಕಲಿತೆ । ಮಂದಹಂಸಯಾನ ಲಲಿತೆ ॥
ಸಾಂದ್ರನವ್ಯಲೀಲಾಭರಿತೆ । ಸುಂದರಾಂಗಿ ದಿವ್ಯಚರಿತೆ ॥ ೨ ॥

**ಜಲಂಧರ : ಕಂದ**

ಸಾರದಿರೆಲೆ ನವ ಮೋಹನೆ ।
ಸಾರಂಗ ಸಮಾನ ನಯನೆ ಸರಸಿಜವದನೇ ॥
ಮಾರಹತ ಹೃದಯ ನಾದೆನ ।
ಗಾರಯೆ ಮುದಮೆಸಗು ಬಾರೆ ದಿವ್ಯಾಕಾರೆ ॥

ಜಲಂಧರ : ಹಾಡು

ರಾಗ : ಕಾನಡ - ಆದಿತಾಳ

ಪೋಗಬೇಡವೇ । ನಾಗಗಾಮಿನೀ ನೀಂ ॥ ಪ ॥
ನಾಗ ನೀಲವೇಣಿ । ನವ್ಯ ಕೀರವಾಣಿ ॥ ಅ.ಪ. ॥
ಕಮನೀಯಲೀಲಾ । ರಮಣೀಯೆ ಭಾಮೇ ।
ಭ್ರಮೆಯೇತಕೆ ವಿ । ಭ್ರಮತೋರದೆ ॥ ೧ ॥
ನಯಶಾಲಿನೀ । ಜಯರೂಪಿಣೀ ।
ದಯೆತೋರದಿಂತು ಭಯವೇತಕೆ ॥ ೨ ॥
ಸುಯಶೋವಿಕಾಸಂ । ಜಯಕಾಮಿನೀಶಂ ।
ಬಯಸಿರ್ಪೆನಾ । ಶ್ರಯನೀಡದೆ ॥ ೩ ॥

ಬೃಂದೆ : ಹಾಡು

ರಾಗ : ಬೇಹಾಗ್ - ಆದಿತಾಳ

ನೀನೀ ಪರಿವೇಳ್ವರೇ । ದೀನಪಾಲ ಧೀರ ॥ ಪ ॥
ವಿಪುಲ ನಯವಿಚಾರ ಶೂರ । ವೀರ ಗಂಭೀರ ಉದಾರ ॥ ಅ.ಪ. ॥
ಲಲನೆಗೆ ಸೋತುಮನ । ಚಲಿಸಿರಲೇನ ಘನ । ಏನಿಯಾಲೋಚನೆ ।
ಭಾನುಪ್ರಕಾಶನೇ । ಮಾ (ದಾ) ನವಾಧೀಶನೇ ತರವೇ ॥ ೧ ॥

ಬೃಂದೆ : ಹಾಡು

ರಾಗ : ನವರೋಜು - ಆದಿತಾಳ

ಸಹಿಸುವೆನೇ । ಸಖೀ ದೇಹತಾಪವಂ ॥ ಪ ॥
ಪರಿಮಳಪೂರಿತ । ವರಮಂದ ಮಾರುತ ।
ಉರಿಯಂತೆ ತಾಪವ । ನುರೆಬೀರುತಿರ್ಪನು ॥ ೧ ॥
ಬಲವೆಲ್ಲ ಕುಂದಿತು । ಬಳಲಿಕೆ ಮೀರಿತು ।
ಬಲುದೇಹದಾಹವ । ತಳೆದೆ ನಾಂ ಬಾಳ್ವೆನೇ ॥ ೨ ॥

## ದೃಶ್ಯ : ವಿವಾಹಮಂಟಪ

ಬೃಂದೆ : ಹಾಡು

ರಾಗ : ಬೇಗಡೆ - ಚಾಪುತಾಳ

ಕರುಣಾಸಾಗರ ಲಾಲಿಸೋ । ಕನಿಕರದಿಂದ ॥ ಪ ॥
ತರುಣಿಯ ಮೊರೆಯನು । ತಾಳಿ ಶಾಂತಿಯನಿಂದು ॥ ಅ.ಪ. ॥

ಎಂತಾದರೂ ನಿಜ । ಕಾಂತನ ಸೇವೆಯ ।
ಸಂತತಮಾಳ್ಪುದೆ । ಕಾಂತೆಗೆ ಧರ್ಮವು ॥ ೧ ॥
ಅದರಿಂದ ನೀನಿಂದು । ಮುದದಿಂದಪ್ಪಣೆಯನು ।
ಸುದತಿಗೆ ನೀಡಲು । ಪದೆದುಬೇಡುವೆನು ॥ ೨ ॥

## ತೃತೀಯಾಂಕ

### ದೃಶ್ಯ : ಜಲಂಧರ ನಗರ

**ನಾರದ : ಹಾಡು** **ರಾಗ : ಬೇಹಾಗ್ - ಆದಿತಾಳ**

ನಿಜಗುಣ ನಿರಂಜನ । ನಾರಾಯಣ ॥ ಪ ॥
ಸುಜನಕುಲಾವನ । ಸುರಮುನಿ ತೋಷಣ ॥ ಅ.ಪ ॥
ಪಾಪನಿವಾರಣ । ತಾಪಸ ಶರಣ ।
ತಾಪಹರಣ ಭವ ತಾರಣ ನಿಪುಣ ॥ ೧ ॥
ಜ್ಞಾನಗೋಚರ ಶ್ರುತಿ । ಗಾನವಿನೋದ ।
ದೀನಜನಾವನ । ದಾನವ ಮಥನ ॥ ೨ ॥

### ದೃಶ್ಯ : ಜಲಂಧರನ ಸಭಾಸ್ಥಾನ

**ವೈತಾಳಿಕರು : ಹಾಡು** **ರಾಗ : ಬೇಹಾಗ್ - ಆದಿತಾಳ**

ವೀರಧೀರ ರಣಾಗ್ರಭೀಕರ । ಸುರವರಕರಿಕಂಠೀರವ ಪ್ರಭುವರ ॥ ಪ ॥
ನಿರಂತ ಸುಖದಿ । ದುರಂತ ಬಲದಿ । ಸುರಾರಿಕುಲದಿ । ಧರೇಂದ್ರ ನಿನಗೆ ॥
ಸರಿಯಾ । ರರಿಭೀ । ಕರಯೀ । ಧರೆಯೊಳ್ । ಪರಮಪರಾಕ್ರಮಿ ॥ ೧ ॥

**ನಾರದ : ಹಾಡು** **ರಾಗ : ಪೂರ್ವಿಕಲ್ಯಾಣ - ಆದಿತಾಳ**

ಕಮಲಾಧವ । ಘನವೈಭವ ॥ ಪ ॥
ಅಮಿತಪ್ರಭಾವ । ಕಮನೀಯ ದೇವ ॥ ಅ.ಪ. ॥
ಜಗತೀತಾನ । ಜನನಾದಿ ಮೂಲ ।
ನಿಗಮನಿಧಾನ । ಸುಗುಣ ಪ್ರಧಾನ ॥ ೧ ॥
ಶ್ರುತಿಗಾನಲೋಲ । ನತದೇವಜಾಲ ।
ಶತಪತ್ರಮಾಲ । ನುತಮೌನಿಜಾಲ ॥ ೨ ॥

**ಪ್ರಚಂಡ ಮೊದಲಾದ ಸೇನಾನಿಗಳು : ಹಾಡು** **ರಾಗ : ಹಂಸಧ್ವನಿ - ಆದಿತಾಳ**

ಸಾರಿಹೋರಿ ಚೆಂಡಾಡುವೆವು ಭೀರುಗಳೆನಿಸಿದ ಬಿಡೌಜಮುಖರನು ॥ ಪ ॥
ಬಡದೇವತೆಗಳು ಭೀತಿಯಿಂ । ಗಡಗಡ ನಡುಗುವ ರೀತಿಯಿಂ ॥
ಸಿಡಿಲಿನ ತೆರದೊಳು । ನಡೆಯುತ್ತೆ ಭರದೊಳು ॥
ಪಿಡಿಯುತೆ । ಪೊಡೆಯನು । ಕಡಿಯುತೆ । ಕೆಡಹುತೆ ॥ ೧ ॥

**ಜಲಂಧರ : ಕಂದ**

ಭುಜಬಲ ವಿಸ್ತರಣದಿನಾ ।
ನಜ ಸುರವರ ಹರಿಹರರ್ಕಳಂ ನಡುಗಿಸುತುಂ ॥
ತ್ರಿಜಗವ ಗೆಲ್ದಾನಂದದೆ ।
ವಿಜಯ ಶ್ರೀಕಾಂತನೆನಿಸಿ ಕೀರ್ತಿಯಂ ಪಡೆವೆಂ ॥

**ದೃಶ್ಯ : ಸ್ವರ್ಗಲೋಕ**
**(ಜಲಂಧರನು ಶುಕ್ರಾಚಾರ್ಯರೊಡನೆ ಪ್ರವೇಶಿಸುವನು)**

**ಜಲಂಧರ : ಕಂದ**

ನಡೆವೆಂ ಸುರಲೋಕಕೆಧಾ ।
ಬಿಡುವೆಂ ನಿರ್ಜರರ ಕಡೆವೆ ನಿಂದ್ರನ ಸುಡುವೆಂ ॥
ಪಿಡಿವೆಂ ಸಕಲೈಶ್ವರ್ಯವ ।
ಪಡೆವೆಂತ್ರೈಲೋಕ್ಯ ವಿಜಯ ವಿಖ್ಯಾತಿಯನಾಂ ॥

**ಜಲಂಧರ : ಹಾಡು** **ರಾಗ : ..... ತಾಳ .....**

ಬಲಾರಿಯನು ಬಲಿಗುಡದೆ ಬಿಡೆ ।
ಬಲಾತ್ಕರಿಸಿ ಸೆಳೆಯುತೆ ರಣರಂಗಕೆ ॥ ಪ ॥
ಖಳಾಧಮನ ರಣದುರುಳಿಸಿ ನರಳಿಸಿ ।
ಛಲಂಬಿಡದೆ ಸಾಧಿಪೆನಾಂ ಜಯವನು ॥ ಅ.ಪ. ॥
ಪೀಡಿಸಿ ಖಳನಂ । ಕಾಡಿಸಿ ಪೊಡೆ ಚೆಂ ।
ಡಾಡುತಲಾ ಧೂರ್ತನ ತಲೆಯಂ ।

ನೋಡಿ ಹರುಷದಿಂ । ಕೂಡಿ ವಿಜಯವಂ ।
ಖೋಡಿಯ ಪೇರಡಗಿಸಿ ನಲಿವೆ ॥ ೧ ॥

ದೃಶ್ಯ : ಸ್ವರ್ಗಲೋಕದಲ್ಲಿ ದೇವೇಂದ್ರನ ಸಭಾಮಂದಿರ

**ದೇವೇಂದ್ರ : ಹಾಡು** **ರಾಗ : ಶಂಕರಾಭರಣ - ಆದಿತಾಳ**

ಆರು ಸಮರು ನನಗೆ । ಮೂಜಗದೊಳಗಾರು ॥ ಪ ॥
ಮಾರವೈರಿ ಕೃಪೆಯಿಂದನುಗ್ರಹಂ । ಬೀರೆ ಪರಮಸೌಭಾಗ್ಯವ ಪಡೆದಿಹೆನಾರು ॥
ವಿಭವದಿಂತು ಸುರ । ವಿಭುಗ ಸಾಟಿ ತಾಂ । ತ್ರಿಭುವನದೊಳಗಿನ್ನಾವನಿರುವನು ।
ಶುಭಗುಣಾಂಕಿತಂ । ಸುಖವಿರಾಜಿತಂ ।
ಪ್ರಬಲಬಲಯುತಂ । ಪರಮಗುಣಾನ್ವಿತನಾರು ॥ ೧ ॥
ಅರಿಯು ಜನಿವನೆಂ । ದಿರದೆ ಮುನ್ನ ಮಾ । ಹರನು ನನ್ನೊಳಂ ।
ದರುಹಲಾಗಳಿಂ । ಪರಮಮೋದದಿಂದ । ದುರೆ ವಿನೋದದಿಂ ।
ದಿರುವೆ ನಿನ್ನು ರಿಪು । ಬರುವನಾವನೋ ॥ ೨ ॥

**ದೇವೇಂದ್ರ : ಕಂದ**

ಫಡಫಡ । ಕೆಡುಗನ ಬೆಡಗಿನ ।
ನುಡಿಯಾಲಿಸಲುರ್ಕಿ ಭುಗ್ ಭುಗಿಲ್ ಭುಗಿಲೆನುತಂ ॥
ಕಿಡಿಮಸಗುವ ಕೋಪಾದ್ಭುತ ।
ಬಡಬಾಗ್ನಿಯೊಳವನ ಸುಟ್ಟು ಭಸ್ಮವ ಗೈವೆಂ ॥

**ದೇವೇಂದ್ರ : ಹಾಡು** **ರಾಗ : ಹಂಸಧ್ವನಿ - ಝಂಪೆತಾಳ**

ಚಂಡದೈತ್ಯನಿಗೆ ಧೋ । ರ್ದಂಡ ಬಲತೋರ್ಪೆ ।
ಪುಂಡನಂ ನಾಂ ಪಿಡಿದು । ಖಂಡಿಸುತೆ ಬರ್ಪೆ ॥ ಪ ॥
ಲಕ್ಷಿಸದೆ ಯೀಸಹ । ಸ್ರಾಕ್ಷನಂ ಬಂಧಿಹನ ।
ಶಿಕ್ಷಿಸುತಲೀಕ್ಷಣದೆ । ಕುಕ್ಷಿಯಂ ಸೀಳ್ವೆ ॥ ೧ ॥
ಅಂಧನಾಗಿಂದಾಜ । ಲಂಧರನು ನಡೆತಂದು ।
ಇಂದಿರನ ಕೆಣಕಿಹನು । ಕೊಂದಿಡುವೆನವನ ॥ ೨ ॥

## ದೃಶ್ಯ : ಸ್ವರ್ಗಲೋಕ

**ನಾರದ : ಹಾಡು** **ರಾಗ : ಬೇಹಾಗ್ - ಆದಿತಾಳ**

ಪುರುಷೋತ್ತಮ ದಯಾಪೂರಿತ ಹೃದಯ ॥ ಪ ॥
ಪರಿಪಾಲಯ ಪಾಥೋನಿಧಿ ನಿಲಯ ॥ ಅ.ಪ. ॥
ಸಕಲಲೋಕನಿಜಸ್ಥಿತಿಲಯಕಾರಣ ।
ಪ್ರಕಟಿತಮಹಿಮಾಭರಣ ಶ್ರೀರಮಣ ॥ ೧ ॥

## ದೃಶ್ಯ : ನಂದನವನ

**ಜಲಂಧರ : ಕಂದ** **ರಾಗ : ನಾಟಿ**

ಕಟ್ಟುತೆ ಖಳನಂ ಪಾಶದೆ ।
ಮೆಟ್ಟುತಲವನೆದೆಯಾನ ಮರಸೈನ್ಯಮನೆಲ್ಲಂ ॥
ಕುಟ್ಟುತಲಮರಾವತಿಯಂ ।
ಸುಟ್ಟಪೆ ನೀ ಕ್ಷಣವೆ ಭುಜಬಲದಿಂದಂ ॥

## ( ಇಂದ್ರ-ಜಲಂಧರ ದ್ವಂದ್ವಗೀತೆ)

**ರಾಗ : ಶಂಕರಾಭರಣ - ಏಕತಾಳ**

**ಇಂದ್ರ :** ಭಳಿರೆ ಜಯವ । ನೆಳಸಿ ರಣಕೆ । ಛಲದೆ ಬರುವೆ । ಯಲೆ ಖಳಾ ॥
ಬಲವಿದಾರಿ । ಬಲವತೋರಿ । ತಲೆಯ ಹಾರಿಸುವನಲಾ ॥ ಪ ॥
ತಳೆದ ಮುದದೆ । ತುಳಿದು ಪದದೆ । ಫಲವ ನಾಂ । ನಲಿಸುತೆ ॥ ೧ ॥
ಶರದೊಳುರವ । ನಿರಿದು ಶಿರವ । ತರಿವೆನಿರದೆ । ದುರದಿ ನಾಂ ॥
ಇರಿಸಿ ಛಲವ । ನುರಿಸಿ ಬಲವ । ಮೆರೆವೆನಾಂ । ಜಲಂಧರಾ ॥ ೨ ॥

**ಜಲಂಧರ :** ಬಿಡು ಬಿಡೆಲವೊ । ಬೆಡಗಿನವಡಿ । ನುಡಿಯ ಛಲದೆ । ಕೆಡುವೆ ನೀಂ ॥
ಅಡಿಗೆ ಶಿರವ । ನಿಡುತೆ ಮಣಿದು । ನಡೆಯೊ ಗರ್ವಮಂದಿರ ।
ಪುರಂದರ ॥ ೩ ॥
ಭಳಿರೆ ಜಯವ । ಬಯಸಿ ರಣದೆ ...... ತಲೆಯ ಹಾರಿಸುವನಲಾ ॥ ಪ ॥

### ದೃಶ್ಯ : ಮೇರು ಪರ್ವತದ ಅರಣ್ಯ

ಇಂದ್ರಾದಿಗಳು : ಹಾಡು ರಾಗ : ವಸಂತ - ರೂಪಕತಾಳ

ಅನಾಥನಾಥ ಪೊರೆಯೊ ನಮ್ಮ ಸಾದಿ ಕೇಶವಾ ॥ ಪ ॥
ದಿನಾಧಿನಾಥ ಚಂದ್ರನೇತ್ರ । ದೀನಪಾಲಕಾ ॥ ಅ.ಪ. ॥
ವೇದಾಂತ ವೇದ್ಯ ಪಾಲಿಸಖಿಲ । ಸಾಧುಪೂಜಿತ ॥
ಪಾದಾಬ್ಜಭಕ್ತ ದಿವಿಜದೇವ । ಪಾದಪಾಯಿತ ॥ ೧ ॥

ನಾರದ : ಹಾಡು ರಾಗ : ಭೂಪ್ - ಝಂಪೆತಾಳ

ಪದಶರಣಜನ ಭರಣ ॥ ಪಂಕಜಾರುಣ ಚರಣ ॥
ತ್ರಿದಶ ಚಾರಣನುತ್ಯ । ಸದಮಲಚರಿತ ನಿತ್ಯ ॥ ಪ ॥
ಇಂದಿರಾಮಂದಿರ । ಸಾಂದ್ರಭವಭಯಹರಣ ॥ ಅ.ಪ. ॥
ಶಶಿಬಿಂಬಸಮ ವದನ । ಶಾಂತ ಸದ್ಗುಣಸದನ ॥
ಶ್ಯಾಮಲಾಬ್ಜ ಶರೀರ । ಶಮಿತ ಸುರರಿಪುವಾರ ॥
ಮಂಗಳಾಕರ ಶ್ರೀ । ತುಂಗಮಹಿಮಾಂಕ ಜಯ ॥ ೧ ॥

## ಚತುರ್ಥಾಂಕ

### ದೃಶ್ಯ : ಬೃಂದಾದೇವಿಯ ಪೂಜಾಮಂದಿರ

ಬೃಂದೆ : ಹಾಡು ರಾಗ : ಕಲ್ಯಾಣಿ, ಮೋಹನ, ಭೈರವಿ - ರೂಪಕತಾಳ

ಶೈಲಕೌಮಾರಿ । ಜಯರಾಜರಾಜೇಶ್ವರಿ ॥ ಪ ॥
ಬಾಲೇಂದುಫಾಲೆ ಶಂಕರಿ । ಮದನ ಪಾಲಿನಿ । ಮಾಧವಸೋದರಿ ॥ ಅ.ಪ. ॥
ಶ್ರೀಕರೆ ಪರಮಪಾವನೆ ಕೃಪಾ । ಭರಿತೆ ಶುಭಚರಿತೆ ।
ಸರೋಜಭವ । ಸುರೇಂದ್ರ ಮುಖಿ ॥
ಸುರಾವಳಿನುತ । ಸರೋಜಪದೆ ಸರಸಲೀಲೆ ।
ಗುಣವಿಶಾಲೆ । ಸುರಮುನಿ ಸುಖಕರೆ ಶ್ರೀಕರೆ ॥ ೧ ॥
ಬಾಲಚಂದ್ರ ಶೋಭಿತೇ । ಭಜಕಾಭೀಪ್ಸಿತದಾತೇ ॥
ನೀಲಕಂಧರ ಮೋಹನೇ ನಿಜ । ನಿತ್ಯನಿರ್ಮಲ ರೂಪೇಗೌರೀ ॥ ೨ ॥
ಜಗದಾದಿಮಕಾರಿಣೀ ಶಿವೆ । ಜ್ಞಾನೈಕ ಫಲದೆ ಭೈರವಿ ॥
ನಿಗಮಾಗಮ ಸನ್ನುತೇ ಪೊರೆ । ದೀನಾವನೆ ಶ್ರೀಗೌರಿ

**ದೇವೇಂದ್ರ : ಕಂದ**

ಮರೆಯೊಳ್ ನಿಂದು ಸುಮಾಸ್ತ್ರವ ।
ನುರೆ ಬೀರುಮೆನ್ನ ಬಳಲಿಸಿಹ ಮನ್ಮಥನಂ ॥
ಮುರಿವುದಕೆ ನನಗೆ ನೆರವಾ ।
ಶಿರೆ ನೀಂ ಪ್ರತ್ಯಕ್ಷ ವೈರಿತಾನಿರದಳಿವಂ ॥

**(ದೇವೇಂದ್ರ - ಬೃಂದೆ ದ್ವಂದ್ವ ಗೀತೆ)**

**ರಾಗ : ಮೋಹನ - ಆದಿತಾಳ**

**ದೇವೇಂದ್ರ :** ಕರುಣಿಸೆ ಕಮಲಮುಖಿ । ಬೇಡುವೆನು ॥ ಪ ॥
ಇಂದು ನಿನ್ನನವ । ಮಂದಹಾಸದಾನಂದ ಬೀರುವ । ಸುಂದರಾಸ್ಯವ ।
ನಿರುಕಿಸಿ ಮನವು । ಸ್ಮರಶರಹತವಾ । ಗಿರುವುದು ।
ಕರುಣದೆ । ಪೊರೆವುದು ಸುಂದರಿ ॥ ೧ ॥

**ಬೃಂದೆ :** ತರವೆನಿಸದು ಚಪಲ । ಧೀ ದುರುಳ ॥ ಪ ॥
ಕಂತುಬಾಣಹತಿ । ಗಿಂತು ಸಿಲುಕಿ ಬಲು ।
ಚಿಂತೆಯಾತು ಪರ । ಕಾಂತೆಯನ್ನು ಧೀ ॥
ಇಂತುರೆ ಬಯಸಿ । ಭ್ರಾಂತಿಯ ಬೆರೆಸಿ
ನಿಂತೆಯಿದನುಚಿತ । ಶಾಂತದೆ ನಡೆನಡೆ ॥ ೨ ॥

**ದೇವೇಂದ್ರ :** ಕಾಮಮೋಹಕರ । ಕೋಮಲಾಂಗಿ ಗುಣ ।
ಧಾಮೆ ನಿನ್ನ ಯಭಿ । ರಾಮರೂಪದಿ ॥
ಕಾಮನ ಶರಕೆ । ಭಾಮಿನಿ ಸಿಲುಕಿದೆ ।
ಪ್ರೇಮಭಿಕ್ಷೆಯನು । ಕಾಮಿಪೆ ಪಾಲಿಸು ॥ ೩ ॥

**ಬೃಂದೆ :** ನೀತಿಯುಳಿದು ಬಲು । ಮಾತನಾಡಿ ವಿ ।
ಖ್ಯಾತಿಗಳಿವೆ ಪುರು । ಹೂತ ಧೀ ನಡೆ ॥
ಈ ತೆರವನು ಮಮನಾಥನು ತಿಳಿಯೆ ।
ಘಾತಿಸಿ ನಿನ್ನನು । ಭೂತಲದುರುಳಿಪ ॥ ೪ ॥

**ಬೃಂದೆ : ಹಾಡು** **ರಾಗ : ನಾಟಿಕುರಂಜಿ - ಆದಿತಾಳ**

ಏತಕಿಂತು, ಸೋತು ಮನದೆ । ನೀತಿಮೀರ್ವೆ । ಪಾತಿಕಿ ॥ ಪ ॥
ರೀತಿಯಲ್ಲ । ಖ್ಯಾತಿಗಳೆವ । ಮಾತನುಳಿದು । ಸೈತಿರು ॥ ಅ.ಪ. ॥
ಮರುಳೆ ನಿನ್ನ । ದುರುಳತನವ । ನರಸನರಿಯೆ । ಕೆರಲಿ ಬರುವ ॥
ಗರಳಮುಗಿದು । ಕೊರಳತರಿದು । ಕರುಳಬಗೆದಿಂ । ದುರುಳಿಸುವನು ॥ ೧ ॥

## ದೃಶ್ಯ : ಮೇರುಪರ್ವತದ ಅರಣ್ಯ
## (ನಾರದನ ಪ್ರವೇಶ)

**ನಾರದ : ಹಾಡು** **ರಾಗ : ವಸಂತ - ಝಂಪೆತಾಳ**

ಪಾಹಿ ಪರಮಾತ್ಮ ಸುಜನಾತ್ಮ ಸಂತೋಷಣ ॥ ಪ ॥
ದೇಹಾತ್ಮ ವಿಜ್ಞಾನದಾನ ರಿಪುಶೋಷಣ ॥ ಅ.ಪ. ॥
ನಾನಾಚರಾಚರ । ದಾನ ಘನಗಂಭೀರ ।
ಧ್ಯಾನಾರ್ಚನಾನಂದ । ಜನಜಾಲಮಂದಾರ ॥ ೧ ॥
ಪುರುಷತ್ರಯಾಕಾರ । ಪೂರ್ವದೇವನಿವಾರ ।
ದುರಿತೌಘಪರಿಹಾರ । ತುಂಗಸುಖಸಾರ ॥ ೨ ॥
ವೇದಗಾನವಿಲೋಲ । ವಿಶ್ವಪಾಲನಶೀಲ ।
ನಾದಬಿಂದು ಕಳಾದಿ । ನರಹರೇ ಶ್ರೀಲೋಲ ॥ ೩ ॥

## ದೃಶ್ಯ : ಸತ್ಯಲೋಕ
## (ಬ್ರಹ್ಮ ಸರಸ್ವತಿ ಮತ್ತಿತರರು ಇರುವರು)

**ಬ್ರಹ್ಮೇಂದ್ರಾದಿಗಳು : ಹಾಡು** **ರಾಗ : ಪೂರ್ವಿಕಲ್ಯಾಣಿ - ಆದಿತಾಳ**

ವರಮುದಯಾಕರ ಪೊರೆವುದು ಶ್ರೀಶಾ ॥ ಪ ॥
ಸುರಸುಖದಾತಾ । ದುರಿತವಿಘಾತಾ ॥ ಅ.ಪ. ॥
ದುರುಳಜಲಂಧರ । ದುರ್ಮದಮಂದಿರ ।
ಸುರರನುಬಾಧಿಸಿ । ಮೆರೆವನು ದೇವಾ ॥ ೧ ॥
ನಿರುಪಮನಿರ್ಗುಣ । ನಿರ್ಮಲರೂಪಾ ।
ನಿರುತಪಾದಾಶ್ರಿತ । ಭರಣಮುಕುಂದಾ ॥ ೨ ॥

## ದೃಶ್ಯ : ವೈಕುಂಠ ಮಂದಿರ
### (ಲಕ್ಷ್ಮಿ, ವಿಷ್ಣುವಿನ ಯುಗಳ ಗಾನ)

ರಾಗ : ಮಿಶ್ರಮೋಹನ - ಆದಿತಾಳ

ಷ್ಣು : ಲಾಲಿಸು ವಾರಿಧಿತನಯೇ । ಪ್ರಿಯೆ ॥ ಪ ॥
ನೀಲಚಲಾಲಕೆ ನೀರಜನಯನೇ ॥ ಅ.ಪ. ॥
ಜಲಂಧರನು । ಬಲವುವನು । ಗೆಲಿದು ರಣದಿ । ಬಳಲಿಸಿಹನು ॥ ೧ ॥

ಕ್ಷ್ಮಿ : ಅಚ್ಚರಿಯೇನು ಕಾಂತಾ । ಶಾಂತಾ ॥ ಪ ॥
ಸಚ್ಚರಿತನೆ ನಾಂ । ಮೆಚ್ಚುವೆನವನಂ ॥ ಅ.ಪ.॥
ಜಲಂಧರನು । ಬಲವಿಶಾಲನು ॥ ಗೆಲಿದನದರಿಂ । ನಲಿವೆ ನಾನು ॥ ೨ ॥

ಷ್ಣು : ಸುರರರಕಾಡಿ ಮೆರೆವನವನು । ದುರದೊಳವನಂ । ಮುರಿವೆ ನಾನು ॥ ೩ ॥

ಕ್ಷ್ಮಿ : ಅನುಜನೆನಗೆ । ವನಧಿತನುಜಂ । ಮುನಿಯದವನ ತನುವನುಳಿಸು ॥ ೪ ॥

ಕ್ಷ್ಮಿ : ಹಾಡು

ರಾಗ : ಹಿಂದೂಸ್ಥಾನಿಕಾಪಿ - ಆದಿತಾಳ

ಪ್ರಿಯ ಇದೇನು ಕಾರ್ಯವು । ಮದೀಯ ಸೋದರ । ವಧವಿಧಾನವಿದು ॥ ಪ
ಜಲಸಂಜಾತನು । ಬಲುವಿಭ್ರಾಂತನು । ನಲವಂತೋರಿ ಪಾಲಿಸು ನೀಂ ॥
ಲಲನೆಯಾರ್ತಿಯಂ । ಕಳೆದು ಪ್ರೀತಿಯುಂ । ಕಳೆದುಮೋದವನು ನೀಡ್ಕೆ ॥ ೧ ॥

## ದೃಶ್ಯ : ವೈಕುಂಠ ಪ್ರಾಂತ್ಯದ ಬಯಲು

ಜಲಂಧರ : ಕಂದ

ಬಿಗಿವೆಂ ಪಾಶದೆ ಹರಿಯಂ ।
ಬಗೆವೆಂ ಕುಕ್ಷಿಯನೆ ಗಾತ್ರಮಂ ಮಿಗೆಸಿಗಿವಂ ॥
ತೆಗೆವೆಂ ಕರುಳಂ ಮೋದದೆ ।
ನಗುವೆಂ ವರ ವಿಜಯಲಕ್ಷ್ಮಿಯಂ ಕರವಿಡಿವೆಂ ॥

ವಿಷ್ಣು : ಕಂದ

ಕೆಡುಗ ಜಲಂಧರ ನೀನೀ ।
ಬೆಡಗಿನ ನುಡಿ ನುಡಿಯದಮರನಾಥನ ಸಿರಿಯಾ ॥

ಕುಡುತಡಿಗೆರಗಿದೊಡುಳಿಪೆಂ ।
ಪಡಿ ನುಡಿದೊಡೆ ಪೊಡೆಯ ಕಡಿದು ಪೊಡವಿಯೊಳಿರುವೆ ॥

## ದೃಶ್ಯ : ವೈಕುಂಠದ ಮುಂದಣ ಉಪವನ

**ನಾರದ : ಹಾಡು** **ರಾಗ : ಆನಂದಭೈರವಿ - ಆದಿತಾಳ**

ಪರಮದಯಾಕರ ಮಾಧವ । ಸುರನುತ ಸುರಚಿರ ವೈಭವ ॥ ಪ ॥
ಭ್ರಾಂತಿನಿವಾರಣ ಶಾಂತಿನಿಕೇತನ । ಕಂತುಜನಕ ಶ್ರೀ । ಕಾಂತ ಸತತಾವನ ॥ ೧ ॥
ಅಗಣಿತ ಗುಣಯುತ ನಿಗಮನಿಕರ ನುತ । ಖಗಪತಿವರರಥ ।
ನಗವರಧರ ಜಯ ॥ ೨ ॥

## ದೃಶ್ಯ : ವೈಕುಂಠ ಮಂದಿರ

**ವಿಷ್ಣು : ಹಾಡು** **ರಾಗ ..... - ಆದಿತಾಳ**

ತಿಳಿದುದು ನಿನ್ನಯ ಪೌರುಷ ॥ ಪ ॥
ನಳಿನದಳಾಯತನಯನ । ನಲಿಯುವೆಯೇತಕೆ ।
ಗೆಲಿದಿಹೆನೆನುತಲಿ ॥ ಅ.ಪ. ॥
ಘನಬಲಾಢ್ಯನಾವರ । ಜಲಂಧರಂ । ವನರಾಶಿಕುಮಾರಂ ॥
ಎನಗೆಸಹೋದರ । ನೆನಿಸಿಹನಿಂ । ನಿನಗಪಜಯುವೇ ॥ ೧ ॥

**ವಿಷ್ಣು : ಹಾಡು** **ರಾಗ : ಸಾರಂಗ - ಆದಿತಾಳ**

ಸರಸಿಜವದನೇ । ವರಗುಣ ಸದನೇ ॥
ತೆರಳುತೆ ಬೃಂದೆಯ । ನೆರೆ ಪರಿಕಿಪನೇ ॥ ಪ ॥
ಭುವನವಿನುತಮಹಾ । ಧವಳಯಶೋಧರೆ ।
ಯುವತಿ ಯುವಳನಾಂ । ವಿವಿಧೋಪಾಯದಿ ॥ ೧ ॥
ವಿವಿಧಲೀಲೆತೋರಿ । ಜವದಿ ನಿಜವನರಿಯುತೆ ।
ದಿವಿಜಹಿತವನೆಸಗುವೆ ಕುವಲಯದಳಲೋಚನೇ ॥ ೨ ॥

# ಪಂಚಮಾಂಕ

## ದೃಶ್ಯ : ಜಲಂಧರ ನಗರದ ಮುಂದಣ ವನ

(ಮಹಾವಿಷ್ಣು, ನಾರದ ಪ್ರವೇಶಿಸುವರು)

**ನಾರದ : ಹಾಡು** **ರಾಗ : ಮೋಹನ - ಆದಿತಾಳ**

ನೀರಾಕರಶಯ ನಿರಪಾಯ ॥ ಪ ॥
ನಾರಾಯಣ ಸುರಮುನಿಗೇಯ ॥ ಅ.ಪ. ॥
ದಾನವನನು ಕೊಂದಾನಿಗಮವ ತಂದ ।
ಮೀನಾಕೃತಿಧರ । ಶ್ರೀನಾಥಾ ॥ ೧ ॥
ಸಿಂಧುವೊಳಗೆ ಘನ । ಮಂದರವನು ಪೊತ್ತ ॥
ಬಂಧುರಕರ್ಮಠಾ । ಮರವಿನುತ ॥ ೨ ॥
ತರಿದು ಹಿರಣ್ಯನ । ಧರಣಿಯನೆತ್ತಿದ ।
ಪರಮವರಾಹಾ । ಫಣಿಶಯನ ॥ ೩ ॥

## ದೃಶ್ಯ : ಬೃಂದಾದೇವಿಯ ಅಂತಃಪುರ

(ಬೃಂದಾದೇವಿಯ ಜಲಂಧರನ ಭಾವಚಿತ್ರವನ್ನಿಟ್ಟುಕೊಂಡು ಪೂಜಿ ಮಾಡುತ್ತಿರುವಳು)

**ಬೃಂದೆ : ಹಾಡು** **ರಾಗ : ಸಾರಂಗ - ಝಂಪಕತಾಳ**

ಬೃಂದಾಮನೋನಾಥ । ಬೃಂದಾರ [illegible] ॥
ಪ್ರವರಸಾಗರಜಾತ । ಭುವನಗೀತ ಚರಿತ ॥ ಪ ॥
ಕಾರುಣ್ಯ ಸಾರಗಂ । ಭೀರದಿವ್ಯಾಕಾರ ॥
ನಾರೀವಿಲಾಪವಿದ । ನಾರಯೆ ನಿವಾರಿಸೈ ॥ ಅ.ಪ. ॥
ನೀನೆನ್ನ ಮಾಂಗಲ್ಯ । ನಿನತೆನ್ನ ಸೌಭಾಗ್ಯ ।
ನೀನೆನ್ನ ದೈವ । ನಿನತೆನ್ನ ತನುವು ॥
ನೀನೇಮದೀಯಸುಖ । ಮಾನಧನಕೈವಲ್ಯ ।
ಆನಂದದಾತ ಮ । ನ್ಮಾನಸನಿಕೇತನ ॥ ೧ ॥

## ದೃಶ್ಯ : ಕೈಲಾಸದಲ್ಲಿನ ಉಪವನ

**ಬ್ರಾಹ್ಮಣ (ರಾಹು) : ಹಾಡು** **ರಾಗ : ಶುದ್ಧಸಾವೇರಿ - ಆದಿತಾಳ**

ಶ್ರೀಗೌರೀರಮಣಾ । ಶ್ರಿತಪಾಲನಕರುಣ ॥ ಪ ॥
ಯೋಗಿವಿನುತಭವ । ರಾಗರಹಿತ ಘನ । ಭೋಗಮಹಿತ ಜಯ ।
ಭೋಗಿವಿಭೂಷಣ ॥ ಅ.ಪ. ॥
ನಿಗಮ ನಿಕರವಿನುತ ವಿಗತಾಖಿಲದುರಿತ ।
ಸುಗುಣಭರಿತ ಸುಖಸಾಗರ ಸುರನುತ ॥
ಸೂರ್ಯ, ಚಂದ್ರ, ಶಿಖಿಲೋಚನ ಶಂಕರ ॥ ೧ ॥

**ಪಾರ್ವತಿ : ಹಾಡು** **ರಾಗ .... - ಆದಿತಾಳ**

ಪಾಲಯಮಾಂ ಶ್ರೀ । ಫಾಲಲೋಚನ ॥
ನೀಲಕಂಧರ ನಿಗಮಮಂದಿರ ॥ ಪ ॥
ಕಾಲಹರಣ ಸುರ । ಪಾಲನಲೀಲ ॥
ಬಾಲಕಲಾಧರ । ಭಾಸಕಿರೀಟ ॥ ೧ ॥
ಭೂತಿನಿಲಯ ಜಯ । ಭುಜಗಕಲಾಪ ॥
ಶೀತಳವಾಹಿನೀ । ಶೇಖರ ಶಂಭೋ ॥ ೨ ॥

## ದೃಶ್ಯ : ಕೈಲಾಸ ಮಂದಿರ ಮಾರ್ಗ

**ನಾರದ : ಹಾಡು** **ರಾಗ : ಮಾಂಡ್ - ಆದಿತಾಳ**

ಕರುಣಾಸಾಗರ ಕಾಮಜನಕಜಯ ಗಾನಲೋಲಶ್ರೀ ಘನಲೀಲ ॥
ಮಾಯಾಮೋಹಿತ ಸುರಜಾಲ ॥ ಪ ॥
ವೇದಗೋಚರ ವಸುಧಾಧಾರ ಮೋದವಿತರಣ ಮುನಿಶರಣ ॥ ಅ.ಪ. ॥
ಮಹಿಮಾಕರಶ್ರೀ ನಾನಾಲೀಲ ಮಾನಿತಶೀಲಾ ನಂದವಿಶಾಲ ॥
ಮಧುಸೂಧನಶ್ರೀ ಮಾನಿನೀಲೋಲ ಭವಸಂತಾರಣ ಶುಭಶೀಲ ॥ ೧ ॥
ನಾಕಲೋಕ ಸುಖದಾತ ಪೂರ್ವಸುಪರ್ವಾ ನೀಕವಿಘಾತ ।
ನಾಕಾಧೀಶ್ವರ ಗೀತಪ್ರತಾಪ ನರಹರಿ ಭಾಸುರನವರೂಪ ॥ ೨ ॥

## ದೃಶ್ಯ : ಕೈಲಾಸ ಉಪವನ ಪ್ರದೇಶ

**ಪಾರ್ವತಿ : ಹಾಡು** **ರಾಗ : ಪಹಾಡಿಮಾಂಡ್ - ಆದಿತಾಳ**

ಮಾಲೆಯನೆಸಗಿದೆ ನೋಡೆ ಸಖಿ ॥ ಪ ॥
ಬಾಲಸುಧಾಕರ ಭಾಸ ಶಿವನಿಗೆ ॥ ಅ.ಪ. ॥
ನರ್ತನಲೀಲಾ ಮೂರ್ತಿಗೆ ಪೂಜಾ ।
ಪ್ರಾರ್ಥನೆ ಮಾಡುತಲಿದಭೂಷಿಪೆ ॥ ೧ ॥
ಕಾಂತನು ನೋಡಿ । ಸಂತಸಗೂಡಿ
ಸ್ವಾಂತದೆ ಮೆಚ್ಚಲು ಸುಖಮಾಂಪೆನು । ೨ ॥

**ಜಲಂಧರ : ಹಾಡು** **ರಾಗ : ಕಲ್ಯಾಣಿ - ರೂಪಕತಾಳ**

ಕಂಡೆನಿಂದು ಪೂರ್ಣಚಂದ್ರ ಮಂಡಲಾನನೆಯ ॥ ಪ ॥
ಪುಂಡರೀಕಚಾರುನೇತ್ರೆಯ । ಕುಂಡಲೀಕಚ ಮಂಡಲೆಯನು ॥ ಅ.ಪ. ॥
ಮುದದೀಪರಿ ವಿಧುವದನದ ।
ಮಧುರಹಾಸಬೀರಿನಲಿದು ॥ ಸುಂದರೀಮಣಿ ॥ ೧ ॥
ಕುಂಜರವರಸಮ ಗಮನದೆ ಕುಲುಕುತ
ಬಳಕುತ ಚಲಿಸುತ ॥ ಲಲಿತೆಯು
ಸಖಿಯರೊಳೆಸವಳು । ಲಿಲಿತವಾಣಿ ।
ಜಲಜಪಾಣಿ । ಚೆಲುವಿನಗಣಿ । ಸ್ಮರಸರಗಿಣಿ ॥ ೨ ॥

**ಜಲಂಧರ : ಕಂದ**

ಪೂರ್ಣ ಸುಧಾಕರವದನೇ
ಕರ್ಣಾಂತ ವಿಶಾಲನಯನೆ ಕರಿವರಗಮನೇ ॥
ಸ್ವರ್ಣರುಚಿರುಚಿರೆ ವಿದ್ರುಮ ।
ವರ್ಣಾಧರೆ ಬಾರೆ ಗೌರಿ ಶಿಖರಿ ಕುಮಾರೀ ॥

**ಶಂಕರ : ಕಂದ**

ದುಷ್ಟ ಜಲಂಧರ ನಿನ್ನಂ ।
ಮುಷ್ಟಿಯೊಳಾಂ ಕುಟ್ಟಿ ಮೆಟ್ಟಿ ನಿನ್ನಯ ತನುವಂ ॥

ಪಿಷ್ಟಮನೆಸಗುತೆ ಸುರಕುಲ ।
ಕಷ್ಟವ ಪರಿಹರಿವೆ ನೆಲವೊ ಮಾತೃದ್ರೋಹೀ ॥

## ದೃಶ್ಯ : ಬೃಂದೆಯ ಭವನದ ಮುಂದಣ ಉಪವನ

**ವಿಷ್ಣು, (ಜಲಂಧರ) : ಹಾಡು** **ರಾಗ : ಜಂಜೂಟಿ - ಆದಿತಾಳ**

ರಾರಾಜಿಸುವಳೀ ವನವನಿತೆ ॥ ಪ ॥
ಬೀರುತೆ ಸೊಬಗಂ । ನೀರೆ ನಿನ್ನವೋಲಿಂ ॥ ಅ.ಪ. ॥
ಅಳಿಮೃದುಗಾನದಿಂ । ಗಿಳಿಗಳಾಲಾಪದಿಂ ॥
ದಳಿತಸುಮಾವಳಿ ಹಾಸದಿಂ ॥ ೧ ॥
ಪರಿಮಳಭರದಿಂ । ಮೆರೆವ ಲತಾಂಗದಿಂ ॥
ಪರಮಶುಭಾಕರ ರೂಪದಿಂ ॥ ೨ ॥

**ಬೃಂದೆ : ಹಾಡು** **ರಾಗ : ಶುಭಪಂತುವರಾಳಿ - ಆದಿತಾಳ**

ರಮಣಾ । ಸುಗುಣಾ । ಭರಣಾ । ಹರಣ । ನೀಗಿದೆ ॥ ಪ ॥
ರಮಣೀ । ಹೃದು । ಕಮಲಂ । ಬೆಂದುದೇ ॥ ಅ.ಪ. ॥
ದಹಿಪುದುಮನವು ಸಹಿಪೆನೇ ವ್ಯಥೆಯಂ ॥
ಅಹಿತರಾರಿಂದನೀಂ । ನಿಹತನಾಗಿರ್ಪೆ ಹಾ ॥ ೧ ॥
ಉರಿಯೆಮಾಂಗಲ್ಯವು । ಪರಿಯೆ ಸೌಭಾಗ್ಯವು ।
ಧರೆಯೊಳೀ ಪ್ರಾಣವ । ನ್ನಿರಿಸೆನುನಾಥಾ ॥ ೨ ॥

## ದೃಶ್ಯ : ಜಲಂಧರ ನಗರದಲ್ಲಿ ವಿಷ್ಣು ಸಾಲಿಗ್ರಾಮವಾಗಿರುವ ಪ್ರದೇಶ

**ಬೃಂದೆ : ಹಾಡು** **ರಾಗ : ಯಮನ್ - ಆದಿತಾಳ**

ಕ್ಷಮಿಸಪರಾಧವ । ಕಮಲಾರಮಣಾ ॥ ಪ ॥
ಸಮಿಸುವೆನಿಂದಾ । ಗಮಿಪುದು ಶಿಲೆಯಿಂ ॥ ಅ.ಪ. ॥
ಕಾಂತನನಳಿದಾ । ಚಿಂತೆಯ ಬೇಗೆಯಿಂ ।
ದಂತುರೆ ಶಪಿಸಿದೆ ಲೀಲಾಸದನಾ ॥ ೧ ॥

ಶಾಂತಗುಣಾಕರ । ಶತಮಖವಿನುತ ।
ಕಾಂತೆಯ ಮನ್ನಿಸು । ಕರುಣಾಭರಣ ॥ ೨ ॥

## ಮಂಗಳ

**ಎಲ್ಲರೂ** **ರಾಗ : .... - ರೂಪಕತಾಳ**

ಶಿವಗೆ ಮಂಗಳಂ ರಮಾ ಧವಗೆ ಮಂಗಳಂ ।
ಕಮಲ ಭವಗೆ ಮಂಗಳಂ ॥ ಪ ॥
ಅವನಿಧರಸುತಾಸುಲೀಲ । ನವಕುಮುದದಲಾಭನೀಲ
ಸುವಿಮಲ ವಾಣೀವಿಲೋಲ ॥
ಪುರಹರಗೆ । ನರಹರಿಗೆ । ವರವಿಧಿಗೆ ॥ ಅ.ಪ. ॥
ಸಾಧುಜಾಲ ಸೌಖ್ಯಮೂಲ । ವೇದಗೀತ ಸುಗುಣಮಾಲ ।
ಭೇದರಹಿತ ವಿಜಿತ ಕಾಲ ।
ನಾದಮಹಾ । ನಾದಕಲಾ । ನಂದಮಯ ॥ ೧ ॥



# ಅಂಬರೀಷ


ಅಭಿನಯ ಕಲಾಧೀಮಂತ
ಎಂ.ವಿ. ಸುಬ್ಬಯ್ಯನಾಯ್ಡು


ಪ್ರತಿಭಾನ್ವಿತ ಅಭಿನೇತ್ರಿ
ಲಕ್ಷ್ಮೀಬಾಯಿ

ಪ್ರಾರ್ಥನೆ : ಹಾಡು — ರಾಗ : ಕಲ್ಯಾಣಿ - ಆದಿತಾಳ

ಶಂಭೋ ಮಹಾದೇವ ಸಾಂಬ ಸದಾಶಿವ
ಪ್ರಮಥರಿಗೊಡೆಯ ಪಾರ್ವತಿ ರಮಣ ॥ ಪ ॥
ಗಿರಿಜಾರಮಣ ತ್ರಿಪುರ ಸಂಹಾರ ಕರುಣಾನಿಧಿ ಕಾಯೊ
ಸರ್ವಕಾಲದಿ ಪರಮಪಾವನ ಪಾರ್ವತೀಶನೇ
ಚರಣವ ನಂಬಿದೆ ಕರುಣದಿ ಪೊರೆಯೈ ॥ ೧ ॥

## ದೃಶ್ಯ : ರಸ್ತೆ

ಸೂತ್ರಧಾರ: ವೃತ್ತ ॥ — ರಾಗ : ನಾಟಿ

ಪುರುಷನದೊರ್ವ್ವನೆಲ್ಲಮುಮನಾವರಿಸಿರ್ದಪನೆಂದಪರ್‌ ತ್ರಯೀ ।
ಶಿರದೊಳಭಿಜ್ಞರಾವನ ನನನ್ಯಗಮೀಶ್ವರಶಬ್ದಮರ್ಥವ ॥
ತ್ತರಮೆನಿಸಿರ್ಪ್ಪುದಾವನೊಳೆ ಮೋಕ್ಷಕೆಮಾರ್ಗವರಾವನಂ ಹೃದಂ ।
ತರದೆ ಯಮೀಂದ್ರರಾಶಿವನೊಡಚ್ಚುಗೆ ಭಕ್ತಿವಶಂಮದಿಷ್ಟಮುಂ ॥

ಸೂತ್ರಧಾರ : ಹಾಡು — ರಾಗ : ಕಲ್ಯಾಣಿ - ರೂಪಕತಾಳ

ಪರಮಪಾವನ ಶ್ರೀರಮಣ ನತಜಾಲಭರಣ ॥ ಪ ॥
ಚರಣ ಸೇವಕಾದರಣ ಶಾಶ್ವತ ಸುಖಭವಕಾರಣ ॥ ಅ.ಪ. ॥
ಕಮಲಲೋಚನ ಕಾವ್ಯತತಿ ಕಲ್ಪಕುಜ ಕಾಂಚನ ಭೂಷಣ
ಶಮದಮಗ ಕುಲೋದ್ಧರಣಾ ನಾರದ ಸಂಗೀತ ಗುಣ ॥ ೧ ॥

ಸದಾನಂದಮಯ ಸದಯಾ ಸಾಂದ್ರಲೀಲಾ ಸಾಧುಸುಖದ
ವಿಧಾತೃ ಮುಖವಂದ್ಯ ವಿಶ್ವಮಯ ಪೊರೆ ಶ್ರೀಶ ॥ ೨ ॥

**ಸೂತ್ರಧಾರ : ಹಾಡು** **ರಾಗ : ಮೋಹನ - ಆದಿತಾಳ**

ಸುಜನ ಜನಾವನನೇ ಗಜಾನನ
ಸುರನುತ ವಂದಿತನೇ ಗಜಾನನ ॥ ಪ ॥
ಮೋದ ಪ್ರಿಯಕರ ಮೂಷಕ ವಾಹನ
ಮುದವ ನೀಡು ಗಜವದನಾ ಆ ಆ ಆ
ಪರತರ ಮಾರ್ಗನೇ ಪಾರ್ವತಿತನಯನೆ
ಪರಮ ಪವಿತ್ರನೇ ಗಜಾನನ ॥ ೧ ॥

## ದೃಶ್ಯ - ಅರಮನೆ

**ರಮಾಕಾಂತ : ಹಾಡು** **ರಾಗ : ಷಣ್ಮುಖಪ್ರಿಯ - ಆದಿತಾಳ**

ಭೋಗವಿಲಾಸ ಜಗದೇ
ಭವ್ಯವಾದ ಭಾಗ್ಯ ಬಗೆಗೊಳಿಸೆ ॥ ಪ ॥
ಬಹುರಾಗವಿಲಾಸ ಜಗದೇ ಸೊಗಸೇ ॥
ನೋಡಿ ನಲಿನಲಿವೇ ವಿಹರಿಪೇ ॥ ಅ.ಪ. ॥
ಸಾರಿಕೆ ಸ್ವರ್ಗಸುಖ ತೋರುವ ಮಾನವಗೇ
ಧರೆಯೊಳಗೆ ತೋರುವಾನಂದಪಿದೇ ॥ ೧ ॥

## ದೃಶ್ಯ - ಅರಮನೆಯಲ್ಲಿ ಪ್ರಾರ್ಥನಾಮಂದಿರ

**ಅಂಬರೀಷ : ಹಾಡು** **ರಾಗ : ಬಿಲಹರಿ - ಖಂಡಚಾಪುತಾಳ**

ಪರಮಾತ್ಮ ಸಾಧಕರ ಕುಲಕೇಳ್ವರೋ
ಪರಮಾತ್ಮ ನಾವಕುಲವೆಂದಾರು ಪೇಳರೋ ॥ ಪ ॥
ಹರಿಯಪಾದದಿ ಜನಿಸಿ ।
ಧರೆಯನುದ್ಧರಿಸುವಳು ।
ಪರಮಪಾವನಗಂಗೆ ।

ಕುಲಗೋತ್ರವೆಣಿಸುವಳಿ ॥ ೧ ॥
ಜಗಕೆಲ್ಲ ಕಣ್ಣಾದ ರವಿಗಾವಗೋತ್ರ ।
ಮೃಗಧಾರಿ ಚಂದ್ರನು ಅವನಾವ ಪಾತ್ರ ॥
ಜಗಕೆ ಹಿತಕರವಾಯು ಅವಗಾವ ಸೂತ್ರ ।
ಮಿಗಿಲಾದ ಸುಗುಣವೇ ಸಜ್ಜನರ ಕುಲಗೋತ್ರ ॥ ೨ ॥

## ದೃಶ್ಯ - ಅರಮನೆಯ ಸಭಾಂಗಣ

**ಅಂಬರೀಷ : ಸೀಸಪದ್ಯ** **ರಾಗ : ಆನಂದಭೈರವಿ / ಕೇದಾರಗೌಳ**

ಮರೆವರೇ ಭಕುತರನು ನಾಸ್ತಿಕತೆಯಿಂ ।
ಆಸ್ತಿಕತೆಯಳಿದು । ಸಾರಸಾಕ್ಷ ॥
ಪರಮಕರುಣಾಸಿಂಧು । ದುರಿತ ದೂರನೆಂದು ।
ನೆರೆನಂಬಿ ಭಜಿಸುತಿಹೆ । ಹರಿ ಏಕೆ ಮರೆತೆ ॥
ದೂರ್ವಾಸ ಮುನಿಗಳ । ದುಶ್ಯಾಪ ಉರವಣಿಸಿ
ದಾರಿಕಾಣದೆ ಬಳಲಿ । ತೊಳಲುತಿದೆ ರಾಜ್ಯ
ಘೋರ ಕ್ಷಾಮದ ದೆಸೆಯಿಂ। ಪಾರುಗಾಣದೆ ಜನತೆ
ನರಳುತಿಹ ಈ ಪರಿಯ ನಾ ನೋಡಲಾರೆ ॥

## ದೃಶ್ಯ - ರಮಾಕಾಂತನ ಅಂತಃಪುರ

**ರಮಾಕಾಂತ : ಕಂದ**

ಸುಮಕೋಮಲಾಂಗಿ ಎನುತ ಕಾಮಿಸಿ
ಭ್ರಮಿಸಿದೆ ಬರಿದೇ
ಸುರಚಿರ ಹಾರವೆನುತ ಉರಗನನಾಪಿಡಿದೇ
ಬರಿದೇ ಭ್ರಮೆಯೊಳು ಮೆರೆದೇ

**ರಮಾಕಾಂತ : ಹಾಡು** **ರಾಗ : ರಂಜನಿ - ಆದಿತಾಳ**

ಲೋಕಸುಖ ವ್ಯಾಕುಲಮಯ ಜೀವ ॥ ಪ ॥
ಹರೆಯವಳಿಸಿ ಜರೆಯಾವರಿಸಿ ಮರಣವ ಪಡೆಯುವ ॥ ಅ.ಪ. ॥

ಎಲುಬುಗೂಡನು ಚೆಲುವೆಂದೆನುತ
ನಲಿವುದೇ ಭ್ರಮಿಸಿ ಬರಿದೇ
ಸತಿ ಸುತ ಸದನಾ ಭ್ರಾಂತಿಯನೆಲ್ಲ
ಈಡಾಡೋ ಮಾನವಾ ದಾರಿಕಾಣೆನೋ ಓ ಜೀವಾ ॥ ೧ ॥
ವ್ಯಾಮೋಹವೇ ಸುಖದನೆಲೆ ಕಾಣದಾ ಬಾಳಿಗೆ
ಈ ಮೋಹದೇ ಮೈಮರೆವೆ ಮಾನವಾ
ದಾರಿಕಾಣೆನೋ ಓ ಜೀವಾ ॥ ೩ ॥

### ದೃಶ್ಯ - ಅರಮನೆ - ಪ್ರಾರ್ಥನಾಮಂದಿರ

**ಅಂಬರೀಷ-ಪದ್ಮಾವತಿ : ಹಾಡು** **ರಾಗ : ತೋಡಿ - ಆದಿತಾಳ**

**ಅಂಬರೀಷ :** ಸಕಲ ಕಲ್ಯಾಣ ಗುಣಸಾಗರ
ಪ್ರಕಟಿತ ವಿವಿಧಾಕಾರ ॥ ಪ ॥
ಅಕುಟಿಲ ನಾನಾವತಾರ
ನಿಖಿಲ ಕಲ್ಪನಾದೂರ ॥ ಅ.ಪ. ॥
ಆದಿಮಧ್ಯಾಂತ ರಹಿತನು ನೀನೇ
ವಾದಕೆ ಸಿಲುಕದ ಮಹಿಮನು ನೀನೇ ।
ಸಾಧು ಸೇವೆ ಸಕಲಾಗಮಸನ್ನುತ ।
ಭೇದರಹಿತ ಪರಮಾತ್ಮನು ನೀನೇ ॥ ೧ ॥

**ಪದ್ಮಾವತಿ :** ಪಾದವನಂಬಿಹೆವೈ ದೇವಾ ।
ಸಾಧುಜನೋದ್ಧಾರ ನೀ ದಯವಂ ತೋರೈ ।
ನಾದಸ್ವರೂಪನೆ ವೇದೋದ್ಧಾರ ।
ಸದಯ ಹೃದಯ ಶ್ರೀ ಪಾವನನಾಮ ॥ ೨ ॥

### ದೃಶ್ಯ - ಅರಮನೆ (ಏಕಾದಶಿವ್ರತವನ್ನು ಮಾಡುತ್ತಿದ್ದ ಸ್ಥಳ)

**ಅಂಬರೀಷ : ಹಾಡು** **ರಾಗ : ಯಮನ್ ಕಲ್ಯಾಣಿ - ಆದಿತಾಳ**

ಶೌರೇ ಮುರಾರೇ ಹರೇ ಜಯಜಯ
ಶೌರೇ ಮುರಾರೇ ಹರೇ ॥ ಪ ॥

ಕಾಮಿತ ದಾತಾ । ಕವಿಜನ ಪ್ರೀತಾ ।
ಪದ್ಮ ಸಮೇತ । ಪದ್ಮಜ ತಾತಾ ॥ ೧ ॥

## ಮಂಗಳ

ರಾಗ : ಯಮನ್ ಕಲ್ಯಾಣಿ - ಆದಿತಾಳ

ಜಯ ಜಯ ಶುಭಕರ ಜನ್ಮ ಜರಾಹರ ॥ ಪ ॥
ಭಯದೂರಸುಕರ ಕೃಪಾಕರ ॥ ಅ.ಪ. ॥
ಈಶ ಮಹಾಭವಪಾಶವಿನಾಶಕ ಕ್ಲೇಶ ನಿವಾರಕ ನಾಶವಿರಹಿತ ॥ ೧ ॥
ಮಂಗಳರೂಪ ವಿಹಂಗವರೂಢ ತುಂಗ ಖಲಾನ್ವಿತ ಭಂಗರ ಹಿತ ಜಯ ॥ ೨ ॥
ಮಂಗಳಾಂಗ ಮಹಿಮಾನ್ವಿತ ಶುಭಕರ ಸಂಗದೂರ ಮಾತಂಗವರದ ಹರಿ ॥ ೩ ॥



# ಶಾಕುಂತಲ


ಅಭಿನವ ಕಾಳಿದಾಸ
**ಬಸವಪ್ಪಶಾಸ್ತ್ರಿಗಳು**


ಅಭಿನಯ ವಿಶಾರದೆ
**ಮಳವಳ್ಳಿ ಸುಂದರಮ್ಮ**

**ಪ್ರಾರ್ಥನೆ : ಹಾಡು** **ರಾಗ : ಉದಯಚಂದ್ರಿಕೆ - ಆದಿತಾಳ**

ನಮೋ ನಮೋ ವಿಘ್ನರಾಜಾ ॥ ಪ ॥
ಸುರಮುನಿ ವಂದಿತ ದೇವ
ವರಭಕ್ತ ಜನಾವನ ಭಾವ
ಶಿವ ಶಂಭು ಪುತ್ರ ನೀ ಕಾವ
ಆದಿಪೂಜಿತಂ ಅಮರವಂದಿತಂ ॥ ೧ ॥

**ದೃಶ್ಯ : ರಸ್ತೆ**

**ಸೂತ್ರಧಾರ : ವೃತ್ತ** **ರಾಗ : ನಾಟಿ**

ಅಗಜಾನನ ಪದ್ಮಾರ್ಕಂ ಗಜಾನನ ಮಹರ್ನಿಶಂ
ಅನೇಕದಂತಂ ಭಕ್ತಾನಾಂ ಏಕದಂತಮುಪಾಸ್ಮಹೇ

**ಸೂತ್ರಧಾರ : ಹಾಡು** **ರಾಗ : ಹಂಸಧ್ವನಿ - ಆದಿತಾಳ**

ವಾತಾಪಿ ಗಣಪತಿಂ ಭಜೇಹಂ
ವಾರಣಾ ಸ್ಯ ವರ ಪ್ರದಂ ಶ್ರೀ ॥ ಪ ॥
ಭೂತಾದಿ ಸಂಸೇವಿತ ಚರಣಂ
ಭೂತಭೌತಿಕ ಪ್ರಪಂಚಭರಣಂ
ವೀತರಾಗಿಣಂ ವಿನುತಯೋಗಿಣಂ
ವಿಶ್ವಕಾರಣಂ ವಿಘ್ನವಾರಣಂ ॥ ಅ.ಪ. ॥

ಪುರಾಕುಂಭ ಸಂಭವಮುನಿವರಂ
ಪ್ರಪೂಜಿತಂ ತ್ರಿಕೋಣ ಮಧ್ಯಗತಂ ಮುರಾರಿ ಪ್ರಮುಖದ್ಯುಪಸ್ಥಿತಂ
ಮೂಲಾಧಾರ ಕ್ಷೇತ್ರಾಸ್ಥಿತಂ ಪರಾಧಿಚತ್ವಾರಿವಾಗಾತ್ಮಕಂ
ಪ್ರಣವ ಸ್ವರೂಪ ವಕ್ರ ತುಂಡಂ
ನಿರಂತರಂ ನಿಟಿಲ ಚಂದ್ರಖಂಡಂ ನಿಜವಾಮಕರ ವಿದ್ರುತೇಕ್ಷುದಂಡಂ
ಕರಾಂಬುಜಪಾಶ ಬೀಜಾಪೂರಂ ಕಲುಶವಿದೂರಂ ಭೂತಾಕಾರಂ
ಅನಾದಿ ಗುರುಗುಹತೋಷಿತಬಿಂಬಂ ಹಂಸಧ್ವನಿಭೂಷಿತ ಹೇರಂಭಂ ॥ ೧ ॥

**ಸೂತ್ರಧಾರ : ಹಾಡು** — **ರಾಗ : ಜಿಂಗಲಾ - ಆದಿತಾಳ**

ಪಾಲಿಸೋ ಕರುಣಾಸಾಗರ
ಮುರಹರಲೋಲ ಭುಜಗಶಯನ ॥ ಪ ॥
ಶ್ರೀ ಲಕ್ಷ್ಮೀಕುಚ ಕುಂಕುಮ ರಂಜಿತ
ಫಾಲನಯನ ಕರುಣ ॥ ಅ.ಪ. ॥
ದಿವ್ಯ ಕೌಸ್ತುಭರತ್ನ ವಿರಾಜಿತ
ಭವ್ಯ ಸುವನಮಾಲ
ಸ್ತವ್ಯ ಗುಣಾರ್ಣವ ದಿವ್ಯ ಪೀತಾಂಬರ
ನವ್ಯ ಸುಕಾಂತಿಯುತ ॥ ೧ ॥
ಚಂಡದನುಜವರಖಂಡನ ನಿರ್ಮಲ
ಪುಂಡರೀಕನಯನ
ಚಂಡಕಿರಣ ಕರಮಂಡಲ ಭಾಷಿತ
ಕುಂಡಲ ದ್ಯಂತಿ ವದನ ॥ ೨ ॥

**ಸೂತ್ರಧಾರ : ಹಾಡು** — **ರಾಗ : ಬೇಗಡೆ - ಆದಿತಾಳ**

ಪೊರೆಯ್ಯೆಯ್ಯ ಶ್ರೀ ವರಯೆನ್ನ ನೀನು ॥ ಪ ॥
ಶರಣಾಗತ ಜನಪಾಲಕ ॥ ಅ.ಪ. ॥
ಶೇಷಶಾಯಿನತ ಪೋಷವೇದನುತ
ದೋಷದೂರಪೂತ ಶ್ರೀಶನಂದಜಾತ ॥ ೧ ॥
ದೀನರಾಪ್ತ ಸುರಧೇನು ನೀನು ವರಮಾನುರಾಗದೊಳ್
ಮಾನಿಸೋ (ಪಾಲಿಸೋ) ಕೃಪಾಳು ॥ ೨ ॥

**ದುಷ್ಯಂತ : ಹಾಡು** **ರಾಗ : ಹಂಸಧ್ವನಿ - ರೂಪಕತಾಳ**

ಎಂತು ನಾಂಬಣ್ಣಿಪೆ ನೀವನ ಕಾಂತಾರದಂದವ ॥ ಪ ॥
ಸ್ವಾಂತಕೆ ಸುಸ್ವಾಂತ ಗೈಯ್ಯುತ ಕಾಂತಿಯಿಂದಲೆ ಕೂಡಿಮೆರೆವುದ ॥ ಅ.ಪ. ॥
ಪೇಳಲಸದಳ ತೋಳುವಾರ್ವುದು ಮೇಲುಬರ್ವುದು ಪೇಳ್ವವೋಲ್
ಬಾಲೆ ತಾನನು ಕೂಲೆಯಾಗಿರೆ ಲೀಲೆಯಿಂದಲಿ ಕೂಡಿ ಮೆರೆವುದ ॥ ೧ ॥

**ರಾಗ : ಹಿಂದೂಸ್ಥಾನಿಕಾಪಿ - ದೇಶಾದಿತಾಳ**

ನೀರೆಯಲ್ಲಿ ಮೋಹವಾಂತೆನೋ ॥ ಪ ॥
ತಿಳಿದಿರ್ಪೆ ನಾಂ ಮೌನಿಯ ಬಾಲಕಿ ಈಗಳೇ
ಸುಲಭದಿ ದೊರಕೊಳ್ಳಳೋ ॥ ೧ ॥

**ರಾಗ : ಬೇಹಾಗ್ - ತಾಳ ....**

ಸುಮಬಾಣನೇ ನೀನು ಸಾಮಾನ್ಯನೇ ॥ ಪ ॥
ನಿನ್ನ ಪುಷ್ಪಬಾಣವು ಏನು ವಜ್ರತ್ರಾಣವು
ಭಿನ್ನತಂತ್ರ ವಿದ್ಯಾಭಾವಿ ಎನ್ನನೇಕೆ ಬಾಧಿಪೆ ॥ ೧ ॥

**(ದುಶ್ಯಂತ - ಶಕುಂತಲೆಯರ ಯುಗಳ ಗೀತೆ)**

**ರಾಗ : ಸುರುಟಿ - ರೂಪಕತಾಳ**

**ದುಷ್ಯಂತ :** ನಾಗವೇಣಿ ನಗರಿಗೆ ನಾಂ ಪೋಗಿ ಬರುವೆನೆ
ಅರಸುತನದ ಕಾರ್ಯವೆನ್ನ ತ್ವರಿತಗೊಳಿಪುದು
ಹರುಷದಿಂದ ಕಳುಹಿಸುನೀಂ ಮರುಗಲಾಗದು ॥ ಪ ॥

**ಶಕುಂತಲ :** ಇಂದು ಪೇಳಿಪೋಗಿ ಸೇರಲ್ ಅಂತಃಪುರವನು
ಅಂತರಂಗವೆಂತಿಹುದೋ ಕಾಂತ ಕಾಣೆನು ॥ ೧ ॥

**ದುಷ್ಯಂತ :** ಅರಸಿ ನಿನ್ನ ಅಗಲಿ ನಿಮಿಷ ಇರಲು ಒಲ್ಲೆನೇ
ಕರೆಸಿಕೊಂಬೆ ಬೇಗ ನಿನ್ನ ಸರಸಿಜಾನನೇ ॥ ೨ ॥

**ಶಕುಂತಲ :** ತಡೆಯಲಾರೆ ನಿನ್ನನು ನಾಂ ಬಿಡಲಾರೆನೋ
ಪೊಡವಿಗೊಡೆಯ ಪೋಪೆಯಾ ಸಂಗಡಲೇ ಬರುವೆನೋ ॥ ೩ ॥

## ಮಂಗಳ

**ರಾಗ : ಭೈರವಿ - ಆದಿತಾಳ**

ಜಯಜಯ ಜಗದೀಶಾ ಸರ್ವೇಶಾ
ಜಯಶಶಿಮೌಳಿ ಜಯಕಾಪಾಲಿ ॥ ಪ ॥
ಮಂಗಳ ಮೂರ್ತಿ ಭೃಂಗೀವರಸ
ಗಂಗಾಹಿರಿಸುತ ಸಂಗತ್ರಿಲೋಚನ ॥ ಅ.ಪ. ॥
ನಾಗರತ್ನಧರ ನಿರ್ಮಲ ಮೋಹನ
ಕರುಣಾಭರಣ ಪಾತಕದಮನ
ಸುರನರಸೇವಿತ ಸುರೇಶವಂದಿತ ॥ ೧ ॥



# ಸತ್ಯಹರಿಶ್ಚಂದ್ರ



'ಪದ್ಮಶ್ರೀ' ಕಲಾತಪಸ್ವಿ
**ಆರ್. ನಾಗೇಂದ್ರರಾವ್**

ಮೂಲ : ಕವಿ **ರಾಘವಾಂಕನ** ಹರಿಶ್ಚಂದ್ರ ಕಾವ್ಯ ಮತ್ತು
ನಾಟಕಕಾರ : **ಎನ್.ಡಿ. ಬಜ್ಜಣ್ಣನವರು**, ನೆಲವಾಗಿಲು

**ಪ್ರಾರ್ಥನೆ : ಹಾಡು** **ರಾಗ : ಮೋಹನ - ಆದಿತಾಳ**

ಜಯ ಜಯ ಜಯ ಓಂ ವಿನಾಯಕ
ಜಯ ಶುಭ ಫಲದಾಯಕ ॥ ಪ ॥
ಪ್ರಶಾಂತನಿಲಯ ವಾಸ ಈಶ ಪ್ರೀತಿನೀಂ ಗಣೇಶ
ಸದಾ ನಿನ್ನ ಧ್ಯಾನದಿಂದ ದುರಿತವೆಲ್ಲ ನಾಶ । ಈ ದುರಿತವೆಲ್ಲ ನಾಶ,
ನಿನ್ನ ನೆನವವದೊಂದೆ ನಮಗೆ ಭವದ ಮೋಕ್ಷ ಸಾಧನ
ಸನ್ನುತಾಂಗ ದೀನ ಬಂಧು ಪಾಲಿಸೈ ಗಜಾನನ, ಪಾಲಿಸೈ ಗಜಾನನ ॥ ೧ ॥

## ದೃಶ್ಯ : ರಸ್ತೆ

**ಸೂತ್ರಧಾರ : ಷಟ್ಪದಿ** **ರಾಗ : ನಾಟಿ**

ಶ್ರೀಪತಿಗೆ ಸೊಬಗನುಡುಪತಿಗೆ ಶಾಂತಿಯನು ವಾ
ಣೀಪತಿಗೆ ಚಾತುರ್ಯಮಂ ದಿವಸ್ಪತಿಗೆ ಪ್ರ
ತಾಪಮಂ ಸುರಪತಿಗೆ ಭೋಗಮಂ ರತಿಪತಿಗೆ ಮೂಲೋಕವಾವರಿಸುವ ।
ರೂಪಂ ಸರಿತ್ಪತಿಗೆ ಗಂಭೀರತೆಯನು ಸ್ವಾ
ಹಾಪತಿಗೆ ತೇಜಮಂ ಕೊಟ್ಟ ಗುರುಮೂರ್ತಿ
ಪಂ ಪಾಪತಿ ವಿರೂಪಾಕ್ಷನೆಮಗಿಷ್ಟಸಿದ್ಧಿಯಂ ಮಾಳ್ಕೆ ಸಂತೋಂಪದಿಂದ ॥

**ಸೂತ್ರಧಾರ : ಕಂದ**

ಸತ್ಯಮೂಲಾನಿಧರ್ಮಾಣಿ ।
ಸತ್ಯ ನ್ನಾಸ್ತಿಂ ಪರಂಪದಂ

ಸತ್ಯೇನ ಲೋಕಾನ್ ಜಯತಿ।
ಸತ್ಯೇ ಸರ್ವಂ ಪ್ರತಿಷ್ಠಿತಂ ॥

**ಸೂತ್ರಧಾರ : ಹಾಡು** **ರಾಗ : ಕಲ್ಯಾಣಿ - ಆದಿತಾಳ**

ನೀರಜಾಕ್ಷಿ ನಿನ್ನ ನಂಬಿದೆ
ಅರವಿಂದ ತನುಜಾತೆ ಪರತರ
ಸುಚಾರಿತ್ರೆ ॥ ಪ ॥
ನೀಡು ಧ್ಯಾನವನ್ನ ನಿರತಪಾಲಿಸೆನ್ನ
ಸುರನರಸೇವಿತೆ ಮನುಮುನಿಪೂಜಿತೆ ॥ ಅ.ಪ. ॥
ಪರಮಜ್ಞಾನಪೂರ್ಣೆ ವೀಣಾವಾಣಿ ಸುಗುಣೆ
ಚಂದ್ರಬಿಂಬ ಕೋಮಲೆಯೆ ನಾರದ ಜನನಿಯೆ ॥ ೧ ॥

**ಸೂತ್ರಧಾರ : ಹಾಡು** **ರಾಗ : ಕಲ್ಯಾಣಿ - ಆದಿತಾಳ**

ಸತ್ಯವೆ ಸಕಲಾಧಾರವು ಜಗಕೆ
ಸತ್ಯವೆ ಮೂಲವು ಸಕಲರೇಳಿಗೆಗೆ ॥ ಪ ॥
ಸತ್ಯವೆ ಸ್ವರ್ಗದ ಪ್ರಥಮ ಸೋಪಾನ
ಸತ್ಯವೆ ದೈವವು ಮೆಚ್ಚುವ ಸುಗುಣ ॥ ೧ ॥
ಸತ್ಯವೆ ಪಾಪದ ನಾಶಕೆ ಕಾರಣ
ಸತ್ಯವೆ ಮನುಜರ ಸಕಲಾಭರಣ
ಸತ್ಯವೆ ಕೊಡುವುದು ಸಕಲ ಕರುಣ
ಸತ್ಯವೆ ತೋರ್ಪುದು ಶ್ರೀ ಹರಿಚರಣ ॥ ೨ ॥

## ದೃಶ್ಯ : ದೇವೇಂದ್ರನ ಒಡ್ಡೋಲಗ

(ಇಂದ್ರ, ಅಗ್ನಿ, ಯಮ, ವರುಣ, ವಸಿಷ್ಠ, ವಿಶ್ವಾಮಿತ್ರಾದಿ ಮುನಿಪುಂಗವರು ಆಸೀನರಾಗಿರುವರು)

**ನಾರದ : ಹಾಡು** **ರಾಗ : ದೇವ ಮನೋಹರಿ - ಆದಿತಾಳ**

ಸತ್ಯವೇ ಜಗದಾಧಾರವು
ಸತ್ಯಾನಂದ ಪರಿಪೂರ್ಣವು ॥ ಪ ॥

ಸತ್ಯವೇ ತಾ ಶಿವ ಸತ್ಯ ಸರ್ವೋತ್ತಮ
ಸತ್ಯಾರಾಧಕ ನಿತ್ಯ ನುಲೋಕದೆ ॥ ೧ ॥

**ನಾರದ : ಹಾಡು** **ರಾಗ : ವಸಂತ - ಆದಿತಾಳ**

ಕಂತುಪಿತ ಪಾಪಹರ ಹೇ ಮಧುಸೂಧನ
ದುರಿತ ದೂರ ಶ್ರೀವರ ॥ ಪ ॥
ಶೇಷಶಾಯಿ ಸಾಗರವಾಸ ಹರಿ
ಸರ್ವೇಶ ಲಕ್ಷ್ಮೀಶ ಮುರಹರ ಸುರೇಶ ॥ ೧ ॥

## ದೃಶ್ಯ : ಕಾಡು ರಸ್ತೆ

**ನಾರದ : ಹಾಡು** **ರಾಗ : ಸಂಕ್ರಂದನಪ್ರಿಯ - ಆದಿತಾಳ**

ಶಾಂತಿಯ ಬಾಳ್ವಿಗೆ, ಸಹನೆಯೆ ಮೂಲ
ತ್ಯಾಗವದಿಲ್ಲದೆ, ಹರಿಯದು ಜಾಲಾ ॥ ಪ ॥
ತಾನೆಂದೆಂಬುದು, ತನ್ನದೆಂದೆಂಬುದು
ತೊರೆದು ಸರ್ವವು ಹರನೆಂದರಿವುದು ॥ ಅ.ಪ ॥
ಕ್ರೋಧವ ತೊರೆದು, ಕರುಣೆಯ ಕಳೆದು
ನಡೆಯೇ ಒಲಿವುದು, ವಿಶ್ವವೇ ನಲಿದೂ
ಲೋಕದ ಸುಖವಾ, ಕೋರುವನೇ ಧನ್ಯ
ನಾಕವ ಕಾಣುವ ನಿರುತವು ಮಾನ್ಯ ॥ ೧ ॥

## ದೃಶ್ಯ : ಚಂದ್ರಮತಿಯ ಅಂತಃಪುರ
## (ಚಂದ್ರಮತಿ ಮಗನಿಗೆ ಅಲಂಕಾರ ಮಾಡುತ್ತಿರುವಳು)

**ಸಖಿಯರು : ಹಾಡು** **ರಾಗ : ಕಾಂಭೋದಿ - ಆದಿತಾಳ**

ಸಖಿಯೆ ಸುದಿನವಿದೆ ಬಾ ಬಾ ನೃಪ ಸದನಕಿದೆ
ಸಖಿಯೆ, ಪೋಗುವಾ, ನೋಡುವಾ, ವೈಭವ
ನೃಪಸುತ ಜನುಮದಿನಾ, ಕೋಸಲಕಿದು ಶುಭಸುದಿನ ॥

ಚಂದ್ರಮತಿ : ಹಾಡು ರಾಗ : ಭೀಮ ಪಲಾಸ್ - ಆದಿತಾಳ

ರತುನಹಾರ ತೋಳಬಂದಿ ತೊಡಿಸುವೆ ಮೋಹದೆ ಬಾಕಂದಾ,
ನೋಡಿ ನಿನ್ನ ನಲಿಯುವುದೇ ಆನಂದ ಬಾ ಮುದ್ದು ಕಂದ ॥ ಪ ॥

ಚಂದ್ರಮತಿ : ಹಾಡು ರಾಗ : ಯಮನ್ ಕಲ್ಯಾಣಿ - ಆದಿತಾಳ

ಬಾಲಾಜಯು ಶ್ರೀ ಲೋಲಾ । ಬಾಳ್ವೆ ಸುಖದಲಿ ಸಹಜ ಬೆಳಾ ॥ ಪ ॥
ರವಿಕುಲದೀಪ ಮಂಗಳರೂಪ ।
ಶ್ರೀವರನೊಲುಮೆಯ ಪೊಂದ್ಯೆಭೂಪ
ಹರಕೆಯನೀವೇ ಆರತಿಗೈವೆ ॥ ಅ.ಪ. ॥

ಹರಿಶ್ಚಂದ್ರ : ಹಾಡು ರಾಗ : ಶ್ರೀರಂಜಿನಿ - ಆದಿತಾಳ

ಭವಹರ ಶಂಕರ ದೇವ ॥ ಪ ॥
ದೀನಜನಾವನ, ದುರಿತಾಪಹರ ಕರುಣ ಸುಧಾಕರ ॥ ಅ.ಪ. ॥
ಭಕ್ತಜನಾವನ, ಭಾಸ್ಕರ ನಯನಾ
ಶಕ್ತಿ ಅರ್ಧಾಂಗ, ಅಂಗಜ ಭಂಗಾ ॥ ೧ ॥
ಸತ್ಯಸ್ವರೂಪ, ನಿತ್ಯಪ್ರತಾಪ
ಮೃತ್ಯುಂಜಯ ಶ್ರೀ ಸುತ್ತ್ಯಾಂತ ರಂಗ ॥ ೨ ॥

## ದೃಶ್ಯ : ಹರಿಶ್ಚಂದ್ರನ ಆಸ್ಥಾನ

(ವಿಶ್ವಾಮಿತ್ರ, ನಕ್ಷತ್ರಿಕ, ಹರಿಶ್ಚಂದ್ರ, ಚಂದ್ರಮತಿ, ಲೋಹಿತಾಶ್ವ ಸತ್ಯಕೀರ್ತಿ ಇರುವರು)

ಹರಿಶ್ಚಂದ್ರ : ಹಾಡು ರಾಗ : ಅಭೇರಿ - ಆದಿತಾಳ

ಪ್ರಭು ಧನ್ಯನಾದೆ ಶ್ರೀಪಾದ ಸೇವೆಯಿಂ
ಅಭಯಾ ನೀಡು ಶುಭವೈಭವಾ ॥ ಪ ॥
ಸೃಷ್ಟಿ ಸ್ಥಿತಿ ಲಯ ಕಾರಣಕರ್ತ
ಕ್ಷತ್ರಿಯ ತೇಜೋಪೂರ್ಣನಿರತ, ॥ ಅ.ಪ ॥

ಪತಿತನೆಂದೆನಿಸಿದ ಪಿತ ತ್ರಿಶಂಕುಗೆ
ಗತಿಯನು ತೋರಿದ ಅತಿಶಯ ಮಹಿಮ ॥ ೧ ॥

## ದೃಶ್ಯ : ಕಾಡು ರಸ್ತೆ

**ನಾರದ : ಹಾಡು** **ರಾಗ : ಹಂಸನಾದ - ಆದಿತಾಳ**

ಕರುಣಾಮಯ ಶ್ರೀಕೇಶವ
ನಾರಾಯಣ ಹರಿ ಮುಕುಂದ ಮಾಧವ ॥ ಪ ॥
ಸುರವರ ಸೇವಿತ, ಆರ್ತಜನಾನ್ವಿತ
ಅಣುಮಹತ್ ಪೂರಿತ, ಮುನಿಜನ ವಂದಿತ ॥ ಅ.ಪ. ॥
ಇಂದಿರರಮಣ, ವಂದಿತ ಚರಣ
ಸುಂದರ ನಯನಾ ನಂದಿತಜ್ಞಾನ
ಸರ್ವಜನಾವನ, ಸಾಗರ ಸದನಾ
ಕರ್ಮನಿವಾರಣ, ನಿರ್ಮಲ ವದನಾ ॥ ೧ ॥

**ನಾರದ : ಹಾಡು** **ರಾಗ : ಮಿಶ್ರಮಾಂಡ್ - ಆದಿತಾಳ**

ನೆರೆ ನಂಬಿದೇನೋ ನೀರಜನಯನ ॥ ಪ ॥
ಕರುಣಾಂತಪೂರ್ಣ ಶ್ರೀಲಕ್ಷ್ಮೀರಮಣ ॥ ಅ.ಪ. ॥
ಲೀಲಾಮಯನೆ ಭಕ್ತವತ್ಸಲನೆ
ಭವದುಃಖಹರನೆ ಭುವನಾಧಿಪನೆ
ನಿಗಮಗೋಚರನೆ ಶ್ರೀಗೋವಿಂದನೆ ॥ ೧ ॥

## ದೃಶ್ಯ : ಕಾಡು

**ಮಾತಂಗ ಕನ್ಯೆಯರು : ಹಾಡು** **ರಾಗ : ಹಿಂದೂಸ್ಥಾನಿ ಕಾಪಿ - ಆದಿತಾಳ**

ಹೆಣ್ಣಣ್ಣ ಈ ಜಗದ ಎಲ್ಲಾ ಮೂಲ
ಹೆಣ್ಣಿಂದ ಗಂಡಿಗಾನಂದ ಕಣಾ ॥ ಪ ॥
ಎಲ್ಲರ ಹೊತ್ತಿರುವ ಭೂತಾಯಿಯು ಹೆಣ್ಣು
ಊರೂರ ಗುಡಿಯ ಮಾರಿ ಹೆಣ್ಣು

ಸುಖವ ಕೊಡುವ ಹೆಣ್ಣ ನೀನು
ವರಿಸಿ ಮೆರೆಸಿ ನಗಿಸಿ ನಗು ॥ ೧ ॥
ತಲೆ ಮೇಲೆ ಗಂಗೆ, ತೊಡೆ ಮೇಲೆ ಗೌರಿ ।
ಧರಿಸವ್ನೆ ಶಿವತಾ ಧರಿಸವ್ನೆ
ಹೆಣ್ಣ ನೋಡಿ, ಹೆಣ್ಣ ಕೂಡಿ
ಹೆಣ್ಣ ಮನವ ನೋಯ್ಸ ಬೇಡಿ ॥ ೨ ॥

**ಹರಿಶ್ಚಂದ್ರ : ಷಟ್ಪದಿ** — **ರಾಗ : ಕೇತಾರ ಗೌಳ**

ಅಕ್ಕಕ್ಕು ಬಚ್ಚಲುದಕಂ ತಿಳಿದಡಾರಮೀ
ಹಕ್ಕೆ ಯೋಗ್ಯಂ ನಾಯ್ಗೆ ಹಾಲುಳ್ಳಡಾವನೂ
ಟಕ್ಕೆ ಯೋಗ್ಯಂ ಪ್ರೇತವನದೊಳಗೆ ಬೆಳೆದ ಹೂ ವಾರ ಮುಡಿಹಕ್ಕೆ ಯೋಗ್ಯಂ
ಮಿಕ್ಕ ಹೊಲತಿಯರು ನೀವೆನೆ ನಿಮ್ಮ ಜವ್ವನದ
ಸೊಕ್ಕು ರೂಪಿನ ಗಾಡಿ ಜಾಣತನದೊಪ್ಪವೇ
ತಕ್ಕೆ ಯೋಗ್ಯಂ ರಮಿಸಿದವರುಂಟೆ ಶಿವಶಿವಾ

## ದೃಶ್ಯ : ಕಾಡುರಸ್ತೆ

**ಹರಿಶ್ಚಂದ್ರ : ಷಟ್ಪದಿ** — **ರಾಗ : ಆನಂದಭೈರವಿ**

ಲಲಿತ ವಸುಮತಿ ಹುಟ್ಟುವಂದು ಹುಟ್ಟಿದ ಸೂರ್ಯ
ಕುಲದ ರಾಯರ್ಗೆ ವಂಶದೊಳು ಕೀರ್ತಿಯೊಳು ಭುಜ
ಬಲದೊಳೊರೆದೊರೆಯೆನಿಸಿ ಕನ್ನಿಕೆಯರಂ ಕೊಡುವ ಭೂಪರಿಲ್ಲಿಂದು ತನಕ
ಹೊಲತಿಯರು ಬಂದಾವು ಸತಿಯರಾದಪ್ಪೆವೆಂ
ಬಲಿಹವೆಂಬುದು ಬಂದ ಕಾಲಗುಣವೋ ನಿಂದ
ನೆಲದ ಗುಣವೋ ಗುರುದೇವಾ

## ದೃಶ್ಯ : ಹರಿಶ್ಚಂದ್ರನ ಆಸ್ಥಾನ

**ಹರಿಶ್ಚಂದ್ರ : ಕಂದ** — **ರಾಗ : ಬೇಗಡೆ**

ಕಡುಮೋದ ದಿಂದೀಯುತಿಹೆವು
ಮಡದಿ ಮಗನೊಡಗೂಡಿ ನಮ್ಮ ಸರ್ವಸ್ವಮಂ ॥

ಒಡೆಯ ನೀನಲ್ತೆ ಈ ರಾಜ್ಯಕೆ
ಕೊಡುವುದಾನಂದವಧರೆಯ ಜನಕೆಲ್ಲಕುಂ ॥

### ದೃಶ್ಯ : ಕೋಟೆಯ ಬಾಗಿಲು

**ಪ್ರಜೆಗಳು : ಹಾಡು** **ರಾಗ : ಸಾವೇರಿ - ಆದಿತಾಳ**

ಪಾರ್ವತಿರಮಣ ಪನ್ನಗ ಭೂಷಣ
ಪೊರೆ ನಮ್ಮೊಡೆಯನ ಹರಾಹರಾ ॥ ಪ ॥
ಲೋಕೋದ್ಧಾರ ಪಾಪ ವಿದೂರ
ಪೊರೆ ನಮ್ಮೊಡೆಯನ ಹರಾ ಹರಾ ॥ ಅ.ಪ. ॥
ಶಂಕರ ಭವಹರ, ಸಂಕಟ ಪರಿಹರ
ಸುರೇಶ ವಂದಿತ ಹರಾಹರಾ ॥ ೧ ॥

**ಹರಿಶ್ಚಂದ್ರ : ಷಟ್ಪದಿ** **ರಾಗ : ಆನಂದಭೈರವಿ**

ಮನದೊಳಗೆ ಮರುಗದಿರಿ ಚಿಂತಿಸದಿರಲಳದಿರಿ
ಮುನಿಯದಿರಿ ನೋಯದಿರಿ ಧೃತಿಗೆಡದಿರೀಗಳೆರ
ಡನೆಯ ಶಿವನೆನಿಪ ಕೌಶಿಕನೊಡೆಯನಾದನಾ ತನವಾದಪಂಕಜಕ್ಕೆ
ಎನಗೆ ಬೆಸಕೈವಂತೆ ಬೆಸಕೈವುದಂಜುವುದು
ವಿನಯಮಂ ನುಡಿವುದೊಲ್ಲೈಸುತಿರೆ
ಎನಗಾನಂದವೆಂದು ತಿಳಿಯಿರಿ ಪ್ರಜೆಗಳೇ

**ಸತ್ಯಕೀರ್ತಿ ಮತ್ತು ಪ್ರಜೆಗಳು : ಷಟ್ಪದಿ** **ರಾಗ : ನಾದನಾಮಕ್ರಿಯೆ**

ಪುರದ ಪುಣ್ಯಂ ಪುರುಷರೂಪಿಂದೆ ಪೋಗುತಿದೆ
ಪರಿಜನದ ಭಾಗ್ಯವಡವಿಗೆ ನಡೆಯುತಿದೆ ಸಪ್ತ
ಶರಧಿಪರಿವೃತಧರೆಯ ಸಿರಿಯ ಸೊಬಗಜ್ಞಾತ ವಾಸಕ್ಕೆ ಪೋಗುತಿದೆಕೋ
ಧರೆಯ ದೀನಾನಾಥರಾನಂದವಡಗುತಿದೆ
ವರಮುನೀಂದ್ರರ ಯಾಗರಕ್ಷೆ ಬಲವಳಿಯುತಿದೆ
ನಿರುತವು ಪಾರ್ವತಿ ರಮಣ ಪನ್ನಗ ಭೂಷಣ ಕಾಯೋ

## ದೃಶ್ಯ : ರಾಜಬೀದಿ

**ಹಿನ್ನೆಲೆ : ಹಾಡು** **ರಾಗ : ನಾದನಾಮಕ್ರಿಯೆ**

ಮರಗುತಿದೆ ಹೃದಯ ತೊರೆಯಲಾರದೆ ಪತಿಯ
ಧರ್ಮಿಷ್ಟರಿಗೀ ಗತಿಯಾಯಿತೆ ವಿಧಿ ನೀನಿದ ಕಾಣೆಯ ॥
ಸತ್ಯದ ಸಾಧನೆಗೆ ಸಾಧ್ವಿಯೋರ್ವಳು ಪತಿಯಗಲಿ
ಪೋಗುವುದು ನೀ ಕಾಣೆಯ ವಿಧಿ ನೀ ಕಾಣೆಯ

## ದೃಶ್ಯ : ಕಾಶೀಪಟ್ಟಣದ ಬೀದಿ

**ಹರಿಶ್ಚಂದ್ರ : ಕಂದ**

ಧನವಂ ಧರ್ಮದಿ ಗಳಿಸಿದ ವಿನುತರೆ ವಂದಿಸುವೇ ತಮಗೆ
ಎನ್ನ ಕೊಂಡು ಈ ಮುನಿ ಪತಿಯ ಋಣವ ತೀರಿಸಲು
ಘನತರ ಸಹಾಯವನ್ನಿತ್ತು ಕಾವುದಾರ್ಯರೆ
ದಯದೀ ವಿನುತರೇ

**ಹರಿಶ್ಚಂದ್ರ : ಷಟ್ಪದಿ**

ಇತ್ತ ಅವಧಿಗೆ ಇನ್ನೆರಡು ಘಳಿಗೆ ಹೊತ್ತಿದೆ ಮುನಿಪಾಲ
ಚಿತ್ತೈಸು ವಸ್ತುವಿದು ಸರಿದುದೇ ನುಡಿದು ಹುಸಿ
ಇತ್ತಿಲ್ಲ ತಂದೆ ಆಯಾಸಪಡಿಸಿದೆ ತಡೆದನ್ ಅಳಲಿಸಿದೆ ನಾನು
ಅತ್ಯಂತ ಮೂಢ ಎನ್ನ ಅವಗುಣವನುಳಿದುತ
ಮ್ಮುತ್ತಮಿಕೆಯ ಮೆರೆದು ಕರುಣಿಸುವುದು
ಹೆತ್ತಯ್ಯ ಕೌಶಿಕಂಗೆ ಬಿನ್ನೈಸು ಮುನಿಪಾಲ

**ಹರಿಶ್ಚಂದ್ರ : ಕಂದ**

ವೀರ ಕರವಾಳವಂ ಪಿಡಿದು ಮೆರೆದ ಕರದೊಳ್
ಈ ದೋರ್ದಂಡವಾಯ್ತು
ವರವಜ್ರ ಕನಕ ಭರಿತ ಕಾಯಕೆ
ಕಂಬಳಿಯೇ ಗತಿಯಾಯ್ತು
ಸುರಭೋಜನವನುಂಡ ರಸಗೆ

ಹೆಣದಕ್ಕಿಯನ್ನವೇ ಉಣಿಸಾಯ್ತು
ಹರಹರ ನಿನ್ನಸೇವೆಯೆಂದು
ಮಸಣ ಕಾಯುವೇ ಹರಸು ವಿಶ್ವೇಶ್ವರಾ

**ದೃಶ್ಯ : ಸ್ಮಶಾನ**

**ಹರಿಶ್ಚಂದ್ರ : ಹಾಡು** **ರಾಗ : ದೇಶ್ - ಆದಿತಾಳ**

ಬಾಳಿನ ಕೊನೆಗೆ ಬರುವೀ ಎಡೆಗೆ
ಇಂದೇ ಬಂದೆ, ಏನಿದು ತಂದೆ ॥ ಪ ॥
ಹರ ನಿನ್ನಯ ನೆಲೆ, ಎಂಬರು ಇಲ್ಲಿ
ಭಾವಿಸೆ ಬಲು ಹೊಲೆ ಮರಳುಗಳಾನೆಲೆ ॥ ಅ.ಪ. ॥
ನೀನಿಲ್ಲಿಹೆಯ ಕೇಳಿಯ ಮೊರೆಯಾ
ನೀಡೆಯ ಅಭಯ ಕಾಣೆಯ ಜೀಯ ॥ ೧ ॥
ಜೀವವಶಾಶ್ವತ ಎಂಬುದ ಸಾರುತ
ಇರುವುದು ಸತತ ಗತಿಸಿದ ಜನತ ॥ ೨ ॥
ಮಣ್ಣಲ್ಲೇ ಜನನ ಮಣ್ಣಿಗೇ ಗಮನ
ಇದುವೇ ಜೀವನ, ಕಡೆಗೀ ಮರಣ ॥ ೩ ॥

**ದೃಶ್ಯ : ಕಾಲ ಕೌಶಿಕನ ಮನೆ**

**ಚಂದ್ರಮತಿ : ಹಾಡು** **ರಾಗ : ಮೋಹನ - ಆದಿತಾಳ**

ನಿನ್ನಯ ಸೇವೆ ಇದು ಹೇ ದೇವ
ಪನ್ನಗ ಭೂಷಣನೇ ॥ ಪ ॥
ಸತ್ಯವನುಳಿಸೆ, ಕೀರ್ತಿಯಗಳಿಸೆ
ಅತಿಶಯ ಕಷ್ಟವ ಈ ತರ ಸಹಿಪೆ
ಪತಿಗತಿಶ್ರೇಯವ, ಸುತಗೆ ದೀರ್ಘಾಯುವ
ಕ್ಷಿತಿಗೆ ಸುಕ್ಷೇಮವ ಕರುಣಿಸು ದೇವ ॥ ೧ ॥

**ಚಂದ್ರಮತಿ : ಕಂದ**

ಕಂದಗೇ ಈ ಕಷ್ಟ ಹರಿಸೆಯಾ ದೇವಾ ।
ಬರಿಶೋಕಸಂತಾಪ । ಬಾಳಲ್ಲಿ ದೇವಾ ।
ನಿನ್ನಾಟವಯ್ಯ ಶಿವ ॥

## ದೃಶ್ಯ : ಕಾಡು

(ಲೋಹಿತಾಶ್ವ ಮತ್ತು ಹುಡುಗರು ವನಕ್ಕೆ ಹೋಗುವಾಗ)

**ಹುಡುಗರು : ಹಾಡು** **ರಾಗ : ಮಧ್ಯಮಾವತಿ - ಆದಿತಾಳ**

ಆನಂದಾ ಆನಂದಾ । ವನದಾಟವು ಮನಕತಿ ಆನಂದಾ ॥ ಪ ॥
ಆರಳೀ ಎಲೆಗಳ ನಾದಾ । ಗುರುಸತಿಯರ
ಕಂಠ ವಿನೋದಾ । ಸೃಷ್ಠಿಯೊಳೇತಕೆ ಭೇದ
ಹೆಂಡತಿ ಗಂಡನ ವಾದ ॥ ೧ ॥
ಹೂವಿನ ಗಿಡದಲಿ ಮುಳ್ಳೇಕೆ
ಹಾವಿನ ಹಲ್ಲಲಿ ವಿಷವೇಕೇ
ಗಂಗೆಗೆ ಮುಳುಗಲು ಸಾವೇಕೇ ।
ಮನುಜಗೆ ಮುದಿತನ ಬರಲೇಕೆ ॥ ೨ ॥

ಅಥವಾ

**ಹುಡುಗರು :** ಮನಮುದದಲಿ ವನಕ್ಕೈದುವ ಕುಶಸಮಿಧೆಗಳನು ನಾವ್ ತರುವ
**ಲೋಹಿತಾಶ್ವ :** ಅನುನಯದೇ ಸುಮತರುವಾ । ಗುರುವರನ ಕೃಪೆಯ ನಾವ್ ಪಡೆವ ॥
**೧ನೇ ಹುಡುಗ :** ವನದೊಳು ನಾವ್ ನಲಿಯುತಿರುವಾ ಕ್ರೀಡೆಗಳಿಂದಿನ ದಿನ ಕಳೆವಾ
**ಲೋಹಿತಾಶ್ವ :** ಏನೋ ಮನವಿನಿತು ಕಳವಳಿಪುದ್ಧೆ ಕಳೆದು ಭಯಿಪಾ
ಏನಹುದೋ ನಾನರಿಯೆ ಬಲ್ಲನ್ಯೆ ಹರನೆಲ್ಲವ ॥
**೨ನೇ ಹುಡುಗ :** ಆಹಾ ! ಬಹುಧೀರಾ ! ಭಯ ಪಡುವಾ ಸುಕುಮಾರ ಅ ಹ.ಹ ಹ
**ಲೋಹಿತಾಶ್ವ :** ಓಹೋ ! ಭೀರುವೆ ರಾಜಕುವರ ಭಯವರಿಯೆನು ಧೀರಾ
**ಹುಡುಗರು :** ಬಾರ್ಕೈ ! ಶೂರಾ ! ವೀರಾ ! ನೆರೆಪರಾಕ್ರಮ ನಚಿತ್ತೋರಾ !
**ಲೋಹಿತಾಶ್ವ :** ಬರುವೆನಿದೋ ವರಸಖರೇ ಹುರುಪವ ನೀವ್ ತೋರ ॥

## ದೃಶ್ಯ : ಕಾಲಕೌಶಿಕನ ಮನೆ

**ಚಂದ್ರಮತಿ : ಕಂದ**

ಅಡವಿಯೊಳು ಹೊಲಬುಗೆಟ್ಟನೋ ಗಿಡದೊಳಗೆ ಹುಲಿ
ಹಿಡಿದುದೋ ಕಳ್ಳರೊಯ್ದರೋ ಭೂತಸಂಕುಲಂ
ಹೊಡೆದುವೋ ನೀರೊಳದ್ದನೋ ಮರದ ಕೊಂಬೇರಿ
ಬಿದ್ದನೋ ಫಣಿ ತಿಂದುದೋ
ಕಡುಹಸಿದು ನಡೆಗೆಟ್ಟು ನಿಂದೆಯೋ ಮಗನೇ

## ದೃಶ್ಯ : ಕಾಡು - ಮತ್ತೊಂದು ಭಾಗ

**ಚಂದ್ರಮತಿ : ಮಂದಾನಿಲ ರಗಳೆ**

ಏವೆನೇವೆನೆಲೆ ಮಗನೇ ಮಗನೇ
ಸಾವೇಕಾಯಿತ್ತೆಲೆ ಚೆನ್ನಿಗನೇ
ಇರಿದೆಯಲಾ ಎನ್ನನು ಸುಕುಮಾರಾ
ಕೊರೆದೆಯಲಾ ಕೊರಳನು ಜಿತಮಾರಾ
ಎತ್ತಣ ಬರಸಿಡಿಲೆರಗಿತೊ ನಿನ್ನ
ಹುತ್ತಿನ ಹತ್ತಿರೆ ಒರಗಿದೆ ಚೆನ್ನ
ಹಾವು ಹಿಡಿಯೆ ಹಾ ಎಂದೊರಲಿದೆಯಾ
ಸಾವಾಗವ್ವಾ ಎಂದಳಲಿದೆಯಾ
ರನ್ನದ ಕನ್ನಡಿ ಸಿಡಿದುದೊ ದೇವಾ
ಹೊನ್ನ ಕಳಸ ಕಡೆ ದೊಡೆದುದೊ ದೇವಾ
ಎನ್ನ ಕಡವರಂ ಸೂರೆ ಹೋಯಿತೋ
ಹೊನ್ನ ಪ್ರತಿಮೆಯಸು ಹಾರಿ ಹೋಯಿತೋ
ಇನವಂಶದ ಲತೆ ಕುಡಿಮುರುಟಿತ್ತೋ
ಜನಪನಿಟ್ಟ ಸುರತರು ಮುರಿಯಿತ್ತೋ
ಕಾಲ ಕರುಣವಿಲ್ಲದೆ ನೀನೊಯ್ದೆ
ಬಾಲನನಗಲಿಸಿ ಕೊರಳಂ ಕೊಯ್ದೆ
ಆರ ಸಿರಿಯನೆಳೆತಂದೆನೊ ಮುನ್ನ

ಆರಳಲಲು ಸೆಳೆಕೊಂಡೆನೊ ಹೊನ್ನ
ಅಲ್ಲದಡೀಯಳಲಪ್ಪುದೆ ನನಗೆ
ಇಲ್ಲಿ ವೃಥಾ ಸಾವಪ್ಪುದೆ ನಿನಗೆ
ಹೆತ್ತ ಹೊಟ್ಟೆಯುರಿಯುತ್ತಿದೆ ಮಗನೆ
ಎತ್ತಿದ ತೋಳನು ಕೆತ್ತಿದೆ ಮಗನೆ
ಹಾಡುವ ಬಾಯಲಿ ಮಣ್ಣನು ಹೊಯ್ದೆ
ನೋಡುವ ಕಣ್ಣಲಿ ಸುಣ್ಣವ ಹೊಯ್ದೆ
ಪಾಪಿಯೆನ್ನ ನೀನೊಮ್ಮೆ ಗೆ ನೋಡಾ
ಕೋಪವನುಳಿದೊಯ್ಯನೆ ಮಾತಾಡಾ
ನುಡಿದಡೆ ಪಾಪವೆ ಹೆತ್ತವರೊಡನೆ
ಕಡುಮುಳಿಸೇ ಮಗನೇ ಎನ್ನೊಡನೆ

ಬಾರೈ ಬಹಳ ಸಿರಿಯ ಸಿಂಗಾರ
ಬಾರೈ ಸುಜನಜನಕ್ಕಾಧಾರ
ಏಳೆನ್ನಾನಂದಾಮೃತಶರಧಿ
ಏಳಖಿಳಗುಣಾರ್ಣವಕಳಾನಿಧಿ
ಹಲ್ಲಣಿಸಿದ ವಾರುವವಿದೆ ಮಗನೆ
ಮಲ್ಲಾ ಮಲ್ಲಿಯ ರಥವಿದೆ ಮಗನೆ
ಗಜಘಟೆಗಳು ಹಲ್ಲಣಿಸಿವೆ ಮಗನೆ
ನಿಜಪರಿವಾರಕೆ ಬೆಸಗೊಡು ಮಗನೆ
ನೆತ್ತರ ಕಡಲೊಳಗಿಭಕುಲ ಬೀಳೆ
ಮೊತ್ತದ ತುರಗಂಗಳು ಬೆಂಡೇಳೆ
ಮಣಿಮಕುಟದ ಭಟರಟ್ಟೆಗಳಾಡೆ
ಮಣಿದು ಭೂತಸಂಕುಳ ಕುಣಿದಾಡೆ
ಮಾರಿಮೃತ್ಯುಗಳಿಗೋಕರೆ ಹುಟ್ಟೆ
ಕ್ರೂರ ಜವಂಗತಿಭೀಕರ ಹುಟ್ಟೆ
ರಿಪುಬಲವಂ ಕೊಂದಳಿದಡೆ ತಪ್ಪೆ
ತಪನಕುಲದ ವಿಜಯಶ್ರೀಯೊಪ್ಪೆ

ಧರೆಯನಾಳ್ವ ಸಿರಿಯಂ ಕಳೆದಿಂದು
ಉರಗನ ವಿಷದಗ್ನಿಯೊಳುರೆ ಬೆಂದು
ಅಡವಿಯೊಳೀಪರಿ ಕೆಡೆವರೆ ವೀರ
ಪೊಡಿವಿಯೊಡೆಯನಗ್ಗದ ಸುಕುಮಾರ

ಏನ ಮಾಳ್ಪೆನಾ ಮಾಡಿರ್ದುದನು
ತಾನುಂಬುದು ವಿಧಿ ಮಾಡಿದ ಹದನು
ಕರುಣಿಸಿ ಕಾಯ್ಯೆ ಗೌರೀರಮಣ
ನರಕಿಯ ನೋಡೆಲೆ ಅಗಜಾರಮಣ
ಕರುಣಿಸು ಪಾಪಿಯ ಪಂಪಾಪತಿಯೆ
ಕರುಣಿಸನಾಥೆಗೆ ಕಾಶೀಪತಿಯೆ ॥

**ದೃಶ್ಯ : ಸ್ಮಶಾನ**

**ಚಂದ್ರಮತಿ : ಹಾಡು** **ರಾಗ : ಸಿಂಧು ಭೈರವಿ - ಆದಿತಾಳ**

ಆನಂದನಿಧಿಯೇ ಬಾಲಾ । ತೀರಿತೆ ಜಗದಲೀಲಾ ।
ನಿನ್ನನೆಳದೊಯ್ದ ಕಾಲ । ಏಕೆನ್ನ ಮರೆತ ವೇಳಾ ॥
ಭೂಮೀಶ ಕುವರನಾಗಿ । ಭೂಮಿಯೆ ಶಯನವಾಗಿ
ಭೂಮಿಯ ಸುಖವನೀಗಿ । ಭೂಮಿಯಸೇರ್ದೆ ಪೋಗಿ ॥ ೧ ॥
ನಾನಿನ್ನದಹಿಪೆನೆಂತೋ । ಈ ಸನ್ನ ಕೈಯ್ಯಾರ ಕಂದಾ ।
ಆನಂದವೇ ನಿನಗೆ । ಎನ್ನಳಲು ವಿಧಿಯೆ ॥ ೨ ॥

**ಹರಿಶ್ಚಂದ್ರ : ಕಂದ**

ನೆಟ್ಟಿರುಳು ಸುಡುಗಾಡೊಳೊಬ್ಬಳೋರಂತೆ ಬಾ
ಯ್ಬಿಟ್ಟು ಹಲುಬುವ ವೀರನಾರಿಯಾವಳೊ ಮೀರಿ
ಸುಟ್ಟೆಯಾದಡೆ ನಿನಗೆ ವೀರಬಾಹುಕನಾಣೆ
ಕದ್ದು ಸುಡಬಂದೆ ನಿನ್ನ ನಿಟ್ಟೆಲುವ ಮುರಿವೆ ನಾರಿಯೇ

**ಹರಿಶ್ಚಂದ್ರ : ಕಂದ**

ಈ ಸತಿಯನೀ ಶುಚಿಯನೀ ಪತಿವ್ರತೆಯನಾ
ನೀನು ಧಾವತಿಗೊಳಗು ಮಾಡಿದನು ನೀಚದ್ವಿ
ಜೇಶಂಗೆ ಮಾರಿ ಮರೆದೀ ಸುತನನೀ ಸಖಿಯ
ನೀ ಸೊಬಗ ಸುಕುಮಾರನ
ಓಸರಿಸದುರಗ ಕೊಲುವಂತೆ ಮಾಡಿದೆಯಕಟಾ

**ಹರಿಶ್ಚಂದ್ರ : ಷಟ್ಪದಿ**

ಅರಿರಾಯರೊಳು ಕಾದಿ ಮಡಿದಾತನಲ್ಲ ಮುನಿ
ವರರ ಯಾಗವ ಕಾದು ಮಡಿದಾತನಲ್ಲದೇ
ವಂಗೆ ಹಿತವಾಗಿ ಮಡಿದವನಲ್ಲ ಮಾಂಸದಾನವ ಬೇಡಿದಗೊರ್ಡಲನು
ಹರಿದರಿದು ಕೊಟ್ಟು ಮಡಿದವನಲ್ಲ ಹುಳ್ಳಿಯಂ
ತರಹೋಗಿ ಕಾಡೊಳಗೆ ಬಡಹಾವು ಕಚ್ಚಿ ಮುನಿ
ವರಿಗೆ ನಗೆಗೆಡೆಯಾಗಿ ನಿಷ್ಕಾರಣಂ ಮಡಿದೆಯಲಾ ಕಂದ

**ದೃಶ್ಯ : ರಾಜಬೀದಿ**

**ಸುಮಂಗಲೆಯರು : ಹಾಡು** ರಾಗ : ಉದಯರವಿಚಂದ್ರಿಕೆ - ಆದಿತಾಳ

ಸಂಭ್ರಮದೆ ಮೆರೆವ ದಿನ, ಕೋಸಲಕೆ ಶುಭದ ದಿನ ॥
ಹರಿಶ್ಚಂದ್ರ, ಭೂವರ ಮರಳಿ ರಾಜ್ಯವಡೆವ ದಿನ ॥ ಪ ॥
ಹರಿಶ್ಚಂದ್ರ ಅರಸ ಧರೆಗೆ
ಚಂದ್ರಮತಿ ಅರಸಿ ನಮಗೆ
ಲೋಹಿತಾಶ್ವ ಯುವರಾಜ
ಮುದದಿ ತರುವ ಕೀರ್ತಿ ಭೋಜ ॥ ೧ ॥

## ಮಂಗಳ

**ರಾಗ : ಮೋಹನ - ಆದಿತಾಳ**

ಶಂಭೋ ಶಿವನೆ ಜಯಜಿತ ಮದನಾ । ಜಯಗುಣ ಸದನಾ ।
ದೇವಾಧೀಶಾ ಸೇವಕವರದಾ ॥ ಪ ॥
ನಮೋಸ್ತು ಭವನೇ ಪರಶಿವನೇ ಕರುಣಾ ಸಾಗರನೇ
ಗಿರಿಜಾನುತ ಪದನೇ ॥ ೧ ॥
ಜಯ ಜಗದೀಶ್ವರ ಸತ್ಯಾಧಾರ ನೀನೇ ಸತ್ಯವರಾ ।
ನೀನೇ ಸುಖಪೂರಾ ಸೇವಕ ಜನರ ಪೊರೆಹರಾ ॥ ೨ ॥



# ಭೂಕೈಲಾಸ



ಅಭಿನಯ ಕಲಾಧೀಮಂತ
ಎಂ.ವಿ. ಸುಬ್ಬಯ್ಯನಾಯ್ಡು



ನಾಟಕಕಾರ
ಹೆಚ್.ಕೆ. ಯೋಗಾನರಸಿಂಹ

**ಪ್ರಾರ್ಥನೆ : ಹಾಡು** **ರಾಗ : ನಾಟಿ**

ನಮೋ ನಮೋ ನಟರಾಜ
ಓಂ ನಮೋ ನಮೋ ನಟರಾಜ ॥ ಪ ॥
ನಮೋ ನಮೋ ಪಾರ್ವತಿಪತೇ
ನಮೋ ನಮೋ ಕೈಲಾಸಪತೇ ॥ ಅ.ಪ. ॥
ರಂಗಮಂಟಪವ ರಂಜಿಸೆ ಬಾ
ರಂಗ ಕಲೆಯ ಉದ್ಧರಿಸಲು ಬಾ
ಅಂಗಜಹರನೆ ಆನಂದದಿ ಬಾ
ಸಂಗೀತ ಪ್ರಿಯ ಸಂತಸದಿಂ ಬಾ ॥ ೧ ॥
ತಾಂಡವ ನಾಟ್ಯವನಾಡುತ ಬಾ
ತಾಳ ತಟ್ಟುವೆವು ತ್ವರಿತದಿ ಬಾ
ತಾರತಮ್ಯವ ತೋರದೆ ಭಕುತರ
ತಾಪವ ಹರಿಸಲು ತಪ್ಪದೆ ಬಾ ॥ ೨ ॥

**ಸೂತ್ರಧಾರ : ವೃತ್ತ ॥** **ರಾಗ : ನಾಟಿ**

ನಾಗೇಂದ್ರ ಹಾರಾಯ ತ್ರಿಲೋಚನಾಯ
ಭಸ್ಮಾಂಗರಾಗಾಯ ಮಹೇಶ್ವರಾಯ
ನಿತ್ಯಾಯ ಶುದ್ಧಾಯ ದಿಗಂಬರಾಯ
ತಸ್ಮೈನಕಾರಾಯ ನಮಃ ಶಿವಾಯ

(ರಾಮರಾಮಜಯರಾಮ ಪರಾತ್ಪರ ಎಂಬಂತೆ)

**ಸೂತ್ರಧಾರ : ಹಾಡು** **ರಾಗ : ಮಿಶ್ರ ಕಲ್ಯಾಣಿ - ಆದಿತಾಳ**

ಪಾಹಿ ಕೃಪಾಕರ ಪಾಹಿನತಾದರ ಪಾಹಿಮಹೇಶ್ವರ ರಣಧೀರ ॥ ಪ ॥
ಬಾಲಚಂದ್ರಧರ ಕಾಲಸಂಹರವರ ಶೈಲೇಂದ್ರಾತ್ಮಜೆಯಳಧೀರ
ಗಾಲವ ಮುಖಮುನಿ ಜಾಲವಂದಿತವರ ಪಾಲಿಸು ಶಂಕರ ಭವದೂರ ॥ ೧ ॥
ಪಾಲನಯನಫಣಿ ವಾಲಭೂಷಣ ಮುನಿವಾಲಪೋಷಣ ಚಣವರಧಿಷಣ
ಶೈಲಶರಾಸನ ಶೂಲಿ ನಿರಂಜನ ನೀಲಕಂಠ ನಿರ್ಜಿತಮದನ ॥ ೨ ॥

**ದೃಶ್ಯ : ರಾವಣನ ಆಸ್ಥಾನ**

**ರಾವಣ : ವೃತ್ತ ॥** **ರಾಗ : ನಾಟಿ**

ಆತ್ಮಾತ್ವಂ ಗಿರಿಜಾಮತಿ ಪರಿಚರಾಃ ಪ್ರಾಣಾಶ್ಶರೀರಂ ಗೃಹಂ
ಪೂಜತೇ ವಿಷಯೋಪಭೋಗರಚನಾ ನಿದ್ರಾ ಸಮಾಧಿಸ್ಥಿತಿಃ
ಸಂಚಾರಃ ಪದಯೋಃ ಪ್ರದಕ್ಷಿಣ ವಿಧಿಸ್ತೋತ್ರಾಣಿ ಸರ್ವಾಗಿರೋ
ಯಾದ್ಯತ್ಕರ್ಮ ಕರೋಮಿತತ್ತಖಿಲಂ ಶಂಭೋತವಾರಾಧನ

**ರಾವಣ : ಹಾಡು** **ರಾಗ : ಹಂಸಧ್ವನಿ - ಆದಿತಾಳ**

ಪಡೆವೆ ಯಶವ ಪೊಡವಿಯೊಳಗೆ
ಬಿಡದೆ ಸಾಧಿಸಿ ಜಯುವ ಬಿಡದೆ ಸಾಧಿಸಿ ॥ ಪ ॥
ಡಂಭದಿಂದ ಮೆರೆವ ಸುರರ
ಹಿಂಡಿ ಜಯಿಸುವೇ
ಕುಂಭಿಣಿಯೊಳು ಉದ್ಧಂಡನೆನಿಸಿ
ಮೆರೆವೆ ಹರನ ಕೃಪೆಯೊಳು
ತೋಳ ಬಲವ ತೋರಿ ಅರಿಗೆ ಬೀಳುಗೈಯ್ಯುತಾ
ಕಾಳಗದೊಳು ಸೀಳಿ ಸುರರ ಹಾಳುಗೈವೆನವರದರ್ಪ ॥ ೧ ॥

ರಾವಣ : ಕಂದ

ಅಮೃತವಂ ಸೇವಿಸಿ ಅಮರರೆನಿಸಿ ।
ಅಹಂಕಾರದಿಂ ಮೆರೆವರಾ ಸುರಲೋಕದೊಳ್ ॥
ಭೂಮಂಡಲವನೇ ಮೋಸಕುಯುಕ್ತಿ ಸಾಧನೆಯೊಳ್ ।
ಸೆಳೆಯಲೆತ್ನಿಸುವ ದ್ರೋಹಿಗಳು ದೇವತೆಗಳ್ ॥

ನಾರದ : ಹಾಡು | ರಾಗ : ಕಲ್ಯಾಣಿ - ಆದಿತಾಳ

ನಾರಾಯಣ ಹರಿನಮೋ ನಮೋ
ನಾರದ ಹೃದಯ ವಿಹಾರಿ, ನಮೋ ॥ ಪ ॥
ಪನ್ನಗ ಶಯನ, ಪಂಕಜನಾಭ ಪಾಪನಿವಾರ ನಮೋ ನಮೋ ॥ ೧ ॥

ನಾರದ : ಹಾಡು | ರಾಗ : ಯಮನ್ ಕಲ್ಯಾಣಿ - ಆದಿತಾಳ

ಕಮಲ ಮನೋವಿಹಾರಿ ಶೌರೆ ॥ ಪ ॥
ಗಾನಸುಧಾ ಲೋಲ ಧೀರಮುರಾರಿ ॥ ಅ.ಪ. ॥
ನೀಲನೀಲದ ಶ್ಯಾಮ ಶರೀರ ನೀರ ಜೋದರ ನಿಖಿಲಾಧಾರ ॥
ನಿತ್ಯ ನಿರಂಜನ ನೀರಧಿಶಯನಾ ॥ ೧ ॥

ದೃಶ್ಯ : ದೇವೇಂದ್ರನ ಅಂತಃಪುರ

ಊರ್ವಶಿ : ನೃತ್ಯಗೀತೆ (ತಿಲ್ಲಾನ) | ರಾಗ : ಮೋಹನ - ಆದಿತಾಳ

ಧೀಂ ಧೀಂ ಕಿಟತಕ ಧೀಂ ತದಿನುತ ಕಿಟತಕ ।
ದಿತ್ಕಾಂತ ಕಿಟತಕ ತರಿಕಿಟ ಝಣುತ ಧಿಮಿತತಕ ॥ ಪ ॥
ಧೀಂ ತಿಲ್ಲಿಲ್ಲಾನ ಧಿರುಧಿರು ತಾನಾ ನಾದಿರುಧಿರು ।
ತೊಂ ಧಿಗು ಧಿರು ದಿತ್ಕಾಂಕಿಟತಕ ಧಿತ್ಕಾಂಕಿಟತಕ
ತರಿಕಿಟ ತೊಂ ದಿತ್ಕಾಂ ದಿತ್ಕಾಂತ ॥ ಅ.ಪ. ॥
ಪರಮ ಪುರುಷ ಪರಾತ್ಮರ ಗುಹ ಷಣ್ಮುಖ
ಭಕ್ತವರದ ಹರಿಕೇಶ ಪುರನಿವಾಸ ॥ ೧ ॥

**ನಾರದ : ಹಾಡು** **ರಾಗ : ಭೀಮ್‌ಪಲಾಸ್ - ಆದಿತಾಳ**

ಜಗದೀಶನಾಡುವ ಜಗವೇ ನಾಟಕರಂಗ
ಸಂಚಾರಿ ನಾನಾಗಿ ಕಾಡುವಾ ॥ ಪ ॥
ಸರಿಸಮ ತಮಗೆ ಯಾರಿಹರೆನುವರೆ
ಮೆರೆಯುತ ಭರದೆ ಅಪಜಯ ಪಡೆಯೆ
ನಾರದ ಮೋದವ ಬೀರುವ ॥ ೧ ॥
ಡಾಂಭಿಕ ಜನರ ಡಂಬವನಳಿಸಿ
ಧಾರ್ಮಿಕ ಜನರಾ ಕೀರ್ತಿಯ ಮೆರಸಿ
ನ್ಯಾಯದ ನಾಂದಿಯ ಹಾಡುವಾ ॥ ೨ ॥
ಸತ್ಯ ಸ್ವರೂಪದ ದೀಪವ ಬೆಳಗಲು
ಮಿಥ್ಯಭಾವದ ರೂಪವನಳಿಸಲು
ನೀತಿಯ ನೋಟವ ತೋರುವಾ ॥ ೩ ॥

**ನಾರದ : ಹಾಡು** **ರಾಗ : ಹಿಂದೋಳ - ಆದಿತಾಳ**

ಭಜಮಾನಸದೇವಂ । ಭಜರೇ
ಭಜಮಾನಸದೇವಂ ॥ ಪ ॥
ರಜತಗಿರೀಶಂ । ಭುಜಗವಿಭೂಷಂ
ಕುಜನ ವಿನಾಶಂ । ಸುಜನೋಲ್ಲಾಸಂ ॥ ಅ.ಪ ॥
ಮುರಹರಮಿತ್ರಂ । ಪರಮ ಪವಿತ್ರಂ
ಉರತೇಜಗಾತ್ರಂ ವರಶಿಖಿನೇತ್ರಂ ॥ ೧ ॥
ಸುಗುಣ ಸುಧಾಮಂ । ಜಗದಾಧಾರಂ
ಅಗಣಿತ ಮಹಿಮಂ । ಮಿಗೆಪೂರ್ಣಕಾಮಂ ॥ ೨ ॥

**ದೃಶ್ಯ : ರಸ್ತೆ**

**ಇಂದ್ರ : ಹಾಡು** **ರಾಗ : ಹಂಸಾನಂದಿ**

ಆರೆನಗೆ ಸರಿಸಮಾನರಾರಿಹರು ।
ಸುರಪತಿಯೊಡೆಯನ ತೋಳ್ ಬಲದೊಳಗೆ ॥ ಪ ॥
ಕಾರ್ಯಶೌರ್ಯದಿ ಮೆರೆವೆ ಮುದದಲಿ ।
ಸಾಧಿಪೆ ಜಯವ ಭೂಮಂಡಲದಿ ।.

ಯುಕ್ತಿಯಿಂದಲಿ ಕಾರ್ಯ ಸಾಧಿಸಿ ।
ಜಯವಗಳಿಸಿ ಮೆರೆವೆ ಮುದದಿ ॥ ೧ ॥
ಬೆಂಬಲ ನೀಡಲು ಜಯವನು ಪಡೆವೆ
ಅಹಂಕಾರದಿ ಮೆರೆ ಅಧಮರ
ಮದವ ಮುರಿದು ಜಯವ ಪಡೆವೆ ॥ ೨ ॥

**ದೃಶ್ಯ : ಸಮುದ್ರತೀರ**

**ಕೈಕಸೆ : ಹಾಡು** **ರಾಗ : ವಲಜಿ - ಆದಿತಾಳ**

ಕಾಯಯ್ಯ ಕರುಣಾಳುವೇ । ಗಂಗಾಧರ ದೇವ
ಕೈಲಾಸವಾಸ ಜಟಾಧರ ನೀನಯ್ಯ ॥ ಪ ॥
ಚರ್ಮಾಂಬರ ನೀ । ಭಕ್ತರ ದಾತ । ಕಾವುದು ಕರುಣಾಳು । ಹೇ ಶಂಕರಾ ॥ ೧ ॥
ಅನುದಿನ ನಿನ್ನನು । ಪೂಜಿಸಲೆಮ್ಮನು । ಕಾಯೋ ಗಿರಿಧರ । ಹೇ ಗೌರೀವರ ॥ ೨ ॥

**ಅಥವಾ**

ಕಾಯೊ ಕರುಣಾಳು ಶುಭರೂಪ ಸುಗುಣ
ಭವಪಾಶ ನಾಶನ ಭುವನೈಕ ಪೋಷಣ ॥ ಪ ॥
ಪೊರೆಯೊ ಪ್ರೇಮಾಪಾರ, ನಿಖಿಲ ಜೀವಾಧಾರ ।
ಸಕಲ ಪಾಪ ನಿವಾರ ದುರಿತಾಪಹಾರ ॥ ಅ.ಪ. ॥
ಪರಮತೇಜೊಪೂರ್ಣ ತನಯರಿಗೆ ತಾಯಾದೆ ।
ದೇವ ದಾಯಾದಿಗಳ ಸರಿಸಮಳು ನಾನಾದೆ ।
ನೂರು ಬಗೆಯ ಬೇಡಿಕೆಯ ಬೇಡೆನೋ ನಾ ದೇವ ।
ಮೂರು ಜನ ಸೂನುಗಳ ಹಿತ ಕಾಯೊ, ಮಾದೇವ ॥ ೧ ॥

**ರಾವಣ : ಹಾಡು** **ರಾಗ : ಆರಭಿ**

ಬೂದಿ ಮೈಯವಗೇಕೆ ಭಾಗ್ಯನಿಧಿ ಗೌರಿ
ಬೀದಿ ಭಿಕ್ಷುಗಗೇಕೆ ಮೋಹನಾಂಗಿ
ಮಸಣವಾಸಿಗದೇಕೆ ಮೋಹ ಮುತ್ತಿನ ಮಾಲೆ
ವಿಷಕಂಠನಿಗೇಕೆ ಕಂಬು ಕಂಠಿ

ಉರಿಗಣ್ಣ, ಕಾಡುವರೆ ಹಿಮ ಶೈಲಜಾತೆಯನು
ಕರೆದೊಯ್ವೆ ಕಳುಹು ಎನ್ನರಮನೆಗೆ

**ದೃಶ್ಯ : ಮಯಾಸುರನ ಆಸ್ಥಾನ**

**ಮಯಾಸುರ : ವೃತ್ತ ||** **ರಾಗ : ನಾಟಿ**

ಬೃಂದಾರಕಾನತ ಮುಕುಂದ ಸುಮಂದಹಾಸಂ
ಇಂದೀವರಾಕ್ಷ ಶರದಿಂದು ಸಮಾನಭಾಸಂ
ಮಂದಾಕಿನೀಭರಿತ ವಂದಿತ ಸುಂದರಾಸ್ಯಂ
ಮಂದಾರ ಗಂಧ ಮಕರಂದ ಮಂದ ವಿಲಾಸಂ

**ಮಯಾಸುರ : ಹಾಡು** **ರಾಗ : ಬೇಗಡೆ - ಅಟ್ಟತಾಳ**

ಎಂತು ಶೋಭಿಪರ್ರೈ ವರಮಂತ್ರಿ ಶೇಖರ
ನಮ್ಮ ಪ್ರಜೆಗಳು ಎಂತು ಶೋಭಿವರ್ರೈ || ಪ ||
ಸಂತಸದೊಳು ಸಕಲ ಜನರು
ಸತತ ಸುಖದೊಳು ಇರುತಲಿಹರೇ
ಸರ್ವಕಾಲದಿ ಸುಜನರೆಲ್ಲರು
ನಿತ್ಯ ಸತ್ಯಾಚರಣೆಯಿಂದ || ೧ ||
ಕಾಲಕಾಲಕೆ ಮಳೆಗಳ್ ಬೀಳುತೆ
ಲೀಲೆಯಿಂದಲಿ ಪ್ರಜೆಗಳೆಲ್ಲರು
ವೇಳೆಯರಿತು ಬೆಳೆಗಳ್ ಬೆಳೆದು
ನೀಲವರ್ಣನ ಭಜಿಸುತಿಹರೆ || ೨ ||

**ಮಂತ್ರಿ : ಹಾಡು** **ರಾಗ : ಶಂಕರಾಭರಣ - ಆದಿತಾಳ**

ಲಾಲಿಸು ರಾಜನೆ ರಾಜೀವನೇತ್ರನೆ
ರಾಜ್ಯದ ಸಂಪದ ಪರಿಯವಿವರಿಪೆ || ಪ ||
ಸಕಲ ಪ್ರಜೆಗಳು ಸತ್ಯದಿಂ ನಡೆಯುತ
ನಿತ್ಯವು ಹರಿಪದ ಭಕ್ತರಾಗಿ ಹರ್ರೈ || ಅ.ಪ. ||

ಪೃಥ್ವಿಯೊಳ್ ದೃಷ್ಟಿಯು ಒತ್ತಿತಾ ಬೀಳುತಾ
ಉತ್ತಮ ರೀತಿಯೊಳ್ ಬೆಳೆಗಳ್ ಬೆಳೆವುವೈ ॥ ೧ ॥

**ಮಾಯಾಸುರ : ಹಾಡು** **ರಾಗ :**

ಎಂತಿಹುದೈ ವರ ಸೈನ್ಯಾಧಿಪ ಸೈನ್ಯದಪರಿ ॥ ಪ ॥
ಸಂತಸದಿಂ ಪೇಳು ಎನಗೆ ವಿವರವೆಲ್ಲವನು ॥ ಅ.ಪ. ॥
ವೀರ ಸೇನೆಗಳ್ ಸಾರಿ ಶತ್ರುವ
ಸೇರಿ ಕದನದೊಳ್ ಸೂರೆಗೈದು
ಧೀರರೆನಿಸುತ ಮೀರಿ ಶೌರ್ಯದಿಂ
ಸಾರಿ ಮೆರೆವರೆ ಧೀರದಳಪತಿ ॥ ೧ ॥

**ದೃಶ್ಯ : ಉದ್ಯಾನವನ**

**ಮಂಡೋದರಿ : ಹಾಡು** **ರಾಗ : ಅಭೋಗಿ - ಆದಿತಾಳ**

ಈ ಅಂದದ ಸುಂದರವನವು ।
ಮನಕಾನಂದ ನೀಡುತಲಿಹುದು ॥
ಅನುದಿನ ಮೈಮನ । ಮರೆವಂತಹ ಹಸಿರಿನ ಸಿರಿಯು ॥ ಪ ॥
ಕುಹೂ ಕುಹೂ ಕೋಗಿಲೆ ಗಾನದದ ಇಂಪು ।
ಹಕ್ಕಿಗಳಿಂಚರ ಮನಸ್ಸಿಗೆ ತಂಪು ।
ಕುಣಿದಾಡುವ ನವಿಲು । ಹಾಡುವ ಗಿಳಿಯು ।
ಮನಕಾನಂದ ಬೀರುತಲಿಹವು ॥ ೧ ॥

**ದೃಶ್ಯ : ಕಾಡುರಸ್ತೆ**

**ರಾವಣ : ಹಾಡು** **ರಾಗ : ಕುರಂಜಿ - ಆದಿತಾಳ**

ದೇವ ದೇವಧವಳಾಚಲ ಮಂದಿರ ಗಂಗಾಧರನಿಗೆ ನಮೋನಮೋ ॥ ಪ ॥
ದಾನವದೈತ್ಯ ಕುಲಾರ್ಣವ ಚಂದಿರ । ಚರ್ಮಾಂಬರನಿಗೆ ನಮೋನಮೋ ॥ಅಪ॥
ವರಸತಿ ಪಾರ್ವತಿ ಮುಖಪಂಕಜವನು । ವಿಕಸಿಪ ರಸಿಕಗೆ ನಮೋ ನಮೋ ॥ ೧ ॥
ಹಾಲಾಹಲವನು ಲೀಲಾಜಾಲದಿ । ಹೀರಿದ ಹರನಿಗೆ ನಮೋ ನಮೋ ॥ ೨ ॥

ಶರಣಜನಾವನ ದುರಿತನಿವಾರಣ ಪರಮಪಾವನಗೆ ನಮೋ ನಮೋ ॥ ೩ ॥
ಕರುಣಾಸಾಗರ ಚಂದ್ರಕಳಾಧರ, ಚಿನ್ಮಯರೂಪಗೆ ನಮೋ ನಮೋ ॥ ೪ ॥

**ನಾರದ : ಹಾಡು** **ರಾಗ : ಹಿಂದೋಳ - ಆದಿತಾಳ**

ಮಂತ್ರ ಪ್ರಭಾವಂ । ಮಂತ್ರಾರ್ಥದೇವಂ ।
ಯಂತ್ರೋದ್ಧಾರಂ । ತಂತ್ರ ವಿದೂರಂ ॥ ೧ ॥
ಜನನ ಕುಠಾರಂ । ಘನವೇದಸಾರಂ
ಮುನಿಕುಲಪಾಲಂ । ಅನುಪಮಲೀಲಂ ॥ ೨ ॥
ವರಗೌರಿ ಸಂಗಂ । ಕರುಣಾಂತರಂಗಂ
ಗುರುಕೃಪಾಂಗಂ । ಗುರುಮಹಲಿಂಗಂ ॥ ೩ ॥

**ದೃಶ್ಯ : ತಪೋವನ**

**ರಾವಣ : ಸಾಕಿ**

ಜಯ ಜಯ ಮಹಾದೇವ । ಶಂಭೋ ಶಿವಶಂಕರ ।
ದೀನ ಜನ ಮಂದಾರ । ಜ್ಞಾನವನ ಸಂಚಾರ ॥

**ರಾವಣ : ಹಾಡು** **ರಾಗ : ಗಂಭೀರ ನಾಟಿ**

ಭಕ್ತವತ್ಸಲ ಬಾರಾ । ನಿತ್ಯ ನಿರ್ಮಲ ತೋರಾ । ನಿನ್ನ ರೂಪವ ॥ ಪ ॥
ಸತ್ಯ ಸುಂದರ ಸ್ವಾಮಿ । ಸತ್ವ ಶೀಲರ ಪ್ರೇಮಿ ॥ ಅ.ಪ. ॥
ಅನ್ಯ ದೈವವ ಅರಿಯೆ । ನಿನ್ನ ಪಾದವ ತೊರೆಯೆ ।
ಸನ್ನುತಾಂಗ ನಿನ್ನ । ಸೌಮ್ಯರೂಪ ನೀ ತೋರುಬಾ ॥ ೧ ॥
ದೇಹಿಯೆಂದರೆ ಕೋಟಿ ಫಲವೀವ ತಂದೆ !
ಪಾಹಿ ಎಂದರೆ ದಿವ್ಯಪದ ತರುವೆಯಿಂದೆ !
ಸ್ನೇಹಮಯಿ, ನಿನ್ನ ಶುಭನಾಮ ಜಪವೊಂದೆ !
ನೇಮದಿಂದಾಚರಿಸಲೀವನಕೆ ಬಂದೆ ॥ ೨ ॥
ವರವರ್ಷಧಾರೆಯನು ಕರೆವ ಕಾರ್ಮುಗಿಲೇ !
ದುರಿತಾಂಧಕಾರವನು ಹರಿದೆಸೆವ ಹಗಲೇ !
ಭರದಿಂದ ಮೈದೋರು, ಭವಪಾಶ ನಾಶ !

ಹರ ಹರ ಮಹಾದೇವ ! ಕೈಲಾಸ ವಾಸ ॥ ೩ ॥
ಮೌನವೇನಿದು ಮಂಗಳಾನನ !
ಬಿನ್ನಹ ಮನ್ನಿಸೆಯಾ ?
ಸೋಮಶೇಖರ ಪ್ರೇಮ ಸಾಗರ
ಕೋರಿಕೆ ತೀರಿಸೆಯಾ ?
ತಾಳಲಾರೆನೊ, ಫಾಲಲೋಚನ
ಈ ಪರಿತಾಪವನಾ
ಸಾಕು, ಸಾಕೀ ಸಾವಧಾನದ ಬಿಂಕದ ಬಿನ್ನಾಣ
ಶಂಕರ, ಶಿವಶಂಕರ, ಪ್ರಳಯಂಕರ, ಅಭಯಂಕರ ॥ ೪ ॥

**ದೃಶ್ಯ : ರಸ್ತೆ**

**ವಿಷ್ಣು : ಕಂದ**

ರಕ್ಷಿಸುವೆ ಆತ್ಮಲಿಂಗವಂ । ನೀಡಿದೆನ್ನ
ಅಭಯದಂತೆ ಬೆದರದಿರು ಸುರಕುಲೇಶ ।
ಇದೆನ್ನ ಕರ್ತವ್ಯಂ । ಸೋದರಿ ಪಾರ್ವತಿಯ ಕೋರಿಕೆಯು ।
ಈಡೇರಿಪುದೆನ್ನ ಮಾಯೆಯೊಳ್ ।

**ದೃಶ್ಯ : ಕೈಲಾಸ**

**ಪಾರ್ವತಿ : ಹಾಡು** **ರಾಗ : .... - ಆದಿತಾಳ**

ನಮೋ ಪ್ರಾಣಲಿಂಗ ಶುಭಾಂಗ
ಸಕಲಜೀವ ಚೈತನ್ಯಾತ್ಮಲಿಂಗ ॥
ನಮೋ ಸಕಲ ಭವದೂರ ಲಿಂಗ ।
ನಮೋ ಅಖಿಲ ತೇಜೋಮಯಲಿಂಗ ॥ ನಮೋ ॥

**ದೃಶ್ಯ : ತಪೋವನ**

**ಈಶ್ವರ : ಕಂದ**

ಪ್ರಸನ್ನರಾದೆವು ನಾವ್ ।
ಏಳು ಭಕ್ತರ ತೇಜೋಮಣಿ ರಾವಣ ।

ಉಸುರು ನಿನ್ನ ಇಷ್ಟಾರ್ಥವಂ ।
ನಡೆಸುವೆನು ನಿನ್ನ ಮನದಾಸೆಯ ನಿಜದೀ ॥

**ನಾರದ : ಹಾಡು** **ರಾಗ .... - ತಾಳ .....**

ನಡೆಸುವರಾರು ನುಡಿಸುವರಾರು
ಲೋಕದಿ ನಿನ್ನೆದೆ ಮಿಡಿಸುವರಾರು
ನಡೆಸಿ ನುಡಿಸಿ ಕಡೆ ಹಾಯಿಸಿ ಪೊರೆಯುವ
ಮೃಢ ನೀನಲ್ಲದೆ ಮತ್ತಾರು ॥ ಪ ॥
ಎಲ್ಲವು ನೀನೇ ಎಲ್ಲೂ ನೀನೇ
ಬಲ್ಲವರೇ ಬಲ್ಲರಯ್ಯಾ
ಮೆಲ್ಲಮೆಲ್ಲನೆ ನಮ್ಮ ಸೇರಿಸಿ ಇಳಿಸಿ
ಘಲ್ಲೆದ್ದಾಗ ಕಂಡು ಕರುಣಿಪರಾರು ॥ ಅ.ಪ. ॥

**ದೃಶ್ಯ : ಕಾಡು ರಸ್ತೆ**

**ನಾರದ : ಹಾಡು** **ರಾಗ : ಹಂಸಧ್ವನಿ - ಆದಿತಾಳ**

ಪರಮೇಶ್ವರಾ ಪರಿಪಾಲಿಪುದು
ಪಾಕಾರಿ ಪ್ರಮುಖ ಫಲದಾಯಕ ॥ ಪ ॥
ಹರಿಶಂಕರ ಪಂಕರುಹಾಸನಾದ್ಯಾದಿವ್ಯ ನಾನಾಕೃತಿ ಭಾಸುರಾ ॥ ಅ.ಪ. ॥
ಅಣುರೇಣು ಕೃಪಾವಾಸ ಚಿನ್ಮಯ ಪ್ರಣಾತಾರ್ತಿಹರಣ ಭಜಕಸಂತರಣ
ಫಣಿತಲ್ಪಶ್ರೀ ಫಣಿಕಂಕಣಾಪಂಕೇ ಜಪೀಠ ನಾರಸಿಂಹರೂಪ ॥ ೧ ॥

**ನಾರದ : ಹಾಡು** **ರಾಗ : .... - ಆದಿತಾಳ**

ಶಂಭೋ ನಿನ್ನ ಭಜನಪಾವನ
ಸದಾ ಮಧುರ ನಿನ್ನ ನಾಮಧ್ಯಾನ ॥ ಪ ॥
ಭವದುಃಖ ಕಳೆವ ನಿನ್ನ ನಾಮ
ಅವಿರತ ಶಾಂತಿಯ ನೀಡುವ ನಾಮ
ಭವಹರ ಶಂಕರ ನಿನ್ನ ನಾಮ ಮಹಿಮೆ
ಕಾಯುತಿರಲು ಸದಾ ಭಯ ನಿರ್ನಾಮ ॥ ಅ.ಪ. ॥

## ದೃಶ್ಯ : ಕಾಡು ರಸ್ತೆ

**ನಾರದ : ಹಾಡು** **ರಾಗ : ಯಮನ್ - ಆದಿತಾಳ**

ಚಂದ್ರಕಳಾಧರ । ಸಾಂಬಸದಾಶಿವ ॥ ಪ ॥
ನೀಲಗಂಗಾಧರ । ಗೌರೀರಮಣ ।
ಪಾಲಯಮಾಂ । ಪರಮೇಶಗಿರೀಶ ॥ ೧ ॥

**ನಾರದ : ಹಾಡು** **ರಾಗ : ....**

ಸಾಕು ಶರಣರ ಸಂಭ್ರಮ । ಸ್ವಾಮಿ ।
ನೋಡೆ । ನೋ ನಿನ್ನ ಈ ಶ್ರಮ ।
ಮುಖದಲಿ ಹಾಸ । ಮನದಲಿ ಮೋಸ ।
ಮಡದಿಯ ಮಾಯದ ಈ ಸಹವಾಸ ॥

**ನಾರದ : ಹಾಡು** **ರಾಗ : ಅಭೇರಿ - ಆದಿತಾಳ**

ಶಿವನಾಮ । ಭವತರಣಾ ।
ಭವತರಣಾ ತವ ಶುಭಚರಣಾ ॥ ಪ ॥
ಕೈಲಾಸ ಗಣನಾಥ ಗಂಗಾಧರ
ಪರಮೇಶ ಗುರುನಾಥ ಗೌರೀವರ
ಕರುಣೇಶ ಶಾರ್ದೂಲ ಚರ್ಮಾಂಬರ
ಓಂಕಾರರೂಪ ಶ್ರೀ ವಿಶ್ವೇಶ್ವರ ॥ ೧ ॥
ಮೋಹನ ಸುಂದರ ಉರಗಭರಣ
ಪಾವನ ಶಂಕರ ಭವಭಯಹರಣ
ಪರಮ ದಯಾಕರ ವಿಶ್ವಾಧಾರ
ಹರ ಹರ ಶ್ರೀ ಶಿವ ಮಹದೇವ ॥ ೨ ॥

## ದೃಶ್ಯ : ದೇವಸ್ಥಾನ

**ಮಂಡೋದರಿ : ಹಾಡು** **ರಾಗ : ಭಾಗೇಶ್ವರಿ - ಆದಿತಾಳ**

ಬಾಲೆಯ ಹೃದಯವನಾವರಿಸಿರುವ ಬಯಕೆಯ ತೀರಿಸೋ ಮಹಾನುಭಾವ ॥ ಪ॥
ಮನದಲಿ ಮೂಡಿದ ಅನನ್ಯಭಾವ ಮನ್ನಿಸಿಕಾಯೋ ಮಹದೇವ ॥ ಅ.ಪ. ॥

ದುಂಬಿಯ ಕಾಯುವ ತಾವರೆಯಂತೆ ಅಂಬರನೋಡುವ ಚಾತಕದಂತೆ ।
ಹಂಬಲ ದಂಬಿಗೆನಾಗುರಿಯಾದೆ ಬೆಂಬಲ ನೀಡೋ । ಸದಾಶಿವ ॥ ೧ ॥
ಮೂಡಿದ ಪ್ರೇಮಾಂಕುರವ ಬೆಳೆಸಿ ಎದೆಯಾಳದ ಹಿರಿಯಾಸೆಯ ಸಲಿಸೋ
ನೋಡಿದ ಕೂಡಲೆ ಮನಸೋಲಿಸಿದ ಹೃದಯೇಶನ ಸೇವೆಯನೀಡೋ ॥ ೨ ॥

## ದೃಶ್ಯ : ಮಂಡೋದರಿ ಅಂತಃಪುರ

**ಮಂಡೋದರಿ : ಕಂದ**

ಪೂಜಿಸಿಹೆ ಮನದಲ್ಲಿ ।
ನಾನವರ ನನ್ನ ಹೃದಯ ದೈವವೆಂದರಿತು ।
ತೊರೆಯಲಾರೆನು ನಾ ಮೂಡಿಹ ।
ಪ್ರತಿಬಿಂಬದವರ ರೂಪ । ಈಡೇರಿಸೆನ್ನ ಮನದಾಸೆ ನೀ ಜನಕಾ ॥

## ದೃಶ್ಯ : ಅಂತಃಪುರ
## (ಕನಸಿನ ದೃಶ್ಯ )

**ಮಂಡೋದರಿ : ರಾಗಮಾಲಿಕೆ** **ರಾಗ : ಸಿಂಧು ಭೈರವಿ**

ಇದೇನೀ ವಿಧಿಲೀಲೆಯೋ । ಅನಾಥೆ ನಾನಾದೆನೋ ॥
ಎನ್ನಾಶಾಭಾವ ನಂದಿ ಧೂಳಾಯಿತೋ ॥

**ರಾಗ : ರಂಜಿನಿ**

ಕಾಯೋ ಮುರವೈರಿ । ಗೋಪಿ ಲೋಲ । ಕಾವಾಡು
ದೀನಳ ಮನದಾಸೆಯರಿತು ॥

**ರಾಗ : ಕಾನಡ**

ಮನದಲಿ ತುಂಬಿಹ ಭಾವ । ಸ್ವಾಗತಿಸಿದೆ ನಿಮ್ಮದೇವ
ಆಸೆಯ ಮೂಡಿಹ ಜೀವ । ಕಾಣ ಬಯಸಿದೆ ದೈವವ ॥

**ರಾವಣ :** ಕರೆಯುವೆ ಬಾರೆ । ಭಾಮಿನಿ ಮನವನು । ಸೆಳೆದ ಕಾಮಿನಿ ।
ಕೈ ಬಿಡಲಾರೆ ಮಾನಿನಿ । ಸುಂದರ ಭಾವ ವಿಹಾರಿಣಿ ।

**ಮಂಡೋದರಿ :** ಏನೇನೋ ಬಯಸೇ ಮನವು ತಾ ಕಾಣದಾಗೆ ನೋವು ॥
ನೀವಾಗೆ ಎನ್ನ ದೈವ । ನಾ ಮರೆವೆ ಎಲ್ಲಾ ನೋವ ॥

ರಾವಣ : ಮನವೆರಡು ಬೆರೆತು ಸೇರಿ । ಆನಂದ ಒಲವ ಬೀರಿ ।
ನೀನಾಗು ಬಾಳದೀಪ । ನಾನರಿವೆ ಮನದ ತಾಪ ॥

**ದೃಶ್ಯ : ಮಾಯಾಸುರನ ಆಸ್ಥಾನ**

**ಮಯಾಸುರ : ಕಂದ**

ಹರಿಯೇ ನೀ ಪರಂಧಾಮ । ಪರಮಾತ್ಮ ।
ದೀನೋದ್ಧಾರ । ಅಸುರ ಸಂಹಾರ ॥
ಭಕ್ತರ ಭಕ್ತನೀ । ನಿಜಗುಣ ಧಾಮ ।
ಕಾಯೋ ಕರುಣಾಳು । ಶರಣಾಂತನಿ ಸೀಮ ।

**ನಾರದ : ಹಾಡು** **ರಾಗ : ಮಾಂಡ್ - ಆದಿತಾಳ**

ಕಮಲಾಧವ । ಘನವೈಭವ । ಅಮಿತಾ ಪ್ರಭಾವ ।
ಕಮನೀಯ ದೇವ ॥ ಕಮ ।
ಜಗತೀ ವಿಶಾಲ । ಜನನಾದಿ ಮೂಲ ।
ಶತ ಪತ್ರ ಮೂಲ । ವರಮೌನಿಜಾಲ ॥ ಕಮ॥
ಶೃತಿಗಾನ ಲೋಲ । ನತದೇವ ಜಾಲ ।
ನಿಗಮ ವಿಧಾನ ಸುಗುಣ ಪ್ರಭಾವ ॥ ಕಮಲಾ ॥

**ದೃಶ್ಯ : ರಸ್ತೆ**

**ನಾರದ : ಹಾಡು** **ರಾಗ : ಬೇಹಾಗ್ - ಆದಿತಾಳ**

ನಿಜಗುಣ । ನಿರಂಜನ । ನಾರಾಯಣ ॥
ಪಾಪ ನಿವಾರಣ । ತಾಪಹರಣ ।
ಭವ ಭಯ ಹರಣ । ತಾರಕಾ ನಿಪುಣ ॥ ನಿಜ ॥
ಜ್ಞಾನಗೋಚರ ಶೃತಿ । ಗಾನ ವಿನೋದ ।
ದೀನ ಜನಾವನ । ದಾನವ ಮರ್ದನಾ ॥ ನಿಜ ॥

## ದೃಶ್ಯ : ಕಾಡು - ದೇವಸ್ಥಾನ

**ರಾವಣ : ಸೀಸಪದ್ಯ**

ನೀನೊಲಿದು ನೀಡಿದ ಕೃಪಾಮೃತಕೆ ಹೊರತಾದ ನಿರ್ಭಾಗ್ಯ ನಾನಾದೆನೋ ।
ಮಾತೆಗೆ ವಚನ ನೀಡಿ ಬಾರಿಬಾರಿಗೂಸೋತ ಮತಿಗೇಡಿ ಮಗನಾದೆನೋ ।
ಬಾಗಿಲಿಗೆ ನೀಬಂದು ಹೊಸಿಲಾಚೆಯೇ ನಿಂದು ಕೋಪಿಪುದೆ ಕರುಣಾಮಯ ।
ಪ್ರಾಣ ಹೋದರು ಸರಿಯೆ. ನಿನ್ನಡಿಯನಾ ತೊರೆಯೆ. ಪತಿಕರಿಸೊ ಪರಮೇಶ್ವರ।

**ರಾವಣ : ಹಾಡು** **ರಾಗ : ಮಾಯಾ ಮಾಳವ ಗೌಳ - ಏಕತಾಳ**

ತರವೇ ವರದಾನ । ಈ ನೀತಿ ಬಾಹಿರಗೆ ।
ಪರಮ ಪಾಪಿಗೆ । ಸ್ನೇಹವ ಬೀರುತ
ನೀನ್ಯೆತರೆ । ದ್ರೋಹವ ಸಾಂಗ್ಯೆದೆನೋ ।
ಮೋಹಗೊಂಡ ಕಡು ಮುಂದಾದ ನನ್ನ ।
ದಹಿಸದೇ ದಯೆತೋರಲೇಕೋ ಹರ ।
ಮಂಗಳದಾತೆಯ । ಮಾತೆ ಪಾರ್ವತಿಯ।
ಮತಿಹೀನ ನಾ ಮೋಹಿಸೆ ಕಂಗಳಲ್ಲೇ ।
ಕೈಯ್ಯಾರ ಇಂದು ಕಾವಿಯ ಸೀಳದೇ ।
ಆತನ ಬೇಡಿಕೆ ಏನಾದರೂ ದಾತಾ ನೀನೀವುದೇ ।
ಧೂರ್ತನೆನ್ನ ಕಡು ವಿರೋಧ ಚರಿಯಾ ।
ಸಹಿಪುದೇ ಸುಗುಣಾಂತ ರಂಗ ಶಿವ ॥ ತರವೇ ॥

**ರಾಗ : ಸಾವೇರಿ**

ತಾಳೆನೋ ಸಲೆಗಳಿಸಿದ ಪಾಪ ಸಂತಾಪ ।
ಸುಡಲಿ ಮಮ ಬಾಳನು । ಕಡೆಗಾಣಿಸೋ
ಇನ್ನಾದರೆನ್ನ ಪುಣ್ಯಹೀನ ದುರ್ಜೀವನ
ಮಣ್ಣಾಯಿತು ಮತಿ । ಇನ್ನೇತರ ಗತಿರೀತಿ ।
ಹೋಳಾಗಲಿ ತಲೆ । ಹಾಳಾಗಲಿ ತನುವಿಲ್ಲೇ ।
ಹೋಳಾಗಲಿ ತಲೆ । ಇಲ್ಲೇ ಹಾಳಾಗಲಿ ತನುವಿಲ್ಲೇ
ಮನ್ನಿಸೋ ಮನ್ನಿಸೋ ತಲೆ ಕಡಿದುಕೊಳ್ಳುವೆನು ।
ಶಿರವ ಸ್ವೀಕರಿಸೋ ದೇವ । ಸ್ವೀಕರಿಸೋ ಶಿರವಾ ದೇವಾ ।

ನಿನ್ನ ಮಾಲೆಯೊಳು ಇರಿಸೋ । ಧರಿಸೋ । ವಾದದ
ಹೊರೆ ಇಳಿಸೋ ಅಳಿಸೋ ॥

**ರಾವಣ : ಹಾಡು** **ರಾಗ : ಮಾಂಡ್ - ಆದಿತಾಳ**

ಮಹಾದೇವನೇ ಮಹಾಮಹಿಮನೇ ಗ್ರಹಿಂವನೇ ಪಾಹಿ ॥ ಪ ॥
ಮಹಾಪರಾಧಿಯ ಮನ್ನಿಸದೇ ನೀ ಮಹೋಕ್ಷಮಾಭರಣಾ ॥ ಅ ಪ ॥
ಸದಾಶಿವೋ ಹಂ ಸದಾಶಿವೋಹಂ ಚಿದಾನಂದ ಮೂರ್ತಿ
ಸುರಚಿರ ಶಂಭೋ ಭವಹರ ಶಂಭೋ ಹರ ಹರ ಮಹದೇವಾ ॥ ೧ ॥

**ರಾವಣ : ಹಾಡು** **ರಾಗ .... - ತಾಳ ....**

ತಾಯಿಯನು ಕಾಮಿಸಿದ ಕಡುಪಾಪಿ ಕಣ್ಗಳು
ಸ್ವೀಕರಿಸೋ ತಂದೆ
ತಾಯಿಯನು ಕಾಮದಿಂ ಕೂಗಿ ಕರೆದೀ ಹೀನನಾಲಿಗೆಯು
ಕತ್ತರಿಸಿ ಸ್ವೀಕರಿಸೊ ತಂದೆ
ತಾಯಿಯನು ಮಡದಿಯಾಗಿಸಿಕೊಳಲು ಚಿಂತಿಸಿದ ನೀಚ
ತಲೆಗಳ ಕಡಿವೆ ಸ್ವೀಕರಿಸೊ ತಂದೆ
ನಾಯಿಗೂ ಕೀಳಾಗಿ ವರ್ತಿಸಿದ ಈತನುವ ತುಂಡರಿಸಿ
ಚೆಲ್ಲುವೆ ಸ್ವೀಕರಿಸೊ ತಂದೆ

## ದೃಶ್ಯ : ರಸ್ತೆ

**ನಾರದ : ಹಾಡು** **ರಾಗ : ಭೀಮ ಪಲಾಸ್ - ಆದಿತಾಳ**

ನಾಗಶಯನ । ನಾರಾಯಣ । ಕಾಪಾಡು ದೀನಾವನ ॥ ದೇವ ॥
ಕಪಟ ನಾಟಕ ಸೂತ್ರದಾರಿ ನಿನ್ನಯ ಒಲುಮೆ । ಪಾವನ ಚೆಲುಮೆ ॥ ೧ ॥
ಭಕ್ತರ ಭಕ್ತ । ಪರಮಾತ್ಮನೇ ನೀ ॥ ಕಾಯೋ ಶರಣರ ದೀನಾವನ ॥ ೨ ॥

## ದೃಶ್ಯ : ವೈಕುಂಠ

**ನಾರದ : ಹಾಡು** **ರಾಗ : ವಲಚಿ - ಆದಿತಾಳ**

ನಾರಾಯಣ । ಹೇ ನಾಗಶಯನ ॥ ಪ ॥
ನಿನ್ನ ನಾಮವ । ಎಂದೂ ಜಪಿಸುವ । ಭಕ್ತರನು

ಕಾಯ್ವ ಭಕ್ತೋದ್ಧಾರ ನೀನ್ನೈ ॥ ನಾರಾಯಣ ॥
ಚಕ್ರಧಾರಿ ಹೇ ಪರಮಾತ್ಮಾ । ಪನ್ನಗಶಯನ ।
ನಾರಾಯಣ । ವೈಕುಂಠವಾಸಾ ಲಕ್ಷ್ಮೀಲೋಲ ।
ಶರಣರ ದೈವ । ಆಪದ್ಬಾಂಧವಾ ॥ ೨ ॥

## ದೃಶ್ಯ : ಕಾಡು - ಸಮುದ್ರತೀರ

**ವಿನಾಯಕ : ತತ್ವಪದ**

ಈ ದೇಹ ಮೂರು ದಿನ ಅಲ್ಲವೇನೋ । ಮೃತ್ಯು ।
ಸನ್ನಾಹಬೆನ್ನಹಿಂದೆ. ಬಲ್ಲೆಯೇನೋ ॥ ಪ ॥
ಅಷ್ಟರಲ್ಲಿ ಮಾನವ ಆದೆ ಯೇಕೊ ದಾನವ
ಐಸಿರಿಗೆ ಆಳಾಗಿ ಬಾಳಲೇಕೊ ॥ಅಪ॥
ಕೈಯಲ್ಲಿ ಕೈಲಾಸ ಕಾಣಬೇಕೇ ಸುಖ
ಸಂತೋಷ, ಸಂಪೂರ್ಣ ಹೀರಬೇಕೆ ?
ಧರೆಯೆಲ್ಲ ಆಳುವಾಸೆಯೇಕೋ ಯಮ
ಕಿಂಕರರು ಕಾದಿಹರು ಕಾಣೆಯೇಕೋ ॥ ೧ ॥
ಅತಿ ಆಸೆ ಮಾನವನ ಶತ್ರುವಂತೆ,
ಲೋಕ ಹಿತವೊಂದೆ ಜೀವನದ ಸೂತ್ರವಂತೆ ।
ಕರದಲ್ಲಿ ಕಾಣುವ ದೇವನಂತೆ
ಶಿವ ಕಿಂಕರರ ಕೈಬಿಡದೆ ಕಾವನಂತೆ ॥ ೨ ॥

## ದೃಶ್ಯ : ಕಾಡುರಸ್ತೆ

**ನಾರದ : ಹಾಡು** **ರಾಗ : ಬಿಲಹರಿ - ಆದಿತಾಳ**

ಶಂಕರ ಗಿರಿಜೇಶ ಸದಾಶಿವ ॥ ಪ ॥
ಲಂಕಾಧೀಶ ಬಿಂಕವಿನಾಶ ಪಂಕಜಾಂಡ ಪೋಷ ಸದಾಶಿವ ॥ ಅ.ಪ. ॥
ಲೋಕಾಧಾರ ನಾಕವಿಹಾರ ಶ್ರೀಕರಕೃಪಾವಾರ ಸದಾಶಿವ ॥ ೧ ॥
ನಾಗವಿಭೂಷಯೋಗಿ ಹೃದೇಶ ಆಗಮಶ್ರುತಿ ಘೋಷಾ ಸದಾಶಿವ ॥ ೨ ॥
ಅಂಗಜಹರಣ ತುಂಗಸುಚರಣ ಜಂಗಮಾದಿ ಪೂರ್ಣಾ ಸದಾಶಿವ ॥ ೩ ॥

## ದೃಶ್ಯ : ಮಂಡೋದರಿ ಅಂತಃಪುರ

**ಮಂಡೋದರಿ : ಹಾಡು** **ರಾಗ : .....**

ಪಾಲಿಸೆ ದೇವಿ । ಪಾಮರಳಾದೆನ್ನ ನೀ ಪಾಲಿಸೆ ॥
ಶರಣರ ಪೊರೆವ । ಶರಣೆಯೆ ನೀ ।
ಕಾಪಾಡು ನೀ ಪಾಮರಳಾದೆನ್ನ ॥

## ದೃಶ್ಯ : ರಸ್ತೆ

**ನಾರದ : ಹಾಡು** **ರಾಗ : ಅಭೇರಿ - ಆದಿತಾಳ**

ಪ್ರಭು ನಿನ್ನ ಧ್ಯಾನ । ಮೋಕ್ಷವಿಧಾನ ।
ಅಭವ ವಿಭವ ಬಹು ನಟನಾ ॥ ಪ ॥
ಪ್ರಕೃತಿಯು ನೀನೆ ಪುರುಷನು ನೀನೆ
ಏಕೋ ನಾರಾಯಣನು ನೀನೆ ॥ ಅ.ಪ. ॥
ಪರಮಾತ್ಮ ನೀನೇ । ಜೀವಾತ್ಮ ನೀನೇ ।
ಅದ್ವೈತ ಬೋಧಕ । ಅಮೃತಾತ್ಮ ನೀನೇ ॥ ೧ ॥

## ದೃಶ್ಯ : ಸಮುದ್ರತೀರ

**ನಾರದ : ಹಾಡು** **ರಾಗ : ಕಲ್ಯಾಣಿ - ಆದಿತಾಳ**

ಗೋಪಾಲಮಾಂ ಪಾಲಯಾ ಕೃಪಾಲಯ ॥ ಪ ॥
ಗೋಪಿವಿಧೇಯಾ ಸುರಮೌನಿಗೇಯಾ ॥ ಅ.ಪ. ॥
ನೀರಧಿ ಗಂಭೀರ ನಿಗಮಾಂತ ಸಂಚಾರ
ಧಾರಿತ ಮಂದರ ದಾನವ ಸಂಹಾರ
ನೀರಜನೇತ್ರ ಶ್ರೀ ಘನಲೀಲ ಗೋಪಾಲ ॥ ೧ ॥
ರಾಧಿಕ ಸಮಸಾಯಕಾ ಸರ್ವಾಧಿಕಾ
ಸಾಧಕ ಫಲದಾಯಕಾ ಜಗದಾಧಾರ
ಬಾಧಿತ ಭವಜಾಲ ಮಾಧುರ್ಯ ಗುಣಶೀಲಾ
ಮೋದಿತ ವ್ರಜಬಾಲ ಮುರಳೀವಿಲೋಲಾ ॥ ೨ ॥

## ಮಂಗಳಂ

**ರಾಗ : ನೋಟ್ - ಏಕತಾಳ**

ಸದಾ ಗಿರಿಜಾ ಸಹಿತ ದಯಾಸಾಗರ ಶಂಭೋ ॥ ಪ ॥
ಜ್ಞಾನಾನಂದ ವಿಕಾಸ ನಾನಾವೈಭವ ಭಾಸಾಧೀನ ಜನೋದ್ಧಾರ ಶಿವ
ಶ್ರೀನರಹರಿ ಪೂಜಿತ ಪಾದ ॥ ೧ ॥
ಮಂಗಳಕರ ನತಪಾಲ ಭೃಂಗೀ ನಾಟ್ಯ ವಿಲೋಲ
ತುಂಗ ಜಯಾ ಪಾಂಗ ಜಯ ಗಂಗಾಧರ ಮಂಗಳರೂಪ ॥ ೨ ॥



# ಸಂಪೂರ್ಣರಾಮಾಯಣ



ಕರ್ನಾಟಕ ನಾಟಕ ಪಿತಾಮಹ
**ಬೆಳ್ಳಾವೆ ನರಹರಿಶಾಸ್ತ್ರಿಗಳು**



ರಂಗಭೂಮಿಯ ಆಂಜನೇಯ
**ರೊಳ್ಳಿ ವೆಂಕಟಾಚಲಯ್ಯ**

## ೧. ಪಾದುಕಾ ಪಟ್ಟಾಭಿಷೇಕ

**ಪ್ರಾರ್ಥನೆ : ಹಾಡು** **ರಾಗ : ಕಲ್ಯಾಣಿ - ಆದಿತಾಳ**

ರಾಮಜಯತುಶ್ರೀ ರಾಮಸುನಾಮ
ಅಮರವಿನುತಪದ ಅಮಿತಫಲಪ್ರದ ॥ ಪ ॥
ರಾಮ ರಾಮರವಿರಾಕ್ಷಸಭೀಮ
ರವಿಕುಲಸೋಮರಾಜಲಲಾಮ
ಪರಮಪುರುಷ ಹರಿ ಮಾಧವ ಶ್ರೀರಘು ॥೧॥

### ದೃಶ್ಯ : ರಸ್ತೆ

**ಸೂತ್ರಧಾರ : ವೃತ್ತ ॥** **ರಾಗ : ನಾಟಿ**

ಶ್ರೀ ಕಲ್ಯಾಣ ಗುಣಾಭಿರಾಮ ಜನವಂ ಧರ್ಮಸ್ವರೂಪಂ ಕೃಪಾ
ಲೋಕ ವಾನರರಾಜ ವಾನರಜನುತಂ ಪಾಥೋಧಿ ಸಂತಾರಣಂ
ಲೋಕಾನಂದ ಜಯಂ ವಿದೇಹ ತನುಜಾ ನೇತ್ರೋತ್ಪಶ್ರೀಲಸ
ದ್ರಾಕಾಚಂದ್ರ ಮನೆಮ್ಮೊಳೀಗೆ ನಲವಿಂದಾನಂದವಂ ರಾಘವಂ

**ಸೂತ್ರಧಾರ: ಹಾಡು** **ರಾಗ : ಶಂಕರಾಭರಣ - ಆದಿತಾಳ**

ಶ್ರೀರವಿಕುಲಾಂಬುಧಿ ಚಂದ್ರರಾಮ
ಸೀತಾಸಮೇತ ಶ್ರಿತಪಾರಿಜಾತ ॥ ಪ ॥

ನೀರಜಾಸನಾದಿ ನಿರ್ಜರಸ್ತುತ
ನೀರದಾಭನೀಲ ನೀತಿಧರ್ಮಪಾಲ ||ಅ.ಪ. ||
ವೇದಾಗಮಾದಿ ವೇದ್ಯ ಚಿನ್ಮಯ
ವಿಶ್ವಾತ್ಮಕ ಸಂಸಾರತಾರಕ
ಸಾಧುಮಾರುತಾತ್ಮಜ ಸೇವಿತ
ಶ್ರೀಧಾಮಲಕ್ಷ್ಮೀನೃಸಿಂಹಪಾಹಿ || ೧ ||

**ಸೂತ್ರಧಾರ : ಹಾಡು** **ರಾಗ : ವಸಂತ - ರೂಪಕತಾಳ**

ರಾಮಚಂದ್ರಭಾವಯಾಮಿ ರಘುಕುಲತಿಲಕ ಮುಪೇಂದ್ರ || ಪ ||
ಭೂಮಿಜಾ ನಾಯಕಂ ಭುಕ್ತಿಮುಕ್ತಿದಾಯಕಂ
ನಾಮಕೀರ್ತನತಾರಕಂ ನರವರಂಗತ ಮಾಯಿಕಂ || ಅ.ಪ. ||
ಸಾಕೇತ ನಗರೇ ನಿವಾಸಂ ಸಾಮ್ರಾಜ್ಯಪ್ರದ ಹನುಮಂತಂ
ರಾಕೇಂದುವದನಂ ಭಾಗವಂತಂ ರಮಣೀಯಕಲ್ಯಾಣ ಗುಣವಂತಂ
ಕಾಕುಸ್ಥಂ ಧೀಮಂತಂ ಕಮಲಾಕ್ಷಂ ಶ್ರೀಮಂತಂ
ನಾಗೇಶನುತಮನಂತಂ ನರಗುರುಗುಹವಿಹರಂತಂ ।

**ದೃಶ್ಯ : ದಶರಥನ ದರ್ಬಾರ್**

**ದಶರಥ : ಹಾಡು** **ರಾಗ : ತೋಡಿ - ಆದಿತಾಳ**

ಮಂತ್ರಿಯೆ ಕೇಳು । ಇಂತು ನಾನು ರಾಜ್ಯವ ।
ಸಂತಸದಿಂದಾಳಿ । ವಿಶ್ರಾಂತಿಯ ನಾನಾಂತೆ || ಪ ||
ಕೋಸಲ ದೇಶವ । ಆ ಸುಕುಮಾರಂಗೆ ।
ಲೇಸಿನಿಂ । ಪಟ್ಟಾವ ಆಶಿಸಿ ಕಟ್ಟುವೆನು || ೧ ||

**ರಾಮ : ಹಾಡು** **ರಾಗ : ಜಂಜೂಟಿ - ರೂಪಕತಾಳ**

ತಂದೆಯೆ ತವ ಪಾದಕೀಗ ವಂದಿಸುತ್ತಾ ನಾನು ಬೇಡುವೆ || ಪ ||
ಇಂದು ಎನ್ನನು ಕರೆಸಿದಾಪರಿ । ಚಂದದಿಂದ ಪೇಳು ತಂದೆಯೆ || ಅ.ಪ. ||
ಕರೆಸಿದ ಪರಿಯನು ಭರದೊಳಗರುಹುನೀ ।
ಸರಸ ಸಮರ ಧೀರ ಶೂರ || ೧ ||

## ದೃಶ್ಯ : ರಸ್ತೆ

ಮಂಥರೆ : ಹಾಡು — ರಾಗ : ಬೇಹಾಗ್ - ಆದಿತಾಳ

ಏನೀ ಸಂಭ್ರಮವು ಈ ನಗರದೊಳೇನೀ ಸಂಭ್ರಮವು ।
ಕೇರಿ ಕೇರಿಗಳೊಳು ಚಾರು ಶೃಂಗಾರದ
ತೋರಣ ಲತೆಗಳು ತೋರುತಲಿರುವುದು ॥ ಪ ॥
ಎತ್ತಲು ನೋಡಲು ಮುತ್ತಿನ ತೋರಣ ।
ಚಿತ್ತಕಾನಂದವ ನೀಡುತಲಿರುವುವು ॥ ೧ ॥

## ದೃಶ್ಯ : ಕೈಕೆ ಅಂತಃಪುರ

ಕೈಕೆ : ಹಾಡು — ರಾಗ : ಶಂಕರಾಭರಣ - ಚಾಪುತಾಳ

ಎಂತಿವೆ ಮಾಲೆಗಳು ಸ್ವಾಂತವನೆ ನಲಿಸುತಲೆಂ ॥ ಪ ॥
ಕಂತುಶರಾವಳಿಯಂತೆ ಕಂಗೊಳಿಸುತಲೆಂ ॥ ಅಪ ॥
ಮಂಗಳಕರ ರಘುಪುಂಗವ ರಾಮಗೂ ಅಂಗನಾಮಣಿ ಸೀತೆಗೂ
ಸಿಂಗರಿಸುತಲಿವಂ ಪೊಂಗುವಾನಂದದೆ
ರಂಗಿನಾರತಿಗೈವೆ ತುಂಗ ವೈಭವದಿಂದ ॥ ೧ ॥

ಕೈಕೆ : ಹಾಡು — ರಾಗ : ಕಾಂಭೋಜಿ - ಮಿಶ್ರಚಾಪುತಾಳ

ಮಂಥರೆ ಸಂತೋಷವಾಂತೆನಾ ॥ ಪ ॥
ಕಂದನಾದ ಶ್ರೀರಾಮಗೆ ಇಂದು ರಾಜ್ಯ ಪದವಿಯೊದಗಲ್ ॥ಅ.ಪ. ॥
ರಘುಕುಲದೀಪನು ಅಘ ಪರಿಹಾರಕನು
ಸುಗುಣನು ಸುಂದರನು ನಿಗಮಾಗಮ ವಂದಿತನು ॥ ೧ ॥
ರಾಮಚಂದ್ರಗೀ ರಾಜ್ಯವ ಪ್ರೇಮದಿಂದ ಕಾಂತ ನೀವ
ನೇಮಿಸಿದ ವಾರ್ತೆ ಕೇಳಿ ಈ ಭುವಿಯೊಳ್ ಧನ್ಯಳಾದೆ ॥ ೨ ॥

ದಶರಥ : ಕಂದ

ಸುದತೀಮಣಿ ಸೊಬಗಿನ ಕಣಿ
ಮೃದು ತರ ಮಧುಕೀರವಾಣಿ ।

ಸದ್ಗೃಹಿಣಿ ರಾಣಿ ಪಲ್ಲವ ಪಾಣಿ
ಮುದದಿಂ ಮಾತನಾಡೆ ಪಲ್ಲವ ಪಾಣಿ ।

**ದಶರಥ : ಕಂದ**

ಪರಮಮಹೋತ್ಸವ ಕಾಲದಿ
ಪರಿಪರಿ ಆನಂದದಿಂದಿರದೆ ದುಗುಡದಿಂದ
ಕರಗುತೆ ಕೊರಗುತೆ ಮೌನದೊಳು ಮಲ
ಗಿರಲು ಕಾರಣವ ಪೇಳು ಸುಗುಣಾಭರಣೆ

**ದಶರಥ : ಹಾಡು** ರಾಗ: ಮಾರ್ಗಹಿಂದೋಳ - ಆದಿತಾಳ

ಕೋಪ ಮಾಳ್ಪರೆ ಮಾನಿನಿಮಣಿಯಳೆ ॥ ಪ ॥
ವ್ಯಾಕುಲವ ತೊರೆದು ಶೋಕಿಸುವರೆ ನೀರೆ
ತಪ್ಪಿತ್ತೆನ್ನೊಳು ತೋರದೆ ಭಾಮಿನಿಯೇ ॥ ೧ ॥
ಕರ್ಪೂರಗಂಧಿಯೇ ಒಪ್ಪದೀಗ ಬಾರೆ
ಜೋಡಿಸಿ ಕರವ ಬೇಡುವೆನು ನಾರಿ
ಕಾಡದೆ ನೀ ದಯದಿ ಬೇಡಿ ಕೊಂಬೆ ॥ ೨ ॥

**ದಶರಥ : ಕಂದ**

ಭರಸಿಡಿಲಘಾತವೋ ಮೇಣ್
ಪರುಷ ವಿಷ ವ್ಯಾಪ್ತಿಯೋ ಕಾಣೆ
ಸರಸವಿದೆಂದರಿತು ನಾ
ಅರಸಿಯಳಿಗೆ ಭಾಷೆ ಇತ್ತು ಕೆಟ್ಟೆನಕಟಾ

**ದಶರಥ : ಹಾಡು** ರಾಗ: ದರ್ಬಾರಿ ಕಾನದ - ಆದಿತಾಳ

ಛಲವು ರಾಮನೊಳು ಬೇಡ
ಲಲನೆ ದಯದಿಂದನೋಡೆ

ಬಿಡುಕೋಪ ರಘುರಾಮನೊಳು ॥ ಪ ॥
ಭರತಗೆ ರಾಜ್ಯವ ತ್ವರಿತದಿಂದೀಯುವೆನು ಕೈಕಾ ಕಾಂತೇ
ಕರುಣಿಸು ವರವ ಕರವ ಮುಗಿವೆ ॥ ೧ ॥

**ದಶರಥ : ಹಾಡು** **ರಾಗ : ಹಿಂದೋಳ - ಆದಿತಾಳ**

ಮಾನಿನಿ ಈ ನುಡಿಯ ಮನ್ನಿಸು ನೀರೆ ॥ ಪ ॥
ಮಾನವಂತನು ರಾಮನು ಏನವರಾಧ ಗೈದ ॥ ಅ.ಪ. ॥
ಅಪವಾದಕೆನ್ನನು ಗುರಿಗೈವರೇನೆ ನೀನು
ಅವರಾಧಿಯಲ್ಲ ರಾಮನು ಕೃಪೆಯಿಂದ ನೋಡು ದೇವಿಯೆ ॥ ೧ ॥

**ದಶರಥ : ಹಾಡು** **ರಾಗ : ಮುಖಾರಿ - ಆದಿತಾಳ**

ಕಳುಹಲಾರೆ ರಾಮನ 'ಇನ ಕುಲತಿಲಕನಾ ॥ ಪ ॥
ಕಳುಹಿ ಜೀವಿಸಲಾರೆ ಕಂದರ್ಪ ಗಾತ್ರನಾ
ಕಮನೀಯ ನೇತ್ರನಾ ಕಾರುಣ್ಯ ಪಾತ್ರನಾ ॥ ಅ.ಪ. ॥
ಅಂದವಾದ ಎನ್ನಯ ಮಂದಿರವನ್ನು ಬಿಟ್ಟು
ಸುಂದರಿ ಕಳುಹಲೇ ಶ್ರೀರಾಮಚಂದ್ರನಾ ॥ ೧ ॥

**ರಾಮ : ಕಂದ**

ಶಿವ ಶಿವಾ ಇದೇನಾಶ್ಚರ್ಯವು
ಭುವಿಯೊಳ್ ಸ್ತ್ರೀಯರ ಮನವರಿಯಲು ಅಸಾಧ್ಯಂ
ಕಿವಿಗೊಡದೆ ಪೋದನು ತಂದೆಯು
ಕವಿದಿಹ ಶೋಕಾಗ್ನಿಯೊಳ್ ಪ್ರಾಣ ಬಿಡುವುದಿದು ಸತ್ಯಂ

**ಅಥವಾ**

**ರಾಮ : ಕಂದ**

ಘನಕುಲ ಗಿರಿಗಳು ಚಲಿಸಲಿ
ದಿನಪನುದಯಿಸಲಿ
ಪಶ್ಚಿಮಾಂಬುದಿಯೊಳೀಗ ಜನನಿ
ಜನನಿ ಜನಕನಾಡಿದ ಘನವಾಕ್ಯಗಳನಾ

ವಿನಯದಿಂ ನಡೆಯಿಸುವೆ
ನಿಮ್ಮಿಷ್ಟಾರ್ಥವನು ಇದು ಸತ್ಯ ಜನನೀ

**ರಾಮ : ಕಂದ**

ಸಪ್ತಾಂಗ ಒಪ್ಪುವೀ
ಸಾಮ್ರಾಜ್ಯ ಭಾರಮಂ
ಧರಿಪುದಂ ದಾಂಟಿಸಿದ ಮಾತೆ ನೀನು
ಭರತನಿಗೂ ಮಿಗಿಲಾದ
ಭವ್ಯ ಪ್ರೇಮವ ನೆನಗೆ ಭೇದವಿಲ್ಲದೆ
ಬಗೆದ ಮಾತೆ ನೀನು
ವನವಾಸ ನೆಪದಿಂದ ಮುನಿಜನರ
ಸೇವಿಸುವ ಘನ ಪದವಿ
ಎನಗಿತ್ತ ಮಾತೆ ನೀನು
ಹೆಚ್ಚೇನು ನೀನೆನಗೆ ಪ್ರತ್ಯಕ್ಷ ಮಾತೆ
ಹೆಚ್ಚಿನಾಶೀರ್ವಾದ ಇನ್ನುಂಟೆ ಪೂತೆ
ನಿಶ್ಚಯದಿ ವನವಾಸಕ್ಕೊಪ್ಪಿದೆ ಸುನೀತೆ
ಎಚ್ಚರಿಸು ಪಿತನನ್ನು ನಮಿಸುವೆನು ಮಾತೆ

**ದೃಶ್ಯ : ಅರಮನೆ - ಬೃಂದಾವನ**

**(ಸೀತೆ ದೇವತೆಯನ್ನು ಪೂಜಿಸುತ್ತಿರುವಳು)**

**ಸೀತೆ : ಹಾಡು** **ರಾಗ : ನಾಟಿಕುರಂಜಿ - ಆದಿತಾಳ**

ತುಳಸೀ ದೇವಿಯೆ ಬಾ ಗುಣಮಯೆ ಸದಯೆ ತಾಯೆ
ನೀಕಾಯೆ ಶುಭೋದಯೆ ವಾಂಛಿತಪ್ರದೇ
ತಾಯೆ ಸರಸಿಜ ಸಮವದನೆಯೆ ॥ ಪ ॥
ಪಾಲಿಸು ಮಾತೆ ತ್ರೈಲೋಕ್ಯ ಪೂಜಿತೆ
ಪಾಲಿಸು ಮಹಿತೇ ಲೀಲಾವಿಲಸಿತೇ ॥ ಅ.ಪ. ॥

**ಸೀತೆ : ಹಾಡು** ರಾಗ: ಬೇಹಾಗ್ - ಆದಿತಾಳ

ಹರುಷವು ಸೂಚಿಪುದು ಮನಕೆ
ಸುರಚಿರ ವಾರ್ತೆಯ ಕೇಳಲು ಮನಕೆ ॥ ಪ ॥
ಮಮ ಪ್ರಾಣಕಾಂತಗೆ ಎನ್ನ ಮಾವ ಅತ್ತೆಯರು
ಘನತರ ಪಟ್ಟವ ಹರುಷದಿ ಕಟ್ಟಲು ॥ ೧ ॥
ಇದು ರತ್ನಹಾರವು ಇದು ಪಚ್ಚೆ ಪದಕವು
ಹರುಷದಿ ಈವೆನು ಭೂಸುರರಿಗೆ ನಾ ॥ ೨ ॥

**ಸೀತೆ : ಹಾಡು** ರಾಗ : ತೋಡಿ - ಮಿಶ್ರತಾಳ

ಏತಕೆ ಚಿಂತಿಪೆ ನೀನೇತಕೆ ಚಿಂತಿಪೆ
ಕರುಣಾಭರಣಾ ರಮಣಾ ಶರಣಾ ॥ ಪ ॥
ಲೋಲನೆ ಚಿಂತೆಯ ಮಾಡುವುದೇನಿದು
ಜಾಲವ ಮಾಡದೆ ಪೇಳ್ವೆ ಬಾಳ್ವೆ ತಳೆಯ್ಕೆ ಮುದವಾ ॥ ಅ.ಪ. ॥
ಎನ್ನೊಳಗಲ್ಲದೆ ಇನ್ನೆಲ್ಲೊರೆವೆ
ದಂದುಗವನ್ನೂ ಬಿಡು
ಪೇಳ್ವೆ ಬಾಳ್ವೆ ತಳೆಯ್ಕೆ ಮುದವಾ ॥ ೧ ॥

**ಅಥವಾ**

**ಸೀತೆ : ಹಾಡು** ರಾಗ : ಕಾನಡ - ಆದಿತಾಳ

ಏಕೋ ಮುಖ ಕಮಲ ಬಾಡಿದೆ ಮಮಜೀವಿತೇಶ್ವರ
ಇದೇಕೋ ಈ ಮೌನ ಧ್ಯಾನ ಏನಾಯಿತೋ ಹೇಳೆನ್ನ ಪ್ರಾಣಘನ ॥ ಪ ॥
ಭರತನಿಲ್ಲದಿಹ ವ್ಯಸನವೆ
ರಾಜ್ಯ ಪಟ್ಟದಾಯಾಸವೆ
ಎನ್ನಿಂದೇನಪಚಾರವೆ
ಇದೇಕೋ ಈ ಮೌನವದನ ಏನಾಯಿತೋ ಹೇಳೆನ್ನ ಪ್ರಾಣಘನ ॥ ೧ ॥

**ರಾಮ : ಹಾಡು** ರಾಗ : ತೋಡಿ - ಆದಿತಾಳ

ನಾನೇನ ಪೇಳಲಿ । ಸರಸೀರುಹ ಮುಖಿಯಳೆ ಸಖಿ ॥ ಪ ॥
ಪಿತದಶರಥ ತಾನು । ಸುತ ಭರತನಿಗೆ ರಾಜ್ಯವನ್ನು ।

ಅತಿಶಯದಿಂದಿತ್ತನು ಕೇಳ್ ಕ್ಷಿತಿಸುತೆ ॥ ೧ ॥
ಜನಕನು ಎನ್ನನು ವನಕೆ ಪೋಪುದೆಂದು ।
ಎನಗಾಜ್ಞೆಯ ನಿತ್ತನು ಕೇಳ್ ಜನಕಜೆ ॥ ೨ ॥

**ದೃಶ್ಯ : ಸುಮಿತ್ರೆ ಅಂತಃಪುರ**

**ಲಕ್ಷ್ಮಣ : ಹಾಡು** **ರಾಗ: ನಾಟಿಕುರಂಜಿ - ರೂಪಕ**

ಏನಪೇಳ್ವೆ ಅಣ್ಣ ನೀನು ಹೀನ ಮಾತನು ॥ ಪ ॥
ಮಾನವಿಲ್ಲದ ಹೀನ ಕೈಕೆಯ ಜಾಣತನವನು ॥ ಅ.ಪ. ॥
ವೃದ್ಧನೀಪರಿ ಗೈದ ನಕಟ ಬದ್ಧನಾಗುತಾ
ಯುದ್ಧದಲ್ಲಿ ಭರತನನ್ನು ಗೆದ್ದು ಬರುವೆನಾ ॥ ೧ ॥
ಸುಂದರೀ ಕೈಕೆಯೆಂದು ತಾನು ತಿಳಿಯುತ
ತಂದೆ ಪೇಳ್ದ ನಿಂದ್ಯ ವಚನ ಮುಂದನರಿಯದೇ ॥ ೨ ॥

**ದೃಶ್ಯ : ಕೈಕೆ ಅಂತಃಪುರ**

**ದಶರಥ : ಸೀಸಪದ್ಯ**

ಕನಕಾಂಬರವ ನುಡುವ ತನಯ ರಾಮಂಗಿಂದು । ವಲ್ಕಲವ ಧರಿಸೆಂದು ವಚಿಸಲೆಂತು ।
ಘನ ಸಿಂಹ ಪೀಠವೇರ್ವನನಿಂದು ಪಟು ಸಿಂಹ । ನಿಳಯವೆಸಿಸಿದ ವನಕೆ ಕಳುಹಲೆಂತು ॥
ಮನೆಯೊಳಮೃತಾನ್ನಭೋಜನ ಮಾಳ್ಪ ಕಂದಂಗೆ । ಕಂದಮೂಲವನುಣುವ ಕಷ್ಟವಿತ್ತು ।
ಜನನಾಥನಹಸುತನ ವನವಾಸಕಟ್ಟಿನಾಂ । ಮಹಿಯೊಳೀ ಪ್ರಾಣದಿಂ ಬದುಕಲೆಂತು ॥

**ದಶರಥ : ಹಾಡು** **ರಾಗ : ದೇಶಿತೋಡಿ - ರೂಪಕತಾಳ**

ಎಂತು ಕಳುಹಲೀ ಸುತರಾ ನಾನೆಂತು ಕಳುಹಲೀ
ಅಂತ ಕಾನನಕೀಗ ನಾನು ಎಂತು ಕಳುಹಲೀ ॥ ಪ ॥

ರಾಮಲಕ್ಷ್ಮಣ ಭಾಮೆ ಸೀತೆಯಾ
ಆ ಮಹಾ ಕಾನನಕೆ ಕಳಿಸಿ
ಎಂತು ಜೀವಿಪೆ ಭುವಿಯೊಳಗೆ ॥ ಅ.ಪ. ॥

**ರಾಮ, ಲಕ್ಷ್ಮಣ, ಸೀತೆ : ಹಾಡು** **ರಾಗ : ದೇವಗಾಂಧಾರಿ - ಆದಿತಾಳ**

ಪಿತಾ ದಯಾ ಸಾಗರ ದಶರಥನೆ
ಪೋಗಿ ಬರುವೆವು ಕರುಣವಿರಲಿ ॥ ಪ ॥
ತಂದೆಯೆ ನಿಮ್ಮಯ ಸುಂದರ ಚರಣವ
ಎಂದಿಗೆ ನೋಳ್ಪೆವೋ
ಮಂದ ಭಾಗ್ಯರು ॥ ಅಪ ॥

**ಕೈಕೆ : ಹಾಡು** **ರಾಗ: ಸಂಕ್ರಂದನಪ್ರಿಯ - ಏಕತಾಳ**

ಪ್ರಿಯತಮಾ, ಮೃತಿನೈದಿದೆಯಾ
ಪಾಪಿಯಾದೆ ಜಗದೊಳಗಿನ್ನು ॥ ಪ ॥
ಭೂತಲದೊಳಗೆ ಜೀವಿಸಲಾರೆನು
ಕುಹಕಿ ಮಂಥರೆ ಮಾತಿಗೆ ಬೆರಗಾಗಿ
ವಂಶದರೀತಿಯನರಿಯದೆ ಹತಭಾಗ್ಯಳಾದೆನು ॥

## ದೃಶ್ಯ : ಗಂಗಾನದಿ ತೀರ

**ರಾಮ, ಲಕ್ಷ್ಮಣ, ಸೀತೆ : ಹಾಡು** **ರಾಗ: ಶುದ್ಧಸಾವೇರಿ - ಆದಿತಾಳ**

ಗಂಗೇನಾ ನಭಿವಂದಿಪೇ ಮಂಗಳೇದೇವಿ ॥ ಪ ॥
ಸಗರಭೂಪ ತನುಭವರ್ಗೆ ಸುಗತಿಯಿತ್ತ ದಿವ್ಯ ಮಾಯೆ ॥
ಮುಗಿದು ಕೈಯ್ಯಸೇವಿಪರ್ಗೆ ಭಗವತೀ ನೀನಿರತ ಕಾಯೆ ॥ ಅಪ ॥

**ಲಕ್ಷ್ಮಣ :** ಶ್ವೇತರೂಪೆ ಶುಭ ತರಂಗೆ ಭೂತನಾಥ ಮೌನಿಸಂಗೇ
ಖ್ಯಾತಚರಿತೆ ಮಹಿಮ ತುಂಗೇ ಪೂತಕಲಿತೆ ದುರಿತ ಭಂಗೆ ॥ ೧ ॥

**ಸೀತೆ :** ಪಾವನಾತ್ಮಕಿ ನಾಮಧೇಯ । ದೇವಲೋಕದ

ಮಾನಿನಿಯೇ ಸೇವಿಪೆ ರಘುಕುಲದ ತಾಯೆ
ಕಾವುದೇಪಯೋಬ್ಧಿ ಜಾತೆ ॥ ೨ ॥

**ಅಥವಾ**

**ರಾಮ : ಹಾಡು** ರಾಗ : **ಷಣ್ಮುಖಪ್ರಿಯ - ಆದಿತಾಳ**

ಸುರನರಸೇವಿತೆ ವರಗಂಗೇ
ಪರಮ ಪಾವನೆ ಕರೂಣಾಂತರಂಗೆ ॥ ಪ ॥
ಹರನ ಶಿರದಿಂದ ಹರಿದೇ
ಧರೆಯನುದ್ಧರಿಸಲು ಆಗಮಿಸಿ ಬಂದೇ
ಪರಮ ಪಾವನೆ ಎಂದೆನಿಸಿ ಧರೆಯನೆಲ್ಲ ಉದ್ಧರಿಸಿದೆ ತಾಯಿ
ನಿರುಪಮ ಚರಿತಳೆ ನಿನ್ನಯನನುದಿನ
ನಿರಂತರದಿ ಭಜಿಸುವೆನು ಅನುಸಯದಿ ॥ ಅ.ಪ. ॥

**ರಾಮ : ಹಾಡು** ರಾಗ: **ಯಮನ್ ಕಲ್ಯಾಣಿ - ಆದಿತಾಳ**

ನೋಡು ದೇವ ನದಿಯ ಜಾನಕಿ
ನೋಡು ದೇವ ನದಿಯಂ ಜಾಹ್ನವಿಯಂ
ಸುಧಾ ಸಮುದಯವ ನೀಂ ॥ ಪ ॥
ವರತ್ರಿವಿಕ್ರಮ ಪದಾಬ್ಜಜಾತೆಯಾ
ಉರಗ ಮನುಜದಿವಿ ತ್ರಿಪಥಗಾಮಿಯಾ
ಸರಸೀರುಹಮುಖಿ ಕುಲಪಾವನೆಯಾ
ಚಾರುವಾರಿಧಿಯ ನೀಂ ॥ ೧ ॥

**ದೃಶ್ಯ : ಕಾಡುರಸ್ತೆ**

**ಭರತ : ಹಾಡು** ರಾಗ : **ಪಂತುವರಾಳಿ - ರೂಪಕತಾಳ**

ತೋರುವುದು ದುಶ್ಯಕುನ
ಯಾರ ಕೇಳ್ವೆ ಏನ ಮಾಳ್ಪೆ॥ ಪ ॥
ನರಿಗಳಲ್ಲಿ ಕೂಗುತಿಹವು । ಬಿರುಸಿನಿಂದ ಗಾಳಿ ಬೀಸೆ ।
ತರುಗಳನ್ನು ವಹ್ನಿ ಸುಡಲು । ಪರಿ ಇದೇನು ತೋರದಾಯ್ತು ॥ ೧ ॥

ಘೋರವಾದ ಗೃಧ್ರ ತತಿಯು । ದಾರಿಯಲ್ಲಿ ಮುತ್ತುತ್ತಿಹುದು ।
ಭಾರಿಯುರಗ ಅಡ್ಡವಹುದು ಪಗಿಯಿದೇನು ತೋರದಾಹ ॥ ೨ ॥

## ದೃಶ್ಯ : ಕೈಕೆ ಅಂತಃಪುರ

**ರಾಗ: ಸಿಂಧುಭೈರವಿ - ಏಕತಾಳ**

**ಭರತ : ಹಾಡು**

ಜನಕ ಮೃತಿಯ ನೈದಿದೆಯಾ ॥ ಪ ॥
ನೀ ನಿಲ್ಲದ ಪರಿ ಅಯೋಧ್ಯಾ ನಗರವು
ಶೂನ್ಯಮಾಗಿಪೋದುದೆ ಜನಕಾ ॥ ಅ.ಪ. ॥

## ದೃಶ್ಯ : ಕೈಕೆ ಅಂತಃಪುರ

**ರಾಗ: ಹಂಸಧ್ವನಿ - ಆದಿತಾಳ**

**ಭರತ : ಹಾಡು**

ಕೊಲ್ಲುವೆನು ಈ ಖುಲ್ಲ ಕೈಕೆಯನು
ನಿಲ್ಲದೆಲೆ ಭರದಿ ॥ ಪ ॥
ಬಲ್ಲೆನೀಕೆಯ ನೆಲ್ಲ ಮಾಯವ
ಸೊಲ್ಲನಡಗಿಪೆ ನಿಲ್ಲದೀಗಲೆ ॥ ಅ.ಪ ॥
ಅಣ್ಣರಾಮನ ಬಣ್ಣ ಕೆಡಿಸುತರಣ್ಯ ಕಟ್ಟುತಲಿ
ಚನ್ನೆಯಾಗುವೆನೆನುತ ಯೋಚಿಸಿ ಮುನ್ನ ಕಳೆದಳು
ತನ್ನ ಪತಿಯನು ॥ ೧ ॥

**ಭರತ : ಸೀಸಪದ್ಯ**

ರಾಮನಿಲ್ಲದ ಮನೆಯು ರವಿಯಿಲ್ಲದಾಕಾಶ ಲಕ್ಷ್ಮಣ ತೆಗಳಲವಲಕ್ಷಣವಿದು ।
ಭಾಮೆ ಸೀತೆಯನಗಲಿ ಭಾಗ್ಯ ವಿರಹಿತರಾದೆ ವವರ ನಗಲಿದಯೋಧ್ಯೆ
ಅಡವಿ ಯಾಯ್ತು ॥
ಪ್ರೇಮಮೂರ್ತಿಗಳಾದ ರಾಮ ದಶರಥ ರಗಲೆ ಭರತನಿಂದಕಟ
ನಿರ್ಭಾಗ್ಯನಾದ ।
ಸೌಮಿತ್ರಿ ಗೊದಗಿದಾ ರಾಮಸೇವಾಭಾಗ್ಯ । ಪಾಪಿ ಭರತನ ಪಾಲ್ಗೆ
ಬಾರದಾಯ್ತೋ ॥

## ದೃಶ್ಯ : ಗಂಗಾತೀರ

**ಗುಹ : ಸಾಂಗತ್ಯ**

ಹೊಳೆದಾಟುವವರೆಲ್ಲ ಬನ್ನಿ
ಹರಿಗೋಲ ಹಿಡಿದು ಕಾದಿರುವೆ ನಾನಿಲ್ಲಿ ॥ ಪ ॥
ಹೊಳೆಯಾಚೆ ದಡದಲ್ಲಿ ಮನಮೆಚ್ಚೊ ಉದ್ಯಾನ ।
ಎಲ್ಲೆಲ್ಲೂ ಅಡವಿ ನೀವಿರುವ ಎಡೆಯಲ್ಲಿ
ಬನ್ನಿ ಬರುವವರೆಲ್ಲ ಬರದೆ ಚಿಂತಿಸಲೇಕೆ
ತೂಗಾಡಿ ತೇಲಾಡಿ ಹೋಗುವ ಬನ್ನಿ ।

**ಗುಹ : ಹಾಡು** — ರಾಗ : ಮಲಯಮಾರುತ - ಆದಿತಾಳ

ರಾಮ ರಾಮ ರಾಮ ರಘುವಂಶ ಸೋಮ
ಕಾಮಿಕಾರ್ಥ ವೀವ ಶ್ಯಾಮ ಸುಂದರರಾಮ ॥ ಪ ॥
ರಘುರಾಮ ಶ್ರೀ ರಾಮರಾಮ ಶ್ರೀ
ಭೂಪ ನಿನ್ನ ನಾಮ ಜಪಮಾತ್ರದಿಂದ
ಪಾಪನಾಶಮಾಗಿ ಪೋಪುದೀಗ ನೋಡೈ
ರಘುರಾಮಶ್ರೀ ರಾಮ ರಾಮ ರಾಮ ॥ ೧ ॥

**ಗುಹ : ಹಾಡು** — ರಾಗ : ಹಂಸಾನಂದಿ - ತಿಶ್ರಜಾತಿ ತಾಳ

ಇಂದಾಮಿಗೆ ಧನ್ಯನಾದೆ ॥ ರಾಮಾ
ಭವಸಮುದ್ರ ದಾಂಟಿಸುವ
ಇವರಂ ನದಿ ದಾಂಟಿಸುವೆ ॥ ಪ ॥
ದೇವ ದೇವ ನಿನ್ನಂ
ತವಸಿರಿಯಂದದಿ ಪಾಲಿಸುವೆ ॥ ಅ.ಪ. ॥

## ದೃಶ್ಯ : ಚಿತ್ರಕೂಟ

**ಭರತ, ಶತ್ರುಘ್ನ : ಹಾಡು** — ರಾಗ : ನಾಗಗಾಂಧಾರ - ರೂಪಕತಾಳ

ರಾಮ ಪರಂಧಾಮ
ದಶರಥ ರಾಮ

ಭಾಸುರ ನಾಮ
ಸದಾರಾಮನಾಮ
ರಾಮಪರಮ
ಪಾವನನಾಮ ॥ ಪ ॥

**ರಾಮ : ಸೀಸಪದ್ಯ** **ರಾಗ : ಸಿಂಹೇಂದ್ರ ಮಧ್ಯಮ**

ದಶದಿಗಂತದಿ ರಥವ ಧೈರ್ಯದಿಂ ನಡೆಯಿಸುತೆ ದಶರಥಾಂಕಿತ ಸೆನಿಸಿ ಜಗದೀ
ನಿಶಿತಧರ್ಮನ್ಯಾಯನಿಷ್ಠೆಯಿಂ ವರ್ತಿಸುತೆ ಸುರಮುನಿವಿತಾನದಿಂದ ಸ್ತುತ್ಯನಾಗಿ
ಯಶವನಾರ್ಜಿಸಿ ರಾಜ್ಯಯಂತ್ರಮಂ ಚಾತುರ್ಯದಿಂದ ನಡೆಯಿಸುತ
ಸಮರಧೀರನೆನಿಸಿ ॥
ಪ್ರಶಮಿತಾಖಿಲ ರಿಪು ಪ್ರಕರನಾದಾ ತಂದೆ ಪರಲೋಕಕ್ಕೈದಿದನೆ. ಪಾಪಿ
ವಿಧಿಯೇ ! ॥

**ಭರತ ಶತ್ರುಘ್ನ : ಕಂದ**

ಇವು ಪರಮ ಪಾವನವು
ತಾನಿವು ಕೋಸಲ ರಾಜ್ಯಭಾರ ಧುರೀಣಂ
ಇವನಾಂ ಶಿರದಿ ಧರಿಸುತೆ
ಇದರಿಂ ಎಮಗೆ ಅಧಿಕಮಾದ ಅಭ್ಯುದಯವು

**ದೃಶ್ಯ : ದಂಡಕಾರ್ಯ - ಪಂಚವಟಿ ಕ್ಷೇತ್ರ**

**ರಾಮ : ಹಾಡು** **ರಾಗ : ಜಂಜೂಟಿ - ಚಾಪುತಾಳ**

ಸೌಮಿತ್ರಿಯೆ ನೋಡೀವನ
ಮುನಿಜನ ತಪೋವನ ॥ ಪ ॥
ವಿನಯಕೆ ಸಂಜೀವನ
ಸೌಭಾಗ್ಯದೀ ಮೆರೆವೀವನ ॥ ಅಪ ॥
ಮೃಗಗಳ ಕಾಟದ
ಹಗರಣವಿಲ್ಲದೆಲಿ

ಸೊಗಯಿಪ ಪರಿಯಿದು
ಮನಕಿದು ಮೋದವು ॥ ೧ ॥

## ೨. ಸುಗ್ರೀವ ಪಟ್ಟಾಭಿಷೇಕ

**ಘೋರ ಶೂರ್ಪನಖಿ : ಹಾಡು** **ರಾಗ : ಇಂಗ್ಲೀಷ್ ನೋಟ್ - ಏಕತಾಳ**

ಓಹೋ ಓಹೋ ಮೇವು ಬರಲಿ ಹೋ ।
ಸಾರಿ ವೇಷವ ತಾಳಿ ಹರಿಹರಿದು ತಿನ್ನುವೆನಾ ॥ ಪ ॥
ಚೀರುವೆ ನಾ । ಪೀರುವೆ ನಾ
ಜೀವ ಭಾವ ॥ ೧ ॥

**ಘೋರ ಶೂರ್ಪನಖಿ : ಹಾಡು** **ರಾಗ : ಇಂಗ್ಲೀಷ್ ನೋಟ್ - ಆದಿತಾಳ**

ಇಂದು ನಾನು ಪೊಂದುವೆ ನಾನಂದವ
ಸಂದೇಹವಿಲ್ಲದೆಲೆ ತಿಂದು ಮಾಂಸವ ॥ ಪ ॥
ನರರ ಕಣ್ಣುಗುಡ್ಡೆಗಳ ಹುರಿದು ಸಂಡಿಗೆಯ ಮಾಡಿ
ಕರುಳ ಕಿತ್ತು ಶಾವಿಗೆಯ ಪಾಯಸ ಮಾಡಿ ಕುಡಿಯುವೆ ॥ ೧ ॥

**ಘೋರ ಶೂರ್ಪನಖಿ : ಹಾಡು** **ರಾಗ : ಹಿಂದೂಸ್ಥಾನಿ ತೋಡಿ - ಆದಿತಾಳ**

ನಾನೀತ ನ್ನಾನೀಗಲೆ । ವರಿಸುವೆ ॥ ಪ ॥
ಏನಾದರೂ ಆಗಲಿ । ವರಿಸುವೆ ॥ ಅಪ ॥
ಕಲ್ಲಿನ ಮಂಚದ ಮೇಲೆ ಪಲ್ಲವಂಗಳನ್ನೆ ಹಾಸಿ ।
ವಲ್ಲಭನ ಕೂಡಿಕೊಂಡು ಗಲ್ಲವನು ಮುದ್ದಿಡುವೆ ॥ ೧ ॥
ಚಂಡು ಮಲ್ಲಿಗೆಯ ಹೂವ
ಮಂಡೆಯಲ್ಲಿ ಮುಡಿದು ಕೊಂಡು
ಹೆಂಡವನ್ನು ಕುಡಿಯುತ್ತ
ಗಂಡನನ್ನು ಮಾಡಿಕೊಳ್ವೆ ॥ ೨ ॥

**ಮಾಯಾ ಶೂರ್ಪನಖಿ : ಹಾಡು** **ರಾಗ : ಕಮಾಚ್ - ಆದಿತಾಳ**

ಸುಂದರಿಯಲ್ಲವೆ ಜಗದೊಳಗೆ ನಾಂ
ಜಗದೊಳಗೆನಾಂ ಮೂಜಗದೊಳಗೆ ।। ಪ ।।
ಚಿಕ್ಕವಯಸಿಗೆ ತಕ್ಕ ಸುಂದರನಿವ
ಅಕ್ಕರದಿ ಸಿಕ್ಕಿದನು ಇವ ಎನಗೆ ।। ೧ ।।

**ಮಾಯಾ ಶೂರ್ಪನಖಿ : ಹಾಡು** **ರಾಗ : ಜಂಝೂಟಿ - ಆದಿತಾಳ**

ಅವನೀ ಸುಕುಮಾರ । ಪಾವನ ಚರಿತ ।
ನವಗುಣಭರಿತ । ಅವನಿಯೊಳತಿಹಿತ ।। ಪ ।।
ಸೋಮಸನ್ನಿಭ । ಸಮಕಲಾವನಿವ ।ಅಮಲ । ವಿಮಲ ।
ವರ । ಸುಮಶರ । ಸಮಮುಖ ।। ಅ.ಪ. ।।
ಮಾರವೀರ । ಸಮ ಪ್ರೇಮಕಾರಿ । ವರರೂಪಧಾರಿ ।
ನರನಾ । ವಾರಿಜಾರಿ । ನಾರಿ ಮೀರಿ । ಮೋದವ । ಹಿತವ ಬೀರಿ ।
ಕರುಣ ತೋರಿ । ಮೆರೆಯುವ ।। ೧ ।।

**ಮಾಯಾ ಶೂರ್ಪನಖಿ : ಹಾಡು** **ರಾಗ : ಜಂಝೂಟಿ - ಆದಿತಾಳ**

ಈ ಸುಂದರ ಚಂದದ ಆಕಾರ ।। ಪ ।।
ಮಾರನೋ ಮನೋಜ್ಞ ರೂಪನೋ ತಾನೀತ ।। ಅ.ಪ. ।।
ಚಾರು ರೂಪದ ಸಾರವೆಲ್ಲವೀಗ
ಸೇರಿರೆ ಮನಕೆ ಮೋದವ ತಾನೀವ ।। ೧ ।।

**ರಾಮ : ಹಾಡು** **ರಾಗ : ಸಿಂಧುಭೈರವಿ - ಆದಿತಾಳ**

ನ್ಯಾಯವೇ ನಿನಗೆ ಮಾಯದ ಸುದತಿ
ಹೇಯ ಕಾರ್ಯವಿದ ಬಿಡುಬಿಡು ತರುಣಿ ।।
ಧನುಜರು ನೀವು ಮನುಜರು ನಾವು
ಮನಸಿಜನಾಟಕೆ ಮನವಿಡಬಹುದೇ ।। ೧ ।।

**ಲಕ್ಷ್ಮಣ : ಹಾಡು** **ರಾಗ : ಕಮಾಚ್ - ಆದಿತಾಳ**

ಇವಳಾರೀ ತರುಣೀಮಣಿ
ಪವನಭಕ್ಷಣ ಸುವೇಣಿ ॥ ಪ ॥
ಇಂದುಮುಖಿಯ ನೇತ್ರವು
ಚಂದದ ಭುಜಪತ್ರವು
ಕುಂದರದನೇ ಸುಂದರಾನನೇ
ಸುಂದರಿ ಬಂದು ನಿಂತಿಹಳು ॥ ೧ ॥

**ಲಕ್ಷ್ಮಣ : ಹಾಡು** **ರಾಗ : ಹಂಸಧ್ವನಿ - ಆದಿತಾಳ**

ಕಡು ದುರುಳೆ ಸಾರೆಲೆ
ಕಾಡುತಲೆನ್ನಂ ಸರಸಕೆ ಬರುವರೆ ॥ ಪ ॥
ಪರಪುರುಷರೆಂದರಿಯದೆ ಮನದಲಿ
ಪರಿಪರಿ ವಿಧದರಿ ವಿಲಾಸ ವಚನವ
ದುರಾತ್ಮಳೆ ಕಠೋರಳೆ ಕಿರಾತಳೆ
ಮೇರೆ ಮೀರಿ ಮಾತನಾಡುತಿಹೆ ॥ ೧ ॥

**ಶೂರ್ಪನಖಿ : ಹಾಡು** **ರಾಗ : ಪೀಲ್ / ಯಮನ್ ಕಲ್ಯಾಣಿ**

ಏನ ಮಾಡಲೀಗ ।
ಮೂಗ ಕೊಯ್ದನಾಗ ॥ ಪ ॥
ಉರಿವುದು ಮೂಗು । ಸುರಿವುದು ರಕ್ತ
ಇದರಿಂದ ಬದುಕೆ ಬಂಡಾಟ ॥ ೧ ॥
ಮದುವಾಗ್ತೀನಿ ಅಂತ ಬಂದು
ಕಿವಿ ಮೂಗ ಕುಯ್ದನಾಗ
ಇವನ್ ಮನೆ ಹಾಳಾಗ
ಇವನ್ ನೆಗೆದು ಬಿದ್ ಹೋಗ
ಇವನ್ ಚಾಪೆ ಸುರುಳಿ ಸುತ್ತುಕೊಂಡು
ಹೊತ್ತುಕೊಂಡು ಹೋಗ ॥ ೨ ॥

## ದೃಶ್ಯ : ದಂಡಕಾರಣ್ಯದ ಬೇರೊಂದು ಭಾಗ

**ಖರ - ದೂಷಣ - ತ್ರಿಶಿರ : ವೃತ್ತ** ರಾಗ : ನಾಟಿ

ಧರಾಮರ್ತ್ಯ ಪಾತಾಳಮಂ ಭೇದಿಸುತ್ತಂ
ನರಾಮರ್ತ್ಯ ನಾಗರ್ಕಳಂ ಕೊಲ್ವಧೀರರ್
ಖರ ದೂಷಣ ತ್ರಿಶೀರ್ಷಂ ಕೆರಳ್ದಾ
ದುರಾತ್ಮರ್ಕಳಂ ಕೊಂದು ಧೂಳ್ಗೈಪ್ಪೆವೀಗಳ್

**ಖರ, ದೂಷಣ, ತ್ರಿಶಿರ : ಹಾಡು** ರಾಗ : ಹಂಸಧ್ವನಿ - ಆದಿತಾಳ

ದುರಾತ್ಮರಹ ನರಾಧಮರ ಧುರಾಗ್ರದೊಳು ಕೊಲ್ವ ॥ ಪ ॥
ವಿರೋಧಿಯೊಳು ಖರಾದಿಗಳ ದುರಂತ ಬಲತೋರ್ದ್ವ ॥ ಅ.ಪ. ॥
ಸಕಲ ಭುವನ ನಿಕರದೊಳಗೆ ಪ್ರಕಟವೆಮ್ಮ ಪೌರುಷಂ ।
ವಿಕಳನಾಗಿ ಸುಖವನೀಗ ಲಕಟ ಕೆಣಕೆ ಬಂದ ॥ ೧ ॥
ರಾಮನೆಂಬ ನಾಮವೆಮ್ಮ ಕ್ಷೇಮಕಧಿಕ ಕಂಟಕ ।
ಭೀಮರಣದೆ ಭೂಮಿಗಿಡುವೆ ವಾಮದಾಂಧನನ್ನು ॥ ೨ ॥

**ಖರ, ದೂಷಣ, ತ್ರಿಶಿರ : ಹಾಡು** ರಾಗ : ಹಂಸಧ್ವನಿ - ಆದಿತಾಳ

**ಖರ :** ಕೆಡುಗನೆ ಖಡುಗದೆ ಪೊಡೆಯುನು ಕಡಿವೆವು
ಪಿಡಿಯುತೆ ನಿನ್ನನು ಛೀ ರಾಮ ॥ ಪ ॥

**ದೂಷಣ :** ಧೂರ್ತನೆ । ದುಷ್ಟನೆ । ದುರ್ಮದಾ ವಿಷ್ಟನೇ । ಮೆಟ್ಟಿ ನಿನ್ನ ।
ಕುಟ್ಟಿನೆಲದೊ । ಳಿಟ್ಟು ತೋಷ । ಪಟ್ಟಪೆಂ ॥

**ತ್ರಿಶಿರ :** ಛೀ ಹೇಡಿ । ಛೀ ಖೋಡಿ । ದುರಾತ್ಮನೆ ॥ ೧ ॥

## ದೃಶ್ಯ : ರಾವಣನ ದರ್ಬಾರ್
## (ಸಮೂಹಗೀತೆ)

**ರಾಗ : ಮಿಶ್ರ ಶಂಕರಾಭರಣ - ತ್ರಿಶ್ರನಡೆ, ಏಕ ತಾಳ**

ಲಂಕಾಧಿಪಾಲನ ದೇವ । ರಾವಣ ಲೋಕೈಕ ವೀರ ॥ ಪ ॥
ಪಾಕಾರಿ ಸನ್ನುತ । ಕೋಕಾದಿ ಸೇವಿತ । ನಾಕೇಶ ಮುಖ ಸುಭಕ್ಷಣ । ॥ ಅ.ಪ. ॥
ರಾವಣದೇವಾಧಿದೇವ । ರಾವಣ ಲೋಕೈಕ ವೀರ ।
ಕಡು ಬದಲಿಗೆ ಸೊಕ್ಕಿಂತು । ಕಡು ಮುದದೊಳಗಾಂತು ।
ತಡೆಯೆ ಕುಮಾ । ತರಣಿ । ಗಡಗಡ ಗಡ । ನಡು ನಡುಗಿವ ॥ ೧ ॥

**ರಾವಣ : ವೃತ್ತ ॥** **ರಾಗ : ನಾಟಿ**

ನಳಿನೀ ಗರ್ಭಾಂಡ ಮೆಲ್ಲಂ ಕರಗತಮೆನಿಸಿರ್ಕುಂ ಮಹೇಂದ್ರಾದಿದೇವ ।
ರ್ಕಳಿ ನನ್ನಂ ಸೇವಿಪರ್ ಕಿನ್ನರ ಸುರ ಖಚರಪ್ರೋತ್ಕರಂ ಮಾಡುಗುಂ ಮಂ ॥
ಗಳಗೀತಲಾಪಮಂ ಸುಂದರ ಸುರವಧುಗಳ್ ನರ್ತನಂ ಗೆಯ್ವು ನಿಪ್ಪಾರ್ ।
ಕುಳನಂ ಮಾಡಿರ್ಪರೆನ್ನಂ ಜಗದೆನಗೆ ಸಮಂ ನೋಡಲಿನ್ನಾವನಿರ್ಪ ೧ ॥

**ರಾವಣ : ಹಾಡು** **ರಾಗ : ದರ್ಬಾರಿ ಕಾನಡ - ಆದಿತಾಳ**

ಭಲಾಭಳಿರೆ ಭುವನ ಭೀಕರ ।
ಅಲಲ ಭುಜಬಲ ಭಾರತ ಮೆರೆವೆ ।
ಭುಗಿಲ್ ಭುಗಿಲ್ ಎನೆ ಭ್ರುಕುಟಿಯು ತೆರದಿ
ಭೂಪನಾಗಿ ನಾ ಭೀಕರ ರಣದೊಳು
ಉದಾರಿ ಪ್ರಧಾನ ಪುರಂದರ ॥ ಪ ॥
ಪರಮ ಪುರುಷನೆ ಪೊರೆಯೊದೇವನೆ
ನಿರುತದಿ ನಿನ್ನನು ಸ್ಮರಿಸುತಲಿರುವೆನು
ಗಿರಿಜಾರಮಣ ಶರಣರ ಪೊರೆವನೆ
ಕರುಣವ ತೋರಿಸು ॥ ೧ ॥

ವಿಭೀಷಣ : ಹಾಡು

ರಾಗ : ಮಿಶ್ರಚಾಪುತಾಳ

ಸಹಭವನೆ ಕೇಳು ಪೇಳುವೆ
ರಾಮ ಮನುಜನಲ್ಲವು ॥ ಪ ॥
ಭೂಮಿಜಾತೆ ಸೀತೆಯನ್ನು
ಕಾಮಿಸಿ ನೀ ಪೋಗಬೇಡ
ತಾಮಸರನ್ನು ಕೊಲ್ಲಲು
ಭೂಮಿಯೊಳು
ಜನಿಸಿಬಂದಿಹ ॥ ಅ. ಪ. ॥

**ದೃಶ್ಯ : ಪಂಚವಟಿ - ಪರ್ಣಶಾಲೆ**

**ಸೀತೆ : ಹಾಡು**

**ರಾಗ : ಜಂಝೂಟಿ - ಏಕತಾಳ**

ಲಾಲಿಸು ನೀಲಾಬ್ಜದಳ ನಯನ - ವನವಿರಾಜ ಮಾನನೇ ॥ ಪ ॥
ನಾಥನೆ ಮೃಗಮಿದ ನೀ ತಂದು ಕೊಟ್ಟರೆ
ನಾ ತೋಷದೊಳಗಿರುವೆ - ವನವಿರಾಜ ಮಾನನೇ ॥ ೧ ॥
ಕಂಡದ ಬಯಸುವ ಚಂಡಿಯೆಂದೆನ್ನದೆ
ತಂದು ಕೊಡಿರಿ ಎನಗಿದನು ವನವಿರಾಜ ಮಾನನೇ ॥ ೨ ॥

**ರಾಮ : ಹಾಡು**

**ರಾಗ : ಅಭೇರಿ - ಆದಿತಾಳ**

ಮಾಯಾಮೃಗವ ನೀ ನಿದಾ ನೋಡಿ ಬಯಸುವೆ ಏಕೆ ಇದಾ॥ ಪ ॥
ದಾನವ ಮಾಯೆ ಪ್ರೇಮಜಾಯೆ
ನಿಜವನು ಅರುಹುವೆ ತಿಳಿಯೆ ಇದಾ ॥ ಅ.ಪ. ॥
ಸಲ್ಲದ ಕಾರ್ಯವ ನಿಲ್ಲಿಸು ಪ್ರಿಯಳೆ
ಮೋಹವು ಸಲ್ಲದು ಅಸುರ ಮಾಯೆಯೊಳ್
ಖಂಡಿತ ಕೆಡುಕಿದು ಜಲಜಗಂಧಿಯೆ ಕೇಳ್
ಆಲಪುದು ಮಾತನು ನೀ ಕೇಳೆ ಪ್ರಿಯತಮೆ ॥ ೧ ॥

ಲಕ್ಷ್ಮಣ : ಕಂದ

ಉರಿಯೊಳ್ ಕಾಸಿದ ಸರಳ ತೆರದಿಂ
ಈ ಕರ್ಣ ಯುಗಳಂ ಇರಿಯುತಿರ್ಕುಂ
ಪರುಷೋಕ್ತಿಯಂ ಕೇಳಿಯು ಈ ಹರಣಂ ಪೋಗಲಿಲ್ಲ ಅಕಟ

ಮಾಯಾರಾವಣ : ಹಾಡು ರಾಗ : ಪಂತುವರಾಳಿ - ರೂಪಕತಾಳ

ಶಂಭೋ ಮಹಾದೇವ
ಶಂಕರ ಗಿರಿಜಾರಮಣ ॥ ಪ ॥
ಶಂಭೋ ಮಹಾದೇವ
ಶರಣಾಗತ ಜನ ರಕ್ಷಕ
ಅಂಭೋರುಹಲೋಚನ ಪಾದಾಂಬುಜ ಭಕ್ತಿಂ ದೇಹಿ ॥ ಅ.ಪ. ॥

ರಾವಣ : ವೃತ್ತ ॥ ರಾಗ : ಮೋಹನ

ಇದೊ ನೋಡು ನೋಡು ಪೌಲಸ್ತ್ಯ ವಂಶಕಲಶಾಂಭುದಿ ಚಂದ್ರನ
ಇದೊ ನೋಡು ದಶಾಸ್ಯಾ ಭುಜಾಂಕನ ಮನ್ಮಥಾಂಗನ ನೋಡೆ
ಅರಿಕುಲ ಸುಪ್ರಚಂಡನ ನಿರ್ಜರ ಭೀಕರ
ರಾವಣ ಸಾರ್ವಭೌಮನ ನೋಡೆ

ರಾಮ : ಹಾಡು ರಾಗ : ಸಿಂಧುಭೈರವಿ - ಆದಿತಾಳ

ನೀನೆಲ್ಲಿಗೆ ಪೋದೆಯೆ ಮನೋಹರೇ
ಕಾನನ ಮಧ್ಯದಿ ಮಾನಿನಿಯೋರ್ವಳೆ
ನೀನಿರುವುದು ತರವೆ ಮನೋಹರೆ ॥ ಪ ॥
ಹೊಂಬಣ್ಣದ ಮೃಗ ವಂಚಿಸಿತೆನ್ನನು
ಹಿಂಬಾಲಿಸಿ ಪೋದೆ ಮನೋಹರೇ ॥ ಅ.ಪ. ॥

# ೩. ಅಭಿಜ್ಞಾನ ಪ್ರದಾನ (ಲಂಕಾದಹನ)

## ದೃಶ್ಯ : ಆಶ್ರಮದ ಸುತ್ತಮುತ್ತ

**ರಾಮ : ಹಾಡು** **ರಾಗ : ಕಾಂಭೋಜಿ - ಮಿಶ್ರ ಚಾಪು ತಾಳ**

ಆ ರಾಮ ದೊಳು ನಿನ್ನ ಆರು ಕದ್ದೊಯ್ದರೋ
ಕ್ರೂರ ಮೃಗಗಳು ನಿನ್ನ ಸೀಳಿ ಕೊಂದವೋ ಕಾಣೆ ॥ ಪ ॥
ಅಯ್ಯೋ ಏನ್ ಜಾನಕಿಯೆ ಮಮ ಪ್ರಾಣ ನಾಯಕಿಯೆ
ಹಾ ಎನ್ನ ತೊರೆದೆಯಾ ಸೀತಾ ॥ ಅ.ಪ.॥

**ರಾಮ : ಹಾಡು** **ರಾಗ : ಶುಭಪಂತುವರಾಳಿ - ಆದಿತಾಳ**

ಜಾನಕೀ ಪ್ರಾಣಸಖೀ
ಅಗಲಿದೆಯಾ ಕಮಲಮುಖೀ ॥ ಪ ॥
ಪಂಚವಟೀ ಪ್ರಿಯ ಪುಣ್ಯರೂಪಿಣಿ
ಗೋದಾನಂದನ ಹಂಸಗಮನಿ
ಚಿತ್ರಕೂಟ ಸಂಚಾರಿಣಿ ತರುಣಿ
ಅಯೋಧ್ಯಾ ಜನಮನ ಅಮೃತವರ್ಷಿಣಿ ॥ ಅ.ಪ. ॥
ನೀನಿಲ್ಲದೆನ್ನಯ ಬಾಳಿದು ವಿಫಲ
ಚಿಂತಾ ಸಂಚಿತ ತಂತುಜಾಲ
ವಿರಹವೇದನ ಸಹಿಸಲದಳ
ತನುವ ದಹಿಸುವ ಚಿರಂತ ಚಿತಾನಲ ॥ ೧ ॥

## ದೃಶ್ಯ : ಋಷ್ಯಮೂಖ ಪರ್ವತ ಪ್ರದೇಶ

**ಆಂಜನೇಯ : ರಾಗಮಾಲಿಕೆ**

ಇಂತಿವರ ನುಡಿಯ ದೂರದಲಿ ಕೇಳಿ
ಸ್ವಾಂತದಲಿ ಸಂತಸವ ತಾಳ್ದಿ ನಾನೂ
ಎನ್ನಮ್ಮ ಮುನ್ನೊಂದು ನುಡಿಯೆ ಇಂದು
ಸಮ್ಮತದಿ ನಿಜವಾಯ್ತು ತಿಳಿಯೆ

ಎನ್ನ ರಕ್ಷಿಸುವ ದೊರೆ ಬಂದಾ ಚಿಂತೆ
ಇನ್ನೇತಕಾದುದಾನಂದ

ಧನ್ಯನಾದೆನು ಜಗಂಗಳಲಿ ಪೂರ್ಣ
ಪುಣ್ಯನಾದೆನು ಕ್ಷಣಾರ್ಧದಲೀ

ಕರಿವರದ ಲಕ್ಷ್ಮೀ ವಿನೋದ ಖಾದ್ರಿ
ಪುರಿ ನೃಹರಿಯೇ ಪ್ರತ್ಯಕ್ಷನಾದಾ

**ಆಂಜನೇಯ : ಹಾಡು** **ರಾಗ : ಆರಭಿ - ಆದಿತಾಳ**

ಶ್ರೀನಿಕೇತನ ಪಾಲಯಮಾಂ ।
ಜ್ಞಾನಗಮ್ಯ ಕರುಣಾನಿಧಿ ನಿಮ್ಮಡಿಗಾ
ನಮಿಸುವೆ ಪೊರೆ ದೀನ ದಯಾಳು ॥ ಪ ॥
ಪನ್ನಗಾಚಲ ನಿವಾಸ ಪ್ರಸನ್ನ ಭಕ್ತವತ್ಸಲ
ಬಿನ್ನಪಕೇಳ್ ಜಗನ್ನಾಥ ವಿಠಲನೇ
ಧನ್ಯನ ಮಾಡೋ ಪ್ರಸನ್ನನೇ ನೀನು ॥ ೧ ॥
ಶ್ರೀ ಕರಾರ್ಚಿತ ಪದಾಬ್ಜಸರೋಜಪರಾಕು ಅಚ್ಯುತ
ನೀನಿಂದೊಲಿದು ಸದಾನುರಾಗದಲಿ
ಧನ್ಯನ ಮಾಡೈ ಮಾನ್ಯನೆ ನೀನು ॥ ೨ ॥

**(ಆಂಜನೇಯ, ರಾಮ, ಲಕ್ಷ್ಮಣರ ರಾಗಮಾಲಿಕೆ)**

**ಆಂಜನೇಯ :** ರವಿಶಶಿಗಳಂತಿರ್ಪ ರಮ್ಯಮೂರ್ತಿಗಳು ತಾವಾರೂ
ರಮಣೀಯಮಾದ ನಾಮಧೇಯವೇನು ಪೇಳಿ

**ಲಕ್ಷ್ಮಣ :** ರವಿಕುಲದ ದಶರಥನ ಪುತ್ರರೈಯ್ಯಾ ನಾವೂ
ರಾಮಾಲಕ್ಷ್ಮಣರೆಂದು ಕರೆವರೆಮ್ಮಾ

**ಆಂಜನೇಯ :** ಸಾರ್ವಭೌಮರೆ ಶಿರದಿ ಚೀರವಲ್ಕಲಗಳೇಕೆ
ಶ್ರಮದೊಳೀರೀತಿ ಈ ವನದಿ ಸಂಚರಿಸಲೇಕೆ

**ಲಕ್ಷ್ಮಣ :** ಈರೇಳು ವರ್ಷ ವನವಾಸವನನುಭವಿಸೆ
ಈ ರೀತಿ ಇರಲೆಂದು ಜನಕನಾಜ್ಞೆ

ಆಂಜನೇಯ : ಪೋಪುದೆಲ್ಲಿಗೆ ಮುಂದೆ ಪಾವನಾತ್ಮರೆ ಪೇಳಿ ಪಾರಮಾರ್ಥ
ಸಂಗತಿಯ ಪ್ರಾರ್ಥಿಸುವೆನು

ರಾಮ : ಪಾಪಿ ರಾವಣನೆನ್ನ ವಶ್ತಿಯುನು ಕದ್ದೊಯ್ದ
ಪಥವರಿಯಲೀರೀತಿ ಪೋಗುತಿಹೆವಯ್ಯಾ

ಆಂಜನೇಯ : ಅನಿತಾದೊಡೆ ಈ ಆಭರಣಗಳಾರವಿವು ನೋಡೀ
ಆರ್ತಧ್ವನಿಯಲೋರ್ವಳಿಸೆದಳಿಲ್ಲೀ

ರಾಮ : ಅಕಟಾ ಕಂಡೆವೆ ಸೀತೆಯ ಆಭರಣಗಳಿವು
ಆಕಾರವೇ ಮುಂದೆ ಬಂದಂತಿದೆ ಇವ ನೋಡಲ್

ಲಕ್ಷ್ಮಣ : ಯಾರಾದರೇನು ನೀನಮ್ಮ ಪ್ರಾಣಸಖನು

ಆಂಜನೇಯ : ಬೇರೆಲ್ಲ ವಾಯುನಂದನನು ನಾನೂ

ಇಬ್ಬರು : ರಾರಾಜಿಸ್ಸೆ ಪರಮಭಕ್ತ ನೀನು

ಆಂಜನೇಯ : ಶ್ರೀರಾಮದೂತ ಹನುಮಂತ ನಾನೂ

**ರಾಮ : ಹಾಡು** **ರಾಗ : ತೋಡಿ - ರೂಪಕತಾಳ**

ಅಂಭೋರುಹಾಕ್ಷಿ ಸೀತೆಯ ನಾಂ ಕಾಂಬೆನೀಪರಿ ಹಾ ॥ ಪ ॥
ಬೆಂಬಿಡದೆ ನಂಬಿ ಬಂದ ಬಂಭರ ನಿಕು ರುಂಬಾಳಕಿಯಾ ಬಾಲೇಂದು ॥ ಅ.ಪ. ॥
ಬಾಲೆಂದು ಫಾಲೇ ಜಾನಕೀ ನೀಲಕುಂತಳೆ ಹಾ
ಭೂಲಲನೆ ಬಾಲೆ ನಿನ್ನ । ಲೀಲೆಯನವ ಲೋಕಿಪೆನೇ ॥ ೧ ॥
ದಂತೀಂದ್ರ ಮಂದಯಾನೆ ಗುಣ ನಿ ಶಾಂತೆ ಲಲನೇ
ಇಂತು ನಿನ್ನ । ನಾಂ ತೊರದಿಂ ದಾಂತೆ ಘನ ಸಂತಾಪವಂ
ಕುಂದೇಂದು ಮಂದಹಾಸೆಯೇ ಹಾ ಸುಂದರಾನನೇ
ಪೊಂದಿ ನಿನ್ನ ನೆಂದು ನಾನಾ ನಂದಿಸುವೆನೊ । ಇಂದು ಮುಖೀ ॥ ೨ ॥

**ರಾಮ : ಕಂದ**

ನಿಡುಮುಡಿ ಜಘನದೊಳಾಡುತೆ ॥
ಬಡನಡುಮಿಗೆ ಬಳ್ಕೆ ಲೋಲ ಲೋಚನ ಯುಗಳಂ ॥

ಕುಡಿಮಿಂಚಂ ಕೆದರಿರೆ ಸವಿ ।
ಬೆಡಗಿಂ ನೀಂ ಬಾರೆ ಏಕೆ ಮಾರಪತಾಕೆ ॥

**ರಾಮ : ಹಾಡು** **ರಾಗ : ಜಂಝೂಟಿ - ಅಟ್ಟತಾಳ**

ಅನುಜಾತ । ಗುಣಪೂರಿತ । ಮಾನಿತ ಕೇಳು ॥ ಪ ॥
ಅನುಜಾತ ವಿಕಸಿತ । ವನಜಾತಲೋಚನ ।
ಇನಜಾತ ನಡೆಗೈದು । ಮನದಿಚ್ಛೆಯನು ಪೇಳ್ವ ॥ ೧ ॥
ಜನಕಜಾತೆಯ ಕಾಣ । ಲನುಕೂಲವನು ಮಾಡಲ್ ॥
ಅನುವಿಂ ಸುಗ್ರೀವಂ । ಗನುಮಾನಿಸದೆ ಪೇಳೈ ॥ ೨ ॥
ಲಕ್ಷ್ಮಣ ವರಶುಭ । ಲಕ್ಷಣ ಮುದದಿ ನೀ ।
ನೀಕ್ಷಣ ಪೋಗಿ ನೀರೀಕ್ಷಿಸು ಕಾರ್ಯವ ॥ ೩ ॥

**ಲಕ್ಷ್ಮಣ : ಹಾಡು** **ರಾಗ : ನಾಟಿಕುರಂಜಿ - ರೂಪಕತಾಳ**

ಪೋಗುವೆ ನಾಂ ಜವದೊಳಗ್ರಜ ॥ ಪ ॥
ಈಗಲೇ ಸುಗ್ರೀವನೆಡೆಗೆ ॥ ಅ.ಪ. ॥
ಮಾಡಿದುಪಕಾರಗಳನು । ನೋಡದೆ ಮಧಾಂಧತೆಯೊಳು ।
ಕೂಡಿ ಮೆರೆಯುತಲಿರುವ । ದುರುಳ ವಾ । ನರನ ನಾಂ ॥
ಭರದೊಳು । ಪರಿಪರಿ ವಿಧದೊಳು ಶಿಕ್ಷಿಸೆ ॥ ೧ ॥
ವಾಲೀ ವಿದಾರಣದಿ । ಮೇಲಾದ ಪದವಿಯೊಳ । ಗೋಲಾಡುತಿರುತಲೆಮ್ಮ ।
ಚರಿತಮಂ । ಮರೆತಿಹಂ । ತೊರದಿಹಂ ಸೆರೆ ಪಿನಯ ವಿಧೇಯತೆಗಳ ॥ ೨ ॥
ಚಂಡಕಿರಣಾತ್ಮಭವನ । ಕಂಡು ನಿಜವನು ತಿಳಿದಾ । ಪುಂಡುತನವನು ಬಿಡಿಸಿ ।
ಚಂಡಕೋದಂಡದಿಂ । ದಂಡಿಸಿ । ಖಂಡಿಸಲವ ನತಿ ಗರ್ವವ ॥ ೩ ॥

## ದೃಶ್ಯ : ಕಿಷ್ಕಿಂಧಾ ದ್ವಾರ

**ಲಕ್ಷ್ಮಣ : ಕಂದ**

ಸುಡುವೆಂ ಕಿಷ್ಕಿಂದೆಯ ನಾಂ ।
ಫಡಫಡ ಕಪಿಕುಲವ ಕಡಿದು ಪೊಡವಿಯೊಳಿಡುವೆಂ ॥

ಕೆಡುಗನ ಸುಗ್ರೀವನ ನಾಂ ।
ಪೊಡೆ ಸೀಳ್ದು ಕೋಪಾಗ್ನಿ ಗಾಹುತಿ ಕೊಡುವೆಂ ॥

**ಲಕ್ಷ್ಮಣ : ಹಾಡು** **ರಾಗ : ಮೋಹನ - ಆದಿತಾಳ**

ಎಷ್ಟೋ ಮದ ನೀಚ ನಿನಗೆ । ದುಷ್ಟನೇ ಛೀ ॥ ಪ ॥
ಇಂದ ನಾನು ಬಂದಿರಲ್ಕೆ । ತಂದುವದ । ಸಂದೋರದೆ । ಸುಂದರಿಯೊಳ್ ।
ಕಂದರ್ಪನಾ । ನಂದದಿಹೆ । ಮಂದಮತಿ ॥ ೧ ॥
ಅಂಗನೆಯೊ । ಳಂಗಭವ । ಸಂಗರದೆ ।
ಮಂಗನೆನೀ ತುಂಗಾಮುದ । ಪೊಂಗಿರುವೆ
ಭಂಗವನು ಮುಂಗಾಣದೆ ॥ ೨ ॥
ಲಕ್ಷ್ಮಣನ । ಲಕ್ಷಿಸದು । ಪೇಕ್ಷಿಸಿದ । ಮರ್ಕಟಕನೆ ।
ಕುಕ್ಷಿಯ ಸೀ । ಳ್ದೀಕ್ಷಣದೆ । ಶಿಕ್ಷಿಸುವೆ । ನೀಕ್ಷಿಸು ನೀಂ ॥ ೩ ॥

**ಸುಗ್ರೀವ : ಹಾಡು** **ರಾಗ : ಮೋಹನ - ಆದಿತಾಳ**

ಕೋಪವಿದೇಂ । ಭೂಪಾನ್ವಯ ದೀವಾಮನದೆ ॥ ಪ ॥
ಕಾಪಾಡು ದ । ಯಾಪೂರಿತ ॥ ಅ ॥
ವಂದಿಸುವೆ ॥ ನಿಂದಾನರ ॥ ವಿಂದಾಪ್ತವಂ । ಸಿಂದುವೆ ಕೇಳ್ ॥
ಇಂದುನಲ । ವಿಂದಾಜ್ಞೆಯ । ಸಂದಾಂ । ಜಯ ಮೊಂದಿಸುವೆ ॥ ೧ ॥
ಸರಸೀರು ಹಲೋಚನೆಯ । ತರವುದಕಾಲೋಚನೆಯು ।
ನೆರೆ ಮಾಡುತೆ । ಸರಿ ನೋಡುತೆ । ಪರಿತೋಷಿಪೆ । ನುರೆ ಮನ್ನಿಸು ॥ ೨ ॥
ಪೊರೆದಾ । ರಘು । ವರ ರಾಮನ । ಚರಣಾಬ್ಜವ । ನುರೆ ಸೇವಿಪ
ಸ್ಥಿರ ಮಾನಸ । ದಿರುವೆನ್ನನು । ಕರುಣಾಕರ । ಪರಿಪಾಲಿಸು ॥ ೩ ॥

**ಅಂಗದ : ಹಾಡು** **ರಾಗ : ಅಭೇರಿ - ರೂಪಕತಾಳ**

ಮನ್ನಿಸೈ ಮಹಾನುಭಾವ । ಸನ್ನುತ ಸುಗುಣಾಕರ ॥ ಪ ॥
ನಿನ್ನ ನಂಬಿದವರೊಳು ಖತಿ । ಯನ್ನು ತೋರ್ಪುದುಚಿತವೆ ॥ ಅ ॥

ಚಂಡಕೋಪದಿಂತು ನೀನು । ಕೆಂಡಮುಗಳುತ್ತಿತರೆ ॥
ಕಂಡು ಬೆದರ್ವರಮರರೂ ಬ್ರ । ಹ್ಮಾಂಡ ಮುಳಿವುದೇ ಬಿಡ್ಡೆ ॥ ೧ ॥
ವಾನರೇಂದ್ರ, ನಿಮ್ಮೊಳುದಾ । ಸೀನತೆಯನು ತೋರೆನ್ನೆ ॥
ಮಾನಪ್ರಾಣಮುಳಿಸಿ ಪೊರೆಯೊ । ಮಾನವೇಂದ್ರ ತನುಭವಾ ॥ ೨ ॥

## (ಲಕ್ಷ್ಮಣ ಮತ್ತು ಅಂಗದರ ದ್ವಂದ್ವಗೀತೆ)

**ರಾಗ : ಖರಹರಪ್ರಿಯ - ಆದಿತಾಳ**

**ಅಂಗದ :** ಏತಕೆ ಕೋಪಿಸುವೆ ರಾಮಾನುಜ ಈ ಪರಿ ॥ ಪ ॥
ಭೀತರಾದೆ ಮ್ಮೊಳು ಖ್ಯಾತಿವಂತನೆ ನೀ ॥ ಅ ॥

**ಲಕ್ಷ್ಮಣ :** ಸಾರಿದ ಪರಿಯನು ಸಾರಿ ಜವದಿ
ಶ್ರೀರಾಮನಿಗರುಹದೆ ಮೀರಿದ ವಿಭವದಿ
ತಾಮಸ ಮಾಡುವರೆ ಶ್ರೀರಾಮರ ಸೇವೆಗೆ ॥ ತಾ ॥

**ಅಂಗದ :** ಸೇರಿಸೆ ಸೈನ್ಯವ ಸಾರಿದೆನದರಿಂ
ಸಾರಸಮುಖ ಸಖ ಕೋಪ ಬಿಡೆಮ್ಮೊಳು ॥ ೧ ॥

**ಲಕ್ಷ್ಮಣ :** ನುಡಿದ ನುಡಿಯ ಕಡು ಜವದಲಿ ಮರೆಯುತ
ಪೊಡವಿಗೊಡೆಯ ಶ್ರೀರಾಮನಿಗರುಹುದೆ ॥ ತಾ ॥

**ಅಂಗದ :** ಸರಿಸಕೆ ಬರುತಿಗೆ ಪಟುತರ ರಿಪುಬಲ
ಹರುಷದಿಂದಲಿ ಪರಮ ಪುರುಷನೊರೆದ ಹದನ
ಶಿರದಿ ಧರಿಸಿ ಮೆರೆಯುತ ಧರೆಯೊಳಗಿರುವೆವು
ನಿರುತವು ವರ ದಶರಥ ಸುತ ॥ ೨ ॥

## ದೃಶ್ಯ : ಋಷ್ಯಮೂಕ ಪರ್ವತ ಪ್ರದೇಶ

**ರಾಗ : ಬಿಲಹರಿ - ಆದಿತಾಳ**

**ಆಂಜನೇಯ : ಹಾಡು**

ಅಭಿವಾದೆಯೇ ಮಹಾ ಪ್ರಭೋ
ಶುಭದಾತ ಸೀತಾ ವಿಭುರಾಮಚಂದ್ರ ॥ ಪ ॥
ಜಗದಾದಿಮೂಲ ಜಲದಾಭನೀಲ ನಿಗಮಾದಿನುತ ನಿರ್ಮಲ

ಸುಗುಣಾಭಿರಾಮ ತ್ರಿಗುಣೈಕಸೀಮ ಖಗವಂಶ ಸೋಮ
ಕಮ ನೀಯ ನಾಮ ॥ ೧ ॥

ಮುನಿ ಜಾಲಪಾಲ ದನುಜಾಳಿಕಾಲ ಘನಧರ್ಮಶೀಲ ಮಹಿಮೋಜ್ವಲ
ಇನವಂಶ ಬಾಲ ಜನನುತ್ಯಶೀಲ ಜನಕಾತ್ಮ ಜಾನ್ವೇಷಣ ನವ್ಯಲೀಲ ॥ ೨ ॥

**ಕಪಿಗಳು : ಹಾಡು** **ರಾಗ : ಪೀಲ್ - ಆದಿತಾಳ**

ಸಾಧು ಜನೋದ್ಧಾರ ರಾಮಾ ಗುಣಧಾಮ
ರಘುರಾಮ ಬಲಭೀಮ ॥ ಪ ॥
ಜನನ ಮರಣ ಸೌಭಾಗ್ಯ ಸುನಾಮ
ಸಕಲಲೋಕಾಭಿರಾಮ
ಗುಣಧಾಮ ರಘುರಾಮ ಬಲಭೀಮ ॥ ಅ.ಪ. ॥
ದಶರಥ ಪುತ್ರನೆ ಧನ್ಯ ಚರಿತ್ರನೆ ಪಶುಪತಿಮಿತ್ರನೆ
ರಾಮಾ ಗುಣಧಾಮ
ರಘುರಾಮ ಬಲಭೀಮ ॥ ೧ ॥

**ರಾಮ : ಹಾಡು** **ರಾಗ : ನಾಟಿಕುರಂಜಿ - ರೂಪಕತಾಳ**

ಪವನಸುತ । ಗುಣಪೂರಿತ । ಬಾರೈ ಸುಜನವಿನುತ ॥ ಪ ॥
ಭುವನ ವಿನುತ ಸುರಚಿರಚಾರಿತ ॥ ಅ.ಪ. ॥
ತುಂಗದೇಶದೇ । ಶಂಗಳಲ್ಲಿ ವಿ । ಘ್ನಂಗಳನ್ನು ನೀಂ ।
ಭುಂಗಿಸುತ್ತಲಿ । ತಿಂಗಳೊಳೆ । ನ್ನಂಗನೆಗೀ । ಯುಂಗುರಮಿ । ತ್ತಿಂಗದೆನೀಂ ।
ಸಂಗಡ ಕುರುಹಂ ಕೊಂಡುರೆ। ಮಂಗಳ ವಾರ್ತೆಯತರೆ ॥ ೧ ॥
ದಿತಿಸುತನಿರವಂ । ಕ್ಷಿತಿಸತೆಸಿತವನ್ನೊರೆಯುತೆ । ಚತುರನೆ । ಕೃತಿಬಿಧ ।
ಜನಸುತೆ ಗೈಸ । ಮ್ಮತದೊಳು ನೀಂ ॥ ೨ ॥

**ಆಂಜನೇಯ : ಹಾಡು** **ರಾಗ : ಪೂರ್ವಿಕಲ್ಯಾಣಿ - ಆದಿತಾಳ**

ರಘುನಾಯಕ । ಜಗತೀಜನಕ ॥ ಪ ॥
ಅಘದೂರ ಭ । ವ್ಯಗುಣಾಕರ ॥ ಅ.ಪ. ॥

ಕರುಣಾಕರ । ವರಭಕ್ತಪಾಲ । ಧರಣಿಜೆಯನಾ । ನರಸುತ್ತಲಿ ಧರೆಯೆಲ್ಲವಂ ।
ಚರಿಸಲ್ಕೆಪೋಪೆ । ಚರಣಸೇವಕನೊಳ್ । ಕರುಣಿನಾಜ್ಞೆಯನು ।
ಅಂಗಕೇರಳ । ಬಂಗಾಳಕಾ । ಳಿಂಗಾದಿ ದೇಶಂಗಳಲ್ಲಿ ನಾಂ ॥
ತುಂಗಾದ್ರಿ ಪ್ರಾ । ತ್ಯಂಗಳನೆಲ್ಲ । ಹಿಂಗದೈದಿ ರಘು । ಪುಂಗವನೆ ನೋಳ್ಪೆ ॥ ೨ ॥

**ಆಂಜನೇಯ : ಕಂದ**

ಶ್ರೀರಾಮನೆ ನಿನ್ನಯ ಕರು ।
ಣಾರಸವಿಲಸತ್ಕಟಾಕ್ಷಮೊಂದಿರೆ ಕ್ಷಣದೊಳ್ ॥
ರಾವಣನಂ ಸದೆಬಡಿ
ದಾರಯೆ ಜನಕಜೆಯ ಕಂಡು ಬಂದಪೆನೊಲವಿಂ ॥

**ರಾಮ : ಹಾಡು** **ರಾಗ : ಹಿಂದೂಸ್ಥಾನಿಕಾಪಿ - ಆದಿತಾಳ**

ಜಾನಕಿಗರುಹುವ ಪರಿಯಿದ ಕೇಳೈ
ಮಾರುತಿ ಪೇಳುವೆನು ॥ ಪ ॥
ಶಿವಚಾಪವ ಮುರಿದು ಆ ಆ ಆ
ನಲಿದು ಸೀತೆಯ ಕರಪಲ್ಲವಗಳ ಪಿಡಿದು
ನಡೆ ತಂದುದ ತಿಳಿಸೈ ಮಾರುತಿ ॥ ಅ.ಪ. ॥
ವನವಾಸಕೆ ಮುನ್ನ ಎನ್ನ ವನಜಾಕ್ಷಿಯು
ಛಲಪಿಡಿದೆನ್ನೊಡನೆ ಪಂಚವಟಿ ತಟಕೆ ಬಂದಳು ॥ ೧ ॥
ಕಾಂಚನ ಮೃಗವನ್ನು ಬಯಸುತೆ
ಭಂಗಿಸುತ ಲದ ತಂದು ಕೊಡೆನುತ
ಪ್ರಾರ್ಥಿಸಿದಳು ಸೀತೆ ಎನ್ ಮಾನಿತೆ ॥ ೨ ॥
ನಂಬಿಕೆ ಬಾರದೊಡೆ
ಆಕೆಗೆ ಎನ್ನುಂಗುಳಿಕೆಯ ನಿದ ನೀ
ಕೊಡಲು ಪಂಕಜಮುಖಿ ನಿಜವ ತಿಳಿವಳೂ ॥ ೩ ॥

**ಆಂಜನೇಯ : ಹಾಡು** **ರಾಗ : ಹಂಸಧ್ವನಿ - ಆದಿತಾಳ**

ರಘುಪುಂಗವ ನಾಂ ಪೋಗಿ ಬರ್ಪೆ
ರಾಜೀವ ನೇತ್ರ, ನಮಿಸುವೆ ರಾಮ ॥ ಪ ॥
ಧರೆಯೆಲ್ಲವನುಚರಿಸುತ್ತಲಾ ಧರಣಿಜೆಯನಾ ನರೆಸುವೆನು ॥ ಅ.ಪ. ॥
ಧನುಜಾಧಿಪನ ದರ್ಪವೆಲ್ಲವಂ ಧ್ವಂಸಗೈಯುತವನ ಹನನ ಮಾಡುತಲಿ
ನಿನಗೆ ಬೇಗನಾಂ ಜನಕಜಾತೆಯಿಂದನುವಾದ ವಾರ್ತೆ ತರುವೆನು ದೇವಾ ॥ ೧ ॥

## ದೃಶ್ಯ : ವಿಂಧ್ಯ ಪರ್ವತ ಪ್ರಾಂತ
## (ಕಪಿವೀರರ ರಾಮ ಧ್ಯಾನ)

**ಕಪಿವೀರರು : ಗೀತ**

ಶುದ್ಧ ಬ್ರಹ್ಮ ಪರಾತ್ಪರ ರಾಮ
ಕಾಲಾತ್ಮಕ ಪರಮೇಶ್ವರ ರಾಮ
ಶೇಷತಲ್ಪಸುಖ ನಿದ್ರಿತರಾಮ
ಬ್ರಹ್ಮಾದ್ಯಮರ ಪ್ರಾರ್ಥಿತರಾಮ
ಚಂಡ ಕಿರಣಕುಲ ಮಂಡನ ರಾಮ
ಶ್ರೀ ಮದ್ದಶರಥ ನಂದನ ರಾಮ
ಕೌಸಲ್ಯಾ ಸುಖವರ್ಧನರಾಮ
ವಿಶ್ವಾಮಿತ್ರ ಪ್ರಿಯಧನರಾಮ ........

## ದೃಶ್ಯ : ಸ್ವಯಂಪ್ರಭೆಯ ಗುಹೆ

**ಸ್ವಯಂಪ್ರಭೆ : ಹಾಡು** **ರಾಗ : ಕಲ್ಯಾಣಿ - ಆದಿತಾಳ**

ಸುಂದರ ರಘುರಾಮ ರಾಮಾ ॥ ಪ ॥
ಜಯ ಜಯ ಸುಂದರ ಸುಗುಣಾ ಮಂದಿರ ॥ ಅ.ಪ. ॥
ಪಾವನ ಚರಿತ ಲೋಕಾವನ ಶೀಲ
ಪಾಲಿಸು ಶ್ರೀಲೋಲಾ ಜಯಜಯ ॥
ಜಯ ಜಯ ಸುಂದರ ಸುಗುಣಾ ಮಂದಿರ ॥ ೧ ॥

## ದೃಶ್ಯ : ಸಾಗರತೀರ

**ಕಪಿವೀರರು : ಹಾಡು** **ರಾಗ : ಹಿಂದೂಸ್ಥಾನಿಕಾಪಿ - ಆದಿತಾಳ**

ಪರಿಪಾಹಿ ರಾಮ ಪಾವನ ನಾಮ
ವರಬಲ ಭೀಮ ಪಾಹಿ ಶ್ರೀರಾಮ
ರಾಮನೀಲ ಮೇಘ ಶ್ಯಾಮ
ಸೋಮ ಸುಂದರ ರಾಮ ॥ ಪ ॥

**ಆಂಜನೇಯ : ವೃತ್ತ॥** **ರಾಗ : ನಾಟಿ**

ವನವಾಸಂಪೊಂದಿರಾಮಂ ಸತಿಯನಳಿದನಲಾ ಪುತ್ರಶೋಕಾರ್ತ
ಭೂಪಂ । ತನುವಂತಾಂಬಿಟ್ಟನೀ ಲೋಕವನಳಿದರಲಾವೀರ
ಮಾರೀಚ ಮುಖ್ಯರ್ ॥ ಘನ ಶೌರ್ಯಂಗೃಧ್ರರಾಜಂ ಮಡಿದ ನಕಟ
ಪೌಲಸ್ತ್ಯನಿಂ, ಸೀತೆದೈತ್ಯೇಂ । ದ್ರನಕೈಯ್ಯೊಳ್‌ಸಿಲುಕಿ ದುಃಖ
ಪಡುತಿಹಳಕಟ । ಎಮಗೆ ಬಂದುದೀ ಪ್ರಾಣನಾಶಂ ॥

**ಕಪಿವೀರರು : ಹಾಡು** **ರಾಗ : ಹಿಂದೂಸ್ಥಾನಿ ತೋಡಿ - ಚಾಪುತಾಳ**

ವರಮಾರುತ ಸಂಜಾತ । ಸಾರಗುಣೋಪೇತ । ವೀರ ಮಂಗಳಾಕರ ॥ ಪ ॥
ಭೂರಿಶುಭಾನ್ವಿತ । ಕಾರುಣ್ಯಪೂರಿತ ।
ಸಾರಸುವರ್ಗಾಭಗಾತ್ರ ॥ ಸುಚರಿತ್ರ ॥
ಸುಪವಿತ್ರ ರಿಪುಜೈತ್ರ । ವಿನುತಾಂಜನಾದೇವೀಪುತ್ರ ॥ ಅ.ಪ. ॥
ರಾಘವ ಕಾರ್ಯವ । ನಾಗಿಸಲೀಘನ । ಸಾಗರವನು ದಾಂಟುವಂಥ ॥
ಬಲವಂತ ॥ ಘನಶಾಂತ । ಶುಭಕಾಂತ ಪಟುಪಂಥನೀಂ ಹನುಮಂತ ॥ ೧ ॥
ದಾಯವಂ ಕಂಡು । ತೋಯನಿಧಿಯನು । ವಾಯದಿಂಹಾರುವ ॥ ನಿರಪಾಯ ।
ನರಗೇಯ ಜಿತಮಾಯ ॥ ರುಚಿರಾಯತಾಕ್ಷಕಪೀಂದ್ರ ॥ ೨ ॥
ಇಂಗಡಲನುರ್ಕಿಸಿನೆರೆ । ತುಂಗದಿರನಲ್ಲದೆ । ಉಡು । ಸಂಘವಿಂದಾದಪ್ಪುದೆ ।
ಸುಕುಮಾರ । ಸುಶರೀರ । ವರನರ । ಹರಿಪಾದ ಭಕ್ತವಿಚಾರ ॥ ೩ ॥

ಆಂಜನೇಯ : ಹಾಡು　　　　ರಾಗ : ಹಂಸಧ್ವನಿ - ಆದಿತಾಳ

ಲಂಘಿಪೆನೀವಾರ್ಧಿಯಂ । ಭರದಿಂ । ದುರೆ ಹರುಷಮಾಂತು ಸುರೆ ॥ ಪ ॥
ಲಂಘಿಸಿ ನೀರದ । ಸಂಘದ ವರೆಗು । ತ್ತುಂಗಬಲದೆ ನಾ । ನಿಂಗದೆ
ನಿಮಿಷದಿ ॥ ಅ.ಪ. ॥

ಪಾವನಾತ್ಮ - ನಾದ - ರಾಮನ । ಭಾವಾಂತದಿರಿಸುತಲಿ ॥
ಶ್ರೀವರಪದರಾ ಜೀವವ ಸುಸ್ಥಿರ । ಭಾವದೆ ನೆನೆಯುತ । ಲಾವಗಮೀಕ್ಷಣ ॥ ೧ ॥
ಸಿಂಧುತೀರದೊಳ । ಗಿಂದು ರಂಜಿಸುವ । ಸಾಂದ್ರಶೈಲಮೇರಿ ॥
ಚಂದದೀಕ್ಷಣಂ । ಆನಂದದಿಂದಲಾ । ಮದಾಂಧರಾವಣಂ । ಪಿಂದಿರ್ಪ ನಗರವಂ।
ಪೊಂದುತ್ತೆ ಪಂಥದಿಂ । ನೊಂದಿರುವಾ ಭೂ । ನಂದನೆಯಿರುತಿ ।
ರ್ಪಂದವನರಿತಾಂ । ಬಂದಪೆನಿಂದುರೆ ॥ ೨ ॥

## ದೃಶ್ಯ : ಲಂಕಾನಗರದ ಕೋಟೆಯ ಹೆಬ್ಬಾಗಿಲು

ಆಂಜನೇಯ : ಕಂದ

ಸುರಕುಲಮಂ ಹಿಂಸಿಸಿ ನಿ ।
ಷ್ಕರುಣಂ ತಾನೆನಿಸಿ ಜಗವ ಭಾದಿಸುತಿರ್ಪಾ ॥
ದುರುಳದಶಾಸ್ಯನ ಪುರಮಿದ
ನಿರುಕಿಸಿದೆಂ ಸುಖದೆ ರಾಮಚಂದ್ರನ ಕೃಪೆಯಿಂದ ॥

ಆಂಜನೇಯ : ಹಾಡು　　　　ರಾಗ : ಕೇತಾರಗೌಳ - ರೂಪಕತಾಳ

ಕಂಡೆನಾ । ಲಂಕಾಪುರಮಂ । ಮಣಿಮಂಡಲನವನಿದ ॥ ಪ ॥
ಚಂಡ ದಾನವ । ಮಂಡಲೇಂದ್ರನ । ಕಂಡುಹಿಡಿದುರೆ । ಹಿಂಡುವೆನು
ಛಲ ॥ ಅ.ಪ. ॥
ಗಗನನತಲಕಿಂ । ದೊಗೆವಕಲ್ಲೋ । ಲಗಳ ಮೇಲಾಂ । ನೆಗೆಯುತ ॥
ಖಗತಿಯೊಳಗಾಂ । ಶುಕನತೆರದಿ । ಲ್ಲಿಗೆ ಬರುತಲೀ । ನಗರವನು ನೆರೆ ॥ ೧ ॥
ಬಳಸಿ ಕೋಟೆಯ ॥ ವಳಯಗಳ ಕಂಗೊಳಿಪಗಳ್ತಿಗಳೇಳನಾಂ ।
ಛಲದಿ ದಾಂಟುತೆ ॥ ನಲಿದುಮಿಗೆ ಕೊತ್ತಳದ ಮೇಲಿಂ । ದಿಳಿಯು ತೀಗಳೆ ॥ ೨ ॥
ತೊಳಪ ಹೇಮದ । ಕಲಶತತಿ ಥಳಥಳಿಸಿ ಗಗನವ ಬೆಳಗಿರೆ ॥
ನಲೆ ತ್ರಿಕೂಟಾ ಚಲದ ಮೇಲು । ಜ್ವಲಿಪ ದೈತ್ಯನ ಪೊಳಲ ನೀಪರಿ ॥ ३ ॥

**ಲಂಕಿಣಿ : ಹಾಡು** **ರಾಗ : ಹಿಂದೂಸ್ಥಾನಿ - ಆದಿತಾಳ**

ಯಾರು ಯಾರೆಲೊ । ಕೂಳ । ಯಾರು ಯಾರೆಲೊ । ಪೇಳ ।
ದೀರೀತಿ ಪೋಗುವೆ ಪುರದೊಳಗೆ ॥ ಪ ॥
ಲಂಕಾನಗರವಂ । ಲಂಕಿಣಿ ನಾನು ॥ ಬಿಂಕದಿಂ ಕಾದಿರಲು ।
ಶಂಕೆಯಿಲ್ಲದೈದುವೆ ಛೀ ॥ ೧ ॥
ನಿಲ್ಲು ನಿಲ್ಲೆಲೊ ಕಪಿ । ಸೊಲ್ಲಡಗಿಸಿ ನಿನ್ನ ಕೊಲ್ಲುತ್ತೆ ಖಂಡವನು । ಮೆಲ್ಲುವೆ
ನಾನೀಗ ಬೇಗ ॥ ೨ ॥
ಪ್ರಾಣದೊಳಾಸೆಯನು । ಮಾಣುತ್ತ ನಿಲ್ಲುನಿಲ್ಲೊ ॥ ಗೋಣಂ ಮುರಿದು ನಾಂ ।
ಶೋಣಿತಮೀಂಟುವೆನು ॥

**ಲಂಕಿಣಿ : ಹಾಡು** **ರಾಗ : ಕೇತಾರ - ಆದಿತಾಳ**

ಏನೆಂದೆಯೊ ನೀಚನೆ । ಛೀ ! ಛೀ ! ಖಳ । ಏನೆಂದೆ ಮದಾಂಧನೇ ॥ ಪ ॥
ಲಕ್ಷ್ಯವಿಡದಾಡೆಯಾ । ಈ ಕ್ಷಣದೆ ನಿನ್ನ ನಾನು । ಶಿಕ್ಷಿಸುತೆ ಸೀಳ್ದು
ಮಿಗೆ ಭಕ್ಷಿಪೆನು ಭ್ರಷ್ಟನೆ ಛೀ ॥ ೧ ॥
ಹೇಡಿತನದಿಂ ಬಲು ಮಾ ! ತಾಡುವೆಯು ಕೋಡಗನೇ ॥ ನೋಡು ನಿನ್ನ
ಜಂಬವನಿ । ಟ್ಟಾಡುವೆನು ಕಾಡುವೆನು ॥ ೨ ॥

## ದೃಶ್ಯ : ರಾವಣನ ಅಂತಃಪುರ

**ಆಂಜನೇಯ : ಕಂದ**

ಖಳನಿಂ ಹಿಂಸೆಯ ಸಹಿಸ ।
ಲ್ಕಳವಲ್ಲದೆ ತನ್ನ ತನುವನೇಂ ನೀಗಿದಳೋ ॥
ಸಲೆ ಸಂಪಾತಿಯು ಪುಸಿಯಂ ।
ತಿಳುಪಿದನೋ ನಮಗೆ ತೋರದಿಂದೇನೊಂದುಂ ॥

**ಆಂಜನೇಯ : ಸೀಸಪದ್ಯ**

ಪದ್ಮರೇಖೆಗಳಿಲ್ಲ ಪಾದಗಳ ಮೇಲೆ
ಮತ್ಸ್ಯ ಲಾಂಛನವಿಲ್ಲ ಮುಂಗೈಯ್ಯ ಮೇಲೆ

ಮತ್ತೆರಡು ಮಣಿಗಳಿಲ್ಲ
ವೈಧವ್ಯ ತೋರುತಿಹುದು
ಸೀತೆ ಇವಳಲ್ಲ ಸೀತೆ ಇವಳಲ್ಲಾ

**ದೃಶ್ಯ : ರಸ್ತೆ**

**ಆಂಜನೇಯ : ಹಾಡು** ರಾಗ : ನಾಗಗಾಂಧಾರ - ರೂಪಕತಾಳ

ಅಮಮ ಕಾಣೆ ಭೂಮಿ ಜಾತೆಯ
ರಾಮಕಾಂತೆ ಸೀತೆಯಾ ॥ ಪ ॥
ಶ್ರಮವ ಪೊಂದಿದೆ ಭ್ರಮಣೆ ಗುಂದಿದೆ
ರಾಮಕಾಂತೆಯನ್ನು ಕಾಣದೆ ॥ ಅಪ ॥
ಜಡಜ ಗಂಧಿಯ ಉಡುಪಮುಖಿಯ
ಬಡ ನಡುವಿನ ಭಾಮೆ ಸೀತೆಯಾ ॥ ೧ ॥

**ಅಥವಾ**

**ಆಂಜನೇಯ : ಹಾಡು** ರಾಗ : ಧನ್ಯಾಸಿ - ರೂಪಕತಾಳ

ಮೋಸಮಾದುದೋ ರಾಮಾ ಮೋಸಮಾದುದೋ ॥ ಪ ॥
ಜನಕನುದರದಲ್ಲಿ ಜನಿಸಿ ಘನಮಹಿಮನ ಕರವ ಪಿಡಿದು
ದನುಜಗೆ ಮರುಳಾಗಿ ತಾನು ಜನಕಜಾತೆಯು ಪವಳಿಸಿರ್ಪಳು ॥ ಅ.ಪ. ॥
ಹರನ ಧನುವ ಕರದಿ ಮುರಿದಾ ವರರಾಮಚಂದ್ರನ ಕರವ ಪಿಡಿದು
ದನುಜಗೆ ಮರುಳಾದಳಿಂತು ವರಮಾತೆ ಸೀತೆ ।

**ದೃಶ್ಯ : ಅಶೋಕವನ**

**ಸೀತೆ : ಸಾಕಿ**

ನಮಸ್ತೇ ಬ್ರಹ್ಮರೂಪಾಯ ನಮಸ್ತೇ ವಿಷ್ಣುರೂಪಿಣೆ
ನಮಸ್ತೇ ರುದ್ರರೂಪಾಯ ಭಾಸ್ಕರಾಯ ನಮೋ ನಮಃ ॥

**ಸೀತೆ : ಹಾಡು** **ರಾಗ : ಉದಯರವಿಚಂದ್ರಿಕೆ - ಆದಿತಾಳ**

ಉದಯ ರವಿ ಚಂದ್ರಿಕಾ ಭಾನು
ಅಂಧಳು ನಾನು ಮುಂದೆನಗೇನು
ಬಂಧ ವಿಮೋಚನೆ ಉಂಟೇನು ॥ ಪ ॥
ಕರ್ತಾರ ನೊಡಲಲಿ ಕರುಳಿಲ್ಲವೇನು
ಕಾಣದ ಕೈಗೆ ಕಣ್ಣಿಲ್ಲವೇನು
ಕಾಲಗತಿಯೋ ಕ್ರೂರದೆಸೆಯೋ
ಹೆಣ್ಣಿನ ಬಾಳೇ ಕಣ್ಣೀರೇನು ॥ ೧ ॥
ಇದಾವ ಜನ್ಮದ ಪಾಪ ಫಲವೋ
ಇದಾರ ಕೋಪದ ಶಾಪದುರಿಯೋ
ನಾನಾ ವೇದನೆ ಏನೀ ಶೋಧನೆ
ವಿಧಿಯ ವಿಲಾಸ ವಿನೋದವಿದೇನೋ ॥ ೨ ॥

**ಸೀತೆ : ಹಾಡು** **ರಾಗ : ಸಿಂಧುಭೈರವಿ - ಆದಿತಾಳ**

ರಘುವರ ಶ್ರೀ ರಾಮರಾಮ ರಘುವರ ಶ್ರೀರಾಮ
ರಾಕ್ಷಸ ಮಾಯೆ ಬಾಧೆಯನಾ ಸಹಿಸಿ ॥ ರಘು ॥
ಪ್ರಿಯ ಸತಿ ಪ್ರೇಮ ಸುನಾಮ
ಪ್ರಿಯ ಸತಿ ಸೀತಾ ಪ್ರೇಮ ಸುನಾಮ
ರಾಮನ ಏಕ ಜನ್ಮಾ ಅನೇಕ
ಪ್ರೇಮದಿ ನೆನೆದರೆ ಮಾನವ ಸೀತೆ ॥ ರಘು ॥
ಕಳೆದ ನೆನ್ನೆಗಳೆಲ್ಲಾ ಮುಡಿದೆಸೆದ ಪೂ ಮಾಲೆ
ಬರುವ ನಾಳೆಗಳೆಲ್ಲಾ ಕಾರಂಜಿ ಮಣಿ ಮಾಲೆ
ವಿರಸ ನೀರಸ ವಿಷಮ ರಾಗ ಜ್ವಾಲೆ
ಆಶಾ ನಿರಾಶೆಗಳೆಲ್ಲಾ ಈರೇಳು ಲೋಕಲೀಲೆ
ಜನ್ಮ ಜನ್ಮಾಂತರದ ಕರ್ಮ ಸಂಕೋಲೆ
ಜೀವನವೇ ಕಣ್ಣೀರ ಕಡಲ ಲೀಲೆ

ರಾವಣ : ಹಾಡು                                        ರಾಗ : ಮೋಹನ - ತ್ರಿಶ್ರನಡೆ ಏಕತಾಳ

ಮನೋಜ ಶರವು ಕೊಲುತಿರುವುದು
ತನುವದೀಗ ತಪಿಪುದು
ಮನೋಜನೆ ಮನೋಜನೆ ॥ ಪ ॥
ಅನೇಕ ವಿಧದಿ ವರ ತರುಣಿಯ
ನೆನೆದು ನೆನೆದು ಮನದಲಿ ॥ ಅ.ಪ. ॥
ಧನಕನಕವು
ಮನಮನದೊಳಗೆಸೆಯುತೀರ್ಪುದೀಗಲೇ ॥ ೧ ॥

ರಾವಣ : ಹಾಡು                                        ರಾಗ : ಕಲ್ಯಾಣಿ - ರೂಪಕತಾಳ

ಮುದ್ದಾಡುವೆ ಬಾ ಮೋಹನೆ । ಮುಗ್ಧಾಂಬುಜದಳನಯನೆ ॥ ಪ ॥
ಮದ್ದಾನೆಗು ನಡೆ ಬೆಡಗಿಂ । ಬದ್ಧಾಧರಳಾಗಿ ಬಾರೆ ॥ ಅ.ಪ. ॥
ಸೊಗಸಿನ ಕಣಿ । ಸೊಬಗಿನ ಮಣಿ । ಮೊಗವ ತೋರೆ. ಮುದದಿ ನೀರೆ ॥
ಬಗೆಯೊಳಿಂತು ಬಹು ವಿಧದೊಳು । ದುಗಡವೇತಕೆ ॥ ೧ ॥
ಮೃಗಲೋಚನೆ । ಮಿಗೆಯೋಚನೆ । ಯುಗಲೇಂಸರಿ । ಸುಗುಣಾಕರೆ ।
ನಗುನಗುತಿ । ಲ್ಲಿಗೆ ಬಾಸಖಿ । ಸೊಗಪೊಂದುವೆ ಮೃಗಧರ ಮುಖಿ ॥ ೨ ॥

ರಾವಣ : ಹಾಡು                                        ರಾಗ : ಬೇಗಡೆ - ರೂಪಕತಾಳ

ಭ್ರಾಂತಿಯುದೇನೇ ರಮಣಿ । ಕಾಂತನಂ ಸ್ಮರಿಸುವ ॥ ಪ ॥
ಜನಪದವನು ಸಿರಿಯನುತಾ । ನನುಜಗಿತ್ತು ಜಡೆಯ ಧರಿಸಿ ।
ವನಕ್ಕೆ ಬಂ । ದನಾಧನೇಂ । ಧನಾಢ್ಯನೇ । ಗುಣಾಢ್ಯನೇ ॥ ೧ ॥
ಕಾಡೊಳೆಲ್ಲ ತಿರುಗಿ ತಿರುಗಿ ಬಾಡಿ ಬಳಲಿಸುತ್ತೆ ನಿನ್ನ ॥
ಕೋಡಗದಂತಾ ॥ ಡಿಸಿ ನಗೆಗೀಡು ಮಾಡಿದ । ಮೂಢನವಂ ॥ ೨ ॥
ಹೇಡಿ ರಾಮನನ್ನುಳಿದು ನೀಂ । ಕೂಡಿ ನನ್ನ ವಿಭವಮೊಂದು
ನೋಡು ಮುಖವ । ನೀಡು ಸುಖವ । ಕಾಡದೆ ಹಠ । ಮಾಡದೆ ಸಖಿ ॥ ೩ ॥
ರಾಮಗೀಮನೆಂದು ಖಳನ । ನಾಮವೆತ್ತ ಬೇಡವಿನ್ನು ॥
ಕಾಮಿನೀಕರಿ । ಗಾಮಿನಿ ನೆರೆ । ಕಾಮನ ಸಂ । ಗ್ರಾಮಕೆ ಬಾ ॥ ೪ ॥

**ಸೀತೆ : ಕಂದ** **ರಾಗ : .....**

ಶುನಕನ ತೆರದಿಂದೇತಕೆ ।
ಮನಬಂದ ವೊಲಿತು ಬೊಗಳುತಿರ್ದಪೆ ದುರುಳು ॥
ಘನವೀರ ರಾಘವಾಂಗನೆ ।
ಯೆನಿಸಿರುವೀ ನನ್ನ ಮನಮಿದೇಂ ಚಲಿಸುವುದೇ ॥

**ರಾವಣ: ಹಾಡು** **ರಾಗ : ದರ್ಬಾರಿ ಕಾನಡ - ಆದಿತಾಳ**

ಖಡಾ ಖಾಡಿಯಲಿ ಹೇಡಿ ರಾಮನಿಲ್ಲುವನೆ ಆಡಲೇನೆ ॥ ಪ ॥
ಪರಶಿವವರಬಲವಿರಲ್ ಜಯಿಸೆನೆ
ಧರಿತ್ರೀಜಯಂ ತೊರೆಯುವೆನೆ
ಅರಿಯದೆ ಜರಿವೆಯ ಮರುಳೆ ನೀನು ॥ ೧ ॥

**ರಾವಣ: ಕಂದ**

ಫಡ ! ಪಥ ! ನಸವಿನುಡಿಗಳ ನಾಂ ।
ನುಡಿದೊಡಮಡಿಗಡಿಗೆ ಬೆಡಗ ತೋರುವೆಗಡ ಛೀ ॥
ಪಡಿನುಡಿವ ಜಡಳೆ ನಿನ್ನಂ
ಕಡಿದಿಡುವೆ ಕಡಂಗಿ ಕುಡಿದವೆಂ ನೆತ್ತರ ನಾಂ ॥

**ಸೀತೆ : ಕಂದ**

ಕಷ್ಟಂ ಮಾನವ ಜನ್ಮಂ ।
ಕಷ್ಟತರಂ ಕಾಮಿನಿಯರ ಜನ್ಮಂ ಪಿಂದು ॥
ಕಷ್ಟತಮಂ ಪರವಶ್ಯಂ ।
ಕಷ್ಟಮೆನಗಪಾರಮಕಟ ಜೀವಿಪೆನೆಂತಾಂ ॥

**ಆಂಜನೇಯ : ಕಂದ**

ತಡೆ ತಡೆ ಯಕೃತ್ಯಮಿದ ನೀಂ ।
ದುಡಕದಿರೌ ತಾಯೆ ಸೊಗದೊಳಿರ್ಪಂ ರಾಮಂ ॥

ಕೆಡುಗ ದಶಾಸ್ಯನ ಶಿರಮುರಿ।
ದಿಡುವಂ ಕ್ಷಿಪ್ರದೊಳ್ ಬಂದು ಲಕ್ಷ್ಮಣ ಸಹಿತಂ ॥

**ಸೀತೆ : ಕಂದ**

ಜನಕಂ ಧರಣೀಧವ ವರ।
ಜನಕಂ ನುತ ದಶರಥಾವನೀಂದ್ರಂ ಮಾವ ॥
ಇನಿಯಂ ಕೌಸಲ್ಯಾವರ
ತನಯಂ ಶ್ರೀರಾಮಚಂದ್ರನನುಪಮ ವಿನಯಂ ॥

**ಆಂಜನೇಯ : ಹಾಡು** ರಾಗ : ಮಿಶ್ರ ಪೀಲು - ಆದಿತಾಳ

ಕ್ಷೇಮದಿಂದ ಇಹರು ತಾಯೆ
ರಾಮ ರವಿಕುಲ ಸೋಮ ಪ್ರತಾಪ
ಕ್ಷೀರಾಬ್ಧಿಯಲಿ ಪವಡಿಸಿರಲು
ದೇವತೆಗಳ ಭಿನ್ನಪವನೆ ಕೇಳ್ದು
ಭೂಮಿ ಭಾರವ ಹರಿಸುವೆನೆನುತ
ದಶರಥ ಕುವರನು ತಾನಿರುತಿಹನು

**ಆಂಜನೇಯ : ಸೀಸಪದ್ಯ** ರಾಗ : ಸಿಂಹೇಂದ್ರ ಮಧ್ಯಮ

ತಪನ ಕುಲದೀಪ ಶ್ರೀರಾಮಚಂದ್ರಂ
ವಿಪಿನ ಲತೆಯೊಂದ ತಾನಪ್ಪಿಸತತಂ
ಮತ್ ಪ್ರಾಣನಾಯಕಿ ಜಾನಕಿ ಜಾನಕೀ
ಹೃದಯ ಸಖೀ ಎನುತಂ
ಆಹಾರ ನಿದ್ರೆಗಳೆಲ್ಲವಂ ತೊರೆದು
ಮೋಹಾತಿ ಮೋಹದಿಂ ಸೀತೆ ಸೀತೆ ಎಂದು
ಸಹಜಾತ ಲಕ್ಷ್ಮಣನೊಡನಿರ್ಪ
ಎನ್ನಪ್ಪನರಸಿಂಹಂ ರಾಮಂ

**ಆಂಜನೇಯ : ಹಾಡು** **ರಾಗ : ಬಿಲಹರಿ - ಆದಿತಾಳ**

ಶ್ರೀರಮೆ ಪರಿಪಾಹಿ ವೈದೇಹಿ ॥ ಪ ॥
ಸಾರಾಚಾರೆ ಧೀರೆ ನಮೋಸ್ತುತೇ
ನೀರಜ ಪರಿಪೂತೆ ಭೂಜಾತೆ ॥ ಅ.ಪ. ॥
ರಾಘವ ಸಹಚರೆ ರಮಣೀ ಜನವರೆ
ಲಘಿಮಾದ ಮಗುಣಿ - ಅಗಣಿತ ಕರುಣಿ
ಮೇಘೋದ್ಧಾರೆ ಶ್ರೀ ಗುಣ ಸಹಿತೆ
ಶ್ಲಾಘಿತ ಶುಭ ಕಾಮೆ ಸುಪ್ರೇಮೆ ॥ ೧ ॥

**ಆಂಜನೇಯ : ಹಾಡು** **ರಾಗ : ತೋಡಿ - ಆದಿತಾಳ**

ರಾಮನೆಂಥ ಚೆಲುವನಮಯ್ಯ ಕೇಳಮ್ಮ ತಾಯೆ ॥ ಪ ॥
ಸಾಮಗಾನ ಪ್ರೇಮ ನಿರುಪಮ
ರಾಮ ರವಿಕುಲ ಸೋಮನಮ್ಮ ಶ್ರೀ ॥ ಅ.ಪ. ॥
ಕಾಲ ನೀರದ ನೀಲ ಸುಂದರ
ಬಾಲ ಭಾನು ವಿಶಾಲ ತೇಜನ
ನೀಲ ಕುಂತಳ ದಿವ್ಯ ಲಲಿತಾಕಾರ
ಮುಕುರ ಕಪೋಲನಮ್ಮ ॥ ೧ ॥

**ಆಂಜನೇಯ** **ರಾಗಮಾಲಿಕೆ**

ದಶರಥ ನೃಪಾಲಂಗೆ ಹಿರಿ ತನುಜ ತಾನಾಗಿ ವಿಖ್ಯಾತ
ವಿಶ್ವಮುನಿ ವಿಶ್ವಾಮಿತ್ರಂಗೆ ಪ್ರಿಯಶಿಷ್ಯನಾದ ನಮ್ಮ ರಾಮ

ಅನುಜ ಲಕ್ಷ್ಮಣನೊಡಗೂಡಿ ಕಾನನ ಕೈತಂದು ವಿಕಟ
ಧನುಜನರ ಕೊಂದು ಪೊರೆದ ಅಹಲ್ಯೆಯನಂದು ರಾಮ

ಮಿಥಿಲೆಯೊಳ್ ಪೊರಮಟ್ಟು ಶಿವಧನುವ ಮುರಿದಿಟ್ಟು
ಮೈಥಿಲಿಗೆ ಕರಕೊಟ್ಟು ಪರಶು ಗರ್ವವನೆ ಸುಟ್ಟ ನಮ್ಮ ರಾಮ

ಪಿತೃ ವಾಕ್ಯವ ಸಲಿಸೆ ಸತಿ ಅನುಜ ಸಹಕರಿಸೆ ವನವನದಿ
ಪರಿತಪಿಸೆ ಪಂಚವಟಿಯಲಿ ನೆಲಸಿದ ನಮ್ಮ ರಾಮ

ಶೂರ್ಪನಖಿ ಭಂಗದಲಿ ಸ್ವರ್ಣಮೃಗ ಸಂಧಿಯಲಿ,
ಸೀತಾಪಹರಣದಲಿ ತನು ಬಳಲಿ ತಲ್ಲಣಿಸಿದ ನಮ್ಮ ರಾಮ

ಸುಗ್ರೀವ ಸಖನಾಗಿ ಹನುಮ ಕಿಂಕರನಾಗಿ ಅಮ್ಮಾ ನಿಮ್ಮಯ
ಶೋಧನೆಗಾಗಿ ಕಳುಹಿಸಿದನು ಎನ್ನಂ ರಾಮಚಂದ್ರ

**ಆಂಜನೇಯ : ಹಾಡು** **ರಾಗ : ಅಠಾಣ - ಅಟ್ಟತಾಳ - ಚಾಪು**

ಸಂದೇಹಬಿಡು ಮಾತೆ । ವಸುಂಧರಾಸುತೆ । ಬೃಂದಾರಕನುಮಾನಿತೇ ॥ ಪ ॥
ಕುಂದನೆಣಿಸದಿ । ರಿಂದು ನಾಂ ರಘು । ನಂದನನ ಕಡೆ । ಯಿಂದ
ನಿಮ್ಮಯ । ಚಂದ ಮರಿಯಲು। ಬಂದ ಸೇವಕ । ನೆಂದು ತಿಳಿಯರ । ವಿಂದ
ಲೋಚನೆ ॥ ಅ .ಪ. ॥
ರಾಮಂ ಸದ್ಗುಣಧಾಮಂ । ರಾಕ್ಷಸಭೀಮಂ । ಭೂಮಿ ಕಾಂತಲಲಾಮಂ ॥
ಕೋಮಲಂ, ಘನ । ಶ್ಯಾಮಲಂಸಕ । ರಾಮರಸ್ತುತ ನಾಮನದ್ಭುತ ।
ಸೀಮನಾಶ್ರಿತ । ಪ್ರೇಮವರ ಮಿಹಿ । ಲಾಮಲಾನ್ವಯ ಸೋಮನಾಥನು ॥ ೧ ॥
ದೇವಿ ನಿಮ್ಮಯ ಪಾದ । ಸೇವೆಗೆ ಬಂದ ಸೇವಕನೇ ನಾನು । ಪಾವನನಲೋ ।
ಕಾವನನರಾ । ಜೀವಲೋಚನರಾಮನನಾಂ । ಭಾವಿಸುತಲಿಂ । ತೀವಿಧದಿ
ಸುಗ್ರೀವನಾಜ್ಞೆಯ ಗೈವ ವಾನರ ॥

**ಆಂಜನೇಯ : ಕಂದ**

ಜನನಿ ಇದು ರಾಮಚಂದ್ರನ ।
ಘನ ಮುದ್ರಿಕೆ ವಿನುತ ರಾಮನಾಮ ಪ್ರಚುರಂ ॥
ಅನುವಿಂ ಸ್ವೀಕರಿಪುದು ಮನ ।
ದನುಮಾನಂಗಳೆದು ಪೂತೆ ರಾಘವದಯಿತೆ ॥

**ಸೀತೆ : ಕಂದ**

ಮಂಗಳದಾಯಕ ಮುದ್ರಿಕೆ ।
ತುಂಗಾನಂದ ಪ್ರದೈಕ ಮುದ್ರಿಕೆ ಶುಭಮಂ
ಪೊಂಗಿಪ ಕಾಂತನ ಮುದ್ರಿಕೆ ।
ಸಿಂಗದ ಕೈ ಸೇರ್ದು ಧನ್ಯಳೆನಿಸಿದೆನಿಂದಾಂ ॥

**ಸೀತೆ : ಹಾಡು** **ರಾಗ : ಪೂರ್ವಿಕಲ್ಯಾಣ - ಆದಿತಾಳ**

ವಾಯುನಂದನ ಶ್ರೇಯವಾಂತು ಬಾಳು ॥ ಪ ॥
ಆಯುಷ್ಮಂತನಾಗು ಜಯಶಾಲಿಯಾಗು ॥ ಅ.ಪ. ॥
ಪ್ರಿಯರಾಮ ಭಕ್ತಿನಿಯತಾತ್ಮನಾಗು
ಚಿರಂಜೀವಿಯಾಗು ಸ್ಥಿರ ಸತ್ವನಾಗು ॥ ೧ ॥

**ರಾಕ್ಷಸರು : ಹಾಡು** **ರಾಗ : ಇಂಗ್ಲೀಷ್ ನೋಟ್ - ಏಕತಾಳ**

ಘಡ ಘಡ ಕೆಡುಗಕಪಿಯ ಪಿಡಿವ ನಡೆಯಿರೋ ॥ ಪ ॥
ಪಿಡಿದು ಹೊಡೆದು ಪೊಡೆದು ಕುಡಿದು ಕುಡಿವನೆ ತ್ವರ ॥ ಅ.ಪ. ॥
ಮುದದೊಳದೆಯ ವೊಡೆದು ಸದೆದು ಮುದದಿ ಕಪಿಯನಾಂ ॥
ಚಿದರದದರ । ಅಧರ ಮಧುರ ರುಧಿರ ಮೀಂಟುವ ॥ ೧ ॥
ನೋಡಿ ಕಣೆಯ ಹೂಡಿ ನೀಚ ಕೊಡಗನನ್ನು ।
ಕಾಡಿ ಕೊಂದು ಬಾಡತಂದು ಕೂಡಿತಿನ್ನುವ ॥ ೨ ॥
ಹುಚ್ಚು ಕಪಿಯ ನೆಚ್ಚರದಿಂ ನುಚ್ಚುಗೈಯುವ ॥
ಚಚ್ಚಿಕೊಂಡು ಕಚ್ಚಿ ತಿಂದು ಮೆಚ್ಚಿ ಕುಣಿಯುವ ॥

**ರಾಕ್ಷಸರು : ಹಾಡು** **ರಾಗ : ಕಲ್ಯಾಣಿ ನೋಟ್ - ಆದಿತಾಳ**

ಕೆಟ್ಟ ಕೋಡಗ ಬಂದಿದೆ ಬೇಗ ಬಾರೆಲೋ
ಅದು ಬಲು ತಂಟೆ ಮಾಡುತ್ತೈತೆ ನೋಡೆಲೋ
ಹಾಸು ಬಲೆಗಳನು ಬೀಸುದೊಣ್ಣೆಗಳನು
ಬೇಗ ಕೋಡಗನನ್ನು ಹಿಡಿದು ತನ್ನಿರೋ ॥ ಪ ॥
ದಾನವೇಶ ಅರಿತರೆ ಮಾನ ಹಾನಿ ತಪ್ಪಿದ್ದಲ್ಲ
ಸಡಗರದಿಂದ ಕೋಡಗನನ್ನು ಹಿಡಿದು ತನ್ನಿರೋ

**ಅಕ್ಷಕುಮಾರ : ಕಂದ**

ಪ್ರಮದಾವನಮಂ ಪಾಳ್ಗೈ
ದಮಿತಮದಂ ದಾಳ್ದುಮೆರೆವ ಕೋತಿಯೆ ನಿಲ್ ನಿಲ್

ಯಮಪುರಿಗೆ ನಿನ್ನನತಿ ಸಂ ।
ಭ್ರಮದಿಂ ಕಳುವಲ್ಕೆ ಬಂದನಕ್ಷಕುಮಾರಂ ॥

## ಅಕ್ಷಕುಮಾರ ಮತ್ತು ಆಂಜನೇಯ ಸಂವಾದ

**ರಾಗ : ನೋಟ್ - ಆದಿತಾಳ**

**ಅಕ್ಷಕುಮಾರ :** ಘಡಘಡೆಲವ್ಯಾ । ಕೆಡುಗಕಪಿಯೆ । ಬಿಡಗು ವೇಣಕೋ ॥ ಪ ॥
ಬೆಡಗನಡಗಿಸುತ್ತೆ ಕಡಿದು । ಪೊಡವಿಗಿಡುವೆನೋ ॥ ಅ.ಪ. ॥

**ಆಂಜನೇಯ :** ಅಕ್ಷನೆ ನೀನೀಕ್ಷಿಸೆಲೋ । ರಾಕ್ಷಸಾಧಮಾ ॥ ಪ ॥
ಶಿಕ್ಷಿಸದೆ । ಕುಕ್ಷಿ ಸೀಳ್ವೆ । ನೀಕ್ಷಣದೊಳು ನಾಂ ॥ ಅ ॥

**ಅಕ್ಷಕುಮಾರ :** ಮಾಣದೀಗ । ಬಾಣಬಿಟ್ಟು । ತ್ರಾಣಗುಂದಿಸಿ ।
ಗೋಣ ಮುರಿದು । ಕ್ಷೋಣಿಗಿಡುವೆ । ಕಾಣೆಯೇನಲೋ ॥

**ಆಂಜನೇಯ :** ತರುವೆ ಶಾಖೆ । ಮುರಿದು ಜೋಕೆ । ತರಿವೆ ಶಿರವನು ॥
ದುರುಳಯೇಕೆ । ಹರಟುವೆ ಛೀ । ಪರಮ ಪಾಪಿಯೇ ।

**ಅಕ್ಷಕುಮಾರ :** ಕಪಿಯೆ ನಿನ್ನ । ವಿಪುಲ ಬಲವು । ವಿಫಲವಪ್ಪುದೇ ॥
ಚಪಲ ನಿನ್ನ । ತಪಿಸಿ ಪ್ರಾಣ । ವಪರಿಹರಿಸುವೆನೋ ಛೀಛೀ

**ಆಂಜನೇಯ :** ಬುದ್ಧಿಹೀನ । ಗುದ್ದಿ ನಿನ್ನ । ನೊದ್ದು ಕೆಡಹುತ ॥
ಯುದ್ಧಭೂಮಿ ಮಧ್ಯಕೆಡುತೆದ್ದು ನಲಿವೆ ನಾಂ ॥ ೪ ॥

**ರಾಕ್ಷಸರು : ಹಾಡು** **ರಾಗ : ಪೀಲ್ ನೋಟ್**

ಜಗದ ಸುಖವನ್ನು ನೀಗಿದಲ್ಲೊ ಅಕ್ಷಯಪ್ಪೋ ॥ ಪ ॥
ಯುದ್ಧಕ್ಕಾಗಿ ಬಂದು ನೀನು ಉದ್ದವಾಗಿ ಮಲಗಿದೆಲ್ಲೊ ॥ ೧ ॥

**ಇಂದ್ರಜಿತು : ಕಂದ**

ಅಕ್ಷನ ಕೊಂದಾ ಹವದೊಳ್
ದಕ್ಷನೆನುತ ಮೆರೆವ ನೀಚ ಕೋಡಗ ನಿಲ್ ನಿಲ್

ಈ ಕ್ಷಣದೆ ಶಿರವ ಹಾರಿಸಿ
ಭಕ್ಷಿಪೆ ನಾಂ ನಿನ್ನ ನಿಂದ್ರಜಿತ್ತು ವರಾಜಂ ॥

## ಇಂದ್ರಜಿತು, ಆಂಜನೇಯ ಸಂವಾದ

**ರಾಗ : ಶಂಕರಾಭರಣನೋಟ್ - ಏಕತಾಳ**

**ಇಂದ್ರಜಿತು :** ಕೋತಿಯೇ ಹೇಳಲೇನೀತೆರದೆ । ಘಾತಿಪೆನಿನ್ನನ್ನೀತರದೆ ।
ಕಾತರವೇತಕೆ ನಿನ್ನನೀಗ । ಭೂತಲಟಕಿಕ್ಕುವೆ ನೋಡು ಬೇಗ ॥ ಪ ॥

**ಆಂಜನೇಯ :** ಹೇಡಿಯೇ ಏತಕೆ ಜಂಭವಿದು ॥ ನೋಡುವೆ ನಿನ್ನಯ ಶೌರ್ಯವನು ।
ಕಾಡುತೆ ನಿನ್ನನಾನೀಕ್ಷಣದಿ । ಮೂಢನ ಕುಕ್ಕುವೆ ಭೂತಲದಿ ॥ ೧ ॥

**ಇಂದ್ರಜಿತು :** ಅಟ್ಟಿ ಬಂದೀಗ ನಾಂ ಪಾಶದಿಂದ । ಕಟ್ಟಿಕೊಂಡುಯ್ವೆನಾನಂದದಿಂದ ॥
ಮೆಟ್ಟಿ ಪಾದಂಗಳಿಂ ಧೂಳುಮಾಡಿ । ಕರುಟ್ಟಿಯಿಟ್ಟಾಡುವೆ
ಹರ್ಷಗೂಡಿ ॥ ೨॥

**ಆಂಜನೇಯ :** ದುಷ್ಟನೆ ನಾಕೆಲೊ ಪೌರುಷವು । ಇಷ್ಟು ತಾಂ ನಲ್ಲದು ಸಂತಸವು ॥
ಮುಟ್ಟಿಯಿಂಪ್ರೊಯ್ದೆ ನಾಂ ನೋಡು ನಿನ್ನಂ । ಪಿಷ್ಟವ ಮಾಡುವೆ
ನ್ನಿಷ್ಟದನ್ನಂ ॥

**ಇಂದ್ರಜಿತು :** ಮೀರಿ ಮಾತಾಡುತಿರ್ಪ ಛೀ - ಛೀ । ನಾರಿ ಬಂದೀಗಲೀ ನಿನ್ನ
ಸೀಳಿ ತೋರಣಂಗಟ್ಟುವೆನೀ ಕ್ಷಣದಿ । ಊರಬಾಗಲ್ಗೆ ನಾಂ
ವಾನರ ಛೀ ॥ ೩ ॥

**ಆಂಜನೇಯ : ಕಂದ**

ಬಿಡುಬಿಡೆಲೊ ಬೆಡಗನೀಂ ಛೀ ।
ಪುಡಿಪುಡಿಗೈದಧಮ ನಿನ್ನ ಪೆಸರಡಗಿಸುವೆಂ ॥
ಬಡ ವಾರನೆಂದರಿತೆಯೊ ।
ಕಡುಗಲಿ ರಘುನಾಥ ಸೇವಕಂ ನಾನಲ್ತೇ ॥

**ಇಂದ್ರಜಿತು : ಕಂದ**

ಕಿಚ್ಚುಗೊಳ್ವೀ ಬ್ರಹ್ಮಾಸ್ತ್ರವ ।
ನೆಚ್ಚಿನಿದೋ ನೀಚಕಪಿಯೆ ನಿನ್ನಯ ತನುವಾ
ಅಚ್ಚರಿಯಂ ಬಿಗಿದಿಡುವುದು ।
ತುಚ್ಛಾಲಾಪಗಳ ನೀಗು ದುರ್ಮದ ದುಷ್ಟಾ ॥

## ದೃಶ್ಯ : ರಾವಣ ದರ್ಬಾರ್

**ರಾವಣ : ಹಾಡು** **ರಾಗ : ಶಂಕರಾಭರಣ - ಆದಿತಾಳ**

ಸಚಿವಾಯೇಂ ಸೋಜಿಗಂ । ರಚಿಸಿತೀಕೋಡಗಂ ॥ ಪ ॥
ಸುಚರಿತ ದನುಜ । ಪರಚಯಮಳಿಯೆ ॥ ಅ.ಪ. ॥
ಅಕ್ಷಕುಮಾರನು । ದಕ್ಷನು ಸಮರದಿ । ಈಕ್ಷಿಸಿಗುರುಳದಿ।
ನಾಕ್ಷಣದೊಳು ॥೧ ॥
ಪ್ರಮದಾರಾಮವು ॥ ಪ್ರಮಥಿತವಾದುದು । ಅಮಿತಚಿಂತೆಯುತಾ।
ನೆಮಗಾದುದು । ೨ ॥
ಕಾಡುಕಪಿಯಿದಲ್ಲ ನೋಡಲಿದಚ್ಚರಿ । ಕೋಡಗನಂತೆಪ್ರೊ ।
ಲಾಡುವುದೀಪರಿ ॥ ೩ ॥

**ಇಂದ್ರಜಿತು : ಹಾಡು** **ರಾಗ : ಜಂಜೂಟಿ - ಆದಿತಾಳ**

ತಂದೆಯೆ ನೋಡಿಂದು ಪಿಡಿ । ತಂದಿಹೆನೀ ಕೋಡಗನಂ । ಪ ॥
ನಂದನವಂ ಭಂಗಿಸಿದನು ನಂದನನಂ ಕೊಂದಿದ ॥ ಅ ॥
ಪಿಡಿಯೆ ನಡೆದ ದಾನವರ । ಗಡಣವನು ಬೆದರಿಸುತ ॥
ಕಿಡಿಯ ಸೂಸಿ ಕಂಗಳಿಂದ । ಪೊಡವಿಗಪ್ಪಳಿಸಿತವರಂ ॥ ೧ ॥
ತರುಗಳನ್ನು । ಮುರಿದು ದೈತ್ಯ ತರುಣಿಯರು ಪರ ಬಿಡುತ ।
ಭರದಿ ವನದಿ ಫಲತತಿಯ । ನ್ನರೆನಿಮಿಷದೆ ನುಂಗಿ ತಾಹಾ ॥ ೨ ॥
ವ್ಯಾಳಮುಖ ಸುಮಾಲಿಜಂಬು । ಮಾಲಿಮುಖದ ಖರ ನಖದಿಂ ।
ಸೀಳಿ ಸಿಂಹನಾದಗೈದು । ಕಾಲನಗರಿಗಟ್ಟಿತಾ ಹಾ ॥

**ಆಂಜನೇಯ : ಹಾಡು** **ರಾಗ : ಜಂಜೂಟಿ - ಆದಿತಾಳ**

ಕೇಳೀವಿಧಾನವ ಪೇಳುವೆದಾನವ ॥ ಪ ॥
ಮೇಲೆನಿಸಿಹನನ್ನ । ಲೀಲೆಯುನೆಲ್ಲ ॥ ಅ.ಪ. ॥
ಶ್ರೀರಾಮನಂಘ್ರಿಯ । ನಾರಯೆ ಸೇವಿಪ ॥ ಮಾರುತಿ
ನಾಂಧುರಧೀರನೇ ಶೂರಂ ॥ ೧ ॥
ಈ ದಶಕಂಠನ । ಮೋದದಿಂದೀಕ್ಷಿಸೆ ॥
ಭೇದಸಿದೆಂ ಘನ । ಮಾದ ವನವನು ॥ ೨ ॥
ಕಟ್ಟಲು ನನ್ನನಿಂ । ದಟ್ಟ ಬಂದಾತುರ ॥
ಪಟ್ಟ ದನುಜನಂ । ಕುಟ್ಟಿ ಕೆಡಹಿದೆ ॥ ೩ ॥

**ಪ್ರಹಸ್ತ : ಕಂದ**

ಇದೊ ನೋಡು ಪೌಲಸ್ತ್ಯ ಕುಲಾಂ
ಬುಧಿ ಚಂದ್ರಂ ಶೌರ್ಯಧೈರ್ಯತೇಜಸ್ಸಾಂದ್ರಂ ॥
ವಿಧವಿಧ ವೈಭವ ಸಂತತಿ ।
ಸದನಂ ಕಂಗೊಳಿಪ ನನುಪಮಂ ದಶವದನಂ ॥

**ರಾವಣ : ಹಾಡು** **ರಾಗ : ಅಠಾಣ - ಮಿಶ್ರಚಾಪುತಾಳ**

ನಾನಾರು ನೀ ಬಲ್ಲೆಯಾ ವೀರಾಧಿವೀರ ॥ ಪ ॥
ರುಕ್ಷವಾನರ ಯಕ್ಷಕಿನ್ನರ ಪಕ್ಷಿಭುಜಗರ ಲಕ್ಷವಿದಿರೆ
ಅಕ್ಷವರದಿಂ ದಕ್ಷನೆನಿಸಿದ ರಾಕ್ಷಸಾಧಿಪ ರಾವಣೇಂದ್ರನು ॥ ಅ.ಪ. ॥
ಸರ್ವಶಕ್ತ ಮಹೇಶ ಕಿಂಕರ ಸರ್ವಶತ್ರು ಮನೋಭಯಂಕರ
ಸರ್ವರಾಕ್ಷಸ ವೀರ ಧುರವರ ಸಾರ್ವಭೌಮ ಯಶೋವಶಂಕರ ॥ ೧ ॥

**ಆಂಜನೇಯ : ಹಾಡು** **ರಾಗ : ಶಂಕರಾಭರಣ - ಆದಿತಾಳ**

ನೀನೇನೋ । ಆ ರಾವಣನೆಂಬಾತ ॥ ಪ ॥
ಜಾನಕಿಯನು ತಂದ । ಹೀನಮತಿಯ ಖಳ ॥ ಅ.ಪ. ॥
ಶ್ರೀರಘುರಾಮನ । ನಾರಿಯ ಚೌರ್ಯದಿಂದ ।
ದುರಯೆ ತಂದಿಹ । ಶೂರಾಧಮ ॥ ೧ ॥

ಕೈಲಾಸವನ್ನೆತ್ತಿ । ತೋಳದು ಸಿಲ್ಕಿರೆ ।
ಗೋಳಾಡಿದ ಬಲ । ಶಾಲಿದುರಾತ್ಮ ॥ ೨ ॥
ಕಾರ್ತ್ಯವೀರ್ಯನ ಸೆರೆಗಾರ್ತತೆಯಿಂಸಿಲ್ಕಿ ।
ಕೀರ್ತಿಯ ಪಡೆದಾ । ಧೂರ್ತದನುಜ ॥ ೩ ॥
ಹುಳುವೆನುತಬ್ಧಿಯೊಳ್ । ಮುಳುಗಿಸಿ ವಾಲಿತೊ ।
ಟ್ಟಲಿಗೆ ಕಟ್ಟಿರಲೊದೆ । ಗಳ ತಿಂದವ ॥ ೪ ॥
ಮೃಥನ ಧನುವನಂದು ಪಿಡಿದು ಬಾಗಿಸೆನಿಂದು ।
ಅಡಿಯೊಳು ಸಿಲ್ಕಿಗೋ । ಳಿಡುತಿರ್ದವ ॥ ೫ ॥

**ವಿಭೀಷಣ : ಹಾಡು** **ರಾಗ : ತೋಡಿ - ಆದಿತಾಳ**

ಧನುಜನಾಥನೆ ಸೈರಿಸು ॥ ಘನಕೋಪವೇತಕೀ ರೀತಿಯೊಳು ॥ ಪ ॥
ದೂತರನು ಈ ತೆರದಿ ಘಾತಿಪುದು ಭೂಪಾಲರ ನೀತಿಯಲ್ಲ ರೀತಿಯಲ್ಲ
ಕಾತರಿಸದಿರು ॥ ೧ ॥
ಪರಮಾರ್ಥವ ಬಲ್ಲ ನೀನು । ಪರುಷೋಕ್ತಿಯನಾಡುತ್ತಲಿ ।
ಸರಿಯಲ್ಲದ ಕಾರ್ಯವನು । ಚರಿಸಲ್ ತರವಲ್ಲ ॥ ೨ ॥

## ಋಷ್ಯಮೂಕ ಪರ್ವತ

**ರಾಮ : ಹಾಡು** **ರಾಗ : ಚಕ್ರವಾಕ - ರೂಪಕತಾಳ**

ಭೂಮಿಜಾತೆ । ಭಾಮೆಸೀತೆ । ಶ್ರೀಮನೋಜ್ಞೆಮಾನಿತೇ ॥ ಪ ॥
ಸೋಮಮುಖೀ । ರಾಮಸಖೀ । ತಾಮರಸದಳಾಂಬಕೆ ॥ ಅ.ಪ. ॥
ಎಲ್ಲಿಹೆ ಮನೋಹರೇ ! ಪಲ್ಲವಾರುಣಾಧರೇ ॥
ನಿಲ್ಲದೆನ್ನ ಮನವು ಬಾರೇ । ವಲ್ಲಭೇ ಸುಗುಣಾಕರೇ ॥ ೧ ॥
ಬಾರೆ ಭಾಮಿನೀ ಮಣೀ । ನೀರೆ ಮಾರನರಗಿಣೀ
ಸೈರಿಪೆ ನಾನೆಂತು ರಾಣೀ । ನೀರೆ ಕೋಕಿಲ ಮಂಜುಳವಾಣೀ ॥

**ಶ್ರೀರಾಮ : ಕಂದ** **ರಾಗ : ಸಿಂಹೇಂದ್ರ ಮಧ್ಯಮ**

ಹನುಮ ಕೇಳೆಲೋ ನಿನ್ನಪೋಲ್ವ ಭಕ್ತರು
ಈ ವನಜ ಭವಾಂಡದೊಳಿಲ್ಲ ಅರಸಿ ನೋಡೆ ॥

# ಶ್ರೀರಾಮಾಂಜನೇಯ ಯುದ್ಧ

ನಾಟಕಕಾರರು
**ತೋರಣಗಲ್ ರಾಜಾರಾಯರು**

**ಪ್ರಾರ್ಥನೆ : ಹಾಡು** **ರಾಗ : ಮೋಹನ - ಆದಿತಾಳ**

ಜಯ ರಘುರಾಮ ಜಯಘನಶ್ಯಾಮ
ಜಯ ಜಯ ಶುಭನಾಮ ಶ್ರೀರಾಮ
ಜಯ ಜಯ ಗುಣಧಾಮ ॥ ಪ ॥
ಆದರ್ಶ ನಿನ್ನಯ ಸೋದರ ಪ್ರೇಮ
ಆಡಿದ ಮಾತನು ತಪ್ಪದನೇಮ
ಆಣತಿ ಪಿತನಾ ಪಾಲಿತರಾಮ
ಅಗಣಿತ ಗುಣಮಣಿ ಆನಂದಸೀಮಾ ॥ ೧ ॥
ಸೀತೆಯ ಹೃದಯದಿ ಬೆಳಗಿದ ಜ್ಯೋತಿ
ಮಾತೆಗೆ ತೋರಿದೆ ಅನುಪಮ ಪ್ರೀತಿ
ರಾಮರಾಜ್ಯದ ನೆನಪಿದೆ ನೀತಿ
ರಾಘವ ನಮಗೆ ಕರುಣಿಸು ಶಾಂತಿ ॥ ೨ ॥

**ದೃಶ್ಯ : ರಸ್ತೆ**

**ಸೂತ್ರಧಾರ : ವೃತ್ತ ॥** **ರಾಗ : ನಾಟ**

ನಮಸ್ತೇ ಪ್ರಾಣೇಶ ಪ್ರಣತವಿಭಾವಾಯಾವ ನಿಮಗಾಂ ॥
ನಮಸ್ವಾಮಿನ್ ರಾಮಪ್ರಿಯತಮ ಹನುಮಾನ್ ಗುರುತಮಾ ॥
ನಮಸ್ತುಭ್ಯಂ ಭೀಮ ಪ್ರಬಲತಮ ಕೃಷ್ಣೇಷ್ಟ ಭಗವಾನ್ ।
ನಮಶ್ರೀರಘುರಾಮ ಪ್ರಸಿದ್ಧ ವಿಜಯೋ ಜಯ ಜಯ ॥

ಪಾಲಿಸು ದಶರಥಬಾಲಾ । ನೀಲನೀರದಕಾಯ ॥ ಪ ॥
ಲೋಲುಸತ್ಯಶೀಲ ಕೃಪಾ । ಜಾಲದಿಂದ ಅನವರತವು ॥ ೧ ॥
ಜಾನಕೀಹೃದಯನಾಥ । ದೀನ ಜನಪರಿಪಾಲ ।
ಭಾನುವಂಶ ಜಾತಧ್ಯಾನ । ಕಾರಣ ಹರಿಯೇ ॥ ೨ ॥
ದನುಜನದಭಂಗ । ವಿನಮಿತ ಸರ್ವಲೋಕ ।
ಅನಘ ಆಶ್ರಿತ ದರ್ಪಣ ನಿಪುಣಾ ಕರುಣಾಕರ ॥ ೩ ॥

**ನಟಿ : ಹಾಡು** **ರಾಗ : ಕಮಾಚ್ - ರೂಪಕತಾಳ**

ಮುರವೈರಿ ನಿನ್ನ ನಂಬಿದೆನೋ । ನಿರುತ ಮರೆಯದೆ ॥
ಕರುಣದಿಂದ ಪಾಲಿಸೆಮ್ಮ । ತರಣಿ ಕುಲಜನೇ ॥ ೧ ॥
ಧರಣಿ ಕೊಡಿಗೆ ಪುರನಿವಾಸ । ಧರಣಿಜಾವರಾ ।
ಸಕಲ ಜನರ ದುರಿತಗಳಾ । ಹರಿಸ ದೀವರಾ ॥ ೨ ॥

**ದೃಶ್ಯ : ಅರಣ್ಯ ಪ್ರದೇಶ**

**ಚಾರುಮತಿ : ಹಾಡು** **ರಾಗ : ... - ಆದಿತಾಳ**

ಪತಿ ನೋಡೀ ವನವನೂ ಪ್ರಿಯಾ ॥
ಸತತ ಕುಸುಮ ಸಂಹಿತ ರಮಣಿಯ ಮಿದ
ನೋಡೀವನವನೂ ॥
ಸಾಧುಫಲದೆ ಬಾರದಿಮಿಗೆ ಬಾಗುತೆ
ಮೋದಗರೆವ । ಘನಸಾಧಿಪ ಶೋಭೆಯನೇ

**ಚಂದ್ರಭಾನು : ಸೀಸಪದ್ಯ**

ಸುರಸಾಲಗಳಪೋಲ್ವ । ಸುರಚಿರಮಾದಂತ
ಘನಸಾದಿ, ಫಲತರು, ಪ್ರತತಿ ಇಂದಾ
ನಿರುತಬೀಯದೆ, ಎಸೆವ, ವರಪುಷ್ಪಚಯದಿಂದ
ಭರಿತಮಾಗಿಹಲತಾ । ಪ್ರಸರದಿಂದಾ

ಕಮನೀಯಕಲ್ಹಾರ । ಸಮಿತಿಯಿಂರಾಜಿಪ
ವಿಮಲಾಂಬುಯುತ । ಸರೋವರಗಳಿಂದ
ಗರ್ವವೈರವಂಬಿಟ್ಟು, ಚರಿಪಗೋಶಾರ್ದೂಲ
ಹರಿಣಾದಿ, ಮೃಗ, ಸಮೂಹಗಳಿಂದ
ಪರಭೃತ ಶುಕಾದಿ, ಖಗ ಪ್ರತತಿಯಿಂದ
ಹರಿಯಪೂಜೆಗೆ, ಸುಮವಾಯ್ವವಟುಗಳಿಂದ
ಪರಭೃತಶುಕಾದಿ ಖಗ ಪ್ರತತಿಯಿಂದ
ಮೆರೆಯುವೀ ತಪೋವನವನೇಂಪೊಗಳಲಳವೇ

## ದೃಶ್ಯ : ಗಂಗಾನದಿ

ಶ್ರೀರಾಮ : ಹಾಡು — ರಾಗ : ಕಲ್ಯಾಣಿ - ಆದಿತಾಳ

ನೋಡು ದೇವ ನದಿಯಂ ಜಾನಕಿ
ನೋಡು ದೇವ ನದಿಯಂ ಜಾಹ್ನವಿಯಂ
ಸುಧಾ ಸಮುದಯವ ನೀಂ ॥
ವರತ್ರಿವಿಕ್ರಮ ಪದಾಬ್ಜಜಾತೆಯಾ
ಉರಗ ಮನುಜದಿವಿ । ತ್ರಿಪಥಗಾಮಿಯಾ
ಸರಸೀ ರುಹಮುಖ । ಕುಲಪಾವನೆಯಾ
ಚಾರುವಾರಿಧಿಯ ನೀಂ ।

ಶ್ರೀರಾಮ : ಸೀಸಪದ್ಯ — ರಾಗ : ಶಂಕರಾಭರಣ

ಶತಮುಖಾಚರಣದಿಂ । ಶಕ್ರನ ಮೀರಿದ
ಚಕ್ರೇಶ, ಸಗರನಿಂದಾಗದಿರ್ದ
[illegible]
ಅಂಶುಮಂತ ನಿಂದಾಗದಿರ್ದ
[illegible]
ದಿಲೀಪನಿಂದಾಗದಿರ್ದ
ಸ್ತುತಕೀರ್ತಿಪ್ರಾಕ್ತಮಾ, ಪತಿಗಳಾಗಾದರೂ

ಸ್ವಪ್ನದಲ್ಲಿಯು ಸಾಧ್ಯಮಾಗದಿರ್ದ
ಸರಸಿಜಾಕ್ಷ, ಪದೋದ್ಭೂತ ಸುರನದಿಯನು
ಈ ಧರೆಗೆ ಕರೆತಂದು ಸತ್ಕೀರ್ತಿ ಕುಲಕೆ [illegible]
ನರವರಾನೀಕ, ಮಂಡಲನಾದ, ಭೂಪವರ
ಭಗೀರಥನಿಂದಾದ ಪೆಸರಿದಲ್ತೇ

ಸೀತಾದೇವಿ : ಸೀಸಪದ್ಯ                                                                                ರಾಗ : ಕಮಾಚ್

ವಾಮನ ನೀನಾಗಿ ವೈರೋಚನನಬೇಡೇ
ಸವನವಾಟಿಗೆ ಸಾರ ದಿರ್ದೊಡೆಂತೂ
ಆ ಮಹಾದೈತ್ಯನಾ । [illegible]
ಶ್ರುತಿ ವಿಕ್ರಮ, ನಾಗದಿರ್ದೊಡೆಂತು
[illegible]
ಅಜಾಂಡ ನಖಘಾತದಿಂ ಸೀಳದಿರ್ದೊಡೆಂತು
ಸರಸಿಜಾಪೇಕ್ಷ । [illegible]ತರಂಗ
ಪರಮಪಾವನಜನ್ಮು । ವಕ್ತ್ರಾನುಷಂಗ
ಸುರನರೋರಗ । ಲೋಕಪಾವನ ಸುಭಾಂಗ
ರಘುರಾಯ [illegible]

(ಶ್ರೀರಾಮ - ಸೀತಾದೇವಿ - ಗುಹರ ಗೀತೆ)

ಸೀತಾದೇವಿ                                                                                ರಾಗ : ಸುರಟಿ - ರೂಪಕತಾಳ

ಚಾರುಗಂಗವಾರಿಯೋಳ್ ವಿಹಾರವಿಂದು
ಮಾಡುವ, ವಿಹಾರವಿಂದು ಮಾಡುವಾ ನೌಕಾ
ವಿಹಾರ ಮಾಡುವ ॥ ಪ ॥
ದಳಿತ ದಳಿನ ದಳ[illegible], [illegible]
ಜಲತ್ರಭಂಗ, ವರತರಂಗ, [illegible]

ಶ್ರೀರಾಮ

ಹಾರಿ ಮುಳ್ಗಿ ದೂರಸಾರಿ । ಹಾರಿಬೀಳ್ವಮೀನ್ಗಳಿಂ
ಮಾರುತೋಭ್ರ ಮತ್ಗಭೀರ । ಭೂರಿಪರಿವಾರದಿ
ಚಾರುಗಂಗ ವಾರಿಯೊಳ । ವಿಹಾರವಿಂದು ಮಾಡುವಾ  ಈ ಕ್ಷಣ

ಗುಹ

ರಾಮ ರಾಮ ರಾಮಾ ರವಿವಂಶಸೋಮಾ
ಕಾಮಿತಾರ್ಥವೀವಾ । ಶಾಮಸುಂದರಾಂಗ
ರಘುರಾಮಶ್ರೀ । ರಾಮರಾಮಪಾಹಿ ರಘುರಾಮಶ್ರೀ
ಭೂಪನಿನ್ನ ನಾಮಾ ಜಪಮಾತ್ರದಿಂದ
ಪಾಪನಾಶಮಾಗೀ । ಪೋಪುದೀಗನೋಡೆ
ರಘುರಾಮಶ್ರೀ ।

ಗುಹ : ಹಾಡು — ರಾಗ : ಬೇಹಾಗ್ - ಆದಿತಾಳ

ಇಂದಾಮಿಗೆ ಧನ್ಯನಾದೆ ರಾಮಾ ॥
ದೇವದೇವ ನಿನ್ನ ಜಯಸಿರಿಯಂ ತವ ಕಾಶಿಸುವೆನು
ಭವಸಮುದ್ರದಾಂಟಿಸುವಾ ಇವರಂ ನದಿ
ದಾಂಟಿಸುವೆನು

## ದೃಶ್ಯ - ನದಿ ಪ್ರದೇಶ

ಚಾರುಮತಿ : ಹಾಡು — ರಾಗ : ಜಂಜೂಟಿ - ಆದಿತಾಳ

ನೋಡೀ ಸುರನದೀ ತಟವನವಾ ।
ಸುರಪನವನವಾ ಜರಿದೆಸೆವಾ ॥
ಸುರಸಾಲೋಪಮತರುತತಿ ಇಂದ
ವರಸುರೋಜ್ವಲ । ಮಂಜರಿ ಇಂದ
ಹರಿತತಿ ಇಂದ । ಖಗ ಕುಲದಿಂದ
ಬೀರುವುದ ಮುದ ವೀವುದ ನೀ

**ಚಾರುಮತಿ : ಸೀಸಪದ್ಯ** **ರಾಗ : ಶಂಕರಾಭರಣ**

ಶ್ರೀವಾಮನ ಸುಪಾದ । ಸಂಜಾತೆ ಸುರಗೀತೆ
ದುರಿತ ಸಂಘೋಷಿಣೀ । ಶರಣ ಶರಣೂ
ದೇವ ಧಾಮಾರಾಮ । ದಿವ್ಯನಿಗಮಸ್ತೋಮ
ಸುರಸ ಸಂಜೀವಿನೀ । ಶರಣು ಶರಣೂ
ಆ ವಿಷ್ಣುತಾನಂತ । ಅಚಲರಾದ್ಧಿಮವಂತ
ಶಿರಸನ್ನುಟಧ್ವನಿ ಶರಣು ಶರಣೂ
ಭವಜದ್‌ವಿಟ್ । ಜಟಾ ಜೂಟಾಟವಿಸ್ಫೋಟ
ಧರೆಗೆ ಶಿರೋಮಣೀ । ಶರಣು ಶರಣೂ
ಪರಮಪಾವನೆ ಜಾಹ್ನವೀ ಶರಣು ಶರಣೂ
ಸುರನರೋರಗ ಭುವನಗಾ ಶರಣು ಶರಣೂ
ಕರಕರಾನ್ವಯ ಕಾರಿಣೀ । ಶರಣು ಶರಣೂ
ಶರಣು ಭಾಗೀರಥೀದೇವಿ ಶರಣು ಶರಣೂ

**ದೃಶ್ಯ : ರಸ್ತೆ**

**ನಾರದ : ಹಾಡು** **ರಾಗಮಾಲಿಕೆ**

ಜಯ ಜಯ ರಾಮ ಜಯ ಘನಶ್ಯಾಮ
ಜಯ ಜಯ ಶ್ರೀರಾಮ ॥ ಪ ॥
ಜಾನಕಿ ರಮಣ ಭವಭಯ ಹರಣ ಅಗಣಿತ ಗುಣಧಾಮ
ರಾಮ ಅಗಣಿತ ಗುಣಧಾಮ ॥ ಅ.ಪ ॥
ಅಂದು ಬಾಲ್ಯದೆ ಒಂದೇ ಬಾಣದಿಂ ಕೊಂದನು ತಾಟಕಿ ದಾನವಿಯಾ
ಧೀರ ಭಾವದೆ ಭಾರವ ವಹಿಸಿದ ಗುರುವಿನ ಯಾಗದ ರಕ್ಷಣೆಯಾ
ಪಾಷಾಣದೊಳು ಪ್ರಾಣವ ತುಂಬಿದ ಪಾವನ ಪದರಾಮ ॥ ೧ ॥
ಜನಕನ ಸಭೆಯೊಳು ಘನಶಿವಧನುವನು ಕ್ಷಣದಲಿ ತೃಣ ಸಮ ಖಂಡಿಸಿದ
ಸುರ ಕಿನ್ನರರು ಸುಮ ಮಳೆಗರೆಯೆ ಧರಣಿಜೆ ಹೃದಯದೆ ಮಂಡಿಸಿದ
ಭಾರ್ಗವ ರಾಮನ ಗರ್ವವಿರಾಮ ಭಾಸ್ಕರ ಕುಲಸೋಮ ॥ ೨ ॥
ಪಿತೃವಾಕ್ಯ ಪರಿಪಾಲನೆಗಾಗಿ ಸಿಂಹಾಸನವನೆ ತೊರೆದ

ರಘುಕುಲ ರೀತಿಯ ರಕ್ಷಣೆಗಾಗಿ ವನವಾಸಕೆ ತಾನಡೆದ
ಭಗತನ ಮನದಿ ನಿಗತವು ನೆಲೆಸಿಹ ಭಾಸುರ ಗುಣಧಾಮ ॥ ೩ ॥

ನಾರದ : ಹಾಡು ರಾಗ : ಮಾಂಡ್ - ಆದಿತಾಳ

ದಶರಥನಂದನ ಶ್ರೀ ರಘುರಾಮ
ಪಶುಪತಿ ಪ್ರಿಯನೇ ಸೀತಾರಾಮ ॥ ಪ ॥
ಪ್ರಭು ರಘುನಂದನ ರಾಜಾರಾಮ
ವಿಭೀಷಣ ವರದನೆ ಜಯ ಶ್ರೀರಾಮ ॥ ಅ.ಪ. ॥
ಮಾನವಕುಲ ಪಾಲಕ ಪ್ರಭುರಾಮ
ದಾನವ ಕುಲ ಕಾಲನೆ ವಿಭುರಾಮ
ಹನುಮತ್ಸೇವಿತ ಶಿವನುತರಾಮ
ಮನುವಂಶಜನೇ ಮನ್ಮಥಪಿತರಾಮ ॥

## ದೃಶ್ಯ : ವಿಶ್ವಾಮಿತ್ರನ ಆಶ್ರಮ

ಶ್ರೀರಾಮ : ಹಾಡು ರಾಗ : ಬೇಹಾಗ್ - ರೂಪಕತಾಳ

ಒರೆಯುವುದೈ ಗುರುವರರೇ
ನೆರೆ ಪರತತ್ವದ ವರನಿಶ್ಚಯವನು
ಎನಗೇ ಜನಕಭೂಮಿಜಾನೆ
ನುಡಿದುದನು ಮತವೇ ಎನಗೆ ಪೇಳಿ
ಮನದಾ ಅನುಮಾನಪೋಗೆ
ವಿವರಿಪುದೆನಗೆ

ವಿಶ್ವಾಮಿತ್ರ : ಹಾಡು ರಾಗ : ತಿಶ್ರ ತಾಳ

ಜೋಕೆ, ಕೇಳ್, ಜೋಕೆ ಕೇಳ್, ಯೇಕಿಂತುಕಾಕು ಮಾತಾಡುವೆ ನಾಗಿನ್ನು ॥ ಪ ॥
ದುಡುಕಿ ನುಡಿಯಬೇಡ, ಬೇಡವೀ ಛಲಾ
ತಡೆದು ನುಡಿಯೋ ಮೂಢ ಕಾಲ ನಾನೆಲಾ
ಗತವ [illegible] [illegible] ನುಡುವೇ ಮದಿಂತು ಕೆಡದಿರಲವ್ವೋ ಗಾವ್ರೀಲಾ

**ಸೀತಾದೇವಿ : ಸೀಸಪದ್ಯ**

ಶರವೇಗಮರ್ಮವಂ ತರಣಿಕುಲೇಶಂಗೆ
ಅಕ್ಕರೆಯಿಂ ತಿಳುಸಿದಾ ಗುರುಗಳಾರೇ
ಖಳಸಾಸಿಗಳರಾಮ ಕರೆಸಿ ಕೊಲ್ಲಿಸಿ
ಕೀರ್ತಿ ದೊರಕಿಸಿಕೊಟ್ಟ ಉದಾರ್ಯರ್ಗ್ಯಾರೆ
ಹರಚಾಪ ಬಾಗಿಪರನ್ನು ಕರೆತಂದು
ಜನಕಂಗೆ ಮುದಮಿತ್ತ ಅನಘರಾರೇ
ಅರಸಿಯನ್ನನು ರಾಮನ ಅರಸಿಯಾಗಿಸಿ
ಕ್ಷೇಮವಂಬಗೆದ ಘನರದಾರೋ
ಆ ಮಹಾ ಮಹರಾದ ನಿಮ್ಮಂಘ್ರಿಯುಗಕ್ಕೆ
ಕಾಮಿತಪ್ರದಮುನಿ ಸಾರ್ವಭೌಮ ನಿಮಗೆ
ನೇಮದಿಂ ನಮಿಸೆನಂಬುಧ ಜನೋಪಕರ್ತ
ಭರತ ಬೋಧಿತ ಸೃಷ್ಟಿಕರ್ತಾ

**ವಿಶ್ವಾಮಿತ್ರ : ವೃತ್ತ॥** ರಾಗ : ನಾಟಿ

ಅರಿಯಲ್ ಬ್ರಂಹ್ಮಗೆ ನಾಲ್ಕು ಗಂಗೆ
ಳಿರುಲೇಂ ಮಾರಾರಿಗೈದಿರ್ದೊಡೇಂ
ಉರುಗೇಂದ್ರಂಗೆ ಸಹಸ್ರವಕ್ತ್ರವಿರಲೇಂ
ನಿಶ್ಶೇಷನಿಂದೋರ್ವಂ ವರವ್ಯಾಖ್ಯಾನನೆಂದು
ಮನ್ವರುಯೆಂದು ವ್ಯಾಖ್ಯಾತ್ರದಿಂ ಸಂದಿರ್ದ್ದೆಲೇಂ
ಸಿರಿ ನಿನ್ನುಂಗುವ ಮಹಿಮೆಯ ತಿಳಿಸಲ್
ಬೆಪ್ಪಾಗುವರ್ ಮೂಲೋಕದೊಳ್ ಬಲ್ಲಿನಾಂ

**ದೃಶ್ಯ : ವನಪ್ರದೇಶ**

**ಚಂದ್ರಭಾನು : ಹಾಡು** ರಾಗ : ಬೇಹಾಗ್ - ಆದಿತಾಳ

ಆದುದು ಪೋದುದು, ಅದಕೇ ನೀನಿಂತು
ಖೇದವಗೊಳಲೇಂ, ನೀಂಬರಿದೇ
ಸುದತೀ ವನದೊಳ್ ಸುಖದಿಂದಾ

ಮುದದಿಂ ವಿಹರಿಸುವಾ ಬಂದಾ
ಭಯವೇನೆ ಏತಕೀ

**ಚಂದ್ರಭಾನು : ಹಾಡು** **ರಾಗ : ... - ಆದಿತಾಳ**

ನೀಂತೊರೆವುದೀ ಖತಿ, ತರವೆ ಗುಣವತೀ
ಸತೀ ರತೀ ಗತಿ ಹಿತಮತಿ
ಆದುದು ಪೋದುದುವಾದವೆ ಮುಗಿದುದು
ಖೇದ ಮೋದಾ ಭೇದವೂ ಸಾಧಿಸಲ್ಕೆವಾದಿಸಿದೆನಾ
ವಾದಮಿ ದೆಲ್ಲ ವಿನೋದವೇ

**ಚಾರುಮತಿ : ಹಾಡು** **ರಾಗ : ಪೀಲು - ಆದಿತಾಳ**

ಬಿಡುವವನಲ್ಲ ಕೌಶಿಕನು ಮುನಿಯೆ
ಮನದಲಿ ಕ್ರೋಧವ ತಾಳುವನೇ
ಹಟವಿಡಿದೊಡೆ ಸಂಕಟವನು ತರುವನು
ದಿಟಮಿದು ತಪ್ಪದಿದು

## ದೃಶ್ಯ - ಆಶ್ರಮ

**ಸೀತಾದೇವಿ : ಹಾಡು** **ರಾಗ : ... - ಆದಿತಾಳ**

ಶ್ರೀ ಹುತಭುಜಸುಖ । ದೇಹಿಮೆ ನಿರತಂ
ಸ್ವಾಹಾರಮಣಾ । ದಯಾಪೂರಿತಾ
ಪೊರೆಯೈಪುರೋಧಿ ಸಾದಿರೂಪವೇದವೇದ್ಯನೆ
ವರಸಪ್ತಹಸ್ತ ಸಪ್ತ ಜಿಹ್ವ ಶೀರ್ಷಯುಗ್ಮನೇ
ಕರುಣಿಪುದೈ ಅಜತುರಗನೆನಿ ॥ ಸುರವರನೇ ಹರಿಸಖನೆ

**ವಿಶ್ವಾಮಿತ್ರ : ಹಾಡು** **ರಾಗ : ... - ಆದಿತಾಳ**

ಯಾರವನೋ ಖಳನು ನರನೋ ಅಸುರವರನೋ
ನಿರಾಪುರಂದರನೋ ॥ ಪ ॥

ಖರಖರ ಕುಲಪತಿ ಗುರುನಾನೆಂದು
ಕರಮಕಲಹರ ನಿರುವನು ಎಂದು
ಅರಿಯದೆ ಅರಿತೆರತೆನ್ನಿ ಮುಖದೀ
ಪರಿಪರಿ ಇಹ ಖಳ ವಂಚಕನು

**ದೃಶ್ಯ : ಬೀದಿ**

**ನಾರದ : ಹಾಡು** ರಾಗ : ... - **ಆದಿತಾಳ**

ಶ್ರೀರಾಮಾ ತವದಿವ್ಯ ಮಹಿಮಾ ವಾರಂಗತರರಿಹರ್ಕೈ
ನೀರಜಾಸನ ಮುರಾರಿಯರು ತೋರದು ನಮಗೆಂತಹುದ್ದೈ
ನಾರಿಯಾಗಿ ಸುರಸಮೂಹಗೆನುತಂ
ಭೀರಿದೈತ್ಯನಂ ವಂಚಿಸೀ
ಕೋರಿದೆ ನಿನ್ನ ಕರುಣೆಯ ಮುನ್ನ
ವೈರಿ ವಿಹಾರಿ ಶ್ರೀಹರಿ

**ನಾರದ : ಹಾಡು** ರಾಗ : ... - **ಆದಿತಾಳ**

ಅಲೆದು ಬರಲಿ ಎನ್ನ ಬಳಿಗೆ ಜವದಿ ಅಲೆದಲೆದು ॥ ಪ ॥
ಕೊಳಲಿ ಬಳಲಿದಾ ಯಾ ಪತಿಗಳಾಮಿಗೆ
ನಾಗಲೋಕವ ಪಿನಾಕಿಯಲೋಕವಾ
ಆ ಕಮಲಾಸಗೇನಿರುವ ಲೋಕವಾ
ಸಾಕುವರಿಲ್ಲದೆ ವ್ಯಾಕುಲರಾಗೀ
ಶೋಕದಿಂಮಿಗೆ ಪೀಡಿತರಾಗಿ

**ದೃಶ್ಯ : ಕಾಡು ರಸ್ತೆ**

**ಚಾರುಮತಿ : ಹಾಡು** ರಾಗ : ... - **ಆದಿತಾಳ**

ಆಹ ನಾಥ ದೇಹವ ತೊರೆವೆಪ್ರಿಯಾ
ಆ ಹರಿಯ ಬಾಣದಿ ನೀ ॥ ಪ ॥

ರಾಮನ ಶಪಥವಾ ಈ ಭುಮಿಯೊಳಗೆ
ವಿರಾಮವ ಗೈವರೇ, ಭೂಮಿಪಾಲಕ

ಚಾರುಮತಿ, ಚಂದ್ರಭಾನು : ಹಾಡು — ರಾಗ : ... - ಆದಿತಾಳ

ಪೊರೆ ಪೊರೆ ಗಿರೀಶಾ, ಪಾಪವಿನಾಶ
ಅರುಣದಿಂದ ನೀ, ಗಿರಿಜೇಶಾ
ನಾರದ ಮುಖ ಮುನಿವಾರ ವಿನುತ ಪದ
ಶ್ರೀರಜತಾದ್ರೀವಿಹಾರಮಾರಹರ

ಚಂದ್ರಭಾನು, ಚಾರುಮತಿ : ಹಾಡು — ರಾಗ : ...... - ಆದಿತಾಳ

ಪೊರೆ ಪೊರೆ । ವಾಣೀಶಾ, ಜರಿಯದೆಲೆ
ಪಾರುಗಾಣಿಪುದು, ಸಿರಿವರ । ಕುವರನೆ
ಸುರವರ ವಂದ್ಯಾ । ಶರಣು ಬಂದವರನು

ನಾರದ : ಹಾಡು

ಭೀಮ ಸುರಾರವಿರಾಮ । ಗುಣಧಾಮ
ಬಲಭೀಮ । ಸುಮನೋಹರ ಸನ್ನುತನಾಮ
ಪಾಲಯಮಾಂಶ್ರೀ । ಲೋಲಕೃಪಾಳು
ನೀರದಲೀಲ । ಸುಶೀಲ ಶೀಲರಘು

ಹನುಮಂತ : ಹಾಡು — ರಾಗ : ಕಲ್ಯಾಣಿ - ಆದಿತಾಳ

ರಾಮ ಪಾಹಿಮಾಂ । ರಘುವರ ಶ್ರೀರಾಮ
ರಾಮ ರಾವಣಾಸುರ । ಮದವಿರಾಮ
ರಾಮ ರವಿಕುಲಸೋಮ । ಜಾನಕಿರಾಮ
ನಮಿತಸುತ್ರಮನೋತ್ತಮ । ಭೀಮ
[illegible]

ಚಂದ್ರಭಾನು : ಹಾಡು — ರಾಗ : ಕಲ್ಯಾಣಿ - ಆದಿತಾಳ

ಮಾನಿತದೇವ ಮಾರುತೀ ಧನ್ಯನಾ
ಧನ್ಯನಾ । ಮುನಿಗಳಿಗು ಪೊಗಳಲಳವೆ
ನಿನ್ನ ಮಹಿಮೆಯಾದೇವ ಉಳಿಸಿದೆನ್ನ
ಪ್ರಾಣವನೀ । ಮಾನಿತದೇವ ಮಾರುತೀ
ಧನ್ಯನಾ ಧನ್ಯನಾ

ನಾರದ : ಹಾಡು — ರಾಗ : ಕಲ್ಯಾಣಿ - ಆದಿತಾಳ

ಮನುಜಾವತಾರ । ವಿನಿತಾವರಾ ಅನಘ
ರಾಘವಾ ಅವನೀಧವಾ । ಪರಿಪಾಹಿ ರಾಮ
ರಘುಕುಲೋತ್ತಮಾ । [illegible] । [illegible]

ಹನುಮಂತ : ಕಂದ

ದೊರೆಯುಂ ಗುರುವುಂ । ಸ್ವಾಮಿಯುಂ
ಪರದೈವಮುಮಾದ । ರಾಮನೇಳ
ಪಗೆಬೆಳೆಸಲ್ । ಪರಿಗುಮೆಯನ್ನಯ
ಚಿತ್ತಂ ಸುರಮುನಿಯೇ ಪೇಳಿದೇನು
ಪುಸಿಯೇ ನಗೆಯೇ, ಮುನೀಂದ್ರ

ಹನುಮಂತ : ಹಾಡು — ರಾಗ : ಬೇಹಾಗ್ - ಆದಿತಾಳ

ಅಕಟಕಟಾ ರಾಮನೊಳ್ ಪಗೆ । [illegible]
ಹಾ ವಿಧೀ, ಅಕಟಕಟಾ ರಾಮನೊೀಳ್ ಪಗೆ
ದೊರೆಯನು ತಮೇಣ್ ಗುರುವೆನಗೆನುತಂ
ಪರದೈವಮು । ಎನಗಾರನು ತಿಳಿಯೇ
ಅರಿತರಿತೆನ್ನ ಅವಿವೇಕದಿಂದ

## ರಾಗಮಾಲಿಕೆ

ರಾಗ : ಕಾನಡ

ಕೇಡಿಗನಂ ಪಿಡಿದೊಪ್ಪಿಸಲೇಂ ಒಯ್ದು
ಭಾಷೆ ತಪ್ಪಿದ ದೋಷ ಬರುವುದಲ್ಲ
ಈ ಚಂದ್ರಭಾನುವನ್ನು ಹಿಡಿದು ಶ್ರೀರಾಮಚಂದ್ರ
ಗೊಪ್ಪಿಸಲೇ ಅಯ್ಯೋ, ರಾಮನಾಣೆಯನ್ನಿಟ್ಟಿರುವೆನಲ್ಲಾ

ರಾಗ : ಶಹನ

ಕಾಡಲೇ ಸೀತೆಯ ಕಾಂತಂಗೆ ಬಿನ್ನಯಿಸೆ
ಆ ದೇವಿ ಸಮ್ಮತಿಪಳೋ, ಸಮ್ಮತಿಸಳೋ
ಸೀತಾದೇವಿಯ ಬಳಿಗೆಹೋಗಿ ನಡೆದುದನ್ನು
ನಿವೇದಿಸಲೆ ಆಕೆಯು ಇದಕ್ಕೆ ಒಪ್ಪುವಳೋ ಇಲ್ಲವೋ

ರಾಗ : ಬೇಗಡ

ಬೇಡಲೇ ತಡೆಯಲ್ಕೆ ನಡೆದ ವಾರ್ತೆಯು ಪೇಳ್
ಶ್ರೀರಾಮ ಚಿತ್ತವ ದಾವರೀತಿಯೊಳಿಹುದೊ
ರಾಮಚಂದ್ರನ ಬಳಿಗೆ ಹೋಗಿ ಪ್ರಾರ್ಥಿಸಲೆ
ಇದು ಸರಿಯಲ್ಲ

ರಾಗ : ಮೋಹನ

ನೋಡಲೇ ಗಾಧೇಯನನ್ನ ಹಿಂದಿರುಗಿಸೆ
ಅಮ್ ನಿಹಟಪಿಡಿಯೆ ನಾ ಮಾಳ್ಪುದೇನು ರಾಮಾ
ವಿಶ್ವಾಮಿತ್ರನ ಬಳಿಗೆ ಹೋಗಿ ಪ್ರಾರ್ಥಿಸಲೆ
ಆ ಜಟಿಯು ಮಹಾಹಟಿಯು ಹಿಡಿದ ಹಟವನ್ನು
ಸಾಧಿಸದೆ ಬಿಡುವನಲ್ಲ

ರಾಗ : ಕಾನಡ

ಕೆರೆಯಿಂದತ್ತ ಕಡೆ ಸಾರೆ, ಅದು ತೊರೆಯಾಯ್ತು
ಅರಮರೆಯೊಳಿನ್ನು ರಾಮ ದ್ರೋಹಿಯಾದೆ

ಪರಿಯದಾವುದು ಯೋಚನೆ ಹರಿಯ
ಯನಗದೇಂ । ನೀಂತೋರು ದೊರೆಯೇ

**ಹನುಮಂತ : ಹಾಡು** **ರಾಗ : .... - ಆದಿತಾಳ**

ಯೋಚಿಸಿಯೇಂ । ಪ್ರಯೋಜನವೇ
ವಿಧಾಯಕವಿಂದು । ಸಾಧಿಪುದೈ ಶ್ರೀಹರೀ
ತಿಳಿದೋ ತಿಳಿಯದೆ । ಅಭಯವ ಕೊಟ್ಟೆ
ಉಳಿಸಿ ಉಳಿವೆನೆಂಬಾಸೆಯ ಬಿಟ್ಟೆ
ಶರಣಾಗತನಂ । ಬಿಡನೆಂದಿಗೂ ನಾಂ

**ಹನುಮಂತ : ಹಾಡು** **ರಾಗ : ಬೇಹಾಗ್ - ಆದಿತಾಳ**

ಜಪಿಸು ಶ್ರೀರಾಮ ಮಂತ್ರಂ ನೀ
ಜಾಹ್ನವೀಧರನು । ಜಪಿಸುವ ಮಂತ್ರಂ
ಕಮಲ ಸಂಭವನು । ಸನ್ನುತಿಸುವ ಮಂತ್ರಂ
ಸರ್ವಪಾಪ । ವಿಧ್ವಂಸಕ ಮಂತ್ರಂ
ಸರ್ವಭಯಗಳ । ನಿವಾರಿಪ ಮಂತ್ರಂ
ಸರ್ವಶತ್ರು ಸಂಹಾರಕ ಮಂತ್ರಂ

## ದೃಶ್ಯ : ಶ್ರೀರಾಮಚಂದ್ರನ ಆಸ್ಥಾನ

**ವೈತಾಳಿಕರು, ಇತರರು : ಸಮೂಹಗೀತೆ** **ರಾಗ : .....- ಆದಿತಾಳ**

ಶ್ರೀವರಾ । ಸಕಲ ಜಗದಾಧಾರಾ
ಶ್ರೀವರಾ । ಶರದಿ ಚರಗಿರಿಧರ ಶಿರಿವರ
ಹರಿಮತ ಬಲಿಹರ ಹುತನ್ನುಪವದ ಶ್ರೀ ವರಾ
ಪ್ರಣತಸುಜನಾ ವಿಬುಧವಾರ । ವಿನುತಧೀರ
ವಿಧಿಭವ ಮುಖಸಾರಾ ವೇದಾಗಮಸಾರ
ವೈರವಿದೂರ । ನಿಹತ ಸುರ । ರಿಪುಹರ

**ನಾರದ : ಹಾಡು** ರಾಗ : ..... - ಖಂಡತಾಳ

ಶ್ರೀರಾಮ ಜಯರಾಮ ಶ್ರೀವರ ಪರಂಧಾಮ
ಶ್ರೀ ಜಾನಕೀ ಕಾಮ ಶೃಂಗಾರ ಶೀಮ
ನೀರಜಾಯತನೇತ್ರ, ನಿರ್ಮಲ ಸುಚಾರಿತ್ರ,
ನೀಲ ನೀರದಗಾತ್ರ, ನಿರುಪಮ ಗುಣ ಪವಿತ್ರ,
ಮಾರ ಮಾರ ಸುಮಿತ್ರ, ಮತಂಗವರಗಾತ್ರ,
ಶ್ರೀ ನರವರರಾಂ ಮುನಿನುತರಾಂ ಜನನುತರಾಂ

**ಚಾರುಮತಿ : ಹಾಡು** ರಾಗ : ...... - ಆದಿತಾಳ

ಕಾಯೆ ಕಾಯೆ ರಘು ರಾಮನ ಛಾಯೆ
ದೇಯೆ ನೇಯೇ ಕಮಲಾಲಯ ಮಾಯೆ
ಪತಿಗೆ ಬಂದಿರುವಾ ಪಥಿದಿಂದಿರುವಾ
ಅತಿಶಯ ವಿಭವಾ ಕಾಣಿಸು ಮುದವಾ

## ದೃಶ್ಯ : ಕಾಡು

**ಹನುಮಂತ : ಹಾಡು** ರಾಗ : ..... - ತಾಳ

ಶ್ರೀರಾಮ ಜಯರಾಮ ರಘುರಾಮ
ಜಯರಾಮ ಶ್ರೀ ರಾಮಜಯ
ರಾಮರಾಮ, ಶ್ರೀರಾಮ

**ಹನುಮಂತ : ಹಾಡು** ರಾಗ : ....... - ತಾಳ

ನಿನಗಾರು ಸಮರಿಲ್ಲ। ಎನಗೆ ಇನ್ನಾರ್ ಗತಿಯಯ್ಯಾ ।
ನಿನಗೂ ನನಗೂ ನ್ಯಾಯ । ಹೇಳುವರೇ ಇಲ್ಲ ॥ ಪ ॥
ಒಂದೇ ಗೂಡಿನಲ್ಲಿ। ಒಂದು ಕ್ಷಣ ಅಗಲದೆ
ಎಂದಿಗೂ ನಿನ್ನ। ಪಾದವನಂಬಿರುವೆ ತಂದೆ ।
ಬಂದ ವಿಷಯಗಳಿಗೆ ಎನ್ನನೊಪ್ಪಿಸಿಕೊಟ್ಟೆ ।
ಅಂಧಕಾರನಂತೆ ನೀನಿರುವುದು ಉಚಿತವೆ ॥

**ಸೀತಾದೇವಿ : ಹಾಡು** **ರಾಗ : ..... - ತಾಳ**

ಎನಗೂ ಸುಗ್ರೀವಂಗೂ ಘನ ಮೈತ್ರಿ ಘಟನೆಯು
ಮಾಡಿದ ವೃತ್ತವಂ ಮನದಿ ನೆನೆದು
ಜನಕ ಜಾತೆಯುಳಿರುವ ಮನದಿಲಂಘಿಸಿಕೊಂಡು
ಕುರುಹು ತಂದೆನೆಗಿತ್ತ ಪರಿಯ ನೆನೆದು ||
ದನುಜ ಶಕ್ತಿಯುದಾಂಬಿಕ ಅನುಜನ್ಮನರೆಯು ||
ಸಂಜೀವನಾದ್ರಿಯು ತಂದ ಜವಾನನೆದು ನಿನಗೆ ಇಂದಿನವರೆಗೂ
ಘನಭಕ್ತಿ ವಿಶ್ವಾಸವನ್ನೆಲಿ । ಹುದೆಂದು ಮನದಿ ನೆನೆದು ||

**ಸೀತಾದೇವಿ : ಹಾಡು** **ರಾಗ : ..... - ತಾಳ**

ಮಾರುತಿ ಮೇಲೆ ಬಾಣವ ಬಿಡುವೆಯಾ ತೊಡುವೆಯಾ
ಕುವರನಿಂದಧಿಕನಾದ ತವ ಚರಣವ ಪೂಜಿಸುವ
ಹಾ ನಾಥ ಏನೀ ವಿಪರೀತವು

**ಸೀತಾದೇವಿ : ಕಂದ**

ವರನಹ ರಾಮನು ಎನ್ನಯ
ಪರದೈವವೆನುತ ಕನಸಿನೊಳ್ ತಿಳಿದಿರೆನಾಂ
ಈ ಮರುತಾತ್ಮಜನಿಗೆ ರಾಮನ
ಶರಗಳು ಸುಮಗಳಾಗಿ ಪರಿಣಮಿಸಲಿ ಜವದಿಂ ||

## ದೃಶ್ಯ - ರಸ್ತೆ

**ಹನುಮಂತ : ಹಾಡು** **ರಾಗ : ..... - ತಾಳ**

ಶ್ರೀರಾಮ ಜಯರಾಮ ರಘುರಾಮ ಶ್ರೀರಾಮ
ಜಯರಾಮ ರಾಮ ಶ್ರೀರಾಮ ರಾಮ ಜಯ
ರಾಮ ರಾಮ ರಘುರಾಮ
ಶ್ರೀರಾಮ ಜಯರಾಮ ರಘುರಾಮ ಶ್ರೀರಾಮ

ನಾರದ : ಹಾಡು ರಾಗ : ..... - ತಾಳ

ಹನುಮನ ಮತವೇ ಹರಿಯ ಮತವು
ಹನುಮನ ಮತವೇ, ಹರಿಯ ಮತವೂ
ಹನುಮನ ನಂಬಿದ, ಸುಗ್ರೀವ ಗೆದ್ದ
ಹನುಮನ ನಂಬದ ವಾಲಿಯು ಬಿದ್ದ
ಹನುಮನ ನಂಬಿದ ವಿಭೀಷಣ ಗೆದ್ದ
ಹನುಮನ ನಂಬದ, ರಾವಣ ಬಿದ್ದ
ಹನುಮನು ಪುರಂದರ ವಿಠಲನದಾಸ
ಪುರಂದರ ವಿಠಲನು ಹನುಮನೋಳ್ ವಾಸ

ನಾರದ : ಹಾಡು ರಾಗ : ನೋಟ್ - ಆದಿತಾಳ

ಹರಿಹರಿ ದುರಿತ ಹರಣ ಜಲಧಿಶಯನ ನಾರಾಯಣ ॥ ಪ ॥
ಸುರ ಮುನಿಪಾಲನ ಸ್ಮರಪಿತ ಮೋಹನ ಪೊರೆವೊರೆಸುಗುಣಾ
ಭರಣಾ ಶರಣಾ ಧರಣಾ ॥ ಅ.ಪ. ॥
ಮಲಿತವಿನಾಶನ ಸುಜನರ ಪೋಷಣ
ಸಿರಿಯುತನೀವರ ಜಾಕ್ಷಿಸು ಪಾವನಾ ॥ ೧ ॥

## ಮಂಗಳ

ರಾಗ : ಸುರುಟಿ - ಅಟತಾಳ

ಅಂಗಜಮದಹರ ತವಜಯ ಮಂಗಳಂ ॥ ಪ ॥
ಸಂಗವಿದೂರ ಭವಭಂಗ ಕೃಪಾಸಾಗರ
ಮಂಗಳಾಂಗ ದವಳಾಂಗ ವಿಭೂಷಣ ॥ ಅ.ಪ. ॥
ವಾರಣ ಚರ್ಮಾಂಬರ ಭವಹರ ಶಂಕರ
ಕ್ರೂರ ತಾರಾರಿಪು ಧಾರಣ ಗೌರೀವರ
ಚಾರಣ ಸಿದ್ಧಾಂಬರ ವಾರಾರ್ಚಿತ ಪಾದವನಜ ॥ ೧ ॥
ಕೋಮಲ ಪಾದಾನುತ ಭಕ್ತಕುಲಾಭರಣ
ಸಾಮಜ ದೈತ್ಯಾಂತಕ ಸೋಮ ವಂಶೋದ್ಧಾರಕ
ಚಾಮಭೂಪಾಲಕ ಕಾಮಿತ ಫಲದವರದ ॥ ೨ ॥



# ಲವ - ಕುಶ



ರಂಗಮಂಚದ ಸೀತೆ
**ಜಿ.ವಿ. ಮಾಲತಮ್ಮ**

**ಪ್ರಾರ್ಥನೆ : ಹಾಡು** ರಾಗ : ಮಿಶ್ರಕಲ್ಯಾಣಿ - ಆದಿತಾಳ

ಸುರನರವಿನುತೆ ಸರಸ್ವತಿಮಾತೆ
ನಿರುತವು ಸ್ಮರಿಸುವೆ ಪೊರೆಯೌದಾತೆ ॥ ಪ ॥
ಕಮಲಜರಾಣಿ ವಿಮಲವಿನೋದಿನಿ
ಸುಂದರವೇಣಿ ಸುಚರಿತ್ರಾಣಿ
ಗಾನ ಸುಧಾರಸ ಪಾನವಿಲೋಲೆ
ಘನಗುಣಶೀಲೆ ಕೀರ್ತಿ ವಿಶಾಲೆ
ಕಲಿತ ಲಿಲಿತಕಲೆ ಕಾವುದು ಕೋಮಲೆ ।

**ಸೂತ್ರಧಾರ : ವೃತ್ತ ॥** ರಾಗ : ನಾಟಿ

ಆದೌಪೂರ್ವರಾಮಂ ತಪೋವನಾಭಿಗಮನಂ, ಹತ್ವಾಮೃಗಂ ಕಾಂಚನಂ ।
ವೈದೇಹಿಹರಣಂ ಜಟಾಯುಮರಣಂ ಸುಗ್ರೀವ ಸಂಭಾಷಣಂ ॥
ವಾಲೀ ನಿರ್ದಲನಂ ಸಮುದ್ರತರಣಂ ಲಂಕಾಪುರೀ ದಹನಂ ।
ಪಶ್ಚಾದ್ರಾವಣ ಕುಂಭ ಕರ್ಣಹನನಂ ಏತದ್ಧಿರಾಮಾಯಣಂ ॥

**ಸೂತ್ರಧಾರ : ಹಾಡು** ರಾಗ : ಕಲ್ಯಾಣಿ - ಆದಿತಾಳ

ಗಣಪತೇಮಾಂ ಪಾಲಯ ಗೌರೀತನಯ ॥ ಪ ॥
ಜಂಬೂಫಲಾಹಾರ ಶಂಭೋಕುಮಾರಾ ।
ಅಂಬುಧಿ ಗಂಭೀರ ಆರ್ತಜನ ಮಂದಾರ ॥ ೧ ॥

ಮೂಷಕವಾಹನ ದೋಷನಿವಾರಣ
ಶೇಷವಿಭೂಷಣ ಸೇವಿತಮುನಿಗಣ ॥ ೨ ॥
ಹರಿಹರಪೂಜಿತ ಇಷ್ಟಜನವಿನುತ
ಸುರಮುನಿಸೇವಿತ ಸುಂದರ ಗಣನಾಥ ॥ ೩ ॥

ಸೂತ್ರಧಾರ : ಹಾಡು                                   ರಾಗ : ಕಾಪಿ - ಆದಿತಾಳ

ಮಂಗಳಾಂಗ ರಂಗನಾದ ಭಂಗರಹಿತ ಪಾಲಿಸೊ ॥ ಪ ॥
ಅಂಗಜಾರಿ ಪ್ರಿಯ ಗುಣೋತ್ತುಂಗ ವಾಸುದೇವನೆ ॥ ಅ.ಪ ॥
ನೀಲನೀರದಾಭ ಗೋಪಿ ಬಾಲಪೀತ ಚೇಲನೆ
ಗಾಲವಾದಿ ಮೌನಿವಿನುತ [illegible] ॥ ೧ ॥
ನಂದ ಕಂದ ಸಿಂಧುಶಯನ ಕುಂದರದನ ಪಾವನ
ಎಂದು ನಿನ್ನ ದಿವ್ಯ ಪಾದ ದ್ವಂದ್ವವನ್ನು ನಂಬಿದೆ ॥ ೨ ॥
ನಿಖಿಳ ದನುಜ ಜಾಲವನ್ನು ಪಾಳುಗೈದು ಭೂಮಿಯ
ಪಾಲಿಸುತ್ತ ಮೆರೆವ ತುಲಸೀ ಮಾಲೆಯನ್ನು ಪಾಲಿಸೋ ॥ ೩ ॥

## ದೃಶ್ಯ - ಅರಮನೆ

ರಾಮ, ಲಕ್ಷ್ಮಣ, ಭರತ, ಶತ್ರುಘ್ನ : ಹಾಡು                                   ರಾಗ : ರೇಗುಪ್ತಿ

ಮಿತ್ರಾಯ ಸೂರ್ಯಾಯ ಹಂಸಾಯ ಪೂಷ್ಣೇಸ ।
ವಿತ್ರೇ ಜಗಚಕ್ಷುಷೇ ಚಂಡಘೃಣಯೇ ಪ ।
ಮಿತ್ರಾಯ ಪಿಂಗಳಾಯ ಪುರುಷಾಯ ಭಾನುವೇ [illegible] ಭಾಸ್ಕರಾಯ ॥
ಸತ್ತ್ರೈಕರೂಪಾಯ ವಿಮಲಾಯ ವಿಶ್ವರ ।
ಕ್ಷಿತ್ರೇ ಸಹಸ್ರ ಕಿರಣಾಯ ರವಯೇ ಮಂದ ।
ಚಿತ್ರೇ ದಿವಾಕರಾಯ [illegible] ರುದ್ರಾತ್ಮನೇ ತುಭ್ಯಂ ನಮಃ ॥

ರಾಗ : ಉದಯರವಿ ಚಂದ್ರಿಕಾ

[illegible] ಹರಿಮೇಧಾಧ್ವರಂ ಗೈದು ।
ಧರಣೆ ಮಂಡಲದೆ ಹರಿಸಿದ್ಯೆ ಭುಜ ಕೀರ್ತಿ ।

ಹರಿಯ ತೇಜದ ತೆರದಿ ಹರಿವಂಗದಲಿ ಜನಿಸಿ ।
ಹರಿಯಂತೆ ಮೆರೆದ ಸಗರ ಭೂಪ ತುಭ್ಯಂ ನಮಃ ॥

ರಾಗ : ನಾಟಿ

ಪಿತೃಋಣವಂ ಸಲಿಸಲ್ ಕಠಿಣ ತಪವಂ ಗೈದು ।
ಬ್ರಹ್ಮನಿಂ ವರ ಪಡೆದು ಹರ ಜಟೆಯುಂ ಬಿಡಿಸಿ ।
ವರ ಜಹ್ನು ಉದರದಲಿ ಸೆರೆಯಿರ್ದ ಗಂಗೆಯುಂ ।
ಧರೆಗೈ ತಂದ ಭಗೀರಥ ಭೂಪ ತುಭ್ಯಂ ನಮಃ ॥

ರಾಗ : ಆನಂದ ಭೈರವಿ

ಇನವಂಶ ದೀಪವು ಕಮರಿ ಪೋಗುವುದೆಂದು ।
ನಿರತ ನಂದಿನಿಯ ಸೇವೆ ಗೈದು ।
ಹರಿಯ ಪಂಜಗಳಿಂ ಸುರನಂದಿನಿಯನುಳಿಸಲ್ ।
ತನುವನೀಯಲು ಪೋದದಿಲೀಪ ತುಭ್ಯಂ ನಮಃ ॥

ರಾಗ : ಮೋಹನ

ಮಿಗೆ ನೇಮ ನಿಷ್ಠೆಯಲಿ ನ್ಯಾಯ ಧರ್ಮದಲಿ ।
ಆಗ ರಕ್ಷಕನ ತೆರದಿ ರಾಜ್ಯವಾಳ್ದ
ಜಗ ಚಕ್ಷುವಂಶ ಸುಧಾಂಬುಧಿಚಂದ್ರ ।
ರಘು ಚಕ್ರವರ್ತಿ ತುಭ್ಯಂ ನಮಃ ॥

ರಾಗ : ಚಕ್ರವಾಕ

ಪ್ರೇಮವೇ ದೇವತೆಯು ಪ್ರೇಮವೇ ಸರ್ವಸ್ವ ।
ಪ್ರೇಮವೇ ಆಳುವುದು ಜಗವೆಂದೂ ।
ಪ್ರೇಮದಿಂದ ಸತಿಗಾಗಿ ಅಸುವ ತೊರೆದ ।
ಅಮರಕೀರ್ತಿ ಅಜಚಕ್ರವರ್ತಿ ತುಭ್ಯಂ ನಮಃ ॥

ರಾಗ : ಹಂಸಧ್ವನಿ

ದಶದಿಗ್ ಪತಿಗಳಂ ಜಯಿಸಿ ಸಾಮ್ರಾಜ್ಯ ನಿರ್ಮಿಸಿ ।
ದಶರಥನೆಂಬ ನಾಮಾಂಕಿತವ ಪಡೆದು ।
ವರಪುತ್ರ ಕಾಮೇಷ್ಠಿ ಮುಖಮಂ ಗೈದ
ಪರಮ ಪೂಜ್ಯಪಿತನೆ ತುಭ್ಯಂ ನಮಃ ॥

## ದೃಶ್ಯ - ವಾಲ್ಮೀಕಿ ಆಶ್ರಮ

**ವಾಲ್ಮೀಕಿ : ಶ್ಲೋಕ** **ರಾಗ : ಹಂಸಧ್ವನಿ**

ರಾಮಾಯ ರಾಮ ಭದ್ರಾಯ ರಾಮಚಂದ್ರಾಯ ವೇದಸೇ ।
ರಘುನಾಥಾಯ ನಾಥಾಯ ಸೀತಾಯ ಪತಯೇ ನಮಃ ॥

**ವಾಲ್ಮೀಕಿ : ವೃತ್ತ॥** **ರಾಗ : ನಾಟಿ**

ಮೇಘ ಶ್ಯಾಮಲಮಂಬುಜಾತನಯನಂ ವಿಸ್ತೀರ್ಣ ವಕ್ಷಸ್ಥಲೇ ।
ಬಾಹುದ್ವಂದ್ವ ವಿರಾಜಿತಂ ಸುವದನಂ ಶೋಣಾಂಘ್ರಿ ಪಂಕೇರುಹಂ ।
ನಾನಾರತ್ನ ವಿಚಿತ್ರ ಭೂಷಣಯುತಂ ಕೋದಂಡ ಬಾಣಾಂಚಿತಂ ।
ತ್ರೈಲೋಕ್ಯ ಪ್ರತಿಮಾನ ಸುಂದರ ತನುಂ ಶ್ರೀ ರಾಮಚಂದ್ರ ಪ್ರಭುಂ ॥

**ವಾಲ್ಮೀಕಿ : ಹಾಡು** **ರಾಗ : ಮಣಿರಂಗು - ತ್ರಿಪುಟತಾಳ**

ಮಾಮವ ಪಟ್ಟಾಭಿರಾಮ ಜಯ । ಮಾರುತಿ ಸನ್ನುತ ರಾಮ ॥
ಕೋಮಲ ತರ ಪಲ್ಲವ ಪದ ಕೋದಂಡರಾಮ ಘನ ।
ಶ್ಯಾಮಲ ವಿಗ್ರಹಾಬ್ಜನಯನ ಸಂಪೂರ್ಣ ।
ಕಾಮ ರಘುರಾಮ ಕಲ್ಯಾಣರಾಮ ಮಾಮವ ॥
ಛತ್ರಚಾಮರ ಕರಾಧೃತ ಭರತಲಕ್ಷ್ಮಣ ।
ಶತ್ರುಘ್ನ ವಿಭೀಷಣ ಸುಗ್ರೀವಾ ಪ್ರಮುಖಾದಿಸೇವಿತ ।
ಅತ್ರೀವ ಸಿಷ್ಠಾದ್ಯನುಗ್ರಹ ಪಾತ್ರ ದಶರಥ ।
ಪುತ್ರ ಮಣಿರಂಗ ವಲ್ಯಾಲಂಕೃತ ।
ನವರತ್ನ ಮಂಟಪೇ ವಿಚಿತ್ರ ಮಣಿಮಯ ಸಿಂಹಾಸನೇ ।
ಸೀತೆಯ ಸಹ ಸಂಸ್ತುತ ಚರಿತ್ರ ಪರಮ ।
ಪವಿತ್ರ ಗುರುಗುಹ ಮಿತ್ರ ಪಂಕಜ ।
ಮಿತ್ರವಂಶ ಸುಧಾಂಬುಧಿ ಚಂದ್ರ ಮೇಧಿನಿಪಾಲ ।
ರಾಮಚಂದ್ರ ॥ ಮಾಮವ ॥

## ದೃಶ್ಯ : ಅಯೋಧ್ಯಾ ಅರಮನೆ

**ಸಖಿಯರು : ಹಾಡು** **ರಾಗ : ದರ್ಬಾರಿ ಕಾನಡ - ಝಂಪೆತಾಳ**

ದಿನಮಣಿ ವಂಶ ದೀಪಾ ।
ಬೆಳಗಿದೆ ಮಧುರ ರೂಪ ॥ ಪ ॥
ಜನಕಜೆ ತೈಲಧಾರಾ ರಘುಪತಿಸೂತ್ರಧಾರ ॥
ಹರಡಿದೆ ಜಗದೊಳೆಲ್ಲ ಅತಿಶಯ ಕಾಂತಿವಿಮಲ ॥ ಅ.ಪ. ॥
ನಲಿವುದು ನಭದೆ ನಿಖಿಲ ।
ಶುಭಗ್ರಹ ಗಣದ ಮೇಳಾ
ಸುರನರ ಮೌನಿ ವೃಂದ ।
ಮೆರೆಸಿರೆ ವಿಜಯಾನಂದ ॥ ೧ ॥
ಆ ಽ........ ಆ.... ಽ....... ಆ..... ಽ.......
ಭುವನದೊಳೆಲ್ಲ ಶಾಂತಿ । ನವಯುಗದಮಲಕಾಂತಿ ।
ಹರಡಿತು ದಿವ್ಯಮಂತ್ರ । ರಘುವರ ರಾಜ್ಯತಂತ್ರಾ ॥ ೨ ॥

**ಸೀತೆ : ಹಾಡು** **ರಾಗ : ಕೀರವಾಣಿ - ಆದಿತಾಳ**

ಅರಳಿದುದೆನ್ನಯ ಜೀವನ ಕುಸುಮ ।
ಸುಖ ಸಂತೋಷ ಸ್ವರ್ಗ ಸೀಮಾ ॥ ಪ ॥
ಪರಿಮಳ ಭರ ಲಾವಣ್ಯಾರಾಮಾ ॥
ಭಕ್ತಿ ಭಾವನಾ ಭವ್ಯಧಾಮಾ ॥ ಅ.ಪ. ॥
ಬೀಸುತಿದೇ ಸುಖಶಾಂತಿಯ ಗಾಳಿ ।
ಸೇರಿಸಿ ನಿಮ್ಮಡೆಗೆನ್ನನುಮರಳಿ ।
ಎಲೆಮನೆಯಾದುದು ಮತ್ತೆ ಅರಮನೆ
ಪತಿ ಪದ ಸೇವೆಗೆ ಸಲ್ವ ಗುರುಮನೆ ॥ ೧ ॥
ತಳೆದಿರುವೆ ರವಿವಂಶದ ತೇಜಾ ।
ಲೋಕಕೆ ಸೌಖ್ಯವ ನೀಯುವ ತನುಜಾ ।
ಸಮಿಧಾರೂಪಿಣೆ ಯಜ್ಞಪ್ರಿಯಕರ ।
ಮುಗಿಯಲಿ ನಿನ್ನ ಮಹಾಯಾಗ ॥ ೨ ॥

## ದೃಶ್ಯ : ಸೀತಾ ಶಯನಾಗೃಹ

ಚಿತ್ರಲೇಖ : ಹಾಡು ರಾಗ : ರಾಮಪ್ರಿಯ - ಆದಿತಾಳ

ನೆರವಿಗೆ ಬಾರೆ ಸಖೀ । ಸ್ವರಮುಖಿ ।
ನೆರವಿಗೆಬಾರೆಸಖೀ
ಬಣ್ಣಿಸಲಾರೆನೆ ವೇದನೆಯಾ ।
ಬಿರಿದದ್ದೆ ತಳೆದಿಹ ಯಾತನೆಯಾ । ಯಾತನೆಯಾ ॥ ಪ ॥
ಎಳೆನಗೆ ಬೀರುವ ಬೆಳದಿಂಗಳಸಿರಿ ।
ಗೆಳೆತನ ಪ್ರೇಮಸುಧಾಲಹರಿ ।
ತೊರೆಯುವಳಲ್ಲಿ ಕರುಣೆಯ ಐಸಿರಿ ।
ಸೈರಿಸಲಾರೆನೆ ಅಗಲಿಕೆಯಾ ॥ ೧ ॥
ನಾಳೆಯ ದಿನವೇ ಮಂಜುಳಗಾನಾ ।
ಕೇಳುವರಿಲ್ಲದ ಗಭೀರ ಮೌನಾ
ತಾಳುವಮುನ್ನ ಹಾಡಲೆ ಚೆನ್ನಾ ।
ಮೊರೆಯಲಿ ವಿರಹ ತರಂಗವೀ ಲಂಪನ ॥ ೨ ॥
ಬೇಗುದಿ ಸುಯ್ಯಲರ್ ಅಡಗಲಿ ಹಾಡೇ ।
ಬೇಸರದೀ ಎದೆ ಬಿರಿಯಲೀ ಹಾಡೇ ॥
ರೋಸಿದ ಜೀವನ ಅಳಿಯಲಿ ಹಾಡೇ ।
ತಂತಿಯ ಕಂಪನ ಸಿಡಿಯಲಿ ಹಾಡೇ ॥
ಸಿಡಿಯಲಿ ಹಾಡೇ .... ಸಿಡಿಯಲಿ ಹಾಡೇ ..... ॥ ೩ ॥

## ದೃಶ್ಯ : ಅರಣ್ಯ

ಸೀತೆ : ಹಾಡು ರಾಗ : ಷಣ್ಮುಗಪ್ರಿಯ - ಆದಿತಾಳ

ತೊರೆದ ನೆನ್ನಪತಿ ನಿರ್ದಯದೇ
ಆದೆ ಅನಾಥೆ ಆಶ್ರಯ ರಹಿತೇ ॥ ಪ ॥
ವನದೇವತೆಗಳೇ ಜನಕನ್ಯೆಯರೇ ।
ಗಗನದೊಳಡಗಿದ ಅದೃಶ್ಯ ಶಕ್ತಿಯೇ ॥
ಬಯಲೇ ಭಾವಕೆ ನಿಲುಕದ ಶೂನ್ಯವೇ ।

ತಳೆಯಿರೆನ್ನನು ನಿಮ್ಮೊಳಿನ್ನು ॥ ೧ ॥
ಭೂಮಿ ಕನ್ಯೆನಾಂ ಜನಕ ನಂದಿನೀ ।
ರಘುವರ ನೆನ್ನಯ ಪ್ರಾಣ ಪತೀ ।
ಕೊನೆಗೆ ನಿರಾಶ್ರಿತೆ ಯೆನಿಸಿ ನಿಮ್ಮನೇ ।
ಆಶ್ರಯಿಸಿರುವೆ ಅನಿಂದಿತೇ ॥ ೨ ॥

## ದೃಶ್ಯ : ವಾಲ್ಮೀಕಿ ಆಶ್ರಮ

**ವಾಲ್ಮೀಕಿ : ಹಾಡು** ರಾಗ : ಷಣ್ಮುಖಪ್ರಿಯ - ಝಂಪೆತಾಳ

ಬ್ರಹ್ಮಾಂಡವನೆ ತುಂಬಿ ಮಾರ್ದನಿಸಿ ಕೇಳುತಿದೆ ।
ಬ್ರಹ್ಮಾತ್ಮಜನು ಪೇಳ್ದ ರಾಮನಾಮಾ ।
ರೋಮ ರೋಮಗಳಲ್ಲಿ ಹರ್ಷನೀಡುವನಾಮಾ ।
ತಾಮಸವನೋಡಿಸುವ ರಾಮ ನಾಮಾ ॥
ಕಾನನದೆ ಮೃಗದಂತೆ ಜೀವಿಸಿದ ವ್ಯಾಧನನು ।
ಮೌನಿಯನ್ನಾಗಿಸಿದ ರಾಮ ನಾಮಾ ॥
ಘೋರ ಪಾಪವ ಕಳೆವ ಮೋಕ್ಷದಾಯಕವಾದ ।
ತಾರಕ ಮಂತ್ರವಿದು ರಾಮ ನಾಮಾ ॥

**ವಾಲ್ಮೀಕಿ : ಸೀಸಪದ್ಯ** ರಾಗ : ಹಿಂದೋಳ

ಸುರಸಾಲ್ವಗಳ ಪೋಲ್ವ ಸುರುಚಿರಮಾಕಂದ ।
ಪನಸಾದಿ ಫಲತರು ಪ್ರತತಿಯಿಂದ ।
ನಿರುತ ಬೀಯುದೆ ಯೆಸೆವ ವರಪುಷ್ಪಚಯದಿಂದ ।
ಭರಿತಮಾಗಿಹ ಲತಾ ಪ್ರಸರದಿಂದ ।
ಕಮನೀಯ ಕಲ್ಹಾರ ಸಮಿತಿಯಿಂ ರಾಜಿಪ ।
ವಿಮಲಾಂಬುಯುತ ಸರೋವರಗಳಿಂದ ।
ಗುರು ವೈರವಂ ಬಿಟ್ಟು ಚರಿಪ ಗೋ ಶಾರ್ದೂಲ ।
ಹರಿಣಾದಿ ಮೃಗ ಸಮೂಹಗಳಿಂದಾ ।
ಪರಭೃತ ಶುಕಾದಿ ಖಗ ಪ್ರತತಿಯಿಂದ.
ಹರಿಯ ಪೂಜೆಗೆ ಸುಮವಾಯ್ವ ವಟುಗಳಿಂದ ।

ಪರಮಪಾವನರಾದ ಸಂಯಮಿಗಳಿಂದ
ಮೆರೆಯುವೀತಪೋವನದೆ ಹರುಷದಿರುನೀ ಮಗಳೇ ॥

**ದೃಶ್ಯ : ಅಯೋಧ್ಯಾ ಅರಮನೆ**
**(ರಾಮ ದರ್ಭಾಸನದ ಮೇಲೆ ಮಲಗಿರುವನು)**

**ಹಿನ್ನೆಲೆ : ಹಾಡು** **ರಾಗ : ಸಿಂಧುಭೈರವಿ - ಆದಿತಾಳ**

ದುಃಖ ತಮಂದದ ಕಾರ್ಮುಗಿಲಿಂದೆ ।
ಸುರಿವುದನಂತದ ಕಣ್ಣೀರು
ಶೋಭಾಹೀನ ಶೂನ್ಯ ನಗರವಿದು
ಬದುಕಿತೋ ಸತ್ತಿತೋ ಆರು ಅರಿಯರು ॥ ಪ ॥
ಎಲ್ಲಿದೆ ಬೆಳಕು ಎಲ್ಲಿದೆ ಬದುಕು
ಎಲ್ಲೆಡೆ ಹರಡಿದೆ ಕಾರ್ಗತ್ತಲು
ತಾಯಿಲ್ಲದ ಮನೆಗಾರು ಹೋಗುವರು
ಮಸಣಕೆ ಸಮವದು ಎತ್ತೆತ್ತಾ ॥ ೧ ॥
ಸರಯೂ ತೀರದ ನಿರ್ಜನ ವನದೇ
ಕೇಳಿಸುತ್ತಿದೆ ದುಃಖಗೀತೇ
ಸೀತೇ ಸೀತೇ ಎಲ್ಲಿರುವೆ ನೀ .....
ನೆಂದು ನುಡಿಯುತಿದೆ ಮನದ ಚಿಂತೆ ಮನದ ಚಿಂತೆ ॥ ೨ ॥

**ದೃಶ್ಯ : ಆಶ್ರಮ**
**(ವಟುಗಳು ಮತ್ತು ವಾಲ್ಮೀಕಿ ಹಾಡು)**

**ರಾಗ : ಮೋಹನ - ರೂಪಕತಾಳ**

**ವಟುಗಳು :** ನಭದೆ ಉದಿಸಿದೇ ತಾರಕೆಯುಗಳ
ವನಸಿರಿಗೈದ ತಪವಿದು ಸಫಲ
ತಝುಣು ತಧಿಮಿ ತಕಿಟ ಥಾ
ತಧಿಮಿ ತಕಿಟ ತಝುಣು ಥಾ
ಓ ..... ಽ.....ಽ.....ಽ
ಕುಣಿದು ಹರುಷದೇ ನಲಿವೆವುನಿರುತಾ ॥ ಪ ॥

ವಾಲ್ಮೀಕಿ : ನಲಿಯುತಿದೇ ತಪೋವನದ ತರುನಿವಹಾ
ಉಲಿಯುತಿದೇ ಶುಕ ಪಿಕದ ಸಮೂಹಾ ॥

ನಟುಗಲು : ನಭದೆ ಉದಿಸಿದೇ ತಾರಕೆಯುಗಳ
ವನಸಿರಿ ಗೈದಾ ತಪವಿದು ಸಫಲ
ತಝುಣು ತಧಿಮಿ ತಕಿಟ ಥಾ
ತಕಿಟ ತಧಿಮಿ ತಝುಣು ಥಾ ॥
ಯುಗಳ ತಾರಕೆ ಲವಕುಶನಾಮ
ಪೂರ್ವಗಗನದ ಕಾಂತಿಧಾಮಾ
ಆದಿಕವಿ ವರ ಮುನಿ ವಾಲ್ಮೀಕೀ
ಪೊರೆವುದೆಮ್ಮನು ದಯದೆ ಚಿರಸುಖಿ ॥
ಯುಗಳ ತಾರಕೆ ಲವಕುಶನಾಮ (೩ ಬಾರಿ)

ಸೀತೆ : ಹಾಡು ರಾಗ : ಕೀರವಾಣಿ - ಮಿಶ್ರಛಾಪುತಾಳ

ಜಗದಾನಂದನ ಜೋ ಜೋ ಲಾಲಿ ಲೋ
ಲಾಲಿಶ್ರೀ ಜನ ಪಾಲ ತನಯನೆ
ಸುಗುಣಾ ಗಂಭೀರ ವದನ ॥ ಪ ॥
ಓ......ಽಽ........ ವನವಾಸ ।
ವನವಾಸ ನಿಮಗಾಯ್ತೆ ರಾಜಗೃಹವಾಸ
ಕಣ್ಣೀರೆ ನಿಮಗೆ ವಿಧಿಯಿತ್ತ ಕೊಡುಗೆ ಜೋ ಲಾಲಿಲೋ ॥ ೧ ॥
ಓ ...... ಽಽ ....... ಜನಕಜೆ ।
ಜನಕಜೆ ಸುತರಾಗಿ ರಘುವಂಶೋದ್ಭವರಾಗಿ ।
ಅಡವೀಯೊಳಿಂತು ಬಾಳುವ ಪರಿಯಾಯ್ತೇ ನಿಮಗೆ ॥ ೨ ॥

ವಾಲ್ಮೀಕಿ : ವೃತ್ತ ॥

ಅಗ್ನಿಮೀಳೆ ಪುರೋಹಿತಂ ಯಜ್ಞಸ್ಯ ದೇವಮೃತ್ವಿಜಂ
ಹೋತಾರಂ ರತ್ನಧಾತಮಂ ಅಗ್ನೇನಯಸುಪಥಾರಾಯೇ ಅಸ್ಮಾನ್
ವಿಶ್ವಾನಿದೇವ ವಯುನಾನಿ ವಿದ್ವಾನ್ ಯುಯೋಧ್ಯಸ್ಮಜುಹೋರಾಣ
ಮೇನಃ ಭೂಯಿಷ್ಟಾಂತೇನಮಃ ಉಕ್ತಿಂವಿಧೇಮಾ ॥

ವಾಲ್ಮೀಕಿ ಮತ್ತು ವಟುಗಳು : ಹಾಡು ರಾಗಮಾಲಿಕೆ

ಉದಯರವಿಯಂತೆ ವಿಶ್ವಾಮಿತ್ರನಾಶ್ರಮವ
ಬೆಳಗಿಸಿದ ಸುಜ್ಞಾನ ಮೂರ್ತಿ ನೀನು
ಯಜ್ಞ ವಿಧ್ವಂಸಕ ಸುಬಾಹು ಮಾರೀಚರನು
ವಧಿಸಿದ ಮಹಾರಾಜ್ಯಪಾಲ ನೀನು
ಶಿವ ರಹಸ್ಯವ ತಿಳಿದು ಜಾನಕಿಯ ಕೈಹಿಡಿದು
ಮೆರೆವ ಕಲ್ಯಾಣಕಧಿಪತಿಯು ನೀನು
ದಶಕಂಠ ದಾನವ ಮಹಾನಾಗ ಬಂಧನವ
ಕಳೆದ ಜಗದೋದ್ಧಾರ ಕೀರ್ತಿ ನೀನು ॥
ರಾಮ ಕಥಾಮೃತ ಸಾರಾ ಶ್ರೀ
ರಾಮ ಕಥಾಮೃತ ಸಾರಾ ॥
ಆಲೈಸಿರಿ ನೀವ್ ಶ್ರುತಿ ಮಧುರ ॥ ರಾಮ ॥

## ದೃಶ್ಯ : ಅಯೋಧ್ಯಾ ಅರಮನೆ

**ಲವ-ಕುಶ** **ರಾಗಮಾಲಿಕೆ**

ರಾಮ ಕಥಾಮೃತ ಸಾರಾ ॥ ಶ್ರೀ ॥
ರಾಮ ಕಥಾಮೃತಸಾರಾ ॥
ಆಲೈ ಸಿರಿ ನೀವ್ ಶ್ರುತಿ ಮಧುರಾ ॥ ರಾಮಕಥಾ ॥
ಆದರ್ಶದ [illegible] ಸಿರಿ ಆಗಲಿ ನಿಮಗೆಂದೆಂದು ಬಾಳಿಗೂ ॥ ರಾಮ ॥
ಮೆರವುದಯೋಧ್ಯಾನಗರದಲ್ಲಿಹನು ದಶರಥನಂದನ [illegible] ।
[illegible] ಕೌಸಲ್ಯೆಯೊಳುದಿಸಿದನು ರಘುಪತಿ ಅತಿಶಯ[illegible] ॥ ರಾಮ ॥
ಕೌಶಿಕ ಮುನಿವರನಾಶ್ರಮ ಮಾರ್ಗದೆ
ಗೌತಮನಂಗನೆ ಶಿಲೆಯಾಗಿ
ತಪಿಸುತಿರಲದನು ಕಂಡು ಕರುಣೆಯಿಂ
ಮರಳಿಮಾಡಿದನು ಸತಿಯಾಗಿ ॥ ರಾಮ ॥
ಬಳಿಕ ರಘುವರನು ಮಿಥಿಲೆಗೆ ಬಂದನು
ಮುರಿದನು ಸಭೆಯೊಳು ಶಿವಧನುವಾ

ಗುಣನಿಧಿ ಜನಕಾತ್ಮಜೆಯ ಕೈಹಿಡಿದು
ತಂದನಯೋಧ್ಯೆಗೆ ವೈಭವವ ॥ ರಾಮ ॥
ತಂದೆಯಿತ್ತ ವಚನವ ಪರಿಪಾಲಿಸೆ
ನಡೆದನರಣ್ಯಕೆ ಸತಿಸಹಿತಾ ।
ದಾನವಪತಿ ಅಪಹರಿಸೆ ಸೀತೆಯನು
ವನದೆ ಹುಡುಕಿದನು ದುಃಖಿಸುತ ॥ ರಾಮ ॥
ಸೀತೇ ಸೀತೇ ಸೀತೇ ಸೀತೇ
ಎಲ್ಲಿಹೆಯೆಂಬ ಕಾತರ ಧ್ವನಿಕೇಳುತಿದೆ
ಹಾ ವೈದೇಹೀ ಹಾ..... ಜನಕಸುತೇ
ಹಾ ವೈದೇಹೀ ಹಾ.... ಜನಕಸುತೇ
ರಘುಪತಿ ಬಳಿಕ ಸೇತುವೆಯ ರಚಿಸಿ
ಲಂಕೆಗೈದ ಕಪಿ ಬಲಸಹಿತ
ವಧಿಸಿ ದಾನವರ ಬಂದನತಿ ಮುದದಿ
ಮರಳಿ ಅಯೋಧ್ಯೆಗೆ ಸತಿಸಹಿತ ॥ ರಾಮ ॥
ನಾಡು ನಲಿಯಿತು ಜನರು ನಲಿದರು
ಹರಿಯಿತು ಒಲುಮೆಯ ಹೊನಲು
ರಾಮ ರಾಮ ಜಯ ಸೀತಾರಾಮ
ಕೇಳಿತೆಲ್ಲೆಡೆ ವಿಜಯದ ಹುಯಿಲು
ರಾಮ ರಾಮ ಜಯ ಸೀತಾರಾಮಾ
ರಘುಪತಿ ರಾಘವ ರಾಜಾರಾಮಾ

**ಆಂಜನೇಯ ವಾಲ್ಮೀಕಿ ಮತ್ತು ಸಕಲರ ಹಾಡು**

**ಆಂಜನೇಯ :** ರಾಮಹರೇ ರಘುರಾಮ ಹರೇ ಸೀತಾ
ರಾಮಹರೇ ರಘು ರಾಮಹರೇ
ಸಾಧು ಜನೋದ್ಧಾರ ರಾಮ
ಘನಶ್ಯಾಮ ರಾಮಹರೇ ರಘು ರಾಮಹರೇ

**ವಾಲ್ಮೀಕಿ :** ಸೀತೆ ಭೂಮಿಸುತೇ ಸೀತೇ
ಕರೆವಳು ಧರಣೀ ಸುತೆಯ ತನ್ನೆಡೆಗೆ
ಸೀತೆ ಸೀತೇ ಸೀತೇ .....

ಸಕಲರು : ರಾಮ ರಾಮ ಜಯ ಸೀತಾರಾಮ
ರಘುಪತಿ ರಾಘವ ರಾಜಾರಾಮಾ

## ಮಂಗಳಂ

**ರಾಗ : ಸುರುಟಿ - ರೂಪಕತಾಳ**

ಮಂಗಳಂ ಶ್ರೀ ರಾಮಚಂದ್ರಾ । ಮಂಗಳೆನ್ನುವೆ ॥ ಪ ॥
ಸದಾ । ಅಂಗಜನಪಿತನೆದುರಿತ । ಭಂಗಮಂಗಳಂ ॥ ಅ.ಪ. ॥
ಕಡಲಜಾತೆ ಪೊಡವಿದೇವಿ ಒಡೆಯಮಂಗಳಂ ।
ಚಿನ್ಮಯ ರೂಪ ಚಿದ್ವಿಲಾಸ ನಿನಗೆ ಮಂಗಳಂ ॥ ೧ ॥

**ಎಲ್ಲರು : ಶ್ಲೋಕ** **ರಾಗ : ಮಧ್ಯಮಾವತಿ**

ಮಂಗಳಂ ಕೋಸಲೇಂದ್ರಾಯ ಮಹನೀಯಗುಣಾತ್ಮನೆ
ಚಕ್ರವರ್ತಿತನೂಜಾಯ ಸಾರ್ವಭೌಮಾಯ ಮಂಗಳಂ ॥



# ದಾನಶೂರಕರ್ಣ



ರಂಗಮಂಚದ ಕರ್ಣ
**ಕೊಟ್ಟೂರಪ್ಪನವರು**

ನಾಟಕಕಾರರು
**ಎಂ.ಎಸ್. ರಾಮಸ್ವಾಮಿಯವರು**

**ಪ್ರಾರ್ಥನೆ : ಹಾಡು** **ರಾಗ : ......**

ಹೇ ಸೂರ್ಯದೇವ
ತೇಜೋ ಪ್ರಭಾವ ॥ ಪ ॥
ಅನಂತ ವಿಶ್ವ ಜ್ಯೋತಿಮಯ
ಘನೋಜ್ವಲಾಕರ ಕೃಪಾಮಯ
ನಭೋಮಂಡಲ ಪ್ರಸರಿತ ಕಿರಣ
ಪ್ರಭೋ ಪ್ರಭಾಕರ ಮಾಂಪಾಹಿ, ಮಾಂಪಾಹಿ, ಮಾಂಪಾಹಿ ॥ ೧ ॥

**ಸೂತ್ರಧಾರ : ಶ್ಲೋಕ**

ಶುಕ್ಲಾಂ ಬರಧರಂ ವಿಷ್ಣುಂ ಶಶಿವರ್ಣಂ ಚತುರ್ಭುಜಂ
ಪ್ರಸನ್ನ ವದನಂ ಧ್ಯಾಯೇತ್ ಸರ್ವವಿಘ್ನೋಪ ಶಾಂತಯೆ ॥

**ಸೂತ್ರಧಾರ : ಹಾಡು :** **ರಾಗ : ಹಂಸಧ್ವನಿ - ಆದಿತಾಳ**

ಶರಣು ಸಿದ್ಧಿವಿನಾಯಕ ಶರಣು ವಿದ್ಯಾಪ್ರದಾಯಕ
ಶರಣು ಪಾರ್ವತಿ ತನಯ ಮೂರುತಿ ಶರಣು ಮೂಷಿಕವಾಹನ ॥ ಪ ॥
ನಿಟಿಲ ನೇತ್ರನೆ ದೇವಿ ಸುತನೆ ನಾಗಭೂಷಣ ಪ್ರಿಯನೆ
ಕಟಿತಟಾಂಗದ ಕೋಮಲಾಂಗನೆ ಕರ್ಣ ಕುಂಡಲಧಾರನೆ ॥ ಅ.ಪ. ॥
ಬಟ್ಟ ಮುತ್ತಿನ ಪದಕಹಾರನೆ ಬಾಹು ಹಸ್ತ ಚತುಷ್ಟನೆ
ಇಟ್ಟ ತೊಡಿಗೆಯ ಹೇಮಕಂಕಣ ಪಾಶ ಅಂಕುಶಧಾರನೆ ॥ ೧ ॥

ದುಗ್ಧಮಹಲಂಬೋದರನೆ ಇಕ್ಷುಚಾಪನ ಗೆಲಿದನೆ
ಪಕ್ಷಿವಾಹನ ಸಿರಿಪುರಂದರ ವಿಠಲನ ನಿಜದಾಸನೆ

ಸೂತ್ರಧಾರ : ಹಾಡು ರಾಗ : ಗೌಡಮಲ್ಲಾರ - ರೂಪಕತಾಳ

ಸಾರಸಮುಖಿ ಸಕಲಭಾಗ್ಯದೇಹಿ
ಶ್ರೀ ಚಾಮುಂಡೇಶ್ವರಿ ॥ ಪ ॥
ಮಾರಜನಕ ಸೋದರಿ
ಮಹಿಷಾಸುರ ಮರ್ಧಿನಿ ಅಂಬಾ ॥ ಅ.ಪ. ॥
ಹಸಿತವದನೆ ಆರ್ದ್ರಹೃದಯೆ ಕಾಳಿಕೇತನನಿಲಯೆ ಸದಯೆ
ರಸಿಕಜನ ಸನ್ಮೋದರುಚಿರೆ ರಾಜೇಶ್ವರಿ ರಕ್ಷಮಾಂ ॥ ೧ ॥

## ದೃಶ್ಯ : ದೇವೇಂದ್ರನ ಸಭೆ

ವೈತಾಳಿಕರು : ಹಾಡು ರಾಗ : ಅಭೇರಿ - ಆದಿತಾಳ

ಜಯಜಯನಿರ್ಜರ
ಜಯ ನಿಹಿತಾಧರ
ಜಯ ಜಯ ಸುಂದರ
ರಿಪುಬಲಭೀಕರ
ಬಲಾಹಕವಾದ ನಿತ್ಯಮಹೋ
ಪೌಲೋಮಿ ಮೋಹ ॥ ೧ ॥

ದೇವೇಂದ್ರ : ಹಾಡು ರಾಗ : ಅಠಾಣ - ರೂಪಕತಾಳ

ಸುರ ಸಮೂಹ ಭಾಗ್ಯದಿಂ
ಮೆರೆಯುವೆನು ನರಹರಿಯ ಕರುಣದಲಿ ॥ ಪ ॥
ದಾನವರನು ದುರದಿವಧಿಸಿ
ದಾನವಾರಿ ಹರಿಯ ಕರುಣದಿ
ಸಾನುರಾಗದಿ ಸಾರ ಸೌಖ್ಯದಿ
ನಾಕಗಣದ ವಿರೋಧಿಗಳ ವಧಿಸುತ ಮೆರೆವೆನು ಜಗದಲಿ ॥ ಅ.ಪ. ॥

ಪರಮ ಪುರುಷ ವಾಸುದೇವನ
ಪರಮ ಕರುಣೆಯಿಂದಲೀಗ
ನಿರತ ಶೂರತನದಿ ಬೇಗ
ಸರಾಗದಲಿ ವಿರೋಧಿಗಳ ವಧಿಸುತ ಮೆರೆವನು ಜಗದಲಿ ॥ ೧ ॥

## (ನಾರದ ಪ್ರವೇಶ)

**ನಾರದ : ಸಾಕಿ**

ಶಾಂತಾಕಾರಂ ಭುಜಗಶಯನಂ ಪದ್ಮನಾಭಂ ಸುರೇಶಂ
ವಿಶ್ವಾಧಾರಂ ಗಗನಸದೃಶಂ ಮೇಘವರ್ಣಂ ಶುಭಾಂಗಂ
ಲಕ್ಷ್ಮೀಕಾಂತಂ ಕಮಲನಯನಂ ಯೋಗಿಹೃಧ್ಯಾನ ಗಮ್ಯಂ
ವಂದೇ ವಿಷ್ಣು ಭವಭಯಹರಂ ಸರ್ವ ಲೋಕೈಕನಾಧಂ ।

**ನಾರದ : ಹಾಡು** — **ರಾಗ : ಕಲ್ಯಾಣಿ - ಆದಿತಾಳ**

ನಾರಾಯಣಂ ಭಜರೇ ಮುರಹರಂ
ನಾರದ ಗಾನವಿಲೋಲ ವಿನೋದಂ ॥ ಪ ॥
ಶಂಖ ಚಕ್ರಧರ ಶ್ರೀಗೋವಿಂದಂ
ಪಂಕಜನಾಭಂ ಪರಮಾನಂದಂ ॥ ಅ.ಪ. ॥
ಆದಿಮಧ್ಯಲಯ ರಹಿತನು ನೀನೇ
ಆದಿ ಅಂತ್ಯವೆಲ್ಲ ನಿನ್ನಯ ಲೀಲೆ
ಅಗಣಿತ ಮಹಿಮನು ನೀನೇ ದೇವಾ
ಜ್ಯೋತಿ ಸ್ವರೂಪ ಮಾಧವಾ ॥ ೧ ॥

**ನಾರದ : ಹಾಡು** — **ರಾಗ : ಮೋಹನ - ಆದಿತಾಳ**

ಜಯಜಯ ಲೋಕವನಾ
ಭವ ಭಯ ಹರಣಾ
ಕರುಣಾ ಭರಣಾ ॥ ಪ ॥
ಪಾವನ ಚರಣ ಶೋಭಿತನಯನಾ

ದುರಿತ ನಿವಾರಣಾ ಸಕಲ ಕಾರಣಾ
ಧರ್ಮಪರಾಯಣ ನಾರಾಯಣ ॥ ೧ ॥

**ದೃಶ್ಯ : ರಸ್ತೆ**

**ಕರ್ಣ : ಹಾಡು** **ರಾಗ : ಬಾಗೇಶ್ವರಿ - ಆದಿತಾಳ**

ಮಾಯಾಮಯವೀ ಜೀವನ ಯೋಚಿಸೆ
ತೋಯಜಾಕ್ಷನೆ ಉಪಾಯವ ತೋರ್ಲ್ವೆ ॥ ಪ ॥
ಮಾಯಾಪಾಶವ ಜೈಸುತಲೀಗಲೇ
ಈಯುವೆ ಹರಣವ ನ್ಯಾಯದ ಮಾರ್ಗದಿ ॥ ೧ ॥

**ದೇವೇಂದ್ರ (ಮಾಯಾಬ್ರಾಹ್ಮಣ) : ಹಾಡು ರಾಗ : ಯಮನ್ ಕಲ್ಯಾಣಿ - ಆದಿತಾಳ**

ಪಾಹಿಮುರಾರೆ
ಪಾವನ ಶೌರೇ
ಮೋಹವಿದೂರಾ
ಮೋಕ್ಷಾಧಾರಾ ॥ ಪ ॥

**ಕರ್ಣ : ಹಾಡು** **ರಾಗ : ಶಿವರಂಜಿನಿ/ಬೇಹಾಗ್ - ಆದಿತಾಳ**

ಕ್ಷಿತಿಯೊಳು ಖ್ಯಾತಿಯ ಪಡೆಯುದೆಂತು ನಾ
ಕುಲಹೀನನೆನಿಸುತೆ ದೇವ ॥ ಪ ॥
ಜಾತನ ಮಾತೆಯ ಜಾತಿಯನರಿಯದೆ
ಅನಾಥನಾದೆ ಅಕಟಾವಿಧಿಯೆ
ಭಕ್ತೋದ್ಧಾರ ಭವಭಯದೂರ
ಭಕ್ತಸಲಹುವ ಪಾಪವಿದೂರ ॥ ೧ ॥
ಹತಭಾಗ್ಯಕೆ ಮುಂದೆ
ಗತಿತೋರದೆ ಆಯ್ತೆ ವಿಧಿ
ಗತಿಯನು ಕರುಣಿಸು ದೇವ ನಮಿಪೆ ॥

## ದೃಶ್ಯ : ಗರಡಿಮನೆ
## (ದುಶ್ಯಾಸನ, ಭೀಮ, ದುರ್ಯೋಧನರ ದ್ವಂದ್ವ ಗೀತೆ)

ರಾಗ : ಕಲ್ಯಾಣಿ - ಆದಿತಾಳ

**ದುಶ್ಯಾಸನ :** ಬಲ್ಲೆ ನಿನ್ನ ಶೌರ್ಯವೆಲ್ಲ ಖುಲ್ಲ ಮಲ್ಲ ಹೇಡಿ ನೀನು
ಛಲವನಿಡಲು ನಿನ್ನ ಬಲಿಯ ಕೊಡುವೆನು
ಹಲವು ಹರಟ ಬೇಡ ತೊಲಗೊ ಮೊದಲು ದುರುಳನೆ

**ಭೀಮ :** ಅಟ್ಟಹಾಸ ಬೇಡ ಬಾರೋ ಸಾರೋ
ತೋರೋ ಮಾನಹೀನನೇ ॥ ಪ ॥
ದುಷ್ಟ ನಿನ್ನ ಎದೆಯ ಮೆಟ್ಟಿ ಸಿಗಿದು ಬೇಗ
ಸುಟ್ಟು ಬಿಸುಡುವೆನು ದಿಟ್ಟನಾಗಿ ನಿಲ್ಲೋ ॥ ೧ ॥

**ದುರ್ಯೋಧನ :** ಕೇಳಲಾರೆ ನಿನ್ನ ಮಾತ ದೂರ್ತ ಸತ್ಯ ಕೇಳು ಕಾದಿದೇ ಅನರ್ಥ ॥ ಪ ॥
ಧೀರರಾದ ಎಮ್ಮ ಕೆರಳಿಸಿದರೆ ನಿಮ್ಮ ಹರಣಗಳನ್ನು
ತೊರೆಸಿ ಭರದಿ ಧ್ವಂಸಗೈವೆ

**ಭೀಮ :** ಮುಚ್ಚು ಬಾಯಿ ಹುಚ್ಚನಂತೆ ಕೊಚ್ಚಲೇತಕೆ ಛೀ ಛೀ
ಅರಿಗಳಾದ ನೀವು ಬರಿದೆ ಬೊಗಳಲೇತಕೆ
ದುರುಳ ನಿಮ್ಮ ಕರುಳ ಬಗೆದು ತೆರೆವೆ ನೀಕ್ಷಣ

**ಭೀಮ : ಹಾಡು** ರಾಗ : ಮಧ್ಯಮಾವತಿ - ಆದಿತಾಳ

ಪಾತಕಿ ಕೊರಳನು
ಘಾತಿಸಿ ಈಗಲೆ
ಭೂತಳದೊಳಗೆ ಹೂತಿಡುವೆನು ನಾ
ದುರುಳನೆ ನಿನ್ನಯ ಶಿರವನು ಕಡಿದು
ಸಲೆ ದುಡುಕುತನವ ಬಿಡುನೀ

**ಅರ್ಜುನ : ಹಾಡು** ರಾಗ : ಅಠಾಣ - ಆದಿತಾಳ

ಕುಲವನರಿಯದೆ ತನುಮದದಿಂದಲಿ
ಏಕಿಂತು ಮೆರೆವೆ ಅಧಮ ॥ ಪ ॥

ಕುಟಿಲದಲೀ ಪಟುತರ ಸಾಹಸಿಗಳ
ಸಹಪಾಟವು ಘಟಿಸಲೆಂದೀ ಪರಿ ॥ ಅ.ಪ. ॥
ಬೀಳಹೊಯ್ವ್ವ ನಿನ್ನ ದರ್ಪದ ಬಿಲ್ಲು
ಬಾಣವನ್ನ ಖೂಳ ಪಾರ್ಥಿವ ತನಯರ್ಗಳು
ಸಮರಗನ್ನಿತ್ತೆ ಭಾವಿಸಿದರೆ ಬರ್ಪುದೀಗ ಮರಣ ॥ ೧ ॥

**ಕರ್ಣ : ಕಂದ**

ಕುಲವಂಬಲವಂ ಜರಿಯುತೆ
ಕುಲವಂ ಜರಿಯುತೆ ಬಲವಂ ಜರಿಯುತೆ
ಬಲುಮೆರೆದ ನೀ ಈಗೆಂತು ಧೀರನೆನಿಸುವೆಯ್ಯ ।
ಸಾಹಸದಿಂದ ಬಲುಸಾಹಸದಿಂದ
ಅರಿಗಳ ತಲೆಗಳನು ಕಡಿದಿಕ್ಕು
ವುನಾತ ಶೂರನಿಜದಿ ।

**ಧರ್ಮರಾಯ : ಹಾಡು** ರಾಗ : ಹಂಸಾನಂದಿನಿ - ರೂಪಕತಾಳ

ಶಾಂತರಾಗಿ ಸೌಖ್ಯದಿಂದದಾನಂದ ಪೊಂದಿರ್ಲೈ
ನಡೆನುಡಿಯೊಳು ಜನರನೊಲಿಸಿ ಧನ್ಯರಾಗಿರ್ಲೈ ॥ ಪ ॥
ಮದಮತ್ಸರ ಕ್ರೋಧಗಳಿಗ ಮಣಿಯದೆ ಬಾಳಿರ್ಲೈ ॥ ೧ ॥

**ದೃಶ್ಯ : ರಸ್ತೆ**

**ನಾರದ : ರಾಗಮಾಲಿಕೆ**

ಶ್ರೀಧರ ಕೇಶವ ನಾರಾಯಣ ।
ಶ್ರೀಕರ ಶುಭಕರ ನಾರಾಯಣ ॥ ಪ ॥
ಈ ಜಗವೊಂದು ನಾಟಕ ಮಂದಿರ ।
ಜನರೆಲ್ಲ ಸೂತ್ರ ಗೊಂಬೆಗಳಯ್ಯ ।
ನೀ ನಾಡಿಸಿದಂತೆ ಆಡುವರಯ್ಯ ।
ಲೀಲಾಮಯನು ನೀನೇ ದೇವ ॥ ೧ ॥

ಕಮಲಾರಮಣ ಪನ್ನಗ ಶಯನ ।
ದುರಿತ ನಿವಾರಣ ಭವಭಯ ಹರಣ ।
ದೀನ ಜನ ಮಂದಾರ ದಾನವ ಸಂಹಾರ ।
ಅಖಿಲಾಂಡ ಕೋಟಿ ಬ್ರಹ್ಮಾಂಡ ನಾಯಕ ।
ಲೋಕ ಲೋಕದಿಪೂಜಿತನಯ್ಯ ।
ಭಕ್ತರ ಭಕ್ತನು ನೀನಯ್ಯಾ ॥ ೨ ॥

## ದೃಶ್ಯ : ಪರಶುರಾಮರ ಆಶ್ರಮ

**ಪರಶುರಾಮ : ಹಾಡು** | ರಾಗ : ಚಕ್ರವಾಕ - ಆದಿತಾಳ

ಶೈಲಸುತಾ ರಮಣ ಪೊರೆ ನಿಖಿಲ ಜಗತ್ಕಾರಣ ಚೇತಸಾ ॥ ಪ ॥
ಸಚ್ಚಿದಾನಂದ ಶುಭಕರ ರೂಪ
ವಾಂಛಿತ ಫಲದಾಯಕ ದೇವಾ ॥ ಅ.ಪ. ॥
ನಂದಿವಾಹನ ನಿಗಮವಿಧಾನ
ಬೃಂದಾರಕನುತ ಚರಣ
ನಾಗಾಭರಣ ರವಿಶಶಿಕಿರಣ
ನಾದಾನಂದಮಯ ಪಾವನ ॥ ೧ ॥

## ದೃಶ್ಯ : ಅರಣ್ಯ ಆಶ್ರಮದ ಹೊರಭಾಗ

**ಕರ್ಣ : ಹಾಡು** | ರಾಗ : ಚಿತ್ತರಂಜಿನಿ - ಆದಿತಾಳ

ಸ್ವಾಮಿ ವಿನಯದೊಳಾಂ ಬೇಡುವೇ
ದಯಾನಿಧೆ ಕರವ ಮುಗಿದು ॥ ಪ ॥
ಪಾಪಿಯಾದೆ ಮೋಸಗೈದು
ವಿದ್ಯಾಭಿಲಾಷೆಯಿಂದ ತಮ್ಮೊಳು
ವಂಚನೆಯನು ನಾಂ ಗೈದೆನೋ ದೇವ ॥ ಅ.ಪ.॥
ವಿದ್ಯಾದಾನಂ ಮುದದೊಳಗಿತ್ತು
ಸದಯ ಹೃದಯನೇ ಪಾಲಿಸು ನೀ ಎನ್ನ ॥ ೧ ॥

**ಕರ್ಣ : ಕಂದ**

ಮನೋಭಿಲಾಷೆ ವಿನಾಶಮಾದುದೇ ವಿಧೀ
ಗುರುಶಾಪವೀಯೇನಾ ಸೈಪೆನೇ ಅಕಟಾ
ಅನಾಥನಾದ ಎನ್ನ ಕಾವರಾರ್ ಪ್ರೇಮದೇ

**ದೃಶ್ಯ : ಉದ್ಯಾನವನ**
**(ಸೋಮಪ್ರಭೆ ಸಖಿಯರೊಡನೆ ಬರುವಳು)**

**ಸೋಮಪ್ರಭೆ : ಹಾಡು** **ರಾಗ : ಹಿಂದೂಸ್ಥಾನಿಕಾಪಿ - ಆದಿತಾಳ**

ಸೊಗೆಯಿವುದೇಂ ಸಖಿ ಸುದಿನಮಿದೇ ಮಲ್ಲಿಕ ಮಂಜುಳ
ಮೋದಮಯಾ ರವಿ ಉದಯಾ ಜಗದ ಭಯಾ ॥ ಪ ॥
ಇಂದುಕಲಾಧರನಮಲಾ ನಂದ ಕಲಾ ಮಹಿಮೆಯಲಾ ।
ಬಗಕುಲ ಮಲನಿಯೇ ಸಖಿ ಕೇಳ್ ಅತಿಶಯ ಶುಭ
ಸಮಯಂ ರವಿಯುದಯಾ ಜಗದ ಭಯಾ ॥ ಅ.ಪ. ॥
ಕೇಳ್ ಸಖಿ ಕೇಳ್ ಕೋಕಿಲೆಗಳ ಮೇಲ್ ಸ್ವರದಿಂ
ಮಧುರ ಘನ ಮನವನು ತಾ ನೊಲಿಸುವುದೇ
ಕಿವಿಗಮೃತಧಾರೆ ಸುರಿಸುವುದೇ ಮೇಲ್ ನಲಿಸುವುದೇ ॥ ೧ ॥

**ಸೋಮಪ್ರಭೆ : ಹಾಡು** **ರಾಗ : ಮಿಶ್ರ ಯದುಕುಲ ಕಾಂಭೋಜಿ - ಮಿಶ್ರತಾಳ**

ಮಾರನೋ ಈತ ಮನ್ಮನೋ ಹಾರನೋ ಕಾಣೆ ॥ ಪ ॥
ಮನ್ಮಾನಸವನು ಸೂರೆಗೊಳ್ಳುವ - ಧೀರನೋ
ಗಂಭೀರನೋ ॥ ಅ.ಪ. ॥
ಧೀರನುತವರ ಶೂರಮಿಗೆ ಶೃಂಗಾರ ಮೋಹಕರ
ಮಾರ ಸುಂದರ ಸುಗುಣ ಬಂಧುರ
ಮೋದವ ಬೀರ್ವ ಸುಕುಮಾರ ಧೀರ
ವರಚಂದ್ರನೋ ದೇವೇಂದ್ರನೋ
ಗುಣಸಾಂದ್ರನೋ ರಾಜೇಂದ್ರನೋ ॥ ೧ ॥

**ಕರ್ಣ : ಕಂದ**

ಕರಮೆಸೆವರೂಪಿನಿಂದ
ಚ್ಚರಿಯಂ ನೀಡುತಿಹ ಇವಳಾರೋ ಕಾಣೆ
ಧರಣೀಶನ ಸುತೆಗಲ್ಲದೀ
ವರರೂಪುಂಟೆ ಕಿರಾತವನಿತೆಗೆ ನಿಜದಿಂ ||

**ಕರ್ಣ : ಹಾಡು** **ರಾಗ : ಹಿಂದೋಳ - ಆದಿತಾಳ**

ಯಾರೀ ಮೋಹಿನಿಯು ನವ ತರುಣಿ
ಚಾರುವದನೆ ಸುರಸುಂದರಿಯರ ಪೋಲ್ವ || ಪ ||
ಬಾರಿಬಾರಿಗೂ ತಿರುಗಿ ಮೋಹದ ನಗೆ ಬೀರಿ
ಸೂರೆಗೊಂಡಳು ಮನವ ನೀರೆ ಜನೇತ್ರೆ || ಅ.ಪ ||
ಘಲುಘಲುರೆನ್ನುವ ಕಾಲ್ಗೆಜ್ಜೆಯ ಗೊಲಸು
ಝುಲಿಝುಲಿರೆನ್ನುವ ಕುಲುಕುವ ಕೈಬಳೆಯ
ನಡುವಿನ ವಡ್ಯಾಣ ನಿಡುಗೂಟಲ ಜಡೆಯಿಂ
ನಡೆಯುವ ನಡೆಯಿಂದ ಮೋಡಿ ಮಾಡಿದಳಿವಳಾರೀ || ೧ ||

## ದೃಶ್ಯ : ದ್ರೌಪದಿಯ ಅಂತಃಪುರ

**ದ್ರೌಪದಿ : ಹಾಡು** **ರಾಗ : ಕಮಾಚ್ - ಆದಿತಾಳ**

ದೇವವರೇಣ್ಯನೇ ಶ್ರೀವಾಸುದೇವನೇ || ಪ ||
ನೀ ಸಂಧಿಗೈಯ್ಯಲು ಪೋಗುವುದೇನ್ನೈ
ದುರುಳರು ನಿನ್ನಂ ಭಾಧಿಪರೇನ್ನೈ
ಭಕ್ತೋದ್ಧಾರನೆ । ನೀನೆಮಗೋರ್ವಂ ಸುಪ್ರಸನ್ನನಾಗಿರಲ್
ದುಷ್ಟಾತ್ಮರಾದ ಕೌರವರಂ
ರಣದೊಳ್ ಗೆಲ್ವದೇಂದೊಡ್ಡದೆ || ೧ ||

**ಅರ್ಜುನ : ಹಾಡು** **ರಾಗ : ಕಮಾಚ್ - ಆದಿತಾಳ**

ಮರುಗುವೆ ಏಕೆಲೆ ಮಾನಿನಿ ಮಣಿಯಳೇ ನೀ || ಪ ||
ತರುಣಿ ನಿನ್ನನು ನಾವು ಕೊರಗಿಸುತಿಹೆವೆಂದು || ಅ.ಪ ||

ಧರ್ಮಜನಾಜ್ಞೆಯ ಮೀರಲಾರದೆ ನಾವು
ವೈರವ ಮರೆತೆವು - ಸೈರಿಸು ತಾಪವ ॥ ೧ ॥

ಭೀಮ : ಹಾಡು ರಾಗ : ಹಂಸಧ್ವನಿ - ಆದಿತಾಳ

ಕೇಳೆ ದ್ರುಪದಸುತೆ ಸತಿ ಹಿತೆನುತೆ
ಮನೋಜ್ಞ ಚಾರಿತೆ ॥ ಪ ॥
ಅಗ್ರಜನಾಜ್ಞೆಯ ಮೀರಿ ।
ಶೀಘ್ರದಿ ಕುರುಕುಲ ಸೇರಿ
ದಗ್ಧಮಾಡುವೆ ಕುರುವಂಶಜರ ॥ ೧ ॥

ಕೃಷ್ಣ : ಹಾಡು ರಾಗ : ಹಂಸಧ್ವನಿ - ಆದಿತಾಳ

ಸಾಕೀಭಯವು ಸೋದರಿ
ಸಂತೋಷವಂ ತಳೆ ॥ ಪ ॥
ಸಾಕು ಭೀತಿ ಏಕೆ ನಿನ್ನೊಳ್
ವ್ಯಾಕುಲವಂ ಸಹೋದರಿ ಬಿಡು ॥ ಅ.ಪ. ॥
ಸ್ವಾರ್ಥತಾಭಿಮಾನದಿಂತು
ನಾಂ ಪೋಗಿ ನುಡಿಯುವೆ
ದೂರ್ತರೊಳು ನಾನು
ಕೀರ್ತಿಗಳಿಪೆ
ವ್ಯರ್ಥಗೈವೆ ಈ ಪರಿ ಸಂಧಿಯ ॥ ೧ ॥

ಅರ್ಜುನ : ಹಾಡು ರಾಗ : ಮಾರ್ಗ ಹಿಂದೋಳ ......

ದೇವ ನೀನೆಬಲ್ಲೆ ಎನ್ನ ಶಪಥ
ಮರೆವೆ ಏಕೆ ಸರಿಯೆ ಬಿಡು ॥ ಪ ॥
ವೈರಿ ಕರ್ಣನ ಶಿರತರಿದಿಡದೆ
ಧರೆಯೊಳೀಗ ನಾನೆಂತು
ತನುವಂ ಧರಿಪೆ ಸಮರದಲಿ
ವಿನಾಶಂ ಗೊಳಿಪೆ ಪಾಪಾತ್ಮಕನ
ಕೌರವನ ಸಮಬಲವ ॥ ೧ ॥

## ದೃಶ್ಯ : ವಿದುರನ ಕುಟೀರ

**ವಿದುರ : ಹಾಡು** ರಾಗ : ನಾಗಗಾಂಧಾರ - ರೂಪಕತಾಳ

ಭಾಮೆ ರಮಣ
ಶಾಮಲ ಕಾಯ ಕೃಷ್ಣಾಶ್ರೀ ॥ ಪ ॥
ಮೌನೀಂದ್ರನುತನಾಮ
ಸಂಪೂರ್ಣ ಕಾಮ
ಮುನಿಕುಲ ಸೋಮ
ದಿತಿಸುತ ಭೀಮ ॥ ೧ ॥

ರಾಗ : ಅಭೇರಿ - ಆದಿತಾಳ

ರುಕ್ಮಿಣಿಲೋಲ ವಾರಿಜಮಾಲ
ವರಗುಣಶೀಲ
ವಸುದೇವಬಾಲ ॥ ೨ ॥

**ಅಥವಾ**

**ವಿದುರ : ಹಾಡು** ರಾಗ : ಚಕ್ರವಾಕ - ಆದಿತಾಳ

ಪದುಮನಾಭನೆ ನಿನ್ನ ಪದಕೆರಗಿದಸಯ್ಯ
ಪದುಳದಿಂದಲಿ ಸಲಹೋ ರಂಗಯ್ಯ ॥ ಪ ॥
ಏನಬೇಡಲಿ ನಿನ್ನ ದೀನದಯಾಕರ
ಮಾನಿತ ಮಾಧವ ಪಾಲಿಸು ದೇವ ॥ ಅ.ಪ. ॥
ಕ್ಷೀರವಾರಿಧಿಶಯನ ಕರುಣಾಭರಣ
ಕಮಲದಳ ನಯನ । ಲಕ್ಷ್ಮೀರಮಣಾ
ದರುಶನವಾನೀಡಯ್ಯ ರಂಗಯ್ಯ ತಾಮಸವೇ ಕೃಷ್ಣಾ ॥ ೧ ॥

**ವಿದುರ : ರಾಗಮಾಲಿಕೆ** ಆರಭಿ / ಗೌಳ

ಪ್ರಥಮವಂದನವಯ್ಯಾ ಪರಮಪುರುಷಾ
ದಶವಂದನವಯ್ಯಾ ದಶರಥರಾಮನಂ ಪೋಲ್ವ
ಶತವಂದನವಯ್ಯಾ ಶತಪತ್ರ ದಳನೇತ್ರ ಕೃಷ್ಣಾ
ಸಹಸ್ರ ವಂದವನಯ್ಯಾ ಸರಸಿಜಾಕ್ಷ

ಲಕ್ಷವಂದನವಯ್ಯಾ ಲಕ್ಷ್ಮೀರಮಣ
ಕೋಟಿ ವಂದನವಯ್ಯಾ ಕೋವಿದರರಸ
ಅನಂತ ವಂದನವಯ್ಯಾ ಆದಿಮಹಿತ ರಹಿತ ಕೃಷ್ಣ

**ವಿದುರ : ಕಂದ**

ಧರೆಯೋಳ್ ಅಮಿತ ಸಂಪದದಿಂ
ಮೆರೆಯುವಾ ಕುರುಭೂಪನೆಡೆಗೆ
ನೀನೈ ತಂದೂ
ಮುರಹರಿ ನೀ ನೀ ಪರಿ ಎನ್ನಂ ಕೇಳುತೇ
ಪರಿ ಪರಿಯಿಂ ಭಕ್ತನಂ ಶೋಧಿಪರೆ ||

**ಕೃಷ್ಣ : ಹಾಡು** **ರಾಗ : ಸಿಂಧುಭೈರವಿ - ಆದಿತಾಳ**

ಬಿಡು ಬಿಡು ಬಲ್ಲೆ ನಿನ್ನ ಯಮನವ
ಪೊಡವಿಯೊಳ್ ಭಕ್ತ ಶಿರೋಮಣಿ ನೀನೇ || ಪ ||
ಭಕ್ತಿಯ ಪಾಶದಿ ಚಿತ್ತವನೊಲಿಸಿದೆ
ಎತ್ತಪೋದರು ಮನ ಇತ್ತಲೆ ಬರ್ಪುದು || ಅ.ಪ. ||
ಭಕ್ತನೆಂದೆನಿಪನೆ ಮತ್ತಸುಯೋಧನ
ಭಕ್ತನೆ ನಿನಗಿಂತ ಉತ್ತಮನೆನಿಪನೆ || ೧ ||

**ದೃಶ್ಯ : ಕೌರವನ ದರ್ಬಾರ್**
**(ಧೃತರಾಷ್ಟ್ರ, ಭೀಷ್ಮ, ದ್ರೋಣ, ಅಶ್ವತ್ಥಾಮ, ವಿದುರ, ದುಶ್ಯಾಸನ ಮೊದಲಾದವರು ಆಸೀನರಾಗಿರುವರು)**

**ಎಲ್ಲರೂ : ಹಾಡು** **ರಾಗ : ಕಮಾಚ್ - ರೂಪಕತಾಳ**

ಭಾರತ ಕುಲವರ ಮಕುಟ
ಕುರು ಕುಲವನು ಪೊರೆವ ಜನಪ || ಪ ||
ಧರೆಯ ಪೊರೆವ ಶೂರ ದೊರೆಯೆ
ವರಕುರುಪತಿ ಅರಿಹರಣ ಪೆರಬಲದ

ಕರಿಯ ಹರಿಯೆ ನೀನು
ನೆರೆ ಮುದದೊಳು ಮೆರೆಯೊ ಜಯದೆ ॥ ೧ ॥

**ದುರ್ಯೋಧನ : ಹಾಡು** **ರಾಗ : ಕೇತಾರಗೌಳ - ರೂಪಕತಾಳ**

ಮೂಜಗವನು ಗೆಲ್ವಶೂರ
ಧೀರನಾಗಿ ಮೆರೆವೆ ಧರೆಯೊಳಗೆ
ಮನಕಾನಂದವನಾಂತೆ ನು ನಾ
ಮಾನಿತರೆ ನೆರೆ ॥ ೧ ॥
ಭುಜಬಲ ಪರಾಕ್ರಮದಿ
ತೇಜೋಬಲಯುತನಾಗಿ ಮೆರೆಯುವೆಡೆ
ಆದಿಯಲ್ಲಿಗೆಲ್ವರ ಕಾಣದೆ
ರಾಜಿಪ ಈ ಕೌರವೇಶ್ವರ ॥ ೨ ॥

**ಅಥವಾ**

**ದುರ್ಯೋಧನ : ಹಾಡು** **ರಾಗ : ಹಂಸಧ್ವನಿ - ಆದಿತಾಳ**

ಭಲಾ ಭಲಾ ಭರದಿ ಮೆರೆವೆ ಹರಿಕರುಣದಿ ನಿರತ
ಪರಮ ವಿಭವದಲಿ ॥ ಪ ॥
ವೀರ ಶೂರರಹ ದೇಶಾಧಿಪತಿಗಳು
ಭರದಲಿ ಮೆರೆದಿರೆ ವರ ಸೈನ್ಯದಲಿ
ಅಮೋಘವಾಂತು ಬೀರುವೆ
ಸರಸದಿ ಮೆರೆಯುವೆ ವಿಜಯದಲಿ ॥ ೧ ॥
ಕರದಲಿ ಕುಲಿಶವ ಪಿಡಿಯುತಲೀಗ
ದುರದಲಿ ದುರುಳರ ಶಿರ ಭೇಧಿಸುವೆ
ಪರಮ ಹರುಷ ಮೆರೆವೆ ಸತತ
ಪರಿಪರಿ ವಿಧದಲಿ ವಿರಾಜಿಸುವೆ ॥ ೨ ॥

**ಅಥವಾ**

**ದುರ್ಯೋಧನ : ಹಾಡು** **ರಾಗ : ಗಂಭೀರ ನಾಟಿ - ಆದಿತಾಳ**

ಭಳಿರೆ ಮೆರೆವೆ ಸುಖದಿ ಧರೆಯೊಳು
ಭಳಿರೆ ಮೆರೆವೆ ಸುಖದಿ ॥ ಪ ॥

ಭೀಷ್ಮ ದ್ರೋಣ ದುಶ್ಯಾಸನ ಶಕುನಿ
ವಿದುರ ಕರ್ಣರ ಬೆಂಬಲವೆನಗಿರೆ
ಬಾಳುತಲೀ ಸುಖಿಸುತಲೀ
ಕುರು ಕುಲದಿ ನಲಿಯುತಲಿ ॥ ೧ ॥

**ದುರ್ಯೋಧನ : ಕಂದ**

ಧುರದೊಳ್ ಪಾರ್ಥನ ಶಿರಮಂ
ಧರಣಿಗೆ ಉರುಳಿಪೆನೆನುತ ಶಪಥವನಾಂತು ಮ
ಹೇಶ್ವರನ ಕುವರನಂ ಮೆಚ್ಚಿಸಿ
ವರಚಾಪವನಾಂತ ನಿನಗೆ ಸಮಾರಾರಿಹರೈ

**ದುಶ್ಯಾಸನ : ಹಾಡು** ರಾಗ : ನಾಟಿಕುರಂಜಿ - ರೂಪಕತಾಳ

ಸಾಕೀ ನುಡಿ ಸೈರಿಸಲಾರೆನು ಮನದೊಳು ॥ ಪ ॥
ಎಚ್ಚರವಿಲ್ಲದೆ ತುಚ್ಛನಂದದಿ
ಹೆಚ್ಚು ಮಾತು ಬೊಗಳುತಿರ್ಪೆಯ
ದುಶ್ಚರಿತ ಬಹುಹುಚ್ಚ ನಂದದೀ ॥ ೧ ॥

**ದುರ್ಯೋಧನ : ಸಾಕಿ** ರಾಗ : ಅಠಾಣ - ಆದಿತಾಳ

ಕೊಡುವುದಿಲ್ಲವೋ ರಾಜ್ಯವ
ಕಡೆಯಮಾತಿದು ಮಾಧವ ॥ ಪ ॥
ಒಡೆಯಲೀ ಬ್ರಹ್ಮಾಂಡ ಬಿರಿಯಲಿ
ಘುಡುಘುಡಿಸಿ ಭೋರ್ಗರೆಯೆ ಜಲಗಳು
ನುಡಿದ ನುಡಿಯನು ದೃಡದಿ ಸಾದಿಪೆ
ಛಲ ಸುಯೋಧನನೆನುತ ಧರೆಯೊಳು ॥ ೧ ॥

**ಕೃಷ್ಣ : ಹಾಡು** ರಾಗ : ಸುರುಟಿ - ಆದಿತಾಳ

ಭಾರತ ಭೂಮೀಶ ಜೈಸೀದುರಾಶ ॥ ಪ ॥
[illegible] ವಿರಾಜಿಸುವ ಸಹೋದರರ

ನಿರಾಕರಿಸಿದಿರ್ಪೆ ॥ ಅ.ಪ. ॥
ಕರೆಸೀಗನೀ ಅನುಜಾತರ
ಧರೆಯನಿತ್ತು ಖ್ಯಾತಿ ಪಡೆ
ಸುಖಿಯಾಗುವೀರ ॥ ೧ ॥
ವೈರವನೆನೀಗಿ
ನೀ ಸ್ವೈರಣೆಯನು ತಾಳ್ವೈ
ಬಾಳ್ವೈ ಬಲು ಧರ್ಮನಿರುತ
ಸುಗುಣ ಚರಿತ ಕರುಣ ಭರಿತ
ವರಗುಣಯುತ ನೆನಿಸಿ ಪೊರೆ ಧರೆಯಾ ॥ ೨ ॥

(ಕೃಷ್ಣ ಹಾಗೂ ದುರ್ಯೋಧನರ ದ್ವಂದ್ವಗೀತೆ)

**ರಾಗ : ನೋಟ್ - ಆದಿತಾಳ**

**ಕೃಷ್ಣ :** ಖತಿ ಬೇಡ್ವೆ ಸುಯೋಧನನೆ
ತೋರೀಗ ಜ್ಞಾತಿಗಳೊಳ್ ಸ್ವೈರಣೆ

**ದುರ್ಯೋಧನ :** ಅದೇಕಿಂತು ಒದರುವೆ
ಅದೇ ಮಾತು ಬೊಗಳುವೆ
ಕುಲಹೀನ ಕುಲವ ಮರೆತೆಯಾ
ಧುರದೊಳು ಕಡಿಯದೆ ಬಿಡುವೆನೆ ?

**ಕೃಷ್ಣ :** [illegible]
ಚದುರರೊಳು ಮರುಳೆ
ಮಂದಮತಿಯಂತೆ
ಮುಂದನರಿಯದೆ ದಂದುಗವ ಪಡೆವೆ

**ದುರ್ಯೋಧನ :** ಛೀ ಸಾರು ನಾಸ್ವೈಸೇ
ಈ ನಿನ್ನ ಮೋಸ

**ಕೃಷ್ಣ :** ಸ್ವೈರಿಸಬಲ್ಲವವರಾರ್

**ದುರ್ಯೋಧನ :** ಪರಮ ಪುರುಷನೆನಿಪ ಬಿರುದನು [illegible]
ಅಡಗಿಪೆ ಕೆಡುಕನೆ

## ದೃಶ್ಯ : ರಸ್ತೆ

ಕೃಷ್ಣ : ಹಾಡು                ರಾಗ : ಮೋಹನ - ಆದಿತಾಳ

ಮಾತನು ಪ್ರೇಮದಿ ಆಲಿಸುವೀರ ॥ ಪ ॥
ಸುರುಚಿರ ಶರಧರ ಶರಣರ ಪೊರೆವನೆ ॥ ಅ.ಪ. ॥
ದಾನಶೂರನೀನಾಂತಿಹ ಬಿರುದ
ಮೆರೆಸೀಗಾ ನಿಜ ವರಗುಣಶೀಲ
ಪರಹಿತಪ್ರೇಮಿ ಸುಕೃತಗಾಮಿ ಬಾನಿಸ್ವಾಮಿ
ಪಾಂಡುಕುವರರಂ ಸೇರುತೆ ನೀನು
ಧರೆಯನು ಪೊರೆಯ್ಯೆ ಧರ್ಮದೊಳ್ ನಿರತ
ಅನುಜರ ಸೇರ್‍ಯೆ ಕರುಣೆಯ ತೋರ್‍ಯೆ ನೀ ಬಾರ್‍ಯೆ ॥ ೧ ॥

ಕರ್ಣ : ಹಾಡು                ರಾಗ : ನಾಟಿ ಕುರಂಜಿ - ಆದಿತಾಳ

ಪರಮಾತ್ಮ ಹರೇ  ಪಾವನ ನಾಮ ॥ ಪ ॥
ಪಾಮರನೊಳು ಕೃಪೆಯ ತೋರಿದೆಯ್ಯೆ ಸ್ವಾಮಿ ॥ ಅ.ಪ. ॥
ಇಳೆಯೊಳು ಜನ್ಮವ ಅರಿಯದ ಎನ್ನನು
ಶ್ರೀಲೋಲನೆ ಅತಿ ಪ್ರೇಮದಲಿ ಕಾಯ್ದೆ ॥ ೧ ॥
ಬಳಲಿದೆಯ್ಯೆ ಸ್ವಾಮಿ ತರಳನ ಆದರಿಸಲು
ಕುಲಗೋತ್ರವಿಲ್ಲದ ಮನುಜನ ಪಾಲಿಸಿದೆ
ದೇವ ದೇವನೆ ಭಕ್ತ ಬಾಂಧವನೆ ಸ್ವಾಮಿ ॥ ೨ ॥

ಕರ್ಣ : ಹಾಡು                ರಾಗ : ಹಿಂದೂಸ್ಥಾನಿಕಾಪಿ - ರೂಪಕತಾಳ

ಧನ್ಯನಾದೆ ನಾನೀಗ ದೇವ ಮಹಾನುಭಾವ ॥ ಪ ॥
ಮನುಮುನಿ ಪೂಜಿತಾಂಘ್ರಿ ಕಮಲವ
ಅನುದಿನ ನಂಬಿದೆ ನಿನ್ನ ನಾ ॥ ಅ.ಪ. ॥
ನಿಗಮಕೆ ಸಿಲುಕದ ಅಗಣಿತ ಮಹಿಮನೆ
ಜಗದೋದ್ಧಾರನೆ ನಿನ್ನಯ ಮಹಿಮೆಯ
ಪೊಗಳಲೇನಿಂದಹುದು ॥ ೧ ॥

ಕರ್ಣ : ವೃತ್ತ ರಾಗ : ಶಂಕರಾಭರಣ /ಹಿಂದೂಸ್ತಾನಿಕಾಪಿ

ಶ್ರೀರಮಣಂ
ಅಖಿಲ ಗುಣಗಣವಾರಿಧಿ ಸೋಮಂ
ಸಮಸ್ತ ಜಗದಾನಂದಂ
ವಾರಿಜಭವ ತಾತಾ ನೀಂ
ಧಾರಿಣಿಯೊಳ್ ನಿನಗೆ ನಾಂ
ಸಮನೆ ಕುಲಹೀನನು ನಾ

ಕರ್ಣ : ಕಂದ ರಾಗ : ಕಾನಡ

ಕೊಲಲೇ ಪಾಂಡು ಕುಮಾರರಂ ಕೊಲ್ಲಲೇ
ಧುರದೊಳು ನಾ ತಮ್ಮಂದಿರಂ ಕೊಲ್ಲುದೇ
ಕೊಲ್ವದಾಂ ಬಿಟ್ಟೊಡೆ ಕೌರವೇಂದ್ರ
ಈ ಧರೆಯೋಳ್ ಸಂಪತ್ತಿ ನಿಂ ಬಾಳ್ವನೇ
ಛಲದಿಂ ಪಾರ್ಥನ ರುಂಡಮಂ ತರಿದು
ಮತ್‌ಸ್ವಾಮಿಗೆ ಆನಂದಮಂ ನಲಿಸಲ್ಕಾಗದೆ
ಪಾರ್ಥನ ಘೋರ ಶರಕೆ ನಾಂ ತುತ್ತಾಗಲೇ ಸಾಯಲೆ

ದೃಶ್ಯ : ಗಂಗಾತೀರ
(ಕರ್ಣ ಮತ್ತು ಕುಂತಿ ಇರುವರು)

ಕರ್ಣ : ಶ್ಲೋಕ ರಾಗ : ಉದಯರಾಗ

ಸಪ್ತಾಶ್ವರಥಮಾರೂಢಂ ಪ್ರಚಂಡ ಕಶ್ಯಪಾತ್ಮಜಂ
ಶ್ವೇತ ಪದ್ಮಧರಂ ದೇವಂ ತಂ ಸೂರ್ಯಂ ಪ್ರಣಮಾಮ್ಯಹಂ

ಕುಂತಿ : ಹಾಡು ರಾಗ : ಭಾಗೇಶ್ವರಿ - ಆದಿತಾಳ

ಕಂದ ಬಾರಾ
ನಿನ್ನ ತಾಯಿ ನಾನೇನಯ್ಯ
ಈ ಜೀವ ನಿನಗಾಗಿಯೆ

ನಿನ್ನ ನೋಡಲೆಂದು
ಪರಿತಪಿಸಿ ನಾ ಬಂದೆನು ॥
ಮುನಿಮಂತ್ರದೆ ಪಡೆದೆ ನಿನ್ನ
ಲೋಕಪವಾದಕೆ ನದಿಯೊಳೆಸೆದೆನಾ
ಕಣ್ಣೀರಿನಾ ಆರಾಧನೆ
ಈ ಜೀವದ ಆ ವೇದನೆ ॥

**ಕರ್ಣ : ಕಂದ** ರಾಗ : ಕಾನಡ / ಭೈರವಿ

ನುಡಿದುದ ನಡೆಯಿಸಲಾರದ
ಕಡುಖೂಳನೆ ಈ ಕರ್ಣ
ಪೇಳ್ ಸೂರ್ಯ ತನುಜಂ
ಬಿಡುಬಿಡು ಚಿಂತೆಯ ಮಾತೆಯೆ
ನಡೆಯಿಸುವೇಂ ಧರ್ಮದಾಣೆ
ಮತ್ ಪಿತನಾಣೆ ಜನನೀ

**ಕರ್ಣ : ಕಂದ**

ಧುರದೊಳ್ ದುರ್ಜಟಿಯದರ್ಪವಂ
ಮುರಿಯುವ ಶೌರ್ಯ
ಪ್ರತಾಪಂಗಳೇಂ ಸಿರಿಯುಂ
ವೈಭವದಿಂ ಮಹೇಂದ್ರಪದಂ ಮೇಳೈಸುವಂತಿರ್ದೊಡೆ
ನರ ದೇವತ್ ಬೆರಗಾಗುವೋಲ್ ಗುಣಗಣ ಪ್ರಖ್ಯಾತಿ ಮೇಣಿನಿತಿರ್ದೊಡಂ
ಧರೆ ಫಲ ಕೀರ್ತಿಗಳ ಪೊರೆಯವೇ
ದೈವಾನು ಕೂಲಂ ಯಿಲ್ಲಲ್

**ಕರ್ಣ : ಹಾಡು** ರಾಗ : ಅಭೇರಿ - ಆದಿತಾಳ

ವಿಧಿ ಲೀಲೆಯು ತಾ ವಿಧವಿಧ ಮಾದುದೆ
ಮುಂದುಗಾಣದೆ ನಾನು ಆರ್ತನಂತಾದೆನು ॥ ಪ ॥

ದಾತನ ಸೇವೆಯ ಪ್ರೀತಿಯಿಂ ಮಾಡಲೆ
ಮಾತೆಯ ಭೀಷ್ಟದಿ ಅನುಜರನುಳಿಸಲೆ ॥ ೧ ॥
ಸೂತನಾಗಿರದೆ ನಾ ಏತಕ್ಕಿಂತಾದೆನೋ ವಿಧಿ
ಏತರ ಜನ್ಮವು ಈತರವಾದುದೆ ॥ ೨ ॥

## ದೃಶ್ಯ : ಯುದ್ಧ

**ವೃಷಕೇತು : ಹಾಡು** **ರಾಗ : ಗಂಭೀರನಾಟಿ - ಆದಿತಾಳ**

ದುರುಳರು ಎಲ್ಲ ಹರೀಗ
ತಂದೆಯ ಶಿರವನು ಕಡಿದ ॥ ಪ ॥
ಪಾತಕಿ ಶಿರವನು ಘಾತಿಸುತ್ತಲಿ
ಭೂತಗಣಂಗಳಿಗೌತಣವ
ಪ್ರೀತಿಸುವಂದದಿ ಮಾಡಿಸುವೆನು ನಾಂ
ಮಾತೆಯ ಮನದಳಲ ನೀಗಿಸುವೆ ॥ ೧ ॥

**ಸೋಮಪ್ರಭೆ : ಹಾಡು** **ರಾಗ : ದೇಶ್ /ಭೈರವಿ - ಆದಿತಾಳ**

ಹಾ ಪ್ರಿಯಾ ಪ್ರಶಾಂತ ಹೃದಯಾ ಹಾನಿ ಹೊಂದಿದೆಯಾ
ಏನಿಗೈದೆ ಪ್ರಾಣಕಾಂತ ಹಾನಿ ಹೊಂದಿದೆಯಾ
ಅರಸಿಯನ್ನು ಮರೆತು ನೀ ತೊರೆದು ಪೋದೆಯಾ

**ಎಲ್ಲರೂ : ಹಾಡು**

ಜಯ ಜಯ ಯದುವರ
ಜಯ ರಮಾರಮಣ
ಭೂದಯಾಕರ ಪಾಲಿತ ಮಹಿಸುರ
ಜನಪತಿ ಪರಿವೃತ ಕೃಷ್ಣರಾಜವರ ॥ ಪ ॥
ಮೌನಿ ಪುಂಗವ ಮಾನಸ ವಿತರಣ
ಶರಣ ವಿನುತ ಜನಮಂಡಲೋದ್ಧರಣ ॥ ೧ ॥

## ಮಂಗಳ

ರಾಗ : .......

ಮಂಗಳ ರೂಪ ಮಹಿಮಕಲಾಪ
ನಾರದ ನುತಿಪ ಜ್ಞಾನದೀಪ
ಪಾವನ ಚರಣ ಕರುಣಾಭರಣ
ಪೊರೆ ಗುರುವಿಮಲ ಪಾಡುವೆ ಮಂಗಳ



# ಶ್ರೀಕೃಷ್ಣಲೀಲೆ


ಕರ್ನಾಟಕ ನಾಟಕ ಪಿತಾಮಹ
**ಬೆಳ್ಳಾವೆ ನರಹರಿಶಾಸ್ತ್ರಿಗಳು**


ನಾಟಕರತ್ನ
**ಗುಬ್ಬಿ ವೀರಣ್ಣನವರು**

**ಪ್ರಾರ್ಥನೆ : ಹಾಡು** **ರಾಗ : ಹಿಂದೂಸ್ಥಾನಿಕಾಪಿ - ಆದಿತಾಳ**

ಶ್ರೀಶಿವಸುತ ಸೌಖ್ಯದಾತ
ಲೋಕಾಧೀಶ ಸಲಹೊನಮಿಪೆವು ॥ ಪ ॥
ಪಾಹಿದಿವಿಜನುತ ಪಾಲಿಸು ಚರಿತ
ಘನಭರಿತ ಭವರಹಿತ ಭುವಿನುತ ॥ ಅ.ಪ. ।
ಪರಮ ದಯಾಕರ ಪೊರೆಯೈ ಸಕಲ
ಗುಣಭರಿತ ತವಭರಿತ ಭುವಿನುತ ॥ ೧ ॥

**ಸೂತ್ರಧಾರ : ವೃತ್ತ ॥** **ರಾಗ : ನಾಟಿ**

ಶ್ರೀವಿದ್ಯಾಧರ ಕಿನ್ನರಾಮರ ಶಿರೋರತ್ನ ಪ್ರಭಾ ನಿರ್ಝರೀ ।
ಭಾವಜ್ಞಾಂಬುರುಹಾಯಿತಾಂಘ್ರಿಯುಗಳಂ ಲೋಕಾವನೋದ್ಯತ್ಕಳಾ ॥
ಪ್ರಾವೀಣ್ಯಂ ಜಗದೇಕಮೋಹನ ವಿಲಾಸಾನಂದ ಲೀಲಾಮಯಂ ।
ದೇವಂ ಮಂಗಳಮಿಾಗೆ ನಮ್ಮೊಳನಿಶಂ ಶ್ರೀದೇವಕೀನಂದನಂ ॥

**ಸೂತ್ರಧಾರ : ಹಾಡು** **ರಾಗ : ಕಲ್ಯಾಣಿ - ಆದಿತಾಳ**

ಕಮಲಾವಿಲಾಸಾಕರ । ಸದಾ ಸುಲೀಲಾ । ವಿಲೋಲ । ಪರಿಪಾಹಿದೇವ ॥ ಪ ॥
ಕಮಲಾಯತಾಕ್ಷ । ಕಮಲಾಸನಾದಿ । ಸಮನೋಮಕುಟ ।
ಸುಮಪೂಜಿತಪಾದ ॥ ಅ.ಪ. ॥

ಲೋಕಪಾಲನೈ ಕಪಿಲ ಶ್ರೀಕರೋಜ್ವಲ ॥
ಶೋಕಹರಣ । ನಾಕಿಭರಣ । ಪ್ರಾಕಟಕರುಣಾ ।
ಪ್ರಾಕಾರಾತಿ ಪೂಜಿತಚರಣ ॥ ೨ ॥

**ಬ್ರಹ್ಮ: ಹಾಡು** ರಾಗ : ಜಂಜೂಟಿ - ಆದಿತಾಳ

ವನವಾರಿಜಾತ ಲೋಚನ । ವಾಸುಕೀ ಶಯನ ॥ ಪ ॥
ಕರುಣಾ । ಕರಶ್ರೀ । ತ್ರಿಗುಣೀ । ರಮಣಾ ॥ ಅ.ಪ. ॥
ಸುರಜಾಲ ಭೀತಿ । ಕರರಾಗದಾನ । ವರ ಬಾಧೆಯಿಂದ ।
ಪೊರೆ ಲೋಕತತಿಯ ॥ ೧ ॥
ದುರಿತಪರಂ । ಪರೆಯ ಕರಂ । ವಿರಚಿಪರಂ ।
ಹರಿಸುತೆ ನೀಂ । ಪಾಲಿಸೈ ದೇವ ॥ ೨ ॥
ಸುರ । ಮೌನಿಭೂಸರರ । ಮಾನಪ್ರಾಣಗಳ ।
ಹಾನಿಗೈದು ಖಳ । ದಾನವರು ॥ ಜ್ಞಾನ ಗುಣ ದಯಾ ।
ಹೀನರಾಗಿರುವ । ದಾನವಾಸುರರ । ನೀನುರೆ ಪೊರೆ ॥ ೩ ॥

**ದೃಶ್ಯ : ಮಧುರಾಪುರದ ರಾಜವೀದಿ**

**(ಕಂಸಾಸುರನು ವಸುದೇವ ದೇವಕಿಯರನ್ನು ರಥದಲ್ಲಿ ರಥದಲ್ಲಿ ಕುಳ್ಳಿರಿಸಿ ಪ್ರವೇಶಿಸುವನು)**

**ಕಂಸ: ಹಾಡು** ರಾಗ : ಬೇಗಡೆ - ಅಟ್ಟತಾಳ / ಚಾಪು

ಎಂತು ರಂಜಿಪರು । ದಂಪತಿಗಳಿವರು ॥ ಪ ॥
ಕಂತು ವರರತಿ । ಕಾಂತೆಯರು ಮಿಗೆ । ಪಡೆ ಬೀರುತ ।
ನಂತ ಕಾಂತಿಯನೆಂತು ॥ ಅ.ಪ. ॥
ಪರಮಸಂತೋಷವನು ಬೀರುವ । ದರಹಾಸನವಾನನದ ಮಿಗಿದಿರೆ ।
ಪರಿಣಯದಕಳೆ ತುಳುಕಿ ರಾಜಿಸೆ । ನಿರತಿಶಯ ಸೌಭಾಗ್ಯ ಭಾಗ್ಯದರೆಂತು ॥ ೧ ॥
ಮದಿಸಿದ್ಯೆರಾವತವನೇರಿದ । ತ್ರಿದಶವಲ್ಲಭ ಶಚಿಯರಂದದಿ । ಮುದದಿ
ಮಣಿರಥವೇರಿ ದೇವಕಿ । ಸುದತಿ ವಸುದೇವರು ಮನೋಹರರೆಂತು ॥ ೨ ॥

**ಕಂಸ : ಕಂದ**

ಅದಿರೆ ಧರಾಮಂಡಲಮಿಾ ।
ಪದಹತಿಯಿಂ ಕೆದರಿ ಪೌರುಷವ ದಿಕ್ತಟದೊಳ್ ॥
ತ್ರಿದಶಾಳಿ ಧ್ವಂಸಕನೆನಿ ।
ಸಿದ ಕಂಸಂಗರರೆ ಮೃತ್ಯುವಿದಿರ್ವಂದಪುದೇ ॥

**ಕಂಸ : ಹಾಡು** **ರಾಗ : ಕಾನಡ - ಆದಿತಾಳ**

ನುಡಿವುದು ಘಡ ಪಟುಕಟುವಾಣಿಯು । ಕಡಿವೆ ರಿಪುವ ಖಡ್ಗಪಾಣಿಯು ॥ ಪ ॥
ಪದದೆ ಧರಣಿಯ । ನ್ನೊದೆಯುತದಿರಿಸುತೆ । ತ್ರಿದಶರೆದೆಗಳಂ ಸೀಳಿಡುವೆನು
ನಾಂ ॥ ದದಾವಲಂ । ವಧಾರ್ಹರಂ । ಮದಾಂಧರಂ । ವಿದಾರಿಪೆ ॥ ೧ ॥
ಹುಡುಗನಿಂದೆ ನಾಂ । ಮಡಿವೆನೆಂಬುದು । ಕಡು ಕುಚೋದ್ಯವೇಂ ।
ನುಡಿದವೆನಹಹಾ ॥ ಜಡಾತ್ಮರಂ । ಕಡಂಗಿ ಕೊಂ । ದಿಡುತ್ತೆಸಾ । ನಡಂಗಿಪೆಂ ॥ ೨ ॥

**ವಸುದೇವ : ಕಂದ**

ಇಂದಪರಿಮಿತಾನಂದದೆ ।
ನಿಂದಿರ್ಪೀ ಬಂಧುಜಾಲ ದೀಸುಂದರಿಯಂ ॥
ಕೊಂದಿಡಲೆಳಸಿಹುದುಚಿತಮೆ ।
ಕುಂದಲ್ಲವೆ ಭೂಪ ನಿನಗೆ ನಾರೀಹತ್ಯಂ ॥

**ದೇವಕಿ : ಹಾಡು** **ರಾಗ : ದೇಶಿತೋಡಿ - ಆದಿತಾಳ**

ಪಾಲಿಸು । ಪರಿಪಾಲಿಸು । ನಿಜಸಹಜೆಯ ನೀಂ ॥ ಪ ॥
ಅವರಾ । ಧವದೇ ನರುಹೈ । ಲಾಲಿಸು ಮೊರೆಯ ಸಹಜಾತಾ
ಪರಿಪಾಲಿಸು ॥ ಅ.ಪ. ॥
ಹಿತದಿಂದಲಿ ಪೊರೆ । ದತಿಸುಖದಿಂ । ಪ್ರೀತಿಸಿ । ಕೊಲ್ವರೇ ।
ಸುತಾಭಿಮಾನದೆ । ಖತಿಗೊಳೆದೆಲೆ ಸಹಜಾತಾ ॥ ೧ ॥
ಶುಭಕಾಲದಘನ । ವಿಭವವನು । ನೋಡದೆ । ಕಾಡುವೆ ।
ಅಭೀತಿಯ ನೀಡು ನೀಂ । ಪ್ರಭುರ ಪ್ರಿಯಸಹಜಾತಾ ॥ ೨ ॥

**ವಸುದೇವ : ಹಾಡು** **ರಾಗ : ಮುಖಾರಿ - ಆದಿತಾಳ**

ಜನನಾಥನೇ । ಪೊರೆ । ದಯಾಳು । ವನಜಾಕ್ಷಿಯ ಶಾಂತಿಯುನಾಂತು ॥ ಪ ॥
ನೂತನ ವಿವಾಹ । ಪ್ರಾತಳಾದಿವಳ । ಘಾತಿಸುವರೇ ನೀತಿಕೋವಿದನೇ ॥ ಅ.ಪ. ॥
ಅಂದದಿಂ ಘನಾ । ನಂದವಾಂತು ಬಂದು । ಸಂಧಿಸಿರ್ಪ ನಾನಾ ।
ಬಂಧುಜಾಲದಲ್ಲಿ । ಸುಂದರಿಯನಿಂತು । ಮುಂದು ತೋರದಂತೆ ।
ಕೊಂದಿಡುವರೇ । ಸಾಂದ್ರಾನುರಾಗ ॥ ೧ ॥
ಖಾತಿ ಮೀರಲೀ । ರೀತಿಯಿಂದ ಸಹ । ಜಾತೆಯಲ್ಲಿ ನಿನ್ನ ।
ಪ್ರೀತಿ ನೀಗುವರೇ । ಖ್ಯಾತಿನೀಗುತವ । ಖ್ಯಾತಿತಾಳುವರೇ ।
ಮಾತಲಾಲಿಸಿಂದು । ಭೂತಲಾಧಿನಾಥಾ ॥ ೨ ॥

**ವಸುದೇವ : ಕಂದ**

ಈ ಶಶಿಮುಖಿಯುದರದೆ ಜನಿ ।
ಪಾ ಶಿಶುಗಳನೊಂದನುಳಿಯದಾಂ ನಿನ್ನಡಿಯೊಳ್ ॥
ಲೇಶಾನುಮಾನಮಿಲ್ಲದೆ ।
ಆಶೆಯತೊರೆದರ್ಪಿಪೆಂ ಪ್ರಮಾಣಮಿದರಸಾ ॥

**ವಸುದೇವ : ಹಾಡು** **ರಾಗ : ರಾಮಪ್ರಿಯ - ರೂಪಕತಾಳ**

ದಾನವಕುಲ ತಿಲಕ ಕೇಳು । ದೀನಾಳಿಪಾಲ ॥ ಪ ॥
ಮಾನನೀಯಸುಗುಣ ನೀಂ । ಮನ್ನಿಸೈ ಮಹಾನುಭಾವ ॥ ಅ .ಪ. ॥
ಸುಖಕಾಲದಲ್ಲಿ ಯಿಂತು । ಶೋಕವೀಯೆ ತರವೆ ಪೇಳು ।
ಸಕಲವನ್ನು ಬಲ್ಲ ನೀನು । ಪ್ರಕಟಿಸೈ ಸುಪ್ರೀತಿಯುಂ ॥ ೧ ॥
ಅಕುಟಿಲಭಾವದೊಳು ನಿನ್ನ । ನಾದರದಿಂ ಬೇಳ್ಪೆವಿಂದು ।
ಶುಕವಾಣಿಯ ಸುತರನೆಲ್ಲ । ಶೂರನೇ ಸಮರ್ಪಿಸುವೆ ॥ ೨ ॥

**ದೃಶ್ಯ : ಅರಮನೆಯ ಮುಂಭಾಗ**

**ಕಂಸ : ಹಾಡು** **ರಾಗ : ನೋಟ್ - ಏಕತಾಳ**

ತಳೆದೆ ಮುದವ । ಕಳೆದೆ ಮನಸಿ । ನಳಲನಿಂದು ನಾಂ ॥ ಪ ॥
ಛಲವನಿಡುವೆ । ಬಲಿಯ ಕೊಡುವೆ । ಖಳಶಿಶುಗಳನು ॥ ಅ.ಪ. ॥

ಜಗದಧಿಪರ । ಜಿಗಿದು ಪೊಡೆಯು । ಸಿಗವ ನನ್ನೊಳು ತಾಂ ॥
ಗಗನವಾಣಿಯು । ಬೊಗಳಿದಪರಿ । ಪಗೆಗಳಾರಿಹರು ॥ ೧ ॥
ಸುದತಿದೇವಕಿ । ಗುದಿಸುವವೆಂ । ಬಧಮತಿಸುಗಳ ।
ವಧಿಸುತವರ । ರುಧಿರ ಚೆಲ್ಲುತ್ತ । ಹೃದಯದಿ ನಲಿವೆ ॥ ೨ ॥

## ದೃಶ್ಯ : ಕಾರಾಗೃಹ
(ವಸುದೇವ ದೇವಕಿಯರು ದುಃಖಿಸುತ್ತಿರುವರು )

**ವಸುದೇವ : ಹಾಡು** **ರಾಗ : ಮುಖಾರಿ - ರೂಪಕತಾಳ**

ಸಹಿಪೆನೆಂತೀ ವ್ಯಥೆಯಂ । ಅಹಿಪತಿಶಯನಾ ನಾಂ ॥ ಪ ॥
ಬಹುಪುತ್ರಶೋಕದಿಂ । ದಹಿಸಿತೀಮಾನಸವು ।
ಮಹಿಯೊಳೆಮ್ಮಂತೆ ಮಹಾ । ಪಾಪಿಗಳಿರ್ಪ್ಪರೇ ॥ ಅ.ಪ ॥
ಕರಿವರ ವರದ ನೀಂ । ಗತಿಯೆಂದು ನಂಬಿದೆವು ।
ಕರುಣದೆಮ್ಮ ಕಷ್ಟವಂ । ನೆರೆ ನೋಡಿ ನಮಗೆ ॥
ಶಾಂತಿಯನೆ ಪಾಲಿಸಿ । ಕಂತುಜನಕಾ ದೇವ ।
ಭ್ರಾಂತರಾದ ನಮ್ಮೊಳು । ಸಂತೋಷವ ನೀಡ್ವೆ ॥ ೧ ॥

**ದೇವಕಿ : ಕಂದ**

ಆಪದ್ಬಾಂಧವನೆನಿಸುತೆ ।
ತಾಪವ ಪರಿಹರಿಸಿ ವಿನತಭಕ್ತಾವಳಿಯಂ ॥
ಕಾಪಾಡುವ ಮಾಧವ ಕರು ।
ಣಾಪಾಂಗವನೇಕೆ ಬೀರದಿರ್ದಪೆ ನಮ್ಮೊಳ್ ॥

**ದೇವಕಿ : ಹಾಡು** **ರಾಗ : ಅಸಾವೇರಿ - ಆದಿತಾಳ**

ಸಹಿಸುವೆನದೆಂತು । ಮನೋವ್ಯಥೆಯಂ ॥ ಪ ॥
[illegible] ರಮಾಧೀಶಾ । ತೋರಿಸು ಕೃಪೆಯನು । ಕ್ರೂರಕಂಸನಿಂ ।
[illegible]ಂತು । ಚೇರುತ್ತಿರುವೆನ್ನ । ನೀರಜನಯನಾ ।
ಪರಮದಯಾಕರಾ । ಪಾಲಿಸುಪಾವನನೇ ॥ ೧ ॥

ಪಾಪನಿವಾರ । ಕೋಪವೇಂ ಭಕ್ತರೊಳು । ತಾಪವಾರಿಸಿ ।
ಶ್ರೀಪರಮೇಶ । ತಾಪಸವಿನುತಾ । ಶ್ರೀಪತಿ ಸುಖದಂ ।
ಕಾಪಾಡೈ ನತ । ಕಾಮಿತದಾತ ಹರೀ ॥ ೨ ॥

**ಇಬ್ಬರೂ : ಹಾಡು** **ರಾಗ : ಶುದ್ಧಸಾವೇರಿ - ಆದಿತಾಳ**

ವಂದೇ ಶ್ರೀಕಮಲಾಪತೇ । ಸುಂದರ ಮೂರ್ತೇ ॥ ಪ ॥
ಚಂದ್ರಿಕಾಸಮ ಮಂದಹಾಸ । ಸಾಂದ್ರ ಲೀಲಾನಂದಭಾಸ ॥
ಚಂದ್ರದಿವ್ಯಾದಿತ್ಯ ನೇತ್ರ । ಇಂದ್ರನುತ್ಯ ಶ್ಯಾಮಗಾತ್ರ ॥ ೧ ॥
ಮಂಗಳಾತ್ಮಕ ಸಂಗದೂರ । ತುಂಗಲೋಲಾಪಾಂಗಲೀಲಾ ।
ಭಂಗಹೀನಾಕಾರ ದೇಹಿ । ಮಂಗಳಂ ಶ್ರೀವಿಶ್ವರೂಪ ॥ ೨ ॥
ಪಾದಸೇವಕ ಮೋದದಾತ । ಶ್ರೀಧರಾ ದಾಮೋದರಾಂಕ ।
ಸಾಧುಜಾಲಾಮರ್ತ್ಯದಿವ್ಯ । ಪಾದಪ ನೃಹರೇ ತವಚರಣೌ ॥ ೩ ॥

**(ದೇವಕಿ ಮತ್ತು ವಸುದೇವರ ಯುಗಳ ಗೀತೆ)**

**ರಾಗ : ಕಾವಡಿ ಚಂದು - ಏಕತಾಳ**

**ದೇವಕಿ :** ಕಮಲದಳಾಯತನೇತ್ರಾ ವರ । ಸುಮಶರಸಮ ಶುಭಗಾತ್ರ ॥ ಪ ॥
ಹಿಮಕರಕಾಂತಿ ಸುಹಾಸ ರುಚಿರ ಮುಖ । ಬಾಲಾ ।
ಪ್ರಿಯಬಾಲಾ ॥ ಅ.ಪ. ॥

**ವಸುದೇವ :** ಯದುಕುಲ ರಂಜನ ಬಾಲಾ । ಜನ । ಹೃದಯವಿನೋದವಿಶಾಲಾ ॥
ಸದಮಲಗುಣಮಣಿಹಾರ ಮನೋಹರ ಬಾಲಾ । ಪ್ರಿಯಬಾಲಾ ॥ ೧ ॥

**ದೇವಕಿ :** ರವಿಶಶಿ ಸಮರುಚಿ ಕಾಯಾ । ದಿವ್ಯ । ಘನ ಜಲಧರ ಸಮಛಾಯಾ ॥
ದಿವಿಜವಿನುತಗುಣ । ದೀನಶುಭೋದಯ । ಬಾಲಾಪ್ರಿಯ । ಬಾಲಾ ॥ ೨ ॥

**ದೃಶ್ಯ : ಗೋಕುಲಕ್ಕೆ ಹೋಗುವ ಮಾರ್ಗ**
**(ಶಿಶುವಿನೊಡನೆ ವಸುದೇವನ ಪ್ರವೇಶ)**

**ವಸುದೇವ : ಹಾಡು** **ರಾಗ : ಕಲ್ಯಾಣಿ - ಆದಿತಾಳ**

ಪಾವನೆ । ಪಾಪರಾಶಿದಮನೇ ಶ್ರೀಯಮುನೇ । ಪಯೋನಿಧಿಗಮನೆ ನೀಂ ॥ ಪ ॥
ವಿಮಲ ಶೀತಳ ಸುಧಾಮನೋಹರೇ । ಅಮರನಿಕರ ನುತ ಸುಮಹಿಮಾಕರೇ ॥

ಯಮಿಸೇವಿತೆ ನತ । ವಿಮಲೀಕರಣೇ । ನಮಿಪೆ ಪಥವ ಕುಡು ನೀಂ ॥ ೧ ॥
ಕಲಮರಾಳಿಕಾ ವಿಲಾಸಮಂದಿರೆ । ನಳಿನ ಪುಳಿನ ನವಕುಮುದ ಸುಂದರೀ ।
ಕಲಕೂಜಿತ ಖಗಕುಲ ಬಂಧುರೆ ಶ್ರೀ । ಜಲಜಬಾಂಧವನ ನಂದನೆ ವಂದನೆ ॥೨॥

## ದೃಶ್ಯ : ಸೂತಿಕಾ ಗೃಹದ ಮುಂಭಾಗ

**ವಸುದೇವ : ಕಂದ**

ಒದಗಿರೆ ದೈವಾನುಗ್ರಹ ।
ಮಿದಿರೊಳ್ ಬರ್ಪಖಿಲ ಕಷ್ಟತತಿ ಪರಮ ಸುಖಾ ॥
ಸ್ಪದಮಪ್ಪುದಲ್ತೆ ದಿನಕರ ।
ನುದಯುದೆ ಹಿಮರಾಶಿ ಮಾಯವಾಗುವ ತೆರದಿಂ ॥

**ವಸುದೇವ : ಹಾಡು** **ರಾಗ : ಜಂಜೂಟಿ - ಆದಿತಾಳ**

ಕಮಲಾಪ್ರಿಯ । ದೇವದಯಾನಿಲಯಾ ॥ ಪ ॥
ಅಘಟನಘಟನಾ । ಮಘವದುವಾಸಿತ । ಸುಘನಸಮಾಂಗ ಹರೀ ॥ ೧ ॥
ನಿಶಿಯೊಳಗಿಂತು । ಶಿಶುವಪ್ಪೋಲೆನ್ನ । ವಶನು ನೀನಾದೆಯಲಾ ॥ ೨ ॥
ಲಹರಿಯ ದಾಂಟಿ । ಮಹಿತಶಿಶುವ ತಂದೆ । ನೃಹರಿ ನಿನ್ನಯ ದಯದಿ ॥ ೩ ॥

## ದೃಶ್ಯ : ಕಂಸನ ಶಯ್ಯಾಗೃಹ

**ಕಂಸ : ಕಂದ** **ರಾಗ : ಮೋಹನ / ಅಠಾಣ**

ಹರಿಪೀಠದೊಳೆಸೆದಿರೆ ನಾಂ ।
ತರಳಂ ಬಂದೊರ್ವನೆನ್ನ ನೊದೆದುರುಳಿಸುತುಂ ॥
ಚರಣದೊಳೆದೆಯಂ ಮೆಟ್ಟಿರೆ ।
ಮರಣಾವಸ್ಥೆಯನೆ ತಳೆದು ಕಂಪಿಸುತಿರ್ದೆಂ ॥

**ಕಂಸ : ಹಾಡು** **ರಾಗ : ಹಂಸಧ್ವನಿ - ಆದಿತಾಳ**

ಫಡಫಡ ಕೆಡುಗನ । ಪಿಡಿಯುತ ಕೊಲ್ವೆ ॥ ಪ ॥
ಬುಡುಕಿನ ಹುಡುಗನ । ಪೊಡೆಯುನು ಸೀಳ್ವೆ ॥ ಅ.ಪ. ॥

ಖಳನೆತ್ತಪಾರಿದ । ಬಳಸುತ್ತೆಹಾರಿದ । ತಳದೆತ್ತಿ । ಸಲೆಕತ್ತಿ ।
ಯೊಳು ಕುತ್ತಿಕೊಲ್ವೆನು ॥ ೧ ॥
ಮದಿಸಿದ ದುಷ್ಟನ । ಪದದೊದ್ದು ಭ್ರಷ್ಟನ ।
ಎದೆಮೆಟ್ಟಿ । ನಡೆಗುಟ್ಟಿ । ವದೆದಟ್ಟ ಹಾಸದಿ ॥ ೨ ॥
ಪರಿದಟ್ಟಿ ಕೆಡುಗನ । ಗುರಿಯಿಟ್ಟು ಹುಡುಗನ ।
ಶರದಿಟ್ಟು । ತರಿದೊಟ್ಟಿ । ನೆರೆಸುಟ್ಟು ಬಿಡುವೆನಾಂ ॥ ೩ ॥

**ಕಂಸ : ಹಾಡು** — **ರಾಗ : ಬೇಹಾಗ್ - ಆದಿತಾಳ**

ಭಲಭಲ ಜನಿಸಿದ । ಮಗುವನು ಪಿಡಿವೆ । ಉಗುರಲಿ ಕಡಿವೆ । ಸೊಗವನು ಪಡೆವೆ ॥
ತಳೆದಿಹ ಛಲವದು । ಫಲಿಪ ಶಕುನಮಿದು । ನಲಿಯುತೆ ತಳರುವೆ । ಬಲುಮುದದಿ ॥
ನುಡಿಯುತೆ । ನಡೆಯುತೆ । ಕಡುಗಲಿದೈತ್ಯನು । ಪೊಡವಿಯ ನಡುಗಿಪೆ ಗಡ
ಕೃತಕೃತ್ಯನು ॥
ಮೃಡ ಹರಿ ವಿಧಿಗಳು । ತಡೆದರೆ ನಾನು । ಕಡಿಯದೆ ಬಿಡುವೆಹೆ । ಖಳಶಿಶುವ ॥ ೨ ॥

## ದೃಶ್ಯ : ಕಾರಾಗೃಹ

**ಕಂಸ : ವೃತ್ತ ॥** — **ರಾಗ : ನಾಟಿ**

ಪಿಡಿವೆಂ ಧೂರ್ತೆಯ ಗರ್ಭದರ್ಭಕನ ನಾಂ ನಿರ್ಭೀತಿಯಿಂದಿಂದು ಕಾಣಂ ।
ದಿಡುವೆಂ ಮೇಣಶರೀರವಾಣಿ ಯೊರೆದಾ ವೃತ್ತಾಂತಮಂ ಸಾನ್ವಗಂ ॥
ದೆಡೆಗೈವೆಂ ಪುಡಿಗೈವೆನಾ ರಿಪುಗಳಂ ತ್ರೈಲೋಕ್ಯ ವಿಖ್ಯಾತಿಯಿಂ ।
ಪಡೆವೆಂ ಸರ್ವಸುಪರ್ವ ರೈಸಿರಿಯನಾ ನಾಕರ್ಷಿಸಿಂ ಹರ್ಷದಿಂ ॥

**ವಸುದೇವ : ಕಂದ**

ತಡೆ ತಡೆ ಈ ಕ್ರೋಧವನೀಂ ।
ದುಡುಕಿದಿರೈ ಕಂಸ ಭೂಮಿಪಾಲಕ ಹಂಸಾ ॥
ಅಡಿಗೆರಗುವೆನೀ ದೇವಕಿ ।
ಪಡೆದೀ ಶಿಶು ಪುತ್ರನಲು ಪುತ್ರಿಯಿದರಸಾ ॥

ದೇವಕಿ : ಹಾಡು ರಾಗ : ದೇಶಿತೋಡಿ - ಏಕತಾಳ

ಕರುಣಿಸೋ ಕಂಸಭೂಮಿಪವರಾ । ಉದರಾ ದೀನಮಂದಾರ ॥ ಪ ॥
ಧರೇಂದ್ರಾಧೀಶ ಆಕ್ರೋಶವಿದಿಂತು ಸಲ್ಲದೈ ಧೀರಾ ಗಭೀರ ॥ ಅ. ಪ. ॥
ಶೂರಕುಲನಾಥಾ ಸಮಸ್ತಲೋಕ ವಿಖ್ಯಾತ । ಸುನೀತ ॥
ಕ್ರೂರತನದಿಂದೀ ಮಗುವನೀ ಮೇರೆ ಸೆಳೆಯುವರೆ । ಕೊಲುವರೇ ॥ ೧ ॥
ಮಗುವಿದು । ಬಾಲನಲ್ಲಪ್ಪೋ । ಮೃಗಾಂಕ ಮುಖಿಯು ಪೇಳುತಿಯು
ಅಗಾಧ । ಕೋಪಮಂ ಬಿಡುತೀ ಮೊರೆಯನು ಭೂಪ ನೀಂ ಕೇಳು
ದಯಾಳು ॥ ೨ ॥

ಕಂಸ : ಕಂದ

ಘಡ ಘಡ । ಬಿಡುವೆನೆ ವೈರಿಯ ।
ಪಿಡಿಯುತೆ ಕಾಲ್ಗಳನೆ ಕಾಲನನಂತಾಂ ಶಿಲೆಯೊಳ್ ॥
ಬಡಿದೀ ಶಿಶುವಂ ಪುಡಿಗು ।
ಟ್ಟಿಡುವೆಂ ರಿಪುಹರಣದಿಂದೆ ಸಂತಸವಡೆವೆಂ

ಕಂಸ : ಹಾಡು ರಾಗ : ಹಂಸಧ್ವನಿ - ಏಕತಾಳ

ಇದಾವ ಖಳ । ಮದಾಂಧ ಶಿಶು । ವಧಾರ್ಹನಲು ಸಾರ್ದಳ್ ॥ ಪ ॥
ಸಿದಾನಮುಖಿ । ದದಂತು ಹರಿ । ವಧಾರ್ಹನವನೆ ಸೇರ್ದಳ್ ॥ ಅ.ಪ. ॥
ಪಿಡಿದು ಕರದೆ । ಬಡಿದು ಧರೆಗೆ । ಪುಡಿಯುಗ್ಗೈವ ನಿತರದೊಳ್ ॥
ಸಿಡಿದು ಪಾರಿ । ಬಿಡಗು ಮೀರಿ । ನಡೆದಳೆಂತು ಮಾರಿ ॥ ೧ ॥
ಮಗುವೆನುತ್ತ । ಬಗದು ಚಿತ್ತ । ದಗಿದು ನುಂಗಲಿರ್ದೆ ॥
ಗಗನಕೋಡಿ । ನಗೆಯು ಕೂಡಿ । ರಗಳೆ ತೋರ್ದಳಲ್ತೆ ॥ ೨ ॥
ನಲಿದು ನಕ್ಕು । ಜಲದಮಾರ್ಗ । ದೊಳಗೆ ಸಾರ್ದಳೇರಿ ॥
ತಳಕೆ ಮೀರಿ । ಚಲಿಸಿ ಹಾರಿ । ದಳು ಮಹೋಗ್ರಮಾರಿ ॥ ೩ ॥

ದೃಶ್ಯ : ಮಧುರಾನಗರದ ಬೀದಿ

ಪೂತನಿ : ಹಾಡು ರಾಗ : ನೋಟ್ - ಆದಿತಾಳ

ಭಲಾ ಭಲಾರೆ । ತಕ್ಕಕಾರ್ಯ ಸಿಕ್ಕಿತೀಗಲೇ ॥ ಪ ॥
ಧೀರಂ ಮಹಾ ಬಲರಂ ನಿರು । ಕುಲಂಗಳೊದಗಿರೆ ॥ ಅ.ಪ. ॥

ನರೇಂದ್ರನಾಜ್ಞೆಯಿಂ । ತೆರಳ್ದುಬಂದೆನಾಂ ॥ ಭರದಿಶಿಶುಗಳ । ನಿರಿದು
ಕೊಲ್ಲುವೆ । ಆ ಗೋಕುಲಕ್ಕೆ । ಪೋಗುವೆನಾಂ । ರಾಗದಿಂದಲಿ ॥ ೧ ॥
ಕೆರಳ್ದು ಶಿಶುಗಳ । ಕೊರಲ್ಗಳದುಮುಕಿ । ಮುರಿದು ತಿಂಗಳ । ಹಗೆವ
ನರಗಳ । ಆನಂದದಿಂದ । ಹಿಂಡುವೆನಾಂ । ತಿಂದು ತೇಗುವೆ ॥ ೨ ॥

**ವಸುದೇವ : ಹಾಡು** **ರಾಗ : ಕಾಂಭೋಜಿ - ಆದಿತಾಳ**

ಸರಸಿಜಾಯತಲೋಚನೆ । ಸಾರುವ ನೀರೇ ಕುಮಾರನ ನೋಡೆ ॥ ಪ ॥
ಆನಂದಗೋಕುಲ । ದಾನಂದದಿಂದಿರುವ ಆನಂದನಂದನನ
ನಾನಿಂದು ತೋರ್ಪೆ ॥ ೧ ॥
ಕಾಂತೆ ಸುಶಾಂತೆ ನೀಂ । ಕಾಂತಿಯನಾಂತುರೆ । ಸಂತೋಷವಾಂ ತಾಳಿ ।
ಚಿಂತೆಯ ಬಿಡು ॥ ೨ ॥

**ದೃಶ್ಯ : ಗೋಕುಲ ನಂದಗೋಪನ ಮನೆ**

**ಯಶೋಧೆ : ಕಂದ**

ಜಯಜಯ ಸುಂದರ ಬಾಲಾ ।
ಜಯಮಂಜುಳಲೀಲ ಸಕಲಸದ್ಗುಣಮಾಲಾ ॥
ಜಯನವನೀರದ ನೀಲಾ ।
ಜಯಲೋಲಾ ಘನವಿನೋದ ಮಯಗೋಪಾಲಾ ॥

**ಯಶೋಧೆ - ಸ್ತ್ರೀಯರು : ಹಾಡು** **ರಾಗ : ಪಹಡಿಮಾಂಡ್ - ಏಕತಾಳ**

ಜಯಲಕ್ಷ್ಮೀಲೋಲಲಾಲಿ । ಜಯಮಂಜುಳಲೀಲಾ ಲಾಲಿ ॥ ಪ ॥
ಸುಯಶೋಧರ ಸುಖಮಂದಿರಾ । ಶುಭಾನಂದ ಜನಕಾ ॥ ಧೀರ
ಉದಾರಮನೋಹರ ರೂಪಾ । ದಿವ್ಯಾದ್ಭುತಭಾವಾ ॥ ನಿತ್ಯ ಮಾಯಾಲೋಲಾ
ವಿಭವ । ನಿರ್ಮಲ ಗುಣಾಶೀಲಾ ॥ ೧ ॥

**ಸುವಾಸಿನಿಯರು : ಹಾಡು** **ರಾಗ : ಪಹಡಿಮಾಂಡ್ - ಏಕತಾಳ**

ಆನಂದ ಲೀಲಾಮಯ । ಶುಭೋದಯ ॥ ಪ ॥
ಗಾನಪ್ರಿಯಲಾಲಿನಂದ ನಂದನವರಮಾ ॥ ಅ.ಪ. ॥

ಶ್ರೀಕಾಂತಲಾಲಿ ಶ್ರೀತಾನಂದದಾ । ಲೋಕಾವನ ಶ್ರೀಲೋಲಹರೀ । ಲಾಲಿ
ಗೋಪೀಲೀಲಾವಿನೋದ । ಲಾಲಿಜ ಮಾನಂದ ಬಾಲ ಶ್ರೀಕೃಷ್ಣಾ ॥ ೧ ॥

### ದೃಶ್ಯ : ಗೋಕುಲ ಪ್ರಾಂತ್ಯ

**ನಾರದ : ವೃತ್ತ ॥** — **ರಾಗ : ಶಂಕರಾಭರಣ / ಕಲ್ಯಾಣಿ**

ಜಯ ಜಯಾಖಿಲ ಲೋಕಕಾರಣ ಘೋರ ಪಾಪ ನಿವಾರಣ ।
ಜಯ ಮಹಾ ಭವಸಿಂಧು ತಾರಣ ದಾನವಾನ್ವಯ ಮಾರಣ ॥
ಜಯ ಪದಾಂಬುಜ ಸೇವ್ಯ ಚಾರಣ ಭಕ್ತಸೌಖ್ಯ ವಿಚಾರಣ ।
ಜಯ ಚರಾಚರ ಸೂತ್ರಧಾರಣ ಧರ್ಮಕರ್ಮ ಪರಾಯಣ ॥

**ನಾರದ : ಹಾಡು** — **ರಾಗ : ಬೇಹಾಗ್ - ಆದಿತಾಳ**

ನಂದಗೋಕುಲಾ । ನಂದ ಕುಮಾರಾ ॥ ಪ ॥
ವರ ವಸುದೇವ ಶ್ರೀ । ದೇವಕೀಸುತ ॥ ಪರಮ ಗುಣಾಂಕಾ । ಪಾಪನಿವಾರ ॥ ೧ ॥
ಗಾನ ವಿನೋದ । ಗರುಡವರೂಢ ॥ ದಾನವಮಥನ ಜ್ಞಾನಮಯ ಶ್ರೀ ॥ ೨ ॥

### ದೃಶ್ಯ : ಅರವಿಂದ ಉದ್ಯಾನವನ

**ಲಲಿತೆ : ಹಾಡು** — **ರಾಗ : ದೇಶಿತೋಡಿ - ಆದಿತಾಳ**

ಚಿತ್ರಮಿದು ಗೋಪಾಲ । ಬಾಲಕೃಷ್ಣಲೀಲೆಯು ಲೀಲೆಯು । ಕೃಷ್ಣಲೀಲೆಯು ॥ಪ॥
ಸುಂದರ ಬಾಲ । ಬಂಧುರಲೀಲಾ । ನಂದನ । ನಂದನಾ । ನಂದವು ಚಂದ ॥ ೧ ॥
ತುಂಗ ವಿನೋದ । ಸಂಗತಮಾದ । ಶೃಂಗಾರ । ಸಂಗೀತ ಇಂಗಿತಜ್ಞಾನಿ ॥ ೨ ॥

### (ಲಲಿತೆ - ಸುಂದರಿಯುಗಳ ಗೀತೆ)

**ರಾಗ : ದೇಶಿತೋಡಿ - ಏಕತಾಳ**

ಲಲಿತೆ : ಸಖಿಯಾ ನಂದ । ತನಯನ ಘನ । ಸುಚರಿತವು ಲಲಿತ ॥ ಪ ॥
ಮುಖವ । ನೋಡೆ । ಮನೋಭ । ವನಂತೆ । ಮನಕತಿ ಮುದವ ।
ಬೀರ್ವ ಕೃಷ್ಣ । ಗೋಕುಲದೊಳು । ರಾಕಾಶಶಿಯಂತೆ ಬಾಲ । ವರ ॥ ಅ.ಪ. ॥

**ಸುಂದರಿ :** ಬಾಲಕೃಷ್ಣ । ಬಾಲಕರೊಳು । ನವ । ಲೀಲಾಧಿಕನಾಗಿ । ನಿಂದ ॥ ೧ ॥

**ಲಲಿತೆ :** ತುಂಗಸುಖವ । ಪೊಂಗಿಸುವನು । ನೆರೆ । ಪೊಂಗೊಳಲೂದುತಲವನು ॥ ೨ ॥

## (ಕೃಷ್ಣಮಕರಂದರ ಯುಗಳ ಗೀತೆ)

**ರಾಗ : ಹಿಂದುಸ್ಥಾನಿ ಕಾಪಿ - ಆದಿತಾಳ**

**ಕೃಷ್ಣ :** ಬಾರೋ । ಬಾರೋ । ಬಾಲೆಯರೆಡೆಯಿತ್ತ ।
ಪಾಲನುಮೊಸರನು ಪೀರುವ ॥ಪ॥
ಸಾರಿ । ಸೇರಿ । ಮೀರಿದ ಮುದದೊಳು ।
ಪಾಲನು ಮೊಸರನು ಪೀರುವ ॥ ಅ.ಪ ॥
ಹಿಂದಿಣಿಂದನಾ । ಪಿಂದು ಪೋಗುತೆ । ಸುಂದರಾಂಗಿಯರ್ ।
ತಂದಿರುತಿರುವ । ನವನೀ । ತವನು ಜವದಿಂ । ಸವಿದು ।
ನವವಿಧ । ನಾಟ್ಯವ ನಾಡುವ ॥ ೧ ॥

**ಮಕರಂದ :** ಬಾರೋ । ಬಾರೋ । ಬಾಲಕರೆಡೆಯೊಳು ।
ಸೇರುತೆ ಲೀಲೆಯನಾಡುವ ॥ ಪ ॥
ಸಾರಿ । ಸೇರಿ । ಮೀರಿದಮುದದೊಳು ।
ಸಾರ ವಿನೋದವನಾಡುವ ॥ ಅ.ಪ. ॥
ಮುಂದೆ ಮುಂದೆ ನಾ । ಪಿಂತು ಪೋಗುತೆ ।
ಚಂದದೆ ಬಾಲರು । ತಂದಿರುತಿರುವ ।
ನವ ಭಕ್ಷ್ಯಗಳಂ । ಜವದಿಂ । ಸವಿದು ।
ನವ ವಿಧನಾಟ್ಯವ ನಾಡುವ ॥ ೨ ॥

**ಕೃಷ್ಣ :** ಇಂದು ಸಾರುತರ । ವಿಂದೋದ್ಯಾನಕೆ ।
ಸಂದು ನೀಡುಮಾ । ನಂದದೆ ನಲಿದು ॥
ಯವತೀಜನರ । ನವಲೀಲೆಗಳ ।
ತವೆ ನೋಡುತೆ ನಾಲಿದಾಡುವ ॥ ೩ ॥

(ಕೃಷ್ಣಮಕರಂದರ ಯುಗಳ ಗೀತೆ)

**ರಾಗ : ದೇಶಿತೋಡಿ - ಏಕತಾಳ**

ಕೃಷ್ಣ : ಭಲ ! ಭಲ ! ನೀನೋಡೆಲೊ ಪ್ರಿಯಸಖ ॥ ಪ ॥
ಜಲಜನೇತ್ರಿಯರಿರ್ವರಿಹರು ॥ ಅ.ಪ. ॥
ಮುನ್ನೊರ್ವ | ಳನ್ನೋಡಿ | ಇನ್ನೊಂತಿಬ್ಬರಲು | ಕಣ್ಣೊಳರಿದುವವರು ॥ ೧ ॥

ಮಕರಂದ : ಬಿಡು ! ಬಿಡು ಕೃಷ್ಣಾ ! ಕೆಡುನುಡಿಗಳ ॥ ಪ ॥
ಮಡದಿಯರ್ಕಳ ಕಾಡದಿರು ನೀಂ ॥ ಅ.ಪ. ॥
ನಿನ್ನನ್ನು | ಕನ್ನೆಯು | ಗಿನ್ನುಪಿಡಿಯುತಲಿ | ಕೆನ್ನೆಗೆ ಹೊಡೆವರು ॥ ೧ ॥

ಕೃಷ್ಣ : ಅಂಭೋರು | ಹಾಂಬಕ | ಡಂಭವನು ತೋರಲು |
ಚುಂಬಿಸುವೆನವಳ ॥ ೨ ॥

ಮಕರಂದ : ಚುಂಬಿಸ | ಲಂಭೋರು | ಹಾಂಬಕ | ನಿನ್ನನ್ನು | ಕಂಬಕೆ ಬಿಗಿವಳು ॥ ೩ ॥

ಕೃಷ್ಣ : ಕೇಳಿದ | ಪಾಲನ್ನು | ಬಾಲೆ ಕೊಡದಿರಲು | ಕೀಳುವೆನು ಘಟವ ॥ ೪ ॥

ಮಕರಂದ : ಹೊಡೆದಟ್ಟಿ | ಬಿಡುವರು | ಮಡದಿ ಮಣಿಯರು | ಹುಡುಗತನದು ॥ ೫ ॥

ಕೃಷ್ಣ : ಗಡಿಗೆಯ ನೊಡೆದಿಟ್ಟು | ಕುಡಿದೆಲ್ಲ ಮೊಸರ | ಬೆಡಗಡಗಿಸುವೆ ॥ ೬ ॥

ನಾರದ : ಹಾಡು **ರಾಗ : ದೇಶಿತೋಡಿ - ಏಕತಾಳ**

ನಂದಗೋಕುಲಾ | ನಂದಕುಮಾರಾ ॥ ಪ ॥
ಘನಶ್ಯಾಮನೀಲ | ಕನಕದುಕೂಲ | ವಿನಯವಿಶಾಲ | ವನರುಹಮಾಲ ॥

(ನಾರದ, ಲಲಿತೆ, ಸುಂದರಿಯರ ಯುಗಳಗೀತೆ)

**ರಾಗ : ಜಂಜೂಟಿ - ಏಕತಾಳ**

ನಾರದ : ಏನರೀತಿಯಿದು | ಚಪಲೆಯರೆ | ಚಪಲೆಮಗೇ | ರತಿ ಲಲನೆಯರೇ ॥ ಪ ॥
ಲ.ಸುಂ : [illegible]ವಿದು | ಎಲೆ ಮೌನಿಯೇ | ಎಲೆ ಮಹಿಮನು ನೀಂ |
ಬಲು ಜ್ಞಾನಿಯೇ ॥ ಅ.ಪ. ॥

ನಾರದ : ಯಾರಿವರಿಂಥ । ಮೀರಿದಪಂಥ । ತೋರಿಸುಗೋ ಈ । ಮೇರೆಗೆ ತ್ರಾಂ ।
ಲ.ಸುಂ : ನಾರದನೆಂಥ । ಮಾರ ವಿಭ್ರಾಂತ ।
ನಾರದ : ಸಾರಸಾಕ್ಷಿಯರೇ । ಕಾರಣಂ ಕಾಣೆನಾಂ ॥
ಲ.ಸುಂ : ಸಾರ್ಥೈ ಬಲುಮೋಸ ನೀಂ ಗೈದಿಹೆ ।
ನಾರದ : ಆನಂದಲೀಲಂ । ಯದುಬಾಲ ನೀ । ವಿಧ ಗೈದನೋ ।
ಲ.ಸುಂ : ಅದುವೇ ದಿಟಂ ॥ ೧ ॥

## (ಕೃಷ್ಣ - ಮಕರಂದರ ಹಾಡು)

**ರಾಗ : ಜಂಝೂಟಿ - ಏಕತಾಳ**

ಕೃಷ್ಣ : ಏಕತೆ ಮುನೀಂದ್ರ ನೊಡನೀ ಕೋಪ ॥ ಪ ॥
ಸತಿಯರೆ ! ಬಿಡಿಬಿಡಿ ಯಿನ್ನೇತಕೆ ॥ ಅ.ಪ. ॥

ಮಕರಂದ : ಚಾಪಲ್ಯದೊಳು । ತಾಪವಾಗಿಸಿರ । ಈಪರಿ ನೀಂ
ನುಡಿಯವುದೇತಕೆ ॥ ೧ ॥

ಕೃಷ್ಣ : ಮೌನಿಯ ನುಡಿಯಂ । ಮೌನದೆ ಕೇಳಿ ।
ಆನಂದವ ತಳೆದಿರ್ಬುದೇತಕೆ ॥ ೨ ॥

ಮಕರಂದ : ಮಾನವತಿಯರೇ । ಮೌನಿಯು ಮಾಡುವ ।
ಗಾನವ ಕೇಳುತೆ ಪೋಗಿರೇತಕೆ ॥

## (ಕೃಷ್ಣ, ಲಲಿತ, ಮಕರಂದ, ಸುಂದರಿಯರ ಯುಗಳ ಗೀತೆ)

**ರಾಗ : ಜಂಜೂಟಿ - ಏಕತಾಳ**

ಕೃಷ್ಣ : ನಡೆ ನಡೆ ನಡೆ ಸಖ । ನುಡಿವ ಸಖರೊಳಿದ ॥
ಮಡದಿಯರೊಡೆಯರ । ಬಿಡದಲೆ ಪಿಡಿತರುವ ॥ ಪ ॥

ಲ.ಸುಂ : ಬೇಡುವೆವೀ ನಿಮ್ಮ ಬೇಡವ್ವೈ ಬಾಲರೇಂ ॥
ಕಾಡದೆ ನಮ್ಮ ಕಾ । ಪಾಡಿರಿ ಪ್ರೀತಿಯುಂ ॥ ೧ ॥

ಮಕರಂದ : ವಿಧ ವಿಧ ದೊಳಗೀ । ವಿಧುವದನೆಯರು ॥
ಬೆದರುತೆ ಭಯದಿ । ಹೃದಯದೊ । ಳದಿರಿಹರು ॥ ೧ ॥

ಲ.ಸುಂ : ದೀನತೆಯಾಂತಿಹ । ಮಾನಿನಿಯರ್ಕಳ ಪಾಲಿಸಿ ।
ಏನಿಂತು ಛಲವೀಗ । ಳಾನಂದವು ನಿಮಗೆ ॥ ೨ ॥

ಕೃಷ್ಣ : ಗಡಿಗೆಗಳೊಳಗಿಹ । ಕುಡಿಕೆನೆಮೊಸರನು ॥
ಕೊಡುವರೆ ಕೇಳು । ಬಿಡಿಸುವೆ ಬಂಧನವ ॥ ೨ ॥

ಲ.ಸುಂ : ಕೊಡುವೆವು ಮೊಸರನು । ಬಿಡಿಪುದು ಬಂಧವ ।
ಮಡದಿಯರಾಡುವ । ನುಡಿಯನು ಲಾಲಿಸಿ ॥ ೩ ॥

ಕೃಷ್ಣ ಮೊದಲದ ಕುಡಿದೊಡೆ । ಮುದದಿ ಬಿಡಿಸುವೆ ।
ಸುದತೀಮಣಿಯರೆ । ಹೃದಯದ ಬಿಡಿಭಯವ ॥

ನಾರದ : ಹಾಡು — ರಾಗ : ಕಲ್ಯಾಣಿ - ಆದಿತಾಳ

ಲೀಲಾ ಮಯ ಸುಖವಿಲಾಸ ಜಯ ಜಯ ॥ ಪ ॥
ಪಾಲಿತ ಸುರಕುಲ ಗೋಪಾಲ ಜಯಜಯ ॥ ಅ.ಪ. ॥
ವೇದಮಯಾದ್ಭುತ । ನಾದಕಳೋದಯ ।
ಪಾದಸೇವ ಕಸುರ । ಪಾದಪ ಜಯಜಯ ॥ ೧ ॥
ಸಕಲ ಚರಾಚರ । ನಿಕರನಿದಾನ । ಪ್ರಕಟಿತ ನತಜನ । ಭಾಗ್ಯವಿತಾನ ॥ ೨ ॥

ಸುಂದರಿ : ಹಾಡು — ರಾಗ : ದೇಶಿತೋಡಿ - ಆದಿತಾಳ

ಏನಗೈವೆನು । ಮಾನಕೆ ಹಾನಿಯಿದು ॥ ಪ ॥
ಕುಟಿಲತೆ ಮೀರೆ । ಘಟವಿದು ಜಾರೆ । ಪಟುತರದೆನ್ನ ।
ಹಠ ಬಯಲಾಯಿತು । ಹಾನಿಯಿದು ॥ ೧ ॥
ಲಲಿತೆಯು ಕುಂಭ । ಕಳೆದಿಹಳೆಂಬ । ಕಳವಳಮ ।
ತಳೆದೈತಂದು । ಹಾನಿಯಿದು ॥ ೨ ॥

## ದೃಶ್ಯ : ಉದ್ಯಾನದ ಬೇರೆ ಪ್ರದೇಶ

ಗೋಪಾಲಕರು : ಹಾಡು — ರಾಗ : ನೋಟ್ - ಏಕತಾಳ

ಬಲು ವಿನೋದದಲಿ ನಲಿವ । ಗೆಳೆಯರ ಸಾರಿ ಪೋಗುವ ॥ ಪ ॥
ಬಲುಯುಕ್ತಿಯೊಳು । ನೆಲುವಿಗೆ ನೆಗೆದು । ಬಿಡದೆ ಕುಡಿವ ಮೊಸರ ।

ಆಹಾಹಾ !। ಒಹೋಹೋ!। ಮುದವೊದಗಿತಲಾ । ಸುಖವೊದಗಿತಲಾ ॥ ೧ ॥
ಪೊಸಬೆಣ್ಣೆಯನು । ಮೊಸರನು ಸವಿದು । ತಣಿದು । ಕುಣಿದು । ದಣಿವ ॥
ಅಹಾಹಾ!। ನೀಂ । ನಡೆಯಿರೆಲೋ । ಸಖ । ಪಡೆಯಿರಲೋ ॥ ೨ ॥

## ದೃಶ್ಯ : ಕಲಾವತಿ ಎಂಬ ಗೋಪಿ ಮನೆ

**ಕಲಾವತಿ : ಹಾಡು** **ರಾಗ : ಬೇಹಾಗ್ - ಆದಿತಾಳ**

ವನರುಹಲೋಚನನಾಟವು । ವನಿತೆಯರಿಗೆ ಬಲು ಘನವಾದ ಕಾಟವು ॥ ಪ ॥
ಆ ಲಯದೊಳಿಹ । ಪಾಲುಮೊಸರದು । ಬಾಲಕೃಷ್ಣನ ಪಾಲೆಯಾದುದು ॥
ಬಾಲೆಯರು ಗೋ । ಪಾಲಬಾಲನ । ಲೀಲೆಯೆಂಬುವ । ಜಾಲಕೆ ಸಿಲುಕಿರೆ ॥ ೧ ॥
ಗಾನದಿಂದಲಿ । ಮಾನಿನಿಯರಿಗೆ । ಜ್ಞಾನಪಲ್ಲಟಮಾಡುತ ॥ ತಾನು ಸಾಟ್ಯವಿ ।
ಧಾನದಿಂದಲಿ । ಸಾನುರಾಗದಿ । ಮಾನವ ಕಳೆಯುವ ॥ ೨ ॥

## ದೃಶ್ಯ : ಯಶೋಧೆಯ ಮನೆ

**ಯಶೋಧೆ : ಹಾಡು** **ರಾಗ : ಬೇಹಾಗ್ - ರೂಪಕ ತಾಳ**

ಕಮಲನಯನ ಕೃಷ್ಣನೇಪರಿ । ಕಾಡುವ ಗೋಪಿಯರ ॥ ಪ ॥
ಮನೆಮನೆಯೊಳಾ । ತನ ಕುಚೇಷ್ಟೆಯು । ಘನವದಾಗಿರೆ । ನೋಡಲು ॥
ವನಿತೆಯರು ತಾ । ವೆನಗೆ ಪೇಳುವ । ರೆನಿತೊ ದೂರನು ನಿತ್ಯವು ॥ ೧ ॥
ದೂರನೆನಗೆ । ತಾರದಿರುವ । ನಾರಿಯಿಲ್ಲವೇ । ನೋಡಲು ॥ ಹೇಗಿದ್ದರು ನಗು ।
ಮಾರನಾಟವು । ತೋರದೊಂದೆನಗೆ । ಯೋಚಿಸೆ ॥ ೨ ॥

## (ಕಲಾವತಿ, ಸುಂದರಿ, ಲಲಿತೆ ಹಾಗೂ ಇತರರ ಹಾಡು)

**ರಾಗ : ಕಲ್ಯಾಣಿ - ರೂಪಕ ತಾಳ**

**ಕಲಾವತಿ :** ಏನು ತುಂಟತನ । ಕೃಷ್ಣನದೇನು ॥ ಪ ॥
ಏನೂತಿಳಿಯದಂತೆ ಬಂದು ।
ಮಾನಿತರೊಳು ಮೋನವಮಾಡುವನೇ ॥ ಅ.ಪ. ॥
ಹುಡುಗರೊಡನೆ ಸುತ್ತಿಸುಳಿದು । ಹುಡುಕಿ ಹಾಲು ಮೊಸರುಗಳನು ।
ಕುಡಿದು ಕುಡಿಕೆ ಮಡಕೆಗಳ । ನೊಡೆದು ಮಿಂಚಿನಂತೆ ಪಾರುವ ॥ ೧ ॥

**ಕೃಷ್ಣ : ಹಾಡು** — ರಾಗ : ಬೇಹಾಗ್ - ಜಂಪೆತಾಳ

ಕಾಣೆ । ನಾನೊಂದನು । ಕಾಣೆ । ನನ್ನಾಣೆ ॥ ಪ ॥
ಕಾಣೆನಿವರ ನಾಂ ಕಾಣೆ । ಹಾಲೂ । ಕಾಣೆ । ಮೊಸರೂ ಕಾಣೆ ॥ ಅ.ಪ. ॥
ಇವರು ಮಹಾ ಚತುರೆಯರು । ನವಯೌವನದ ರಮಣಿಯರು ॥
ನವನೀತವನು ಕದಿಯುವರು । ಬಲು । ನೆವದಿಂದ ದೂರುಹೇಳುವರು ॥ ೧ ॥
ಚವಲತೆಯಿಂ ಸವಿಹಾಲ । ಬಲು । ಕಪಟದಿ ಕುಡಿದಿಂದ್ರ ಜಾಲ ॥ ಇದು ।
ನೆವದಿಂದ ನನ್ನಂಥಬಾಲ । ಅಪಕೀರ್ತಿಯನು ತರುವ ಶೀಲ ॥ ೨ ॥

**ಯಶೋಧೆ : ಹಾಡು** — ರಾಗ : ಬೇಹಾಗ್ - ಆದಿತಾಳ

ಏನಿದೇನಿದು । ಅಚ್ಚರಿ ॥ ಪ ॥
ತನು । ಜಾನನ । ದೀಸನ । ಗೇನಿದು ಕಾಂಬುದು ॥ ಅ.ಪ. ॥
ಗಗನವು ಶಶಿತಾ । ರಗೆಗಳು ರವಿಯುಂ ।
ನಿಗ ನಿಗ ಪೊಳೆವುವು । ಬಗಗದ್ಭುತಮೇನಿದೇ ॥ ೧ ॥
ಸರೋಜಲೋಚನ । ಸರೋರುಹಾನನ । ಸುರಾರಪಾಗಾಧರರು ।
ಸುರಾಧಿಪತಿ ಮುಖ । ಹರಿತ್ಪತಿಗಳೂ । ನೆರೆ ಮೆರೆಯುತಲಿಹರೇ ॥ ೨ ॥
ಕುಲಾಚಲಂಗಳು । ಜಲಾಶಯಂಗಳು । ಬಲಾರಿಮುಖ ಸುರರು ॥
ಇಳಾದಿ ಜಗತ್ತೀ । ಕುಲಂ ವಿದಿದು ಕಂ । ಗೊಳಿಸ್ವಲಿಹುದಮಮಾ ॥ ೩ ॥

**ಯಶೋದೆ : ವೃತ್ತ ॥**

ಅರರೇ ! ಅದ್ಭುತಮದ್ಭುತಂ ಶಿಸುಜನಾನಾಂಭೋಜದೊಳ್ ಕಾಂಬುದೇ ।
ಪರಿ ಭೂವ್ಯೋಮ ದಿನೇಶ ಶೀತಕರ ತಾರಾನೀಕಮುಂ ದೇವ ಕಿ ॥
ನ್ನರ ಗಂಧರ್ವ ವಿರಾಜಿತಾಮರ ಮಹಾಲೋಕಂಗಳುಂ ನೋಡಲಾ ।
ವರಪಾತಾಳ ಮುಮಾ ತ್ರಿಮೂರ್ತಿಗಳು ಮೇನಾಶ್ಚರ್ಯ ಮೇನದ್ಭುತಂ ॥

**ಯಶೋದೆ : ಹಾಡು** — ರಾಗ : ಶಂಕರಭರಣ - ಆದಿತಾಳ

ನಿತ್ಯವಿನೋದಾಕರ । ಸತ್ಯಾನಂದಾಕಾರ । ಕೃಷ್ಣ ॥ ಪ ॥
ಭಕ್ತಜಾಲಭರಣೈಕಲೀಲ ಮುನಿ । ಮುಕ್ತಿದಾನಶೀಲ ।

ಸಗನ ಮಧು । ರೋಕ್ತಿ ಜಾಲಲೋಲ । ಕೃಷ್ಣ ॥ ೧ ॥
ಸರ್ವಲೋಕ ಜನಸಾದಿಮೂಲ ಖಳ । ಗರ್ವಹರಣ ಕಾಲ ॥
ದಿವಿಜಗಂ । ಧರ್ವನುತ್ಯಲೀಲಾ ॥ ರಮ್ಯ ॥ ೨ ॥
ನೀರಜಾಕ್ಷ ಸುರ । ವಾರವಿನುತ ಲಲಿತಾವತಾರ ಧೀರ ।
ವಿನುತ ಮಂ । ದಾರ ಯದು ಕುಮಾರಾ ॥ ಕೃಷ್ಣ ॥ ೩ ॥

## ದೃಶ್ಯ : ಯಮುನಾ ನದಿ ಕಾಳಿಂಗ ಮಡುವಿನ ಪ್ರದೇಶ

**ಗೋಪಾಲಿಕರ : ಹಾಡು** **ರಾಗ : ನವರೋಜು - ಏಕತಾಳ**

ಗೋವಿಂದ ಬಾಬಾರೊ ಬಾರೋ ಮುಕುಂದಾ ।
ಸುಂದರ ಗೋಪಜನಾದಂದ ಬಾ ॥ ಪ ॥
ಶ್ರೀಧರ ಬಾ ಮುರ । ಳೀಧರ ಬಾ ।
ರಾಧಾದಿ ಕಾಂತಾ । ಮೋದಕರನುಪಿನೋದಕರ ॥
ಶ್ರೀಕರ ಬಾ ಸುಗು । ಣಾಕರ ಬಾ ।
ಲೋಕೈಕಪಾಲಾ ಶ್ರೀಲೋಲಾ ಗೋಪಾಲ ॥ ೨ ॥
ಮಾಧವ ಬಾ ನುತ । ಯಾದವ ಬಾ ।
ಸಾಧುಪ್ರಮೋದಾ ನುತವೇದಾ ಸುವಿನೋದ ॥ ೩ ॥

**ನಾಗಕನ್ಯೆಯರು : ಹಾಡು** **ರಾಗ : ಬೇಹಾಗ್ - ಆದಿತಾಳ**

ಶ್ರೀ ವನಿತಾ ಲೋಲ । ಸೇವಕ ಪರಿಪಾಲ ಸುಲೀಲ ॥ ಕುವಲಯ ರುಚಿಲಸ ।
ದವಯುವ ಪ್ರಕಾಶ । ಗತಾಶ । ದಿವಿಜನಿಕರ ವಿನುತವಿಭವ ॥ ಪ ॥
ಸುಂದರ ನಂದಕುಮಾರ । ವಂದಾರುಸುಮಂದಾರ ॥ ಖಲಸಂಹಾರ ।
ಕಲುಷ ನಿಕರ ವನಕುಠಾರ । ಲಲಿತ ಶುಭಾಕಾರ ರುಚಿರ ।
ಒಲಿದು । ನಲಿದು । ಸಲಹು ಸತತ । ಜಲರುಹಾಕ್ಷ ಬಾಲಕೃಷ್ಣ ॥ ೧ ॥

**ಎಲ್ಲರೂ : ಹಾಡು** **ರಾಗ : ನವರೋಜು - ಆದಿತಾಳ**

ಮುತ್ತಿನಾರತಿ । ಎತ್ತಿರೀಗ । ಮುದವದು ಮಿಾರಿ ಧೀರಗೆ ॥ ಪ ॥
ಭಕ್ತಜನ ಲೀಲಾ । ರತ ಸುಶೀಲ । ದಿತಿಜ ಕುಲ ಕಾಲಗೆ ॥ ಅ .ಪ. ॥

ಇಂದು ಮೋದ । ದಿಂದ ಭುಜಗನ । ಸಾಂದ್ರಮದವಳಿದು ।
ನಿಂದು ಗೋಕುಲಾ । ನಂದದಾಯಕ । ನೆಂದೆನಿಸಿದ ಕೃಷ್ಣಗೆ ॥ ೧ ॥

## ದೃಶ್ಯ : ಲಲಿತೆಯ ಮನೆ

**ಲಲಿತೆ : ಹಾಡು** **ರಾಗ : ಹಿಂದುಸ್ಥಾನಿ ಕಾಪಿ - ಏಕತಾಳ**

ನಾದವು । ನಾದವು । ನಾದಮಾಹಾ । ಲೋಕಾ । ಮೋದವು ॥ ಪ ॥
ವೇಣುನಾದ । ವೇನುಮಧುರ । ವಿಬುಧ ಮೋಹನ ಮಾದ ॥ ಅ.ಪ. ॥
ಚಾರು ಭಾವಾ । ಧಾರ ರಾಗ । ಸಾರಹೃದಯಾನಂದಭೋಗ ।
ಕಾಮ ಪ್ರತಾಪ। ಮೋಹಕಲಾಪ ॥ ಕೋಮಲಗಮಕಾಲಾಪ ॥ ೧ ॥
ಅಮೋಘಲೀಲಾ । ನಂದವಿಕಾಸ । ಅಮಿತವಿನೋದ । ಶ್ರೀವಿಲಾಸ ।
ಆಯದು ಬಾಲ । ಅಪಾರಲೀಲ । ಗಾಯನಸುಕಳಾಲೋಲ ॥ ೨ ॥

**ಮಾಧುರಿ : ಹಾಡು** **ರಾಗ : ..... - ಏಕತಾಳ**

ನೀರನುತರಲಾಂ । ಸಾರಿದೆ ಯಮುನೆಗೆ ।
ತೀರದೊಳಿರ್ದನು । ನೀರೇಜ ನಯನನು ॥ ೧ ॥
ಮುರಳಿನಾದವದ ನೇನೆಂಬೆನೇಸಖಿ ।
ಮರೆತೆನು ಮನೆಯನೆ । ಮನೋಪಿನೋದದೆ ॥ ಪ ॥
ಮುರಳಿನಾದದೆ । ಪರವಶಳಾದೆನು ।
ಪರಿಯುವ ಜಲದೊಳು । ವಾರಿತುಘಟವದು ॥ ೧ ॥
ತೆರಳಲು ಮನೆಗಾಂ । ಕೆರಳುವಳತ್ತೆಯು ।
ಅರಿಯೆನುಪಾಯವ । ಸರೋಜನಯನೇ ॥ ೨ ॥

**ಸುಂದರಿ : ಹಾಡು** **ರಾಗ : ಯಮನ್ - ಆದಿತಾಳ**

ಸಂತಸಮಿಾವುದೀ ಗಾನವಿನೋದ । ಶಾಂತಿವಿಲಾಸಾನಂದಕರ ॥ ಪ ॥
ಮಂಜುಳಾರವ । ಮನಸಿಜ ಬಾಣ । ಪುಂಜವು ಸುಮನೋ । ರಂಜನ ಮಹಾ ! ॥
ಘನಕಲಾ ಸೌಭಾಗ್ಯ । ಮನೋಜ್ಞ ಗಮಕ ಕಮನೀಯ । ಸಾಕಲೋಕ
ಸಂಗೀತವನು ॥ ೧ ॥

ನಾಟಿಸುತಿಹುದಮಮಾ । ಜಗನ್ಮೋಹಕರ । ಸದಾಸುಖಕರ ಜ್ಞಾನಾಮೃತಸಾರ
ಪೂರ । ಮಾಧವಗಾನ । ಮಧುರಸಪಾನ ॥ ೨ ॥

## ದೃಶ್ಯ : ಅರವಿಂದ ಉದ್ಯಾನ

**ಮಕರಂದ : ಹಾಡು** — **ರಾಗ : ಹಂಸಧ್ವನಿ - ಏಕತಾಳ**

ಎಲ್ಲಿ ಪೋದನೋ ಕೃಷ್ಣ । ಗೊಲ್ಲತಿಯರ ಕೂಡಿ ।
ಸಲ್ಲೀಲೆಯಾಡುತ ಲೆಲ್ಲಿಹನೋ॥ ಪ ॥
ಎಲ್ಲಿ ನೋಡಿದರೂ ತಾ । ನಿಲ್ಲವು ಮಾನಸ ।
ನಿಲ್ಲದೆ ತಲ್ಲಣಗೊಳ್ಳುವುದಾಹಾ ॥ಅ.ಪ. ॥
ಮಧ್ಯಾಹ್ನದಲ್ಲೆಲ್ಲ । ಉದ್ಯಾನದಲ್ಲಿದ್ದ । ಸದ್ಯದೊಳೆಲ್ಲಿ ಸಾರಿರ್ದಪನೋ ॥ ಚೋದ್ಯದ
ಮುರಳಿಯು । ವಾದ್ಯದೆ ಮೋಹಿಪ । ವಿದ್ಯೆಯ ಕಲಿತಿಹ ಮುದ್ದುಕುಮಾರನು ॥೧॥
ಎಂದಿಗೂ ಈ ಮಕ । ರಂದನ ಕಾಣದೆ । ಯೊಂದರ ನಿಮಿಷವೂ । ನಿಂದಿಲ್ಲವು ॥
ಇಂದುರೆ ಸುಂದರೀ । ಬೃಂದ ದೊಳಂದದೆ ।
ನಿಂದನೊ ಚಂದದ । ನಂದಕುಮಾರನು ॥ ೨ ॥

**ಮಧುರಿಕೆ - ಚತುರಿಕೆ : ಹಾಡು** — **ರಾಗ : ಬೇಹಾಗ್ - ಆದಿತಾಳ**

**ಮಧುರಿಕೆ :** ಶೋಭಾಕರಮಾದೀ । ಉಪವನಮ । ವರಸುಮಫಲವ । ನಿರುಕಿಸುವ ॥ ಪ ॥
ಕಲಹಂಸಾವಳಿ । ನಲಿಯುವ ನಾನಾ । ನಳಿನಾಲಂಕೃತ । ಸಲಿಲ ಸಮೇತ ॥
ಜಲಜಾಕರವು । ಬಲುಸುಂದರವು । ಒಲಿಸುತ್ತೀಪರಿ ಮಾನಸವಂ ॥ ೧ ॥

**ಚತುರಿಕೆ :** ಬಗೆ ಬಗೆ ಯಾಗಿಹ । ಖಗತತಿ ಗೈವ । ಬಗೆಗೊಳುವಾ ಬಲು । ಸೊಗಸಿನಗಾನ ॥
ಅಗಣಿತವಿನೋದ । ಮೊಗೆಯೆ ವಿನೋದ । ಜಗಜಗಿಸುವ ಸುಮ ।
ಜಾಲಗಳಿಂ ॥

**ರಾಧೆ : ಹಾಡು** — **ರಾಗ : ಅಸಾವೇರಿ - ಆದಿತಾಳ**

ಪಂಚಬಾಣ । ವಂಚಿಸಿರುವೆ । ಮದನಾ । ಪಂಚಾಯುಧ ಬೀರಿ ॥ ಪ ॥
ಪಾತಕ ಕಂತು । ಪತಕಂತು । ಘಾತಿಸುವೈ ಮಹಾ । ಕ್ರೂರ ॥ ೧ ॥
ಮಹಾಘೋರ । ನಿಂದತಿ ಘೋರ । ಸುಂದರೀ ಜನ । ವೈರ ॥ ೨ ॥

**ಕೃಷ್ಣ : ಹಾಡು** **ರಾಗ ಜಂಜೂಟಿ - ಆದಿತಾಳ**

ರಂಜಿಪಳೀ ತರುಣಿ ॥ ಪ ॥
ಕಂಜ ಸುನಯನೆ । ಘನಗುಣ ಸದನೆ । ಹರಿಣ ವಲೋಕನೆ ॥ ಅ.ಪ. ॥
ಚಂದ್ರನಂದದಿ । ಚಕಚಕಿಸುವ ಮುಖ ।
ಮದನ ಕದನ ಮತಿ । ಯೊದಗಿದ ಸುದತಿಯು ॥ ೧ ॥
ಸುವಿಲಾಸಲೋಲೆ । ನವಲೀಲ ಬಾಲೆಲೆ । ಭುವನೈಕ ಮೋಹ ಜಾಲೆ ॥
ಶೀಲವಂತೆ - ಲೋಲನೇತ್ರೆ । ಸುರವುನಾರಿ ।
ಯರನು ಮೀರಿ । ಮೆರೆಯುತ ಪರಿಪರಿ ॥ ೨ ॥

**ರಾಧೆ : ಹಾಡು** **ರಾಗ : ಬೇಹಾಗ್ - ಆದಿತಾಳ**

ಯದುಬಾಲಾ । ನವಲೀಲಾ । ಮುದಿತ ಗೋಕುಲಾ ॥ ಪ ॥
ವಧುಸಮಸುಕಲಾ । ನಿರಾಕುಲಾ । ಅ.ಪ. ॥
ಶ್ರೀದಯಾಸದನ । ಮೋದಿತ ಭುವನಾ ।
ಯಾದವ ಶರಧಿ ವಿಧುನೀನಲಾ ॥ ೧ ॥
ವರರಾಧಾಮನೋ । ಹರ ಸುಕುಮಾರಾ ॥
ಕರುಣಿಸೆನ್ನ ಮನವ ಗಾನಪ್ರಿಯಾ ॥ ೨ ॥

**ರಾಧೆ : ಹಾಡು** **ರಾಗ : ಹಿಂದೂಸ್ಥಾನಿ ಕಾಪಿ - ಏಕತಾಳ / ರೂಪಕತಾಳ**

ಕೊಳಲನೂದಿ ಕುಣಿವ ಪ್ರಿಯನೆ । ಕುಲುಕುತ ಬಾ ॥ ಪ ॥
ಆತನು ಬಾಣ । ಹತಿಯ ತಳೆದು । ಅತುಳತಾಪವಾಂತೆ ನಾಂ ।
ಹಿತ ಸುಖದೊಳ । ಗತಿ ವಿನೋದ । ತತಿಯ ನೀಡು ಬಾ ॥ ೧ ॥
ಲಲಿತ ಲೀಲೆಗಳ ನೆನೆದು । ಬಳಲಿ ನಿಂದೆಸು ಬಾರೊಕೃಷ್ಣ ।
ಚೆಲುವ, ನಲಿದು ಬಿಗಿದು ನನ್ನ । ನೊಲಿದು ಸೇರು ನೀಂ ॥ ೨ ॥

**(ರಾಧೆ ಮತ್ತು ಕೃಷ್ಣರ ಯುಗಳ ಗೀತೆ)**

**ರಾಗ : ಬೇಹಾಗ್ - ಆದಿತಾಳ**

**ರಾಧೆ :** ಪ್ರಿಯಾಬಾ ಬಾರೋ । ಬಾರೊ । ಸುಖವ ತೋರೋ ॥ ಪ ॥

**ಕೃಷ್ಣ :** ಪ್ರಿಯೆ ಬಾ ಬಾರೇ । ಬಾರೆ । ಸುಖವ ತೋರೇ ॥ ಅ. ಪ. ॥

ರಾಧೆ : ಸಾರಪ್ರೀತಿ । ಮೀರೆ ನಿನ್ನ । ಕೋರಿದೆ ಪ್ರಿಯಾ ॥
ಧೀರ ಕರುಣ । ತೋರಿ ತಾಪ । ವಾರಿಸು ಸದಯಾ ॥ ೧ ॥

ಕೃಷ್ಣ : ಕಾಮಿನಿ ನೀಂ ಪ್ರೀತಿಸುತೆ । ಕಾಮಿಸಲಿನ್ನಂ ॥
ಪ್ರೇಮವಾಂತೆ । ಭಾಮಿನೀಮಣೀ । ಕಾಮಸರಗಿಣಿ ॥ ೧ ॥

ರಾಧೆ : ಮೋಹನಾಂಗ ನಿನ್ನೊಳ್ಳೈದೆ । ಸ್ನೇಹವ ಕೋರಿ ॥
ಪ್ರಿಯ । ದೇಹವೆಲ್ಲ ಬೆಂದುದು ತನು । ದಾಹವ ಹರಿಸೋ ॥ ೨ ॥

ಕೃಷ್ಣ : ಲೋಕಮೋಹ । ನೈಕ ಸುಂದ । ರಾಕೃತಿಯಿಂದ ।
ಪ್ರೀಯೇ । ಶ್ರೀಕರೆ ಬೆರಗಾದೆ । ಮಧುರ । ಕೋಕಿಲವಾಣೀ ॥ ೨ ॥

## (ರಾಧೆ ಮತ್ತು ಕೃಷ್ಣರ ಯುಗಳ ಗೀತೆ)

**ರಾಗ : ಶ್ಯಾಮಕಲ್ಯಾಣಿ - ಆದಿತಾಳ**

ರಾಧೆ : ಆನಂದವನು ನಾಂ । ಪೊಂದಿದೆ ॥ ಪರಮಾ ॥ ಪ ॥
ಯಾದವ ತನಯನೆ । ಶ್ರೀದಯಾನಿಲಯನೆ ।
ಮೋದವ ನೀಡಿದೆ । ರಾಧೆಗೆ ನೀಂ ಪರಮಾ ॥ ೧ ॥

ಕೃಷ್ಣ : ರಮಣೀ ರಾಧೇ । ಕ್ರಮದೊಳು ಬಾಧೆ ॥
ನಮಗಳಿಯುವ ಶುಭ । ಸಮುದಯವಿದು ಕೇಳ್ ॥ ೨ ॥

ರಾಧೆ : ಬಳಲಿರೆ ಚಾತಕ । ಮಳೆಯು ಸುರಿವ ಪರಿ ॥
ಜಲಜನಯನ ನೀ । ನೊಲಿದಿರೆ ನನಗಿಂದಾ ॥ ೩ ॥

ಕೃಷ್ಣ : ಭುವನ ಮೋಹಿನಿ ನನ್ನ । ತವೆ ಬಯಸಿರೆ ನೀನು ॥
ಅವಿರಳ ಸೌಭಾ । ಗ್ಯವ ತಳೆಯುತಲಮಿತಾ ॥ ೪ ॥

ರಾಧೆ : ಇನಿಯನೆ ಬೇಗ । ಮನದನುರಾಗ ।
ಘನವೆನೆ ಸುಖವ । ನ್ನನುಭವಿಪುದಕಿಂದಾ ॥ ೫ ॥

## ರಾಧೆ ಮತ್ತು ಕೃಷ್ಣರ ಯುಗಳ ಗೀತೆ

**ರಾಗ : ಹಿಂದೂಸ್ಥಾನಿಕಾಪಿ - ಏಕತಾಳ**

**ರಾಧೆ :** ಮೋದವಂತೆ ಮಾನಸದಿ ॥ ಸಾಧಿಸಿ ನಿರುಪಮ ಸುಖವ ಪ್ರಿಯಾ ॥ ಪ ॥

**ಕೃಷ್ಣ :** ಬಾರೆರಮಣಿ ಪಯೋರುಹಪಾಣಿ । ಸಾರ ಸುಧಾಮಯವಾಣೀ ।
ಚಾರು ವಿಲಾಸವ ತೋರೇ ನೀರೇ । ಶೌರಿಮನೋಬ್ಜ ವಿಹಾರೇ ॥ ೧ ॥

**ರಾಧೆ :** ಘನಲೀಲಾ ಸುಖ ಮೊಂದಲೆಂದು । ಮನಸೋತಿಹೆ ನಾಂ ಶೌರೀ ।
ನವನರ್ತನ । ಕಳಾ । ನಂದವಿಶಾಲಾ । ಭುವನಾಶ್ರಯ ಗೋಪಾಲ ॥ ೨ ॥

**ಕೃಷ್ಣ :** ಸರಸಿಜ ಲೋಚನೆ । ಸಾರೇ ಸುಖಕರೆ । ಸಾರಕಳಾಮಯೆ ರಾಧೇ ।

**ರಾಧೆ :** ಇಂದೆನ್ನಾತ್ಮ । ಸಂದುದು ನಿನ್ನೊಳ್ । ಸುಂದರ ನಂದಕುಮಾರಾ ॥

**ಇಬ್ಬರೂ :** ಮೋದವಾಂತೆ । ಮಾನಸದಿ ॥

**ವಸುಂಧರೆ : ಹಾಡು** **ರಾಗ: ಜಂಜೂಟಿ - ಆದಿತಾಳ**

ಪ್ರಿಯ । ಸೋದರಿ ನಮ್ಮಯ । ರಾಧೆಯದೆಲ್ಲಿಗೆ
ಪೋದಳೊ ವನದಲ್ಲಿ ಕಾಣೆನಾಂ ॥ ಪ ॥
ಆದರದಿಂದ ನಾ । ನೈದುತೆ ನೋಡುವೆ । ಮೋದದೊಳಾ ಶುಕವಾಣಿಯ ॥ಅ.ಪ.॥
ಸಾರಿ ಕೋಗಿಲೆಗಳ । ಸಾರ ಸಂಗೀತವ । ಸಾರಯೆ ಕೇಳುತೆ ನಾರೀಮಣಿ ॥
ಮೀರಿದಾನಂದದೆ । ನಾರಿದಳೆಲ್ಲಿಗೆ । ಸಾರಸಂಗೀತ ವಿಶಾರದೆಯು ॥ ೧ ॥
ಇಂದ್ರನ ನಂದನ । ದಂದವ ನಿಂದಿಪ । ಸುಂದರ ವನದಲ್ಲಿ ಸುಂದರಿಯು ॥
ಕುಂದದಾನಂದದೆ । ಬಂದು ವಿಲಾಸದೆ । ನಿಂದಿಹಳೆಲ್ಲಿಯೋ ಚಂದ್ರಮುಖಿ ॥ ೨ ॥

**ವಸುಂಧರೆ : ಹಾಡು** **ರಾಗ : ಹಂಸಧ್ವನಿ - ರೂಪಕತಾಳ**

ಮನದ ಚಪಲವೇನು ಥೀ । ಮಾನಿನೀಮಣೀ ತರುಣೀ ॥ ಪ ॥
ಮನಸಿಜತಾ । ಪವ ಕಳೆಯೆ । ಮಾನಚ್ಯುತಿ ಯಾನುವರೇ ॥ ಅ.ಪ. ॥
ಸರಸಿಜ ಲೋಚನೆ ನೀ । ನುರೆ ಮೆರೆದು । ಪಿರಿದು ಲೀಲೆಯಿಂ ॥ ಪರಿಪರಿ ವಿಧದಿಂದ
ಮಾನವ ಸರಾಗದಲಿ ನೀಗುತಲಿ । ಧರೆಯ । ಮರೆತೆ । ಜಾರೆಯಂದದಿ ಥೀ ! ।
ಭರದೊಳು ನಾಂ । ಭಾವನೊಳಿಂ । ದರುಹಿ ನಿನ್ನ ದಂಡಿಪೆನೇ ॥ ೧ ॥

ವಸುಂಧರೆ : ಕಂದ — ರಾಗ : ಹಿಂದೂಸ್ಥಾನಿ ಕಾಪಿ

ಚೇತೋಜ ಶರಕೆ ಸಿಲ್ಕುತು ।
ಮಾತುರದಿಂ ಸುವಿಧಮುಳಿದು ಸೀನಂಧತೆಯಿಂ ॥
ದೇವತೆ ಮರೆದಪೆ ಛೀ ! ಛೀ ! ॥
ಈತೆರನೇಂ ನಿನಗೆ ಬುದ್ಧಿಗೆಟ್ಟುದು ರಾಧೇ ॥

ರಾಧೆ : ಹಾಡು — ರಾಗ : ಬೇಹಾಗ್ - ಆದಿತಾಳ

ಸಹಿಸೆ ಕೋಪವ ಸುಂದರಾಕಾರೆ ವಸುಂಧರೇ ॥ ಪ ॥
ವಿಹಿತವಲ್ಲ ಗುಣಾಕರೇ ॥ ಅ.ಪ. ॥
ಸರಸಿಜಾಯತ ಲೋಚನೇ । ಪಿರಿದನರ್ಘದ ಯೋಚನೆ ।
ತರವಲ್ಲ ಪಲ್ಲವಾಧರೆ । ವರಾಬ್ಜ ಸುಕಂಧರೇ ॥ ೧ ॥
ಕನಕಗಾತ್ರಿಯೆ ಲಾಲಿಸೇ । ಘನತೆಯನ್ನುರೆ ಪಾಲಿಸೆ ।
ಅನುಪಿಂದೆ ಸುಂದರಾನನೇ ನೀಂ । ಮನೋಜ ಮನೋಹರೇ ॥ ೨ ॥
ಮದಪರಾಧ ವಿದಲ್ಲವೇ । ಸುದತಿ ವಂಚನೆಯಿಲ್ಲವೇ ॥
ಮದುಬಾಲನಿಲ್ಲಿ ಯಿಲ್ಲವೇ । ಕೇಳ್ । ಸದಾ ವಿನೋದಾಕರೇ ॥ ೩ ॥

ವಸುಂಧರೆ : ಹಾಡು — ರಾಗ : ಬೇಹಾಗ್ - ಆದಿತಾಳ

ತಿಳಿಯದೆ ಭ್ರಾಂತಳಾದೆ । ನಾಂ ॥ ಪ ॥
ನಾಥನೆಂದು ಬಗೆ । ದೀತರೊಳನಿನಾ । ಸಾತುರಪಡುತಲಿ । ಕೌತುಕದಿಂಗೆ ॥ ಅ.ಪ. ॥
ಈತನ ಮೋಹದ ಬಲೆಗುರೆ ಸಿಲುಕುತೆ । ಮಾತಿಗೆಂದು ಮರುಳಾಗುತ ಮನದೆ ।
ಸೋತಪಮಾನವ ನಾಂತಿಹನೇ ॥ ೧ ॥

ವಸುಂಧರೆ : ಹಾಡು — ರಾಗ : ಶ್ಯಾಮಕಲ್ಯಾಣಿ - ಆದಿತಾಳ

ಪೋರೆ ಗೋಪಬಾಲ । ಪರತರಲೀಲಾ ॥ ಸರಸಕೆ ಬಾ ॥ ಪ ॥
ಮನ್ಮಥರೂಪ ಮನ್ನಿಸುತೆನ್ನ । ಮನ್ಮನಸ್ತಾಪ । ವನ್ನಳಿಮುನ್ನ ॥ ೧ ॥
ಶರಣನೆಂದೀಗ । ಚರಣಕೆ ಬೇಗ । ಮೊರೆಯಿಡುವೆನ್ನ । ಕರುಣಿಸು ಕೃಷ್ಣ ॥ ೨ ॥

## ದೃಶ್ಯ : ಉದ್ಯಾನವನದ ಬೇರೆ ಭಾಗ

**ವಸುಂಧರೆ : ಹಾಡು** ರಾಗ : ಸುರುಟಿ - ಆದಿತಾಳ

ಮರ್ಯಾದೆಯರಿಯದೆ ತಾಂ ಮಾತನಾಡುತಿಹನು ॥ ಪ ॥
ಧೈರ್ಯದಿಂದ ದುಡುಕಿ ನುಡಿದ । ನರಿವನುಳಿದು ದುರುಳ ಕೃಷ್ಣ ॥ ಅ.ಪ. ॥
ಸರಸಲೀಲೆಗೆನ್ನ ಕರೆದು । ಕರೆಕರೆಗೈದನಂದು
ಸೆರಗನೆಳೆದು ನೀಚನವನು । ಬೆರಗು ಮಾಡಿ ಮರುಗಿಸಿರ್ದನು ॥ ೧ ॥

## ದೃಶ್ಯ : ಲತಾ ಮಂಟಪ

**ಸುನಂದೆ : ಹಾಡು** ರಾಗ : ಪೀಲು - ಆದಿತಾಳ

ಇದಾವರೂಪಕಟಾ । ಒಡಗಿರ್ಪುದು ॥ ಪ ॥
ಏನಿದುಮಾಯ । ವೇನನ್ಯಾಯ । ಮಾನಿನಿಗಾನಾದನೇ । ದೀನಭಾವದೊಳೆ ॥೧॥
ಪೂರ್ವದಕರ್ಮ । ಗರ್ವದ ಮರ್ಮ । ದುರ್ವಹಮಿಂತಕಟಾ ।
ಉರ್ವರೆಯೊಳಗಿದಾ ॥ ೨ ॥

### (ಸುನಂದೆ - ವಸುಂಧರೆಯರ ಹಾಡು)

ರಾಗ : ಬೇಗಡೆ - ಅಟ್ಟತಾಳ /ಛಾಪು

**ಸುನಂದೆ:** ಪೊರ ಸರಸಿಜಲೋಚನ । ಪಾವನ ಚರಣ ॥ ಪ ॥
ಪೊರೆ ದೇವ ನಮ್ಮನು । ಪರಮ ಪ್ರಭಾವ ॥ ಅ.ಪ. ॥
ಅರಿಯದ ನಿನ್ನಯ । ಪರತರ ಮಹಿಮೆಯ ॥
ಪಿರಿದಪರಾಧವ । ವಿರಚಿಸಿದೆವು ದೇವ ॥ ೧ ॥

**ವಸುಂಧರೆ :** ಪತಿಯನ್ನು ಮನ್ನಿಸಿ । ಹಿತವ ಗೈಯುತೆ ನನ್ನ ॥
ಸ್ತುತಿಯನಾಲಿಸಿ ಪೊರೆ । ನತ ಸುರಭೂಜಾ ॥ ೨ ॥

**ಸುನಂದೆ :** ಪರಮಪುರುಷ ನಂ । ದರಿಯದೆ ದುಡುಕಿದೆ ॥
ಕರುಣಿಸಿ ಪಾಲಿಸು । ಕರುಣಾಪಯೋನಿಧೀ ॥ ೩ ॥

**ನಾರದ : ಹಾಡು** **ರಾಗ : ಕಲ್ಯಾಣಿ - ರೂಪಕತಾಳ**

ಜಲಜನಯನ ಜಯಜನಾರ್ಧನ । ಜಲಧಿಶಯನ ಜಾಹ್ನವೀಜನಕಾ ॥ ಪ ॥
ಬಾಲಪದ್ಮ ಲೀಲ ನಗ ಶಾ । ರ್ದೂಲಸಖ ಮನೋಜ್ಞ ವಾಲ ॥
ನೀಲಮೇಘ ರೂಪ ಭುವನ । ಪಾಲ ನಂದಗೋವ ಬಾಲ ॥ ೧ ॥
ಕುಂಜವನ ವಿಹಾರ ಲೀಲ । ಕುಂಜರ ವರದಾನಶೀಲ ॥
ಮಂಜು ವೇಣು ಗಾನ ಲೋಲ । ಕಂಜನಯನ ನರಹರೇಶ್ರೀ ॥ ೨ ॥

**ಕೃಷ್ಣ : ಹಾಡು** **ರಾಗ : ಹಂಸಧ್ವನಿ - ಆದಿತಾಳ**

ಪಾವನಮೌನಿಯೆ । ಗೋವರ್ಧನಗಿರಿ । ಯೀವುದು ನಮಗಿಷ್ಟಾರ್ಥದಾಯನು ॥ ಪ ॥
ಅವರಶೈಲಕೆ । ನಾವುರೆಪೂಜೆಯು । ಭಾವಿಸಿಗೈದಪು । ದೇವ ವಿಹಿತವು ಕೇಳ್ ॥ ಅ.ಪ ॥
ನಾಕಾಧಿನಾಯಕಂ । ಗೇಕಿನ್ನು ಪೂಜೆಯು । ಗೋಕುಲಮೆಲ್ಲನಿ ।
ರಾಕುಲದಿಂ ವಿಭ । ವಾಕರಮಿಂದವ । ಲೋಕಿಸಲು ॥ ಯಾದವರೆಲ್ಲರು ।
ಮೋದದೆ ಗಿರಿಯಾ । ರಾಧನೆ ಗೊಪ್ಪಿಹ । ರಾದರದಿಂ ಮಿಗೆ ॥ ೧ ॥

## ದೃಶ್ಯ : ಸ್ವರ್ಗಲೋಕ ಪ್ರಾಂತ್ಯ

**ದೇವೇಂದ್ರ : ಹಾಡು** **ರಾಗ : ಜಂಜೂಟಿ - ರೂಪಕತಾಳ**

ಏನಿದಚ್ಚರಿ । ಯೇನುಕಾರಣ । ಮೌನಿನಾಥನೇ ॥ ಪ ॥
ದೀನ ಗೋಪ ವಿ । ತಾನಕುದಾ । ಸೀನತೆ ಜನಿಸೆ ॥ ಅ ಪ. ॥
ಇಂದ್ರನೆಂದರೆ । ಸಾಂದ್ರಭಕ್ತಿ । ಯಿಂದ ಮಣಿವರು ॥
ಇಂದು ಭೇದವ । ನೊಂದೆ ಕಾರಣ । ಮೊಂದ ಕಾಣೆನು ॥ ೧ ॥
ಉತ್ಸವಂ ಪ್ರತಿ । ವತ್ಸರಂ ವಿಲ । ಸತ್ಸ್ವ ಭಾವದಿಂ ॥
ಮತ್ಸರಮುಳಿದೆನಗೆ ಮಾಳ್ಪರೊ । ಳುತ್ಕ್ಷಿಪ್ತವೇನು ॥ ೨ ॥

**ದೇವೇಂದ್ರ : ಕಂದ**

ನಡುಗಿಸುತುಂ ಬ್ರಹ್ಮಾಂಡದ ।
ಗಡಣವ ಗಿರಿತತಿಯನೊಡೆದು ಕೆಡಹುವ ಜಗಮಂ ॥

ಸುಡುವದ್ಭುತದಾರ್ಭಟದಾ ।
ಸಿಡಿಲ ಪರಂಪರೆಯ ಬಿಡುತೆ ಮಳೆಯಂ ಸುರಿವೆಂ ॥

ದೃಶ್ಯ : ಗೋವರ್ಧನ ಪರ್ವತ ಪ್ರದೇಶ

ರಾಗ : ಹಂಸಧ್ವನಿ - ಏಕತಾಳ

ಎಲ್ಲರೂ : ಜಯಜಯ ಶ್ರೀ ಗೋಕುಲ ಪಯೋಧಿ ಚಂದ್ರಾ ॥ ಪ ॥
ನಯಾನ್ವಿತ । ಜನಾ -ರ್ಚಿತ ॥ ಅ.ಪ. ॥
ಮಂಗಳಾಕಾರ ಶ್ರೀ । ತುಂಗ ಸತ್ವಾಕರ ॥
ಭೃಂಗಚಿಕುರ ಸುರ । ಪುಂಗವಾದಿನುತ।
ಮಂಗಳಕರ ನೀ । ಲಾಂಗ ಮನೋಹರ ॥ ೧ ॥
ಆನತಜನ ಸು । ಜ್ಞಾನದಾನ ಸ । ನ್ಮಾನಿಮಾನಸ ನಿ ।
ಧಾನ ಘನಗುಣ । ದೀನಗೋವಜನ । ಮನೋಹರಾ ಸ ।
ಜ್ಞನಾಶ್ರಯಾಮಿತ ಶುಭೋದಯಾನತ ॥
ಜನರ್ಗೆ । ವಿನೋದ । ವನೀವ । ಮನೋಜ್ಞ ।
ವನಾಂತ ವನಾಂತ । ನಗಾಧಿಪನೆ ಜಯ ॥ ೨ ॥

ಸ್ತ್ರೀಯರು : ಹಾಡು

ರಾಗ : ಕಮಾಚ್ - ಆದಿತಾಳ

ಬಿರುಮಳೆ ಇದೋ ಬಂದುದು ॥ ಪ ॥
ಭರದಿಂ ತೆರಳಿ ತೆರಳಿ ಬೇಗ ॥ ಅ.ಪ. ॥
ಫಳಫಳ ಗಗನದೆ ಪೊಳೆವ ಮಿಂಚುಗಳು
ಶಿಲಾಕಾರದಿಂದುದರೆ ಹನಿಗಳು
ಇಳೆಯೆ ಪ್ರಳಯಂ ದಳೆವರೀತಿ ॥ ೧ ॥
ಗಡಗಡ ನಡುಗಿಸಿ ಪೊಡವಿಯನೆಲ್ಲವ
ಸಿಡಿಲಾರ್ಭಟದಿಂ ಬಡಿಯಲೆತ್ತಲುಂ
ಗುಡುಗಲ್ಲೆಡೆಯಂ ಬಿಡದೆ ತುಂಬಿ ॥ ೨ ॥

ದೇವೇಂದ್ರ : ಹಾಡು — ರಾಗ : ಕಲ್ಯಾಣಿ - ರೂಪಕತಾಳ

ಮನ್ನಿಸೈ ಮಹಾನುಭಾವ ಮಾನ್ಯ ಮಾಧವಾ ॥ ಪ ॥
ನಿನ್ನ ಮಹಿಮೆಯನ್ನದಾವ ನಿನ್ನುಬಲ್ಲವ
ಪರಮಪುರುಷ ನೀನೆನ್ನುತ್ತಲರಿಯದೀ ತೆರಂ
ವಿರಚಿಸುತ್ತ ವಿವೇಕಿಯಾದ ನೊರೆ ಕೃಪಾ ಸಿಂಧು ॥ ೧ ॥
ಸುರವರಾದ ನಿನ್ನ ಪೂಜೆಯು ತೊರೆದು ಗೋಪರು
ಗಿರಿಗೆ ಪೂಜೆಗೈವ ವಾರ್ತೆಯರಿತು ದುಡುಕಿದೆ ॥ ೨ ॥
ಪರಮ ಮೌನಿ ನಾರದ ತಾ ನೊರೆದ ವಾರ್ತೆಯಿಂ
ಕೆರಳಿ ಪಾಪಮೊಂಗಿದೆ ನಾಂ ಪೊರೆಯೆಲಾ ಮಾಧವ ॥ ೩ ॥

ಎಲ್ಲರೂ : ಹಾಡು — ರಾಗ : ಬೇಹಾಗ್ - ಆದಿತಾಳ

ಗೋವರ್ಧನ ಗೋವಿಂದ ಮುಕುಂದ ॥ ಪ ॥
ಜಯಜಯಶುಭಕರ ಜಯಧರ ಕಲಾಧರ ॥ ಅ.ಪ. ॥
ಯಾದವ ವಂಶ ವಾರಿಧಿ ಶಶಾಂಕ ಮೋಹಿತ್ರ ಭಾವನ ವಿಧುಧಾಮವದನ
ತ್ರಿದಶ ನಿಕರಸುಖ ಪ್ರದ ನೃಹರೇ ಜಯ ॥ ೧ ॥

ಗೋಪಿಯರು : ಹಾಡು — ರಾಗ : ಜಂಜೂಟಿ - ಆದಿತಾಳ

ಮಾನಸಕೆ ಪರಮಾನಂದಕರವಿದು ಮನೋಹರೇ ಕ್ರೀಡೆಯು ॥ ಪ ॥
ತೊಳಗಿ ಬೆಳಗುವ ಬೆಳದಿಂಗಳೊಳು ಲಲನೆಯುರುರೆ ಚರಿಸುವ ಒಲಿದು
ಕೂಡುವ ನಲಿದು ಹಾಡುವ ಸಲೆಸುಖದಳೆಯುವ ಮನೋಹರೆಯರೆ
ಕ್ರೀಡೆಯು ॥ ೧ ॥
ಮುದದಿ ನೆರೆಯುತೆ ಮದಿರಾಕ್ಷಿಯರೇ ಮೃದುಸುಮಗಳ
ಮುಡಿಯುವ ಮಧುವ ಕುಡಿಯುವ ಪದೆದು ಕುಣಿಯುವ ಸದಮಲ
ಹೃದಯರೆ ಮನೋಹರೆಯರೇ ಕ್ರೀಡೆಯು ॥ ೨ ॥

ಗೋಪಿಯರು : ಹಾಡು — ರಾಗ : ಖರಹರಪ್ರಿಯ - ಏಕತಾಳ

ಶ್ರೀ ರಮಾಲೋಲ ಸುಶೀಲ ಸುನೀಲ ಘನಕಲಾ ॥ ಪ ॥
ನಾರಶೃಂಗಾರಶೀಲ ಸನ್ನುತ ಗೋಪಾಲ ಜಗನ್ಮೂಲ ॥ ಅ.ಪ. ॥

ಮಧುರ ವಚನ ಮುದಿತ ಸುಜನ ಸದಯ ಹೃದಯ ವಿಮಲ ಜಯ ||
ನಾರಾಯಣ ಧೀರಮಣಿಹಾರ ಗಭೀರಾವತಾರ ಶ್ರೀಹರೇ || ೧ ||
ಗೋಕುಲಾನಂದ ಕಂದ ಕೋಮಲ ಗೋಪಾಲ ಕೃಪಾಸಾಂದ್ರ
ಲಲಿತ ಹಸನ ಲಿಲಿತವದನ ಕಲಿತ ಸುಗುಣ ನಿಚಯ ಜಯ
ದೀನಾವನ ಜ್ಞಾನೈಕ ನಿಧಾನಾ ಸಮಾನ ಮಹಾನೃಸಿಂಹ || ೨ ||

**ದೇವೇಂದ್ರ : ಹಾಡು** **ರಾಗ : ಕಲ್ಯಾಣಿ - ರೂಪಕತಾಳ**

ಆನಂದವನಾಂತೆನುನಾಂ ಅಂಬುಜನಯನಾ || ಪ ||
ದಾನವಕುಲ ಸಂಹರಣಾ ದಾಸಜಾಲಭರಣಾ
ದೀನಶರಣ ಕಾಂತಿ ವಿಜಿತ ದಿನ ಕಾರಣ ಕಿರಣಾ
ಮಾನಿತ ಗುಣೈಕಭೂಷಣಾ ಮಧುರ ವಚನ ಸಂಭಾಷಣ
ಜ್ಞಾನಸುಖಸ್ಥಿತಿ ಕಾರಣ ಜನನ ಮರಣ ಸಂತಾರಣ || ೧ ||
ಸುಲಲಿತ ಗುಣಭರಿತ ಕೃಷ್ಣ ಸುಜನವಿನುತ ಚರಿತಾ
ಜಲದೋಪಮ ರುಚಲಸಿತ ಶಂಖಚಕ್ರ ಮಹಿತ
ಕಲುಷಿತ ಜನತತಿಪಾವನ ಕಾಲಕರ್ಮ ಗತಿ ಸಾಧನ
ಕಲಿತ ಸಕಲ ವಿಭವಾಕರ ಗಾನ ಕಲಾಧರ ಶ್ರೀಕರ
ಗಳ ವಿಲೋಲ ವನಮಾಲಿಕ ಘನ ಮಧುಕರ ಲೋಲಾಲಕ
ಫಲದಾಯಕ ಶ್ರೀ ನರಹರ ವಾಮನ ರೂಪ ಮನೋಹರ || ೨ ||

**ಎಲ್ಲರೂ : ಹಾಡು** **ರಾಗ : ನವರೋಜು - ಆದಿತಾಳ**

ಕೊಡುವಸ್ತ್ರಗಳ ಗೋಪಾಲ ಕಡುಪ್ರೀತಿಯಿಂ ಛಲಬಿಡೋ || ಪ ||
ಮಡದಿಯರೊಡನೀ ಶೀಲ ಬಿಡು ನಮ್ಮ ಬಾಲಲೀಲ || ಅ.ಪ. ||
ಲಲನಾಳಿ ನಿನ್ನ ಭಾವ ಸಲೆ ಕಾಣಲಿಲ್ಲ ದೇವ || ೧ ||
ತರವಲ್ಲ ಕಾಡಲಿನ್ನು ತರುಣೀ ಮಣಿಯರನ್ನು
ಭರದಿತ್ತು ಸೀರೆಯನ್ನು ನೆರೆನೀಡು ಮೋದವನ್ನು || ೨ ||

ಗೋಪಿಯರು : ಹಾಡು

ರಾಗ : ನೋಟ್ - ಏಕತಾಳ

ಮಂಗಳಂ ರಮಾಧವ ಮೋದವ ನೀಡುವ ಯಾದವ ಭೂಧವ ॥ ಪ ॥
ಮಂಗಳ ಶುಭಗುಣ ಸಂಗತಾಪಾಂಗನೆ ಶೃಂಗಾರಾಕರ ಶ್ರೀಕರ ಮಂಗಳಾಕರ
ದುರಿತಹರವರನೃಹರೇ ಮಂಜು ನೀಲಾಲಕ ಕಂಜರಸ್ಮಾಲಿತ ಕುಂಜರಪಾಲಕ
ಕುಂಜವಿಹಾರಕ ರಂಜಿತಾರಾಧಕ

## ಮಂಗಳ

ರಾಗ : ಸುರುಟಿ - ಆದಿತಾಳ

ಮುತ್ತಿನಾರತಿ ಎತ್ತಿ ಬೆಳಗಿರೆ ಚಿತ್ತಜಾತಗೆ ಮಾರಗೆ
ಮತ್ತವಾರಣಗಾಮಿನಿಯರೆ ಸುತ್ತಿ ಪಾಡಿರಿ ಮಂಗಳ ॥ ಪ ॥
ಕಂತು ತಾನುವ ಸಂತ ಮಿತ್ರನು ಕಾಂತೆಯರಿಗಾನಂದದ
ಕಾಂತ ಸುಮಗಳ ನೆತ್ತಿ ಲೋಕವ ಭ್ರಾಂತಿಗೊಳಿಪಾಧೀರಗೆ ॥



# ಕಂಸವಧೆ



ಕರ್ನಾಟಕ ನಾಟಕ ಪಿತಾಮಹ
**ಬಳ್ಳಾವೆ ನರಹರಿಶಾಸ್ತ್ರಿಗಳು**



ನಟಭಯಂಕರ
**ಎಂ.ಎನ್. ಗಂಗಾಧರರಾಯರು**



ಕೃಷ್ಣಖ್ಯಾತಿಯ
**ಜಿ.ವಿ. ಸ್ವರ್ಣಮ್ಮ**

**ಪ್ರಾರ್ಥನೆ : ಹಾಡು** — **ರಾಗ : ಬಿಲಹರಿ - ಆದಿತಾಳ**

ಶರಣರ ಕಾಯೋ ಜಗನ್ನಾಥ
ಕರುಣೆಯ ತೋರೋ ಭಾಗ್ಯವಿಧಾತ ॥ ಪ ॥
ಮೃದು ಮಧುರ ನಿನ್ನ ಪೊಗಳುವ ವೇದ ।
ವೇದನೆ ನೀಗುವ ಪ್ರಣವಸುನಾದ ॥
ಅನುದಿನ ಪಾಡುವ ಯೋಗವಿನೋದ ।
ಆನಂದ ತಾಂಡವ ಆಡುವ ಪಾದ ॥ ೧ ॥

**ಸೂತ್ರಧಾರ : ವೃತ್ತ ॥** — **ರಾಗ : ನಾಟಿ**

ಶ್ರೀ ಲೀಲಾಮಯ ಬಾಲನೆಂದು ವಸುದೇವಾದ್ಯರ್ಕಳ್ ಗೋಪಿಕಾ ।
ಜಾಲಂ ಮನ್ಮಥನೆಂದು ಗೋಪಸಿಚಯಂ ಗೋಪಾಲನೆಂದಾಮಹಾ ।
ಕಾಲಂ ತಾ ನಿವನೆಂದು ಕಂಸನೆಮರಲ್ ಶ್ರೀ ವಿಷ್ಣುವೆಂದಾಡಿದಾ।
ಬಾಲಂ ನೀಡುಗೆ ಮಂಗಳಾಭ್ಯುದಯಮಂ ಶ್ರೀದೇವಕೀನಂದನಂ ॥

**ಸೂತ್ರಧಾರ : ಹಾಡು** — **ರಾಗ : ಹಂಸಧ್ವನಿ - ಆದಿತಾಳ**

ಶ್ರೀ ವಾಸುದೇವ । ಶ್ರಿತ ಸರ್ವದೇವ ।
ಶೀತಾಂಶುರುಚಿ । ಸ್ಮಿತ ಪಾಹಿದೇವ ॥ ಪ ॥
ದೇವಾಧಿಪಸನ್ನುತಿಲಾಲಿತ । ಕೈವಲ್ಯದಾತ । ಕಲುಷ ವಿಘಾತ ॥ ೧॥
ಯದುವಂಶಪಯೋ । ನಿಧಿ ದಿವ್ಯರಾಜಾ ।

ವಿಧು ವಿಲಾಸಭಾಸ ವೀರ ದೈತ್ಯನಾಶ ॥
ಮಧುರಾನಿವಾಸ । ಬುಧಹೃದ್ವಿಲಾಸ ।
ಸದಯನೃಸಿಂಹಸದನಾದಿ ಬ್ರಹ್ಮ ॥ ೨ ॥

ನಟಿ : ಹಾಡು — ರಾಗ : ನಾಟಿಕುರಂಜಿ - ರೂಪಕತಾಳ

ವಿಭವಾಕರಂ । ಬೇಸಿಗೆಯಿದು ಪರಿಕಿಸೆ ॥ ಪ ॥
ತ್ರಿಭುವನ ವಿಜಯಿ ಮನೋಭವ । ಸಖಿ ನವ ಮುದಮಾಂತರೆ ॥ ಅ.ಪ. ॥
ವಾರಿಜಾಂಬಕೀ । ವಾರಮುದದಿಂ । ವಾರಿಕೇಳಿಸಂ । ಚಾರದೊಪ್ಪದಿ
ಮೀರಿ ಮುದಂದಳೆದೆಸೆವುದು । ದಾರ ವಿಲಾಸದ ನವ ॥ ೧ ॥
ಬಾಗೆ ವಾದರಿ । ನಾಗಸಂಪಿಗೆ । ಹೂಗಳಿಂದಲಿ । ರಾಗದಿಂದಲಿ ।
ರಾಗವಮುರ್ಕೆಸುತೆಸೆವುದು । ಭೋಗಿ ಜನಾವಳಿಗಿದು ॥ ೨ ॥
ಮಂದಮಾರುತ । ನಿಂದ ಮಾನಸಾನಂದ ಮೀಯುವ ಸಂಧ್ಯಾಕಾಲದೋಳ್ ।
ಸುಂದರಿಯರು, ಪ್ರಿಯರೊಂದಿಗೆ ಸಾಂದ್ರ ವಿನೋದದೊಳಿರೆ ॥ ೩ ॥

## ಪ್ರಥಮಾಂಕ

### ದೃಶ್ಯ : ಅರಣ್ಯ

(ಕಂಸಾಸುರನು, ಪ್ರಲಂಬಾಸುರ, ಅಗ್ನಿನೇತ್ರ ಮೊದಲಾದವರೊಡನೆ ಪ್ರವೇಶಿಸುವನು)

ಕಂಸ : ಕಂದ

ಫಡಫಡ । ಜಡ ಜಭವಾಂಡವ ।
ಗಡಗಡ ನಡುಗಿಸುತೆ ಸಿಂಹಗರ್ಜನದಿಂದಂ ॥
ಕಡುಗಲಿಯೆನಿಪೀ ಕಂಸಂ ।
ಗಡ । ವಿಪ್ರಾಧಮಕೃತಾಧ್ವರ ಪ್ರಧ್ವಂಸಂ ॥

ಕಂಸ : ಹಾಡು — ರಾಗ : ಹಂಸಧ್ವನಿ - ರೂಪಕತಾಳ

ಮದಾಂಧರೆನಿಪ ಮುನಿಗಳ ಘನ । ಮದವ ಸದೆವೆನೀಕ್ಷಣಂ ॥ ವಿಚಕ್ಷಣ
ಪದಾಂಬುಜದೊಳಗೆರಗಿಪೆ ವರ । ವರಿಯೊಳಾಂ ಸುಲಕ್ಷಣಂ ॥ ಅ ॥

ಅದಮರನುರೆ ಪದದೊಡೆಯುವೆ । ವಿಧವಿಧದೊಳು ವಧಿಸುವ ॥
ಸುಧಾಶನರನು ಬೆದರಿಸಿ ಖಳ । ರುಧಿರಪಿಳಿಯೊಳಿರಬುವ॥ ೧ ॥
ಅಜಹರಿಹರ ರದಿರುವ ವರ । ವಿಜಯಘೋರ ಘೋಷದಿಂ ॥
ದಿ ಚಾಳಿಗಳನು ಹಿಂಡುತ ಮಿಗೆ । ನಿಜದಿ ನಲಿವ ತೋಷದಿಂ ॥ ೨ ॥

## ದೃಶ್ಯ : ತಪೋವನ

**(ಕೌಂಡಿನ್ಯ, ಅಂಗೀರಸ, ಶಾಂಡಿಲ್ಯಾದಿ ಋಷಿಗಳು ಯಜ್ಞವಾಟಿಕೆಯಲ್ಲಿರುವರು)**

**ಋಷಿಗಳು : ಹಾಡು** **ರಾಗ : ಕಲ್ಯಾಣಿ - ರೂಪಕ ತಾಳ**

ಶ್ರೀಕರ ವರಮಗುಣಾಕರ ಘನನೀಲ ವನಮಾಲ ವಿಜಯ ।
ಜಯ ಕಮಲಾಲೋಲ ॥ ಪ ॥
ಸದಾನಂದಮಯಾನಂತ । ವಿಧವಿಧಸುಕಲಾಕಲಾಪ ।
ವೇದವೇದ್ಯ ಮಾಧವ ಶ್ರೀ ॥ ೧ ॥
ದಯಾಧಾಮಜಯಾ ರಾಮ ।
ಜಯಜಯ ವಿಭವಾಭಿರಾಮ । ಜ್ಞಾನದಾನ ಪಾವನ ಶ್ರೀ ॥ ೨ ॥

**ಎಲ್ಲರೂ : ಹಾಡು** **ರಾಗ : ಬೇಹಾಗ್ - ಆದಿತಾಳ**

ಶ್ರೀಕರವರ ಹುತವಾಹನ ಪೊರೆಯೈ ॥ ಪ ॥
ಲೋಕಾಧಾರ ದಯಾಸಾಗರ ॥ ಅ.ಪ. ॥
ಬೃಂದಾರಕಮುಖ । ವಂದಿತ ಬುಧಗಣ ॥ ಸಾಂದ್ರದ್ಯುತಿರುಚಿ । ಬಂಧುರರೂಪ॥
ಅರುಣಾಂಶುಭಾನಸಪ್ತಜಿಹ್ವ । ಸರ್ವಭಕ್ಷಕ ॥
ವರ । ಮೇಷವಾಹ । ದೋಷದಾಹ । ಸತ್ಕ್ರಿಯಾವಹ ॥
ಸುರವಿನುತ । ಸುರುಚಿರಚರಿತ । ಪವನಸಖ । ವಿವಿಧಶಿಖ ॥ ೧ ॥

**ಅಂಗೀರಸ : ಹಾಡು** **ರಾಗ : ನಾದನಾಮಕ್ರಿಯ - ರೂಪಕತಾಳ**

ದೇವದೇವನೆ ಪೊರೆಯೈ । ರಮಾಧವ ॥ ಪ ॥
ಪಾವನಭಜಕಜ । ನಾವನಘನಗುಣ ।
ಜೀವನದಾಯಕ । ಶ್ರೀವನಜಾಂಬಕ ॥ ೧ ॥

ಧರ್ಮಸಂಸ್ಥಾಪನ । ಕರ್ಮ ನಿರಂಜನ ।
ದುರ್ಮದದಾರಣ । ನಿರ್ಮಲಸುಗುಣ ॥ ೨ ॥
ದಾನವಕಂಸಸಿಂ । ದೀನತ್ರಯಾಂತೇಪು । ನೀನೆನಮಗೆ ಗತಿ । ಮಾನಿನೀಚರಿತ ॥ [illegible] ॥

**ನಾರದ : ಹಾಡು** — **ರಾಗ : ದೇಶಿತೋಡಿ - ಏಕತಾಳ**

ಸರಸಚರಿತ ಜಯ । ಸುರ ಮುನಿ ಸಂಕುಲ ಗೀತಾ ॥ ಪ ॥
ಪರಮವಿಭವ ಶ್ರೀ ಸುವಿಹಾರ ॥ ಅ.ಪ. ॥
ನಿರುಪಮಗುಣಹಾರ । ನೀತಿಸಾರ । ಉದಾರ । ವರದ ಭಯನಿವಾರ ।
ವಾರಿದಾಕಾರ ವೀರ ॥ ಅರಿನಿಕರಪಿದಾರ । ಅನತಾಮರ್ತ್ಯಪಾರ ॥
ಸುರುಚಿರಸುಖಪೂರ । ಸೂರ್ಯಚಂದ್ರಾಕ್ಷಧೀರ ।
ವರಮೌನಿಸ್ವಾಂತಾಗಾರ । ಶರನಿಧಿತನುಜಾಪ್ರಿಯ ಸೀರ ॥ ೧ ॥

**ಕೌಂಡಿನ್ಯ ಹಾಗೂ ಇತರರು : ಹಾಡು** — **ರಾಗ : ಕಲ್ಯಾಣಿ - ಆದಿತಾಳ**

ಮುನಿಕುಲಪಾಲ । ವನಮಾಲ ॥ ಪ ॥
ವಿನುತದಿವಿಜಕುಲ । ಸುಖಕರಲೀಲ ॥ ಅ.ಪ. ॥
ವಿಶ್ವಪಾಲ ಕಮಲಾಸುವಿಲೋಲ । ಶಾಶ್ವತಾತ್ಮ ನವನೀರದನೀಲ ॥
ಧರ್ಮಶೀಲ ದಿವಿಜಾವನಶೀಲ । ಕರ್ಮಪಾಲ ಖಳದಾನವಕಾಲ ॥
ಪೊರೆವುದು ಕರುಣದಿ ಮುರಮಥನಾ ॥ ೧ ॥

**ದೃಶ್ಯ : ವನಪ್ರದೇಶ (ಸ್ತ್ರೀಯರು ವನಶಂಕರೀ ಪೂಜೆಯನ್ನು ಮಾಡುತ್ತಿರುವರು)**

**ಸ್ತ್ರೀಯರು : ಹಾಡು** — **ರಾಗ : .... - ರೂಪಕತಾಳ**

ಶ್ರೀಗೌರೀಪಾಲಿಸು ಶೈಲರಾಜಸುತೆ । ಶುಭಾಂಚಿತೆ । ಸುರಾರ್ಚಿತೆ ॥ ಪ ॥
ಮಾತೆ ಸುರಕುಲವಿನುತೇ । ಪೂತೆ ಘನಗುಣಭರಿತೇ ।
ಖ್ಯಾತೆ ಶುಭಕರಚರಿತೇ । ಭೂತ ಪತಿಪ್ರಿಯದಯಿತೇ ॥
ಪಾತಕಹರೆ । ಪಾವನೆ ಪೊರೆ । ಶೀತಳಕಿರಣಾಭರಣೇ ॥ ೧ ॥
ಮಂಗಳಾಕರೆ ಲಲಿತೇ । ತುಂಗವೈಭವಮಹಿತೇ ।
ಭಂಗಿತಾಖಿಲದುರಿತೇ । ಭೃಂಗಚಿಕುರೋಲ್ಲಸಿತೇ ॥
ಮಾಂಗಲ್ಯವನಿಂಗದೆ ಕೊಡು । ಶೃಂಗಾರತರಂಗಿಣಿ ನೀಂ ॥ ೨ ॥

ಕಂಸ : ಕಂದ

ಸುರಲೋಕದ ಗಂಧರ್ವಾ ।
ಮರ ಕಿನ್ನರ ರಮಣಿಯರ್ಕಳಾ ಚೆಲ್ವಿಂದಂ ॥
ಪಿರಿದೆನಿಸಿದ ಲಾವಣ್ಯದೆ ।
ಮೆರೆವೀ ಸಾರಂಗಲೋಲ ನೇತ್ರೆಯರಾರೋ ॥

ಕಂಸ : ಹಾಡು ರಾಗ : ಕೇತಾರ - ರೂಪಕತಾಳ

ಕಮಲನೇತ್ರೆಯರಾರೊ ಕಾಣೆನು ನಾಂ । ಕಾಂತಾಮಣಿಯರು ॥ ಪ ॥
ಮುದಾಕಲಿಕ । ಮೃದೂಕ್ತಿಗಳ । ಮದಾಲಸೆಯ । ರದೆಂತಿಹರು ॥ ಅ.ಪ. ॥
ಮಲ್ಲಿಕಾಸುಮ । ಚೆಲ್ಲಿದಂತಿರೆ । ಪಲ್ಲವಾಧರ । ದಲ್ಲಿಕಿರುನಗೆ ॥
ನಲ್ಲೆಯರುಪ್ರ । ಫುಲ್ಲ ಸುಮಶರ । ವೆಲ್ಲವಸುರಿ ॥
ದಿಲ್ಲೆನ್ನಯ । ಕಲ್ಲೆದೆಯನು । ಝುಲ್ಲೆನಿಪರು ॥ ೧ ॥
ಮಂದಯಾನದಿಂ । ದಿಂದುಹಂಸೆಯ । ನಿಂದಿಸುತ್ತಾ । ನಂದಲೀಲೆಯಿಂ ॥
ಬಂದುಬೆಡಗಿ । ನಿಂದಲೆಂತು । ನಿಂದಿರ್ಪರು ।
ಕಂದರ್ಪನು । ಕುಂದಿಸಿರುವ । ನಿಂದೆನ್ನನು ॥ ೨ ॥

ಕಂಸ : ಹಾಡು ರಾಗ : ಹಂಸಧ್ವನಿ - ಆದಿತಾಳ

ಜಡಳೆ ಬಿಡದೆ ಪಿಡಿದು ತಲೆಯ ಕಡಿದುಬಿಡುವೆ ನಾಂ ॥ ಪ ॥
ಬಂದು ವಿನಯ । ದಿಂದೆ ಹರುಷ । ಮೊಂದಿಸದುರೆ ಹರಟುವೆ ॥
ಛಲದೆ ನಟಿಸುವೆ ॥ ೧ ॥
ಅಕ್ಕರದಿ ಸು । ಖಕ್ಕೆ ಕರೆಯೆ ಠಕ್ಕು ತೋರಿ ನಡೆಯುವೆ ॥ ಸೊಕ್ಕಿ ನುಡಿಯುವೆ ॥ ೨ ॥

## ದೃಶ್ಯ : ಮಧುರಾಪುರ

## (ಬೀದಿಯಲ್ಲಿ ನಾರದರ ಪ್ರವೇಶ)

ನಾರದ : ಹಾಡು ರಾಗ : ಕಲ್ಯಾಣಿ - ಆದಿತಾಳ

ವಸುದೇವಜಾತ । ವಂದಿಪೆನೈ ॥ ಪ ॥
ವಸುದೇವ ಜಾಲ । ವಂದಿತಪಾದ ॥ ಅ.ಪ. ॥

ಮಂದರಗೋದ್ಧಾರೀ । ಮಾನಿತಶೌರೀ । ಸಿಂಧುರಪಾಲಪ । ಸುಂದರಮಾಧವ ॥ ೧ ॥
ನಂದಕುಮಾರ । ನತಜನವಿಚಾರ । ಸಿಂಧುಶಯನಗೋ । ಪಿಂಛಮುಕುಂದ ॥ ೨ ॥

# ದ್ವಿತೀಯಾಂಕ

## ದೃಶ್ಯ : ಮಧುರಾಪುರದ ಬೀದಿ

**ಪ್ರಲಂಬಾಸುರ : ಕಂದ**

ನಾರಾಯಣನಂ ಭಕ್ತಿಯೊ ।
ಳಾರಾಧಿಪ ಖಳರ ತಂಡಮಂ ಸದೆಬಡಿದೆಂ ॥
ಸಾರುತೆ ಶುಭವಾರ್ತೆಯನಿದ ।
ನಾರಾಜೇಂದ್ರಂಗೆ ಪೇಳ್ವ ಮುದಮನಗದವಂ ॥

## ದೃಶ್ಯ : ಕಂಸನ ಸಭೆ

**ವೈತಾಳಿಕರು : ಹಾಡು** ರಾಗ : ನೋಟ್ - ಏಕತಾಳ

ಭಯವಿದೂರ । ನಯವಿಚಾರ । ಜಯ ಜಯ ಸುರಕುಲವಿದಾರ ॥ ಪ ॥
ಜಯಕರಘೋರ । ಚಯಕುಠಾರ । ಜಯ ಜಯ ವರಸಮರಧೀರ ॥ ಅ.ಪ ॥
ಪಟುಭಟಪಟಲಾಧಿಪಾ । ಧರಾಧಿಪಾ । ಕರಿನಖಾಸನಾಕರಾ ।
ಪ್ರಭಾಕರಾ । ರಟದುರುತರವಾದ್ಯಸಹಿತ ಗೀತವೈಭವಾ ॥ ೧ ॥

**ಕಂಸ : ವೃತ್ತ ॥** ರಾಗ : ನಾಟಿ

ಪಗೆಗಳ್ ಮತ್ಪ್ರಬಲಪ್ರತಾಪ ವಿಲಯಾಗ್ನಿ ಜ್ವಾಲೆಯಿಂ ಧಗ ।
ದ್ಧಗಿಸಿರ್ಪರ್ ಭುವನೈಕ ಭೀತಿಕರನಾದೆನ್ನಿಂದೆ ಸಂರಕ್ಷೆಯುಂ ॥
ಖಗ ಗಂಧರ್ವ ಸುಪರ್ವ ಸಿದ್ಧ ಕುಲಮುಂ ಬೇಡುತ್ತುಮಿರ್ಕುಂ ಗಡಾ ।
ಜಗದತ್ಯದ್ಭುತ ಶೌರ್ಯನಾದ ನನಗಿನ್ನಾರ್ ಸಾಟಿ ಮೂಲೋಕದೊಳ್ ॥

**ಕಂಸ : ಕಂದ**

ಆ ವಸುದೇವಾಧಮನಂ ।
ದೇವಕಿಯಂ ನೀಚಕೃಷ್ಣನಂ ವಧಿಸುತ್ತಂ ॥

ಆವೈರಿರಕ್ತವರ್ಷದಿ ।
ನೀವಿಧಕೋಪಾಗ್ನಿಯಂ ವಲಂ ನಂದಿಸುವೆಂ ॥

**ಕಂಸ : ಕಂದ**

ಅರ್ಭಕರಂ ಪಿಡಿದಾಂ ತ ।
ದ್ಗರ್ಭವನುರೆ ಭೇದಿಸುತ್ತೆ ಪರಮಾನಂದಾ ॥
ವಿಭ್ರಾವ ಮೊಂದುವೀ ಸಂ ।
ದರ್ಭಂತಾನೊದಗೆ ಮನದಚಿಂತೆಯನಳಿದೆಂ ॥

**ಕಂಸ : ಹಾಡು** **ರಾಗ : ಹಂಸಧ್ವನಿ - ಆದಿತಾಳ**

ಮೋದ ವಿ । ನೋದವ ದೊದಗುವುದೆನಗೆ ॥ ಪ ॥
ಅಧಮರ । ವಧಿಸುವ । ವಿಧ ವೊದಗಿಮಿಗೆ ॥ ಅ.ಪ. ॥
ಪುಂಡರ ಫಿಡಿವೆ । ದಂಡಿಸಿ ಕಡಿವೆ ।
ಖಂಡಿತ ಪಟುರಿಪು ಕುಲನೆನಿಪೆ । ಚಂಡಮುಯುಶವನು ನರಗಳಿಪೆ ।
ಅಧಮ । ರೆದೆಯ । ನೊದೆವೆ । ಸದೆವೆ ॥ ೧ ॥
ಕಡುಕೆಡುಗರ ಪಿಡಿ । ದೊಡಲನೆ ಕಡಿದು ।
ಸಂತಸ ದುಲಿವ । ಶಾಂತಿಯು ತಳಿವೆ । ವಂಧಗೆ ಬಾಗಿ ವಧುವನು ಸೆಳೆವೆ ।
ಚಿಂತೆಯನಾಂ ಜವದಿಂ ಕಳೆವೆ ।
ಜಡರ । ಕಡುಪ । ನಡಗಿ । ಸಿಡುವೆ ॥ ೨ ॥

## ದೃಶ್ಯ : ಗೋಕುಲಪ್ರಾಂತ
## (ಕೃಷ್ಣ, ಮಕರಂದ ಯುಗಳ ಗೀತೆ)

**ರಾಗ : ಕಲ್ಯಾಣಿ - ಆದಿತಾಳ**

ಕೃಷ್ಣ: ಕ್ರೀಡೆಯನಾಡುವ ಬಾ ಸಖಾ ॥ ಪ ॥
ನೋಡು ವಿನೋದರದೇಂ ಸುಖ ॥ ಅ. ಪ.॥
ಕರುಗಳ ನಾಡಿಸಿ । ತರುಗಳ ನೆಳಲೊಳು ॥

ಮುರುಳಿಯ ನೂದುತೆ । ಹುರುಪದೆ ಕುಣಿಯುತೆ ॥ ೧ ॥
ಮೆಲುಕನು ಹಾಕುತೆ । ನೆಳಲೊಳು ತುರುಗಳು ।
ಮಲಗಿರುವವ ನಡೆ । ನಲಿಯುತೆ ಸಾಟ್ವದಿ ॥ ೨ ॥

ಮಕರಂದ : ಊಟವಮಾಡುವ ಬಾ ನಸು । ಆಟದೊಳಹುದಿನ್ನೇಂಸುಖ ॥ ಪ ॥
ಗೋಪಕನ್ಯೆಯರೆಲ್ಲ । ಕೋಪಿಸಿ ನಿನ್ನೊಳು ।
ಪೋಪರು ನಿನಗಿನ್ನೇಪರಿಸರಸವು ॥ ೧ ॥

(ರಾಧೆ ಸಖಿಯರೊಡನೆ ಪ್ರವೇಶ)

ರಾಧೆ : ಹಾಡು — ರಾಗ : ಜಂಜೂಟಿ - ಆದಿತಾಳ

ಮಾನಸಕೆ ಪರಮಾನಂದಕರವಿದು । ಮನೋಹರೆಯರೇ । ಕ್ರೀಡೆಯು ॥ ಪ ॥
ತಳಿರ ಮಂಟಪಂ । ಗಳ ನಾಲಿಸೊಳು । ಲಲನೆಯುರುರೆಚರಿಸುವ ।
ಒಲಿದುಕೂಡುವ ।
ನಲಿದು ಪಾಡುವ । ಸಲೆ ಸುಖದೊಳಿಯುವ ಮನೋಹರೆಯರೇ
ಕ್ರೀಡೆಯು ॥ ೧ ॥

ಮುದದಿ ನೆರೆಯುತೆ । ಮದಿರಾಕ್ಷಿಯರೆ । ಮೃದುಸುಮಗಳ ಮುಡಿಯುವ ।
ಮಧುವ ಕುಡಿಯುವ । ಪದವು ಕುಣಿಯುವ । ವಿಧವಿಧದೊಳುಮಿಗೆ ।
ಮನೋಹರೆಯರೇ । ಕ್ರೀಡೆಯು ॥ ೨ ॥

ರಾಧೆ : ಹಾಡು — ರಾಗ : ಮಾಂಡ್ - ಆದಿತಾಳ

ರಂಗ ನಿನ್ನಾಂ । ಸಿಂಗರಿಪೆ । ನಂಗಜನರಗಿಣಿಯುಂದದದಲಿ ॥ ಪ ॥
ಅಂಗನೆಯರ ಭ್ರೂ । ಷಂಗಳ ನಿಡುತಲಿ ।
ಭೃಂಗ ಚಿಕುರ ಲೀಲಾಚತುರ ॥ ಅ.ಪ. ॥
ಮಿಂಚಿನ ತೆರದೊಳು । ಮಿಂಚುತಲಿರುವ । ಕಾಂಚನ ಚೇಲವ ನುಡಿಸುತಲಿ ॥
ಚಂಚಲೆಯರ ನೀಂ । ವಂಚಿಪ ತೆರದೊಳು । ಸಂಚನೆ ಗೈವನು ಕರುಣಗುಣ ॥ ೧ ॥

## ದೃಶ್ಯ : ಗೋಕುಲ ಪ್ರಾಂತ್ಯ
## (ಅಕ್ರೂರನ ಪ್ರವೇಶ)

**ನಂದ : ಕಂದ**

ಘೋರಂನಿಷ್ಠುರಕಾರ್ಯಕ ।
ರೋರಂಕಂಸಂ ಕುಮಾರರೊಳ್ ಮಾತ್ಸರ್ಯಂ ॥
ಮೀರಿರೆ ಕರೆಸಿರವೇಳ್ಕುಮ ।
ದೇರೀತಿಯೊಳೆನ್ನ ಕಂದರಂ ಕಳಿಪುವೆನಾಂ ॥

**ನಂದ : ಹಾಡು** — ರಾಗ : ಮುಖಾರಿ - ಆದಿತಾಳ

ನಾನೀಗಳೇರೀತಿಯೊಳಿನ್ನು । ಸೂನುಗಳಂ । ಕಳುಹಲಿ ಆಹಾ ॥ ಪ ॥
ನೀಚಕಂಸ । ನಮಿತಕ್ರೂರನಯ್ಯೋ ।
ಏನಮಾಳ್ಪನೋ । ಆ ನಂದನರ ॥ ಅ.ಪ. ॥
ವೈರಮಾಂತ ಖಳನು । ಮಾತ್ಸರ್ಯವಂ । ತೋರಲ್ಕಯೀ - ಪಗಿಗ್ಗದನೋ ॥
ಮಾರಾಂತು ಸುಕು । ಮಾರ ರಾಮಕೃಷ್ಣ ।
ರೇರೀತಿಯಿನ್ನು । ಸಾರುವರಾಹಾ ॥ ೧ ॥

## ದೃಶ್ಯ : ಕ್ರೀಡಾವನ
## (ಕೃಷ್ಣನು ಗೋಪಿಯರೊಡನೆ ನಾಟ್ಯವಾಡುತ್ತಿರುವನು)

**ರಾಧೆ : ಹಾಡು** — ರಾಗ : ಕಾಪಿ - ಏಕತಾಳ

ಶ್ರೀಲೋಲ । ವಿಶಾಲಭುಜಯುಗ । ಕಲಾಕಲಾಪ ಬಾಲಲೀಲಾ ॥ ಪ ॥
ಜಲಧಿಶಯನ । ಜಲಜನಯನ । ಕಾಲವಯೋಧರ । ಕಾಂತಿಧರ
ಲಾಲಿತನಿರ್ಜರ । ಜಾಲಾದರ ॥ ಜಲರುಹೇಶ । ಸುಮಪ್ರಕಾಶ ।
ಲೋಲಕುಂಡಲ ॥ ೧ ॥
ವರಮುನಿವಿನುತ । ಪರಮಚರಿತ । ವಾರಣರಕ್ಷಣ । ವೇದನುತ ॥
ನೀರಜಪದ್ಮ ಸಮಾರಾಧಿತ । ಧೀರನೃಸಿಂಹ । ಪೊರೆವುದೆಮ್ಮ ।
ಶೌರಿಮಾಧವಾ ॥ ೨ ॥

## (ಗೋಪಿಯರು, ಅಕ್ರೂರ ದ್ವಂದ್ವಗೀತೆ)

**ರಾಗ : ಹಂಸಧ್ವನಿ - ಆದಿತಾಳ**

**ಗೋಪಿಯರು :** [illegible] ॥ ಪ ॥
ಕೆಡುಗನೇ । ಬಿಡುತೆ । ಸಡಗರವನು ವಡೆ ॥ ಅ.ಪ. ॥

**ಅಕ್ರೂರ :** [illegible] ॥ ಪ ॥
ಅನುವಿನಿಂ । ನಿಜವ । ವಿನಯದೊಳೊರೆವೆ ॥ ಪ ॥

**ಗೋಪಿಯರು :** ಪರಮತಂತ್ರವಂ । ವಿರಚಿಸುತ್ತೆನೀಂ ।
ಸರೋಜಾಂಬಕನ । ಕರಂನೀಂಕರೆವೆ ॥ ೧ ॥

**ಅಕ್ರೂರ :** ದಿಟವಕಾಣದೆ । ಕುಟಿಲನೆಂದುನೀಂ ।
ಕಠೋರೋಕ್ತಿಯಿಂ । ಹಠಂಮಾಡುವರೆ ॥ ೨ ॥

**ಗೋಪಿಯರು :** ಕಮಲವದನನನ । ಕುಮುದನಯನನ ।
ಸುಮಶರ । ಸಮಶುಭ । ತಮನಬಿಡು ॥ ೩ ॥

**ಅಕ್ರೂರ :** ಕಮಲಮುಖಿಯರೇ । ಭ್ರಮೆಯತೊಲಗಿಸಿ ।
ಯಮಿನುತವಿಮಲನ । ನಮನಬಿಡಿ ॥ ೪ ॥

**ಗೋಪಿಯರು :** ಸಾರಲೀಲೆಯಿಂ । ಸರಸದೊಳಿರುವ ।
ಸಾರಸನಯನನ । ಕೋರಲುದೊರೆವನೆ ॥ ೫ ॥

**ಅಕ್ರೂರ :** ಸಾರಸಾಂಬಕಂ । ಕರೆದರೆಬರುವ ।
ನೀರಜಮುಖಿಯರೆ । ಮೀರಿ ನುಡಿಯದಿರಿ ॥ ೬ ॥

**ಕೃಷ್ಣ : ಹಾಡು** **ರಾಗ : ಬೇಹಾಗ್ - ಆದಿತಾಳ**

[illegible] ॥ ಪ ॥

**(ಗೋಪಿಯರನ್ನು ನೋಡಿ)**

[illegible] ।
ಹೋರಾಡಿತಡೆವರೆ । ರಾ - ಜನಾಜ್ಞೆಯಿಂದಿವಂ ।
[illegible] ॥ ೧ ॥

## ದೃಶ್ಯ : ಗೋಕುಲದ ಬೀದಿ

(ರಾಧಾ - ಗೋಪಿಯರ ಪ್ರವೇಶ)

**ಗೋಪಿಯರು : ಹಾಡು** — ರಾಗ : ಕಮಾಚ್ - ಆದಿತಾಳ

ಸರೋಜದಳ ಸಮಲೋಚನ | ವರಘನನೀಲ ಮನೋಹರ ಶುಭಕರ || ಪ ||
ಮಂಗಳಾಂಕಶೀಲ | ವಿಮಲ | ಭುಜಂಗಶಾಲ ಬಾಲ || ತುಂಗತರಭಯದ |
ಪಾಂಗನುವಿನಯ | ಕಲಿತಸುಗುಣಗಣ | ವಿಲಸಿತ | ಸುಲಲಿತ || ೧ ||
ಗೋಪಿಕಾವಿನೋದ | ಸುಖದ | ಮನೋಜ್ಞವೇಣುನಾದ || ಶ್ರೀ ವರವಿಲಸಿತ |
ತಾಪವಿರಹಿತ | ಮುನಿಪ | ವಿನುತನಿಜ | ತನುಜಿತ | ಸುಮಶರ || ೨ ||

**ನಾರದ : ಹಾಡು** — ರಾಗ : ಬೇಹಾಗ್ - ಆದಿತಾಳ

ಗೋಪವಧೂಲೋಲ | ನಿರಾಕುಲ || ಪ ||
ಸುಲಲಿತನರ್ತನ | ಸುಂದರಲೀಲಾ | ವಿಲಸಿತವನಮಾಲ || ಅ.ಪ. ||
ಯಮುನಾತೀರ | ರಮಣೀಯಸ್ಥಲ | ರಮಿತಗೋಪೀಬಾಲ | ನಿರಾಕುಲ || ೧ ||
ಮಂಜುಳಭಾಷಾ | ರಂಜಿತಗೋಪಾ | ವ್ರಜಮಧುರವೇಷ | ನಿರಾಕುಲ || ೨ ||

## ದೃಶ್ಯ : ಯಮುನಾ ನದಿತೀರ

(ಅಕ್ರೂರನು, ಶ್ರೀ ಕೃಷ್ಣ ಬಲರಾಮರನ್ನು ರಥದಲ್ಲಿ ಕುಳ್ಳಿರಿಸಿಕೊಂಡು ಬರುವನು)

**ಅಕ್ರೂರ : ಕಂದ**

ಯುಗಶತಮಾನ ಮಹಾತ್ಮನ |
ನಗಣಿತತಪಮೆಸಗಿ ಕಾಣರಾ ಮುನಿವರರುಂ ||
ತ್ರಿಗುಣಾತ್ಮಕನಾದಾ ಶ್ರೀ |
ಜಗದೀಶನ ಕಂಡ ನನ್ನ ಪುಣ್ಯಮದೆನಿತೋ ||

**ಅಕ್ರೂರ : ಹಾಡು** — ರಾಗ : ಮೋಹನ - ಆದಿತಾಳ

ಶ್ರೀರಮಣಾಘನ | ಕರುಣಾಭರಣ || ಪ ||
ವಾರಿಜಸೋದರ | ವಾರಣವರದ | ಪೂರಿತಸುಮಹಿಮ ಜಯ || ಅ.ಪ. ||

ತ್ರಿಭುವನಪಾಲನ । ವಿಭವವಿಶಾಲ ಶ್ರೀ । ಶುಭಗುಣಭಾಸುರ ।
ಶುಭಕರ । ಫಲಕರ । ಪ್ರಭುವರ । ಶರನಿಧಿಶಯ ॥ ೧ ॥
ಭವಭಯಹರಣಾ । ದಿವಿಭವಶರಣಾ । ಘನವನಜಚರಣ ।
ಅವಯವ । ರುಚಿಜಿತ । ಕುವಲಯ । ದಿವಿಜವಿನುತ ॥ ೨ ॥

## ತೃತೀಯಾಂಕ

### ದೃಶ್ಯ : ಮಧುರಾಪುರ (ಅಗಸನ ಪ್ರವೇಶ)

**ಅಗಸ : ಹಾಡು**

ರಾಗ : .......

ಅಗಸನಿಂದಲೆ ಜನಕೆ । ಸೊಗಸು ಕಾಣ್ಲಾ ।
ಇದ । ನಗಾರಮಾಡ್ಕೋಬಟ್ಟೇ । ಮಗನ್ಯಾರ್ಲಾ ॥ ಪ ॥
ನಿತ್ತಾಲು ಕತ್ತೇಗ । ಒತ್ತ ಬಟ್ಟೆಯ ತಂದು ।
ಗೊತ್ತಾದ ದೊಡ್ಡಮನಸ್ರ । ಸೆತ್ತೀಮ್ಯಾಗಿಕ್ಕೋಯಿಯಾ ॥ ೧ ॥
ಅರಸರ ಸೊಗಸಾದ । ದಿರಸೆಲ್ಲ ನಿತ್ತಿತ್ತ ।
ವರಿಸ್ಯಾಗಿ ದರಿಸಿಕೊಂಬೊ । ಪುರುಸ ನಾನಲ್ಲಯ್ಯಾ ॥ ೨ ॥
ಬಡತನವೆಲ್ಲ ಮುಚ್ಚಿ । ಬಿಡದೆ ಮರುವಾದೆ ಕೊಡೋದು ।
ಮಡಿವಾಳಿ ಮಾಡಿದೊಳ್ಳೇ । ಮಡಿಕಾಣ್ಲಾ ॥ ೩ ॥

**ರಜಕ -ರಜಕಿ : ಹಾಡು**

ರಾಗ : ನಾದನಾಮಕ್ರಿಯ - ಆದಿತಾಳ

**ರಜಕ :** ಬಾರೇ ಬಾರೇ ಪುಡಿಗೇ । ಸಾರು ಬಾರೇ ಕಿಗಿಗ ॥ ಪ ॥
ಮಾರಾಜರ ಮನೆಗೋಗಿ । ಮರುವಾದ ತಕ್ಕಂಬರೋಸ ॥ ಅ .ಪ. ॥

**ರಜಕಿ :** ಬೊತ್ತಿನ್ನಿಕಾಣೋ । ದಡಬಡ । ಬೊತ್ತಿನ್ನಿ ಕಾಣೋ ।
ನೆತ್ತಿ ಬಾಯಿಮಾಡಿಕೊಂಡೀ। ಪತ್ತೇ ಬಲು ಕೂಗ್ತಯಲ್ಲೇ ॥ ೧ ॥

**ರಜಕ :** ಯೆತ್ತೋಗಿದ್ದೇ । ಶಿನ್ನಾ । ಯೆತ್ತೋಗಿದ್ದೇ ।

**ರಜಕಿ :** ಅತ್ತೆಯ ವರಿಕ್ಕಳಿಸಿ । ಕತ್ತೆಯ ಬಿಟ್ಬಂದೆ ಕಾಣೋ ॥ ೨ ॥

**ರಜಕ :** ಕೊಳ್ಳೇ ಗಂಟ । ಪೊ । ತ್ಕೊಳ್ಳೇ ಗಂಟ ।
ಕೊಳ್ಳೆಲ್ಲಪ್ರಳಿಕೈತೆ । ಕಳ್ಳೆಲ್ಲ ನೊಯ್ಯೈತೆ ॥ ೩ ॥

ರಜಕಿ : ಗಳ್ಳಾಟವಾಡಬ್ಯಾಡ । ಕೊಳ್ಳಿಯಿಕ್ಕೇನು ಮಕ್ಕೆ ।
ಮುಳ್ಳುಮುಳ್ಳೇ ಯೆಳ್ಳೇ ನೀನು । ಗುಳ್ಳೇಸರಿಯಂತೋನೆ ॥ ೪ ॥

ರಜಕ : ಮೂಟೇ ಕೊಡಾಕ ಬಂದ್ರೆ । ನ್ಯಾಟೇ ತಿಪಿಯಾಕೆ ಬತ್ತೀ ।
ನೋಟೊಂತೆಪ್ಪೇನ್ ನಾ ಬಿಡೆ । ಯಿಪಾಟೊಂದ್ಯೇಗಾಕೆ ಬಾರೆ ॥ ೫ ॥

ರಜಕಿ : ಮೂಟೇ ನನ್ನಾ ಗೊರಿಸಿ । ಆಡಾಡಿಕೊಂಡೋಗಾಕೆ ।
ಯಿಪಾಟೊಂದುಪಾಯ ಮಾಡೀ । ರಾಟ್ನೆ ಬಿಟ್ಟೇನ ॥ ೬ ॥

ರಜಕ : ನಗುನಾರಕಂಗಂದೆ ಕಾಣೆ । ಬಿಗಡಾಯಿಸಕಂಬಾದೆ ಜಾಣೆ ।
ಸೊಗಸಾದ ನನ್ನರಗಿಣಿ ಕಾಣೆ । ಸೊಗಸೊಗುತಾ ನಾ ಬನ್ನಾಣೆ ॥ ೭ ॥

## (ಬಲರಾಮ - ಕೃಷ್ಣರ ಯುಗಳ ಗೀತೆ)

ರಾಗ : ಬೇಹಾಗ್ - ಆದಿತಾಳ

ಬಲರಾಮ : ಘನ ವಿನೋದದಿಂದೀ ಪುರಂ ಸಾರ್ವ ।
ಸಾರಿದನುಜಾಧಿಪನ ಮನೆ ಸೇರ್ವ ॥ ಪ ॥
ಸುವಿಲಾಸ ಮಿಾರಿ । ದಿವಿಜಾಪಕಾರಿ
ವಿವಿಧಾನಂದ ವಿನೋದದಿರುವ ॥ ಅ.ಪ.॥

ಕೃಷ್ಣ : ಆಕಾಮುಕ ಪೂಟೆ ಗತಿಮೋದದಿಂದೀಗ । ನಾಂಪ್ರೋಗಿ ನೋಂದಾಗಿ
ನಲಿದಾಡುವ ॥ ಸಾರು ರಾಮ ।
ಸಮರಭೀಮ । ಸರಸೀಜಸಖಸಮಧಾಮ ॥ ೧ ॥

ಬಲರಾಮ : ಅಕ್ರೂರ ಪೇಳ್ದಂತೆ । ಅಕ್ರೂರನೆಡೆಗೈದಿ ।
ಆಕ್ರೋಶದಿಂದೊಪ್ಪುವಾ ಕಂಸನ ।
ನಲಿದು ನೋಡಿ । ಛಲವ ಮಾಡಿ ।
ಸಲೆ ಮೋದದಿಂದೀಗ ಗೆಲುವ ॥ ೨ ॥

ಕೃಷ್ಣ : ಪುರದಂದವ ನೋಡಿ । ಸರಸಂಗಳನಾಡಿ ।
ಭರದಿಂದಲಾಮಂದಿರಂ । ಸೇರುವ ।
ಕೇಳು ರಾಮ । ಶರಣಧಾಮ । ದರಹಾಸಗುಣಚಿತ್ತನೋ ॥ ೩ ॥

## ದೃಶ್ಯ : ಸುಗಂಧಕಾರರ ಬೀದಿ

**ಕುಬ್ಜೆ : ಹಾಡು** **ರಾಗ : ಬೇಹಾಗ್ - ಆದಿತಾಳ**

ಪಾಲಿಸೈ ಪಯೋಧಿಶಯನ । ಪಾಪನಾಶನ ॥ ಪ ॥
ಲಾಲಿಸೆನ್ನ ಮೊರೆಯ ಸಾಧು । ಜಾಲಪಾಲನ ॥ ಅ.ಪ. ॥
ಚರಣವಿನತ । ಭರಣಶುಭವಿ । ತರಣಕಾರಣ ।
ತರುಣತರಣಿ ಪರಮಕಲಾ । ಪರಣಸಕರುಣಾ ॥ ೧ ॥
ಸಾರಕುಸುಮ ಪರಿಮಳಾಲಂ । ಕಾರಭೂಷಣ ।
ಧೀರನೃಹರಿ ಪೊರೆಯೊ ಮಧುರ । ಕೀರಭಾಷಣ ॥ ೨ ॥

**ಕುಬ್ಜೆ : ಹಾಡು** **ರಾಗ : ಬೇಹಾಗ್ - ಆದಿತಾಳ**

ಜಯಲೀಲಾ ಭರಿತಗುಣಾತೀತ । ಜಯಮಾನಿತೆ । ಜನಸನ್ನುತ ॥ ಪ ॥
ಪರಮಕರುಣಾ । ಭರಣ ಶರಣ । ಸುರಚಾರಣ । ಸುಖಕಾರಣ ॥ ಅ.ಪ. ॥
ಜಲಜನಯನ । ಜಲಧಿಶಯನ । ನಳಿನಾನನ । ನತಪಾಲನ ॥ ೧ ॥
ಗರುಡಗಮನ । ದುರಿತಶಮನ । ಶರಣಾಗತ । ಪರಿಪಾಲನ ॥ ೨ ॥

**ಕೃಷ್ಣ : ಕಂದ**

ಅಂಗನೆ ನಿನ್ನಯ ಭಕ್ತಿಗೆ ।
ತುಂಗತರಾನಂದ ಮಾಂತೆ ನೀಗಳೆ ನಿನ್ನೀ ॥
ಅಂಗವಿಕಾರಮ ನಳಿದುರೆ ।
ಮಂಗಳಕರ ನವ್ಯರೂಪ ಮಿತ್ತಪೆ ನೊಲವಿಂ ॥

**ಕೃಷ್ಣ : ಹಾಡು** **ರಾಗ : ಕಲ್ಯಾಣಿ - ರೂಪಕತಾಳ**

ಏಳು ಚಂದ್ರಮುಖಿ । ನೀಂ ಸಖಿ ॥ ಪ ॥
ಶೀಲವಂತಳೆ । ನೀಲಕುಂತಳೇ ॥ ಅ.ಪ. ॥
ಇಂದು ನಿನ್ನ ಪರಮಭಕ್ತಿ । ಯಿಂದೆ ಮೋದಮಾಂತು ನಿನಗೆ ।
ಸುಂದರಾಂಗ ಮಿತ್ತೆನೋಡು । ಸುಂದರೀ ಸುಕಂಧರೇ ॥ ೧ ॥

**ಕುಬ್ಜೆ : ಹಾಡು** **ರಾಗ : ಹಿಂದೂಸ್ಥಾನಿ ಕಾಪಿ - ಆದಿತಾಳ**

ಸಂತಸಮಾಂತೆನು ಮನೋಹರಾ । ಚಿಂತೆಯದೆಲ್ಲವು ಪೋಗಿ ॥ ಪ ॥
ಪರಮದಯಾಕರ । ಪಾಪವಿದೂರ । ಕರುಣವನೀಂ ನೆರೆ ತೋರೆ ॥
ಹರುಷಮನೀವುದು । ಸರಸಿಜನಯನಾ ।
ತರುಣಿಯೊಳಿಂದು ಮುಕುಂದ ॥ ೧ ॥
ಕಲುಷವಿದಾರಣ । ಕಾಂಚನಾಭರಣ । ಕಲಮೃದುಭಾಷಣ ಲೀಲ ॥
ಲಲನೆಯನ್ನು ನೀಂ । ಸಲಹುವುದೊಲಿದು । ಸುಲಲಿತಕೋಮಲ ಕೃಷ್ಣ ॥ ೨ ॥

## ದೃಶ್ಯ : ಮಧುರಾಪುರದ ಬೀದಿ

(ವನಮಾಲಿಕೆ ಎಂಬ ಮಾಲೆಗಾತಿಯು ಪುಷ್ಪಮಾಲೆಗಳೊಡನೆ ಪ್ರವೇಶಿಸುವಳು)

**ವನಮಾಲಿಕೆ : ಹಾಡು** **ರಾಗ : ಮಾಂಡ್ - ಆದಿತಾಳ**

ಅರಳುವಕೋಮಲ ಮಂದಾರಸುಮದ ।
ಮಾಲಾಕಲಾಪಂ । ಮಾರನಚಾಪಂ ॥ ಪ ॥
ಮಾಲಾವಿತಾನಂ । ರೋಲಂಬಗಾನಂ ।
ಬಾಲೆಯರಿಗೆಸ್ಮರ । ಜಾಲಂ ಪೊಳೆಸಿದಿರೆ ॥ ೧ ॥
ಸೌರಭ್ಯದಿಂದೊಪ್ಪುವ । ಸಾರಪ್ರಸೂನಂಗಳ ।
ಹಾರಪ್ರತಾನವೇಂ । ರಾರಾಜಿಸುವುದು ॥
ಸುಖಿಜನಮೋದಂ । ಸಖರವಿನೋದಂ ।
ಸಕಲಸುಖಾಯತ । ಸಂತೋಷನಿಲಯಂ ॥ ೨ ॥

**ವನಮಾಲಿಕೆ : ಕಂದ**

ಭುವನೈಕಮೋಹನಂ ಮಾ ।
ಧವ ನಿವನೆಂದರಿಯದಿಂತು ದುಡುಕಿದೆನಕಟಾ ॥
ನವಮಾಲೆಗಳಂ ಧರಿಸಿ ।
ಪೆಣ್ಮನೊಲವಂ ತಾಳ್ದುಧನ್ಯಳಾಗಿಹೆನಿಂದಾಂ ॥

**ವನಮಾಲಿಕೆ : ಹಾಡು** **ರಾಗ : ಬೇಹಾಗ್ - ಆದಿತಾಳ**

ಏನಿದು ಪರಿಕಿಸಲೀ ಘನಮಾಯೆಯು । ಏನಿದು ಪುಳಕಿಸಿ ಕಾಯವಿದು ॥ ಪ ॥
ಕಂಜದಳಾಯತಲೋಚನನೀನವ । ಮಂಜುಳ ಹಾಸ ಮನೋಹರನಿವನು ॥
ರಂಜಿಸಿ ನಿರುಪಮ ತೇಜದಿ ನೇತ್ರಕೆ । ಮಂಜನು ಕವಿಸಿಹ ನೀತರದಿ ॥ ೧ ॥
ಮಹಿಮೆಯನರಿಯದೆ ಮಾನವ ತಡೆಯದೆ । ವಿಹಿತವು ತೋರದೆ ಮೋಹನನಿವನ
ಬಹುವಿಧದೂರಿದೆ ಪರಿಭವವೊಂದಿದೆ । ಮಹಿತಗುಣಾಂಕನ ಮಾಧವನ ॥ ೨ ॥

## ದೃಶ್ಯ : ಕಂಸನ ಅಂತಃ ಪುರ
## (ಕಂಸನು ಸ್ವಪ್ನವನ್ನು ಕಂಡು ಕಾತುರದಿಂದಿರುವನು)

**ಕಂಸ : ಕಂದ**

ಮೆಟ್ಟು ತಂಮೆದೆಯಂ ಗದೆಯಿಂ ।
ದಿಟ್ಟೆನ್ನಯ ಶಿರವನಾರ್ದು ಪಿಂಡುತ್ತಿರ್ಕಿರಲಂ ॥
ಕುಟ್ಟುತೆ ಖಳನವನೆಸಗಿ ।
ದಟ್ಟುಳಿಯಾಸ್ವಪ್ನವಮಿತ ಭೀಕರವಮಮಾ ॥

**ಕಂಸ : ಕಂದ**

ಪಟುತರ ಪರಾಕ್ರಮಾನ್ವಿತ ।
ಭಟಜಾಲಂ ಕಾವಲಿರ್ದ ಶಸ್ತ್ರಾಲಯವಂ ॥
ನಿಟಲಾಕ್ಷಂ ಪುಗಲರಿದೆನೆ ।
ಕುಟಿಲಂ ಗೋಪಾಲನೆಂತು ಮುರಿದಂ ಧನುವಂ ॥

**ಕಂಸ : ಹಾಡು** **ರಾಗ : ತೋಡಿ - ಆದಿತಾಳ**

ಮುರಿದನೇಪರಿ ನೀಚನು ॥ ಪ ॥
ನಿರುಪಮಾನ । ಸುರಾರಿ । ಶರಾಸನವ ॥ ಅ ॥
ವೀರಭಟ । ವಾರ ಶರಾ । ಗಾರದಲಿ । ಸೇರಿರಲು ॥
ಸಾರಿ ಖಳ । ನೀರಾತ್ರಿಯೊಳೀರೀತಿ ಧನುವ ॥ ೧ ॥
ಹುಚ್ಚಣುಗ । ನುಚ್ಚಬಲ । ವಚ್ಚರಿಯಿ । ದುಚ್ಚರಿಸಿ ।
ಕಿಚ್ಚನುರ । ಹೆಚ್ಚಿಸಿದ । ಕೊಚ್ಚಿ ಕಡಿವೆನು ॥ ೨ ॥

ಕಂಸ : ವೃತ್ತ ॥ ರಾಗ : ನಾಟಿ

ಕಡೆಗೆ ಕರಕ್ಕೆ ಸಿಕ್ಕಿದರೆ । ರಕ್ಕಸ ಶತ್ರುಗಳೀಗಳಿರ್ವರುಂ ।
ಪಿಡಿದಡಿಯಿಂದ ಮೆಟ್ಟಿ ಪುಡಿಗುಟ್ಟಿ ಕಡಂಗಿ ಕುಲಾಧಮರ್ಕಳಂ ॥
ಒಡಲಿನ ಬೇಗೆಯೆಲ್ಲ ಮನದಡಂಗಿಸಿ ಭಂಗಿಸಿ ಶತ್ರುಶೇಷಮಂ ।
ನಡುಗಿಸಿ ದೇವ ಮಾನವರಿನಾಂತಪೆ ನೇಕಧರಾಧಿಪತ್ಯಮುಂ ॥

## ದೃಶ್ಯ : ಮಧುರಾಪುರದ ಅರಮನೆಯ ಮುಂದಿನ ಪ್ರದೇಶ

ಕಂಸ : ಹಾಡು ರಾಗ : ಮೋಹನ - ಆದಿತಾಳ

ಇದು ಸುದಿನ ವೊದಗಿತು ಭಲಾ । ನೋಡಲಿದು ॥ ಪ ॥
ಕಡೆಗೆ ದ್ರೋಹಿಗಳ್ । ಹಿಡಿಗೆ ಸಿಕ್ಕಿದರ್ । ಪಿಡಿದು ನೀಚರ ।
ನೊಡಲುರಿಯಡಗೆ ॥ ಅಡಿಯೊಳು ಮೆಟ್ಟಿ । ಪುಡಿಪುಡಿ ಗುಟ್ಟಿ ।
ನಾಡೆನೋಡಿ ಹರ । ಮಾಡಿ ಕೊಲ್ವೆ ॥ ೧ ॥
ಕುಲಕುಠಾರರಂ । ಬಲುಕಠೋರರಾಂ । ಛಲವನುರ್ಕಿಸಿ । ನಲಿ ಖತಿಗೊಳಿಸಿ ॥
ಕಲಿಭವನಟ್ಟಿ । ತಲೆಯನು ಮೆಟ್ಟಿ । ರುಂಡ ಮುಂಡಗಳ । ತುಂಡು ಗೈವೆ ॥ ೨ ॥

## ದೃಶ್ಯ : ಅರಮನೆಯ ಮುಂಭಾಗ

ನಾರದ : ಹಾಡು ರಾಗ : ಮೂಂಡ್ - ಆದಿತಾಳ

ವರ ಯಮುನಾ ತಟ ಕೇಳೀ । ಘನವಿಭವ ॥ ಪ ॥
ರಾಧಿಕಾಪ್ರಮುಖ । ರಮಣೀ ವಿಲಾಸ ॥ ಅ.ಪ. ॥
ಕಿಂಕಣಿಗಳ ರವದಿ । ಪಂಕೇಜ ಪದಗಳ ನಾಟ್ಯದಿ ನೆರೆ ಮೆರೆವ ॥ ೧ ॥
ಪೊಂಗೊಳಲನೂದುತಲಿ । ಅಂಗನಾಜನಕತಿ ಮೋದವನೆಸಗುತಿಹ ॥ ೨ ॥

## ದೃಶ್ಯ : ಮಲ್ಲರಂಗ

(ಕಂಸಾಸುರನು ಮಂತ್ರಿ, ಭಟನಾಯಕರು ಹಾಗೂ ಇತರರೊಡನೆ ಮೇಲ್ಭಾಗದಲ್ಲಿ ಕುಳಿತಿರುವುದು)

ಕಂಸ : ಹಾಡು ರಾಗ : ಕೇತಾರ : ಅಟ್ಟತಾಳ

ಧ್ವಂಸಮಾಡುವೆ ವಂಶದ್ರೋಹಿಗಳ । ನಿಸ್ಸಂಶಯದಿ ನಾಂ ॥ ಪ ॥
ಕಂಸಭೂಪನು । ವಂಶಕತುಳೋ । ತ್ರಂಸನೆಂಬ । ಪ್ರಶಂಸೆ ಬೇಗುತೆ ॥ ಅ.ಪ. ।

ಅಗ್ನಿಗಾಜ್ಯವನೆರಚಿದಂತೆ ಕೃ । ತಘ್ನರಾ ಕೋದಂಡಮಂ ॥
ಭಘ್ನಮಾಡಿದರಲ್ತೆ ದುರ್ಮದ । ಮಗ್ನರಾಗಿ ದುರಾತ್ಮರೀಗಳೆ ॥ ೧ ॥
ಕೆರಳಿ ನಾಂ ಫಡ । ಮರುಳರಾ ಬಡ । ತರಳರಾ ಕಡು । ದುರುಳರ ॥
ಕೊರಲನೇ ತರಿ । ದುರುಳಿಸುತ್ತಲಿ । ಕರುಳುಗಳ ಹರಿ । ಹರಿದಿರಿಸುವೆನು ॥ ೨ ॥

## (ಕೃಷ್ಣ ಬಲರಾಮರ ಹಾಡು)

**ರಾಗ : ಹಂಸಧ್ವನಿ - ಆದಿತಾಳ**

**ಕೃಷ್ಣ:** ಮದಿಸಿದಾನೆಯ ನೋಡು ನೀಂ ॥ ಪ ॥
ಸಹಜಾತಾ । ಜನಗೀತ । ಮಹಾಪ್ರಬಲಮಿದ ವಧಿಸುವ ನಾವ್ ॥ ಅ.ಪ. ॥
ಅಡಿಯ ಘಾತದಿಂ । ಪೊಡವಿ ಕಂಪಿಸೆ । ಸಿಡಿಲಿನಂದದೆ
ಘುಡಿಗುಡಿಸುತಲಿದೆ । ರಭಸದಿ । ಮುದದಿ ಸಾರಿ । ವಿದಾರಿಪುದೀಗ
ವಿಹಿತವು । ನಡೆ ಜವದೊಳು ॥ ೧ ॥

**ಬಲರಾಮ :** ತೆರಳಿ ಬೇಗದಿಂ । ಕೆರಿಯನುರುಳಿಸಿ । ಕರುಳ ಸೀಳುತೆ ।
ಭರದೊಳು । ಹರುಷವ ತಳೆಯುತೆ ॥ ಧರಣಿಭಾರ
ನಿವಾರಣೆ ಮಾಡಿ । ಸುರ ನರ ಸುಖಿಮನಗೊಳವ ॥ ೨ ॥

## (ಕಂಸ, ಕೃಷ್ಣ, ಬಲರಾಮರ ದ್ವಂದ್ವ ಗೀತೆ)

**ರಾಗ : ಹಿಂದುಸ್ಥಾನಿ ಕಾಪಿ - ಏಕತಾಳ**

**ಕಂಸ :** ದಂಡಿಪೆ ಜಠರೇ । ಪುಂಡ ಹುಡುಗರೇ ।
ಹಿಂಡಿಬಿಡುವೆನಾಂ । ಚಂಡಕೋಪದಿಂದ ॥ ಪ ॥
ಫಡಫಡ ದುಡುಕಿನ । ಹುಡುಗರೆ ಭಯವೆನು ।
ಬಿಡುತಲೆ ನುಡಿವರೆ । ಕೆಡುಗರೆ ಛೀ ॥
ವಿರೋಧಿ । ವಿಭಂಗ । ನರಾಧಮ ಸಂಘ ।
ಹರಾಸುತ ಪುಂಗವ ಭೂಪನಾಂ ॥ ಅ.ಪ. ॥

**ಕೃಷ್ಣ :** ಏತಕೆ ನುಡಿವೆ । ಆತುರ ಪಡೆವೆ । ಮಾತನಾಡಿ
ಕುಲಘಾತ ಬುದ್ಧಿಯಿಂದ ॥ ಕಡುಖತಿವಡೆಯುತೆ ।

ದುಡುಕುತೆನುಡಿಯುತೆ । ಕೆಡಕನುಪಡೆದಪೆ ।
ಜಡಮತಿಸೀಂ ದುರಾಗ್ರಹದಿಂದ । ವಿರೋಧವು ಮೀರಿ ।
ಶರೀರವ ನೀಗುವರೇ ಬಿಡು ॥ ೨ ॥

ಕಂಸ : ಅಧಮರೆ ಪರಿಪರಿ । ಯೊದರಲು ನಿಮಿಷದೊ ।
ಳುದರವನಿರಿಯುತೆ । ವಧಿಸುವೆನು ॥
ವಧಾಸು । ವಿಧಾನ । ಕದೀಗ । ಮದೇಭ ।
ಪದಾಗ್ರ । ದುದಾರ ಹತಿಯಹುದು ॥ ೩ ॥

ಬಲರಾಮ : ಹುಡುಗರ ಮಡಿಸಲು । ಕೆಡುಕಿನ । ನಡತೆಯು ।
ಪಡೆದಿಹ ನಿನಗದೆ । ಕೆಡುಕಹುದು ॥
ಮದೇಭ । ವದೀಗ । ವಧಾರ್ಹವಿದೆಮ್ಮ ।
ಪದಾಹ । ತಿಯಿಂದೆ । ಮುದಿರ್ದುದು ॥ ೨ ॥

**ಕಂಸ : ಹಾಡು** **ರಾಗ : ಹಂಸಧ್ವನಿ - ಏಕತಾಳ**

ಅಗರೇ । ಇವರೇ । ನಳಿದ । ದುಃ ಪರೇ । ಪಿರಿದಚ್ಚರಿಯಾಹಾ ॥ ಪ ॥
ಮಲ್ಲಯುದ್ಧದೊಳಗ ಮಹಾ । ಮಲ್ಲರೆನಿಸಿದ ವೀರರನಿಂತು ॥
ಇರದೆ । ಭರದೊ । ಳಿರಿದು । ಮುರಿದು । ಕೊಂದ । ರಿಂದಕಟಾ ॥ ೧ ॥
ಇಂದಾಂಮಂದ ಮತಿಗಳನು । ಕೊಂದಾನಂದ ಪಡೆಯುವೆನು ॥
ಖಳಗೋ । ವಳರಂ । ಛಲದಿಂ । ದಳಿದಾಂ । ಶಾಂತಿಯಂ ತಳೆವೆ ॥ ೨ ॥

**ಕಂಸ : ಹಾಡು** **ರಾಗ : ಹಂಸಧ್ವನಿ - ಆದಿತಾಳ**

ಕಿಡಿಗಳನುಗುಳುತೆ । ಪೊಡೆಯನುಕಡಿಯುತೆ ।
ಪಿಡಿದುರೆ ಸುಡುವೆನು । ಹುಡುಗರೆ ಛೀ ॥ ಪ ॥
ಅಧಮರೇ । ಉದರವಂ । ವಿದಳಿಸಿ । ವಧಿಸುವೆ ।
ಪದದೆ ಮೆಟ್ಟಿ । ಎದೆಯ ಕುಟ್ಟಿ । ಸದೆವೆನಟ್ಟಹಾಸದಿಂ ।
ಛೀ ! ಜಾರ । ಛೀ ! ಪೋರ । ಛೀ ! ಚೋರನೆ ॥ ೧ ॥

**ಕೃಷ್ಣ : ಕಂದ**

ಬುಧರಂ ಬಾಧಿಸಿ ಲೋಕದೆ ।
ವಿಧವಿಧ ದುಷ್ಕಾರ್ಯಮೆಸಗಿ ಪಾಪಾರ್ಜನೆಯಿಂ ॥
ದಧಮವೆನಿಸಿದೀ ನಿನ್ನಂ ।
ವಧಿಸುತೆ ಸದ್ಧರ್ಮಕರ್ಮ ಮುದ್ಧರಿಸಿದಪೆಂ ॥

**ಕೃಷ್ಣ : ಹಾಡು** **ರಾಗ : ಹಂಸಧ್ವನಿ - ಆದಿತಾಳ**

ಫಡಫಡ । ಕೆಡುಗನೆ । ಪಿಡಿಯುತೆ । ಕಡಿದಪೆ ।
ನೊಡಲನು ನೋಡೆಲೊ । ಛೀ ! ನೀಚ ॥ ಪ ॥
ದುಷ್ಟನೇ । ಶಿಷ್ಟರೊಳ್ । ಕಷ್ಟವಂ । ಸೃಷ್ಟಿಸಿ । ಭ್ರಷ್ಟನಾದೆ । ಮುಷ್ಟಿಯಿಂದೆ ।
ಪಿಷ್ಟಗೈವೆನಿನ್ನನಾಂ । ಛೀ ! ಕ್ರೂರ । ಛೀ ! ಘೋರ । ಛೀ ! ಕಠೋರನೆ ॥ ೧ ॥

**ಕಂಸ : ವೃತ್ತ**

ಭುವನಾಧಾರ ಝಷಾವತಾರ, ನವಕೂರ್ಮಾಕಾರ, ಲೀಲಾಕರಾ ।
ಸುವರಾಹಪ್ರವರಾವತಾರ, ನರಸಿಂಹಾ, ವಾಮನಾಕಾರ, ಭಾ ॥
ರ್ಗವರಾಮಾ, ರಘುವೀರರಾಮ, ಯದುವಂಶಾಂಭೋಧಿ ಸೋಮಾಮಹಾ ।
ಭವಸಂತಾರಕ ಕೃಷ್ಣ ಮನ್ನಿಪುದು ನೀಂ ಶ್ರೀದೇವಕೀನಂದನಾ ॥

**ದೃಶ್ಯ : ಮಧುರಾಪುರದ ಮುಂಭಾಗ**

**ನಾರದ : ಹಾಡು** **ರಾಗ : ಪೂರ್ವಿಕಲ್ಯಾಣಿ - ಆದಿತಾಳ**

ಕುವಲಯನೀಲ । ಕುಂಜವಿಹಾರ (ಕುಂಜರಪಾಲ) ॥ ಪ ॥
ಸುವೇಣುಗಾನ ವಿಲೋಲ ॥ ಅ.ಪ. ॥
ಚರಣಶರಣಶ್ರೀ । ದೇವಪಾದಪ । ಚಾರುತರಾದ್ಭುತ । ಚರಿತಹರೇ ॥ ೧ ॥
ಕಮಲನಯನಶ್ರೀ । ಕಂಸಮರ್ಧನ । ಕಾಮಜನಕ ಕನ । ಕಾಂಬರಶ್ರೀ ॥ ೨ ॥
ದಿವಿಜವಿನುತಶ್ರೀ । ದೇವಕೀಸುತ । ದೀನನೃಹರಿಮನೋ । ದೀಪಕಶ್ರೀ ॥ ೩ ॥

## ದೃಶ್ಯ : ಅರಮನೆ

(ವಸುದೇವ, ದೇವಕಿ ಹಾಗೂ ಇತರರು ಉಗ್ರಸೇನರಾಜನೊಡನೆ ಪ್ರವೇಶ)

ಶ್ರೀಕೃಷ್ಣಾದಿಗಳು : ಹಾಡು — ರಾಗ : ಹಂಸಧ್ವನಿ - ಆದಿತಾಳ

ವಿರಾಜಿಸೈಸದಾ । ನರಾಧಿನಾಯಕಾ ॥ ಪ ॥
ಸುರೇಂದ್ರನಂದದಿಂದ । ಭೋಗಗಳಾಂತುರಂಜಿಸೈ ॥ ಅ.ಪ. ॥
ಪರಮವೈಭವಂ । ಮೆರೆಯೆಸಂತತಂ । ನಿರಾ ಕುಲಾ । ಪರಾಕ್ರಮೋಜ್ವಲಾ ॥ ೧ ॥
ಅತುಳಕೀರ್ತಿಯಿಂ । ವಿತತಭಾಗ್ಯದಿಂ । ಸುತೇಜದಿಂ । ಕ್ಷಿತೀಂದ್ರ ಶೇಖರಾ ॥ ೨ ॥

## ಮಂಗಳ

ಮಂಗಳಕರ ಗೋವಿಂದ ಮುಕುಂದ ॥
ಮನು ಮುನಿ ನುತ ಜಯ । ಘನಮಹಿಮಾಕರ ॥ ಪ ॥
ಪಾವನಚರಿತ ಪೃಥಾಖಿಲಜೀವ । ವರನಾಕದೇವ । ಪಾತಕದಾವ ॥
ಪರಮ ಪುರುಷ ಪರಿಪಾಲಯ ಮಾಂ ಜಯ ॥ ೧ ॥
ನೀರಜಮಾಲ ನಿಶಾಚರಕಾಲ । ನಿಜಸುಖಮೂಲ ।
ನಿರ್ಮಲಶೀಲ ॥ ನಿರುತ ಸ್ಮರಹರ ನುತ ನಿತ್ಯಸುಖಂಕರ ॥ ೨ ॥



# ಶ್ರೀರುಕ್ಮಿಣೀಸ್ವಯಂವರ



ಕರ್ನಾಟಕ ನಾಟಕ ಪಿತಾಮಹ

**ಬೆಳ್ಳಾವೆ ನರಹರಿಶಾಸ್ತ್ರಿಗಳು**

**ಪ್ರಾರ್ಥನೆ : ಹಾಡು** **ರಾಗ : ಕಲ್ಯಾಣಿ - ಆದಿತಾಳ**

ಪಾಲಯಮಾಂ ಶಾರದೇ ವರದೇ ॥ ಪ ॥
ಶೀಲ ಶೀಲೆ ಕರುಣಾವಾಲಪ್ರದೇ ॥ ಅ.ಪ. ॥
ಸಕಲವಿದ್ಯಾಕರೆ ಸುಕರವಿಚಾರೆ
ಸುಕಲೆ ಶುಭಂಕರೆ ಪ್ರಕಟಿತಮಾಗಿರೆ ॥ ೧ ॥
ಬಿಸರುಹನಯನೆ ಪ್ರಸಿತ ಸುವದನೆ
ಲಸದಾಬ್ಜಾನನ ಹಸಿ ತರು ಚಿರವದನೆ ॥ ೨ ॥
ಜಲಜೋದ್ಭವ ಮುಖವಿಕಸಾಸೆ
ಬಲರಿಪುವಾಸೆ ಲಲಿತ ಪೃಕ್ಷಿರರಸೆ

**ದೃಶ್ಯ : ರಸ್ತೆ**

**ಸೂತ್ರಧಾರ : ವೃತ್ತ॥** **ರಾಗ : ನಾಟಿ**

ಶ್ರೀ ವಿದ್ಯಾವಿಭವಾಭಿರಾಮ ಲಲಿತ ಶ್ರೀ ಸತ್ಕಳಾ ಮೂರ್ತಿಯಂ ।
ಲಾವಣ್ಯಾಂಬುಧಿ ದಿವ್ಯಚಂದ್ರ ಕಳೆಯಂ । ವೈದರ್ಭಿಯಂ ಲೀಲ । ವೆ ॥
ತ್ತಾವಂ ಸಾಧಿಸಿದಂ । ಪ್ರಭಾವಬಲದಿಂದಾಲೋಕ ಸಂಸ್ತುತ್ಯ ರಾ ।
ಜೀವಾಕ್ಷಂ । ಶುಭಮೀಗೆ ನಮ್ಮೊಳನಿಶಂ ಶ್ರೀರುಕ್ಮಿಣೀವಲ್ಲಭಂ ॥ ೧ ॥

**ಸೂತ್ರಧಾರ : ಹಾಡು** **ರಾಗ : ಕೀರವಾಣಿ - ರೂಪಕತಾಳ**

ಕಮಲನಯನ ಪಾಲಯ ಶ್ರೀ । ಕರುಣಾಕರ ಗೋಪಾಲ ॥ ಪ ॥
ವಿಮಲ ಕಲಾಧರ ವದನ । ಯಮಿ ಮನೋಂಬುರುಹ ಸದನ ॥ ಅ.ಪ ॥
ಜಲಧಿಕನ್ಯಾಮುಖ । ಜಲಜಾ ತರುಣತರಣಿತೇಜ ॥ ಕಲುಷಕುಲಾನಲ ವಿಮಲ ॥
ಕಲಿತವಿಭವ ಭೂರಿಬಲ । ಲಲಿತವೇಣುಗಾನ ನಿರಾ । ಕುಲ ದಿವಿಜಾನಂದಕರ ।
ಜಲಧರರುಚಿ ವಿರಾಜಮಾನ । ಜಲಜನಾಭ ಸ್ವಹರಿಕೃಷ್ಣ ॥ ೧ ॥

## ದೃಶ್ಯ : ಮಗಧ ರಾಜಧಾನಿಯ ಉಪವನ

**ನಾರದ : ಹಾಡು** **ರಾಗ : ಮಾಂಡ್ - ರೂಪಕತಾಳ**

ಕಮಲನಯನ ಕಲುಷಭಂಜನ । ಶೌರೇ ॥ ಪ ॥
ಭುವನಭರಣ ಭೂರಿಕರುಣ । ಭವಸಂತಾರಣ ನಿಪುಣ ।
ದಿವಿಜಶರಣ ಶ್ರೀ ವಿತರಣ ॥ ೧ ॥
ಗರುಡಗಮನ ಗಾನಲೋಲ । ಕರಿರಾಜಾವನಶೀಲ ।
ಶರಧನೀಲ ವಿವಿಧ ಲೀಲ ॥ ೨ ॥

## ದೃಶ್ಯ : ಮಗಧ ರಾಜಧಾನಿ - ಜರಾಸಂಧನ ಸಭಾ ಸ್ಥಾನ

**ವೈತಾಳಿಕರು : ಹಾಡು** **ರಾಗ : ಹಂಸಧ್ವನಿ - ಆದಿತಾಳ**

ಧರೇಂದ್ರ ಚಂದ್ರ ದಾನವೇಂದ್ರ ಸಾಂದ್ರ ವೈಭವ ॥ ಪ ॥
ಸುರಾಳಿ ಹೃತ್ಕರಾಳ ವಿಜಯಕಾಲಭೈರವ ॥ ಅ.ಪ. ॥
ನರಾಧಿರಾಜ ವಂದಿತ ಪ್ರತಾಪ ವಿಶ್ರುತ ।
ವಿರೋಧಿಮೇಘಮಾರುತ ಪರಾಕ್ರಮಾದ್ಭುತ ॥
ಸುರಾರಿವಂಶ ವಾರಿರಾಶಿ ನವಸುಧಾಕರ ।
ಸುರಾಧಿರಾಜ ಮಾನಸೋತ್ಪಲ ಪ್ರಭಾಕರ ॥
ಆಯುಶ್ಶ್ರೀಂ ವಿಜಯಂ ತೇಜಂ । ಶ್ರೇಯಸ್ಸುಂ ಜ್ಞಾನಂ ಸಿರಿಯುಂ ।
ಚಿರಂತನಮಾಗೆ ನಿತ್ಯ ಸೌಖ್ಯಮಾಂತು ರಂಜಿಸೈ ॥ ೧ ॥

ಜರಾಸಂಧ : ವೃತ್ತ॥ ರಾಗ : ನಾಟಿ

ತ್ರಿಜಗತ್ಕಂಪನ ದೋರ್ಬಲ ಪ್ರಚಕಿತಾಮರ್ತ್ಯ ಪ್ರತಾನಂ ಮಹಾ ।
ವೈಜಿನೀ ಶೌರ್ಯ ಸಮಾರ್ಜಿತಾಮಳ ಯಶೋವಿಭ್ರಾಜಿತಾಶಾಂತರ ॥
ನಿಜಧೈರ್ಯಾದ್ಭುತ ಶೌರ್ಯ ನಿಸ್ತುಲಮುಖ್ಯೈಶ್ವರ್ಯಾತಿಗಾಂಭೀರ್ಯನೀ ।
ವಿಜಯ ಪ್ರಸ್ತುತನಾದ ದುರ್ಜಯ ಜರಾಸಂಧಂಗದಾರ್ ನಾಟಿಯೋ ॥

ನಾರದ : ಹಾಡು ರಾಗ : ಕಲ್ಯಾಣಿ - ಆದಿತಾಳ

ಪರಮಾತ್ಮನೆ ಪೊರೆ ಕರುಣಾಕರ
ಮಾಧವ ಮುರ ವೈರಿದೇವ ॥ ಪ ॥
ದೀನರ ಕಾಯುವ ಭಾರವು ನಿನ್ನದು
ಮಾರಜನಕ ಹರಿಶ್ರೀ ವಾಸುದೇವ ॥ ಅ.ಪ. ॥

ಜರಾಸಂಧ : ಹಾಡು ರಾಗ : ನಾಗಸ್ವರಾವಳಿ - ಏಕತಾಳ

ಕಡುಕೆಡುಗರ ತಲೆಯೊಡೆದಿಡುವೆನೀಗ ॥ ಪ ॥
ತಡವಿಡದೆ ನಾರಿ । ಬಿಡದಳಿವ ಶೌರಿ ॥ ಅ.ಪ. ॥
ಕೇಡಿಗರಾ ಶೌರ್ಯ । ನೋಡಿದೊಡಾಶ್ಚರ್ಯ ॥
ಹುಡುಗರನು ಮೆಟ್ಟಿ ॥ ಪುರ ಪುರಿಯ ಕುಟ್ಟಿ ॥ ೧ ॥
ಆ ಮಧುರೆಯ ಸೇರಿ । ಕಾಮಾಂಧರ ಮೀರಿ ॥
ತರಿದುರಿಸಿ ಬರ್ಪೆ । ನೆರೆ ಛಲವ ತೋರ್ಪೆ ॥ ೨ ॥

ದೃಶ್ಯ : ಅರಮನೆಯ ಮುಂಭಾಗ

ನಾರದ : ಹಾಡು ರಾಗ : ನಾಟಿಕುರಂಜಿ - ರೂಪಕತಾಳ

ಶ್ರೀಮನೋಹರಲೀಲ ನಮೋಹರೇ । ಸಾಮಗಾನವಿಲೋಲ ನಮೋಹರೇ ॥
ಸೋಮಭಾಸ್ಕರ ನೇತ್ರ ನಮೋ ಹರೇ । ಶ್ರೀಶಪಾಹಿ ॥ ಪ ॥
ದಾನವಾನ್ವಯಕಾಲ ನಮೋ ಹರೇ । ದೀನಪಾಲನಶೀಲ ನಮೋ ಹರೇ ।
ಗಾನ ನರ್ತನಲೋಲ ನಮೋ ಹರೇ । ಶ್ರೀನಿಧಾನ ॥ ೧ ॥
ಮೌನಿಸಂತತಿಗೀತ ನಮೋ ಹರೇ । ವೈನತೇಯವರೂಢ ನಮೋ ಹರೇ ।
ಜ್ಞಾನಮಂಗಳದಾತ ನಮೋ ಹರೇ । ಶ್ರೀ ಮುಕುಂದ ॥ ೨ ॥

## ದೃಶ್ಯ : ಮಥುರಾನಗರದ ಅರಮನೆ

**ಕೃಷ್ಣ ಬಲರಾಮ : ಹಾಡು** 　　　　**ರಾಗ : ಮೋಹನ - ಆದಿತಾಳ**

ತಳೆದೆವು ಮನದಮಿತಾಮೋದವ ಸುಜನ ಹಿಂಸನ ।
ಕುಜನ ಕಂಸನ । ವಿಜಯಶಂಸನ । ವಿಗೋತ್ತಂಸನ
ಭುಜಗಳ ಮುರಿದು । ನಿಜಬಲದಿರಿದು ।
ತ್ರಿಜಗಕೆ ಸುಖವನು । ಸೃಜಿಸುತೆ ಭರದೊಳು ॥ ೧ ॥
ಲಲಿತಯಾದವ । ಕುಲದ ಭೇದವ । ಸೆಳಸಿ ಕೋಪವ ।
ತಳೆದ ದಾನವ ಖಳನನೆ ಪಿಡಿದು । ಕರುಳನೆ ಬಗೆದು ।
ಬಲದೊಳು । ಛಲವನು । ಗೆಲಿದೆ ನಲಿದೆವು ॥

## ದೃಶ್ಯ : ಅರವಿಂದೋದ್ಯಾನ ವಿಲಾಸ ಮಂಟಪ ಪ್ರದೇಶ
## (ರಾಧೆ ಕೃಷ್ಣರ ಯುಗಳ ಗೀತೆ )

**ರಾಗ : ಜಂಜೂಟಿ - ರೂಪಕತಾಳ**

**ರಾಧೆ :** ಪ್ರಿಯಕರಾ ಕೃಷ್ಣಾದಿವ್ಯಾಕಾರಾ ॥ ಪ ॥
ಕೋಮಲ ಜಲಧರ । ಶ್ಯಾಮಲ ಶುಭಕರ ।
ಸೋಮಕಳಾದರಹಸನಾ । ನಿನ ॥
ದರುಶನ ಭಾಗ್ಯವು । ದೊರೆತುದಾಹಾ ।
ಸಂತಸಮಾಂತೆನು । ಸದಯಾ ॥ ೧ ॥

**ಕೃಷ್ಣ :** ಪ್ರೇಮಧಾರೇ ರಾಧೇ ಪ್ರಿಯಕರೇ ॥ ಪ ॥
ಹೃದಯಮಧುಕರ ನಿನ್ನ ಪ್ರೇಮ । ಮಧುವಿಗೆ ಸೋತುದು ರಾಧೇ ॥
ಮಿಗೆ । ಮೋಹದೊಳಾಡಿ ವಿ । ನೋದದೆ ಪಾಡಿ ।
ಪ್ರಮೋದವಾಯ್ತು ಶುಭಾಂಗಿಲತಾಂಗೀ
ಪರಮ ಪ್ರಕಾಶ । ದಿರುವುದು ಪ್ರೇಮ ಜ್ಯೋತಿಪ್ರಭೆಯು ರಾಧೇ ॥ ೨ ॥

**ಇಬ್ಬರೂ:** ಪ್ರೇಮಕಿರಣವು ಬೆಳಗಿಹೃದಯವ ।
ಪೆರ್ಚಿದುದಿಂದು ವಿನೋದವಿಲಾಸ ॥

ಮಕರಂದ : ಹಾಡು ರಾಗ : ನಾದನಾಮಕ್ರಿಯ - ಆದಿತಾಳ

ಭಲೇ ಭಲೇ ಭಲೇ ನನಗೆಣೆಯಾರೀ ಮೂರು ಲೋಕದಲ್ಲಿ ॥ ಪ ॥
ಮಾರನ ರೂಪವ । ಮೀರಿದ ಲಲಿತಾ । ಕಾರನು ಧೀರನು । ದಾರನು ನಾಂ ॥
ಶೂರನು ನಾಂ । ಸಾರಿಹೆನು । ಶೌರಿಯುಬಳಿಯುನು ।
ಸೇರುತೆ ಮುದದೊಳು । ಸಾರ ವಿನೋದವನಾಡುವೆನು ॥ ೧ ॥
ಕಾಲಕೆ ಭೋಜನ । ವೇಳೆಗೆ ಶಯನ । ಮೇಲೆ ಫಲಾಹಾರಗಳೆನಗೆ ॥
ಮೇಲೆನಿವಾ ಲೀಲೆಯೊಳು । ಓಲಾಡುತೆ ನಲಿದಾ ನಂದದೆ ಗೋ ।
ಪಾಲನ ಜೊತೆಯೊಳಗಾಡುವೆನು ॥ ೨ ॥

ಮಕರಂದ : ಹಾಡು ರಾಗ : ಬೇಹಾಗ್ - ಆದಿತಾಳ

ಎಂತಿರ್ಪುದೀವನ । ವಿಂತುರೆ ನೋಡೆ ॥ ಪ ॥
ಸಂತಸದಿಂದ ಕೃಷ್ಣನಿಂದೊಲಿದಾಡೆ ॥
ಕಾಂತೆಯರ ಕೂಡಿ ಲೀಲೆಯನಾಡೆ ॥ ಅ.ಪ. ॥
ಕೋಗಿಲೆ ಗೈವಾ । ರಾಗವ ಕೇಳಿ । ರೇಗುವದೆನ । ಗೀಗ ಮನ ॥ ೧ ॥
ಹೆಚ್ಚಾದ ಹೂಗಳ ವಾಸನೆಯೆಲ್ಲ । ಮುಚ್ಚಿತು ಮೂಗಿನ ಹೊಳ್ಳೆಯುಸೆಲ್ಲ ॥ ೨ ॥
ಕಲಕಲಶಬ್ದದಿ ಗಿಳಿಗಳ ಗುಂಪು । ಕಿಲ ಕಿಲ ನಗುವಂತೆ ಮಾಳ್ಪುದು ರಂಪು ॥ ೩ ॥
ಒಳ್ಳೆಯ ವನದಲ್ಲಿ ಕೃಷ್ಣನಿಗಾಟ। ಬಳ್ಳಿಯ ಮನೆಯಲ್ಲಿ ಸೊಳ್ಳೆಯ ಕಾಟ ॥ ೪ ॥

ಕೃಷ್ಣ : ಹಾಡು ರಾಗ : ಮೋಹನ - ಆದಿತಾಳ

ಉಪವನ ಮೆಸೆವುದು ಕೋಕಿಲಗಾನದಿ ॥ ಪ ॥
ಸುಪರಿಮಳಾಂಕ ಸುಮೋತ್ಕರ ದೆಸೆಯುತೆ । ವಿಪುಲ ಶುಭಾಕರಮಾಗಿ ॥ ಅ.ಪ. ॥
ಕೋಕಿಲ ಶುಕಕಲಗಾನ । ಕೋನದಾದಿ ಪ್ರಸೂನ ।
ಕೇಕಿ ನರ್ತನ ಮುದ ಮೀಯೆ ॥ ೧ ॥
ಕೌಸುಮ ಪರಿಮಳಭಾರ । ವಾಸಿತ ಮಂದಸಮೀರ ।
ಸೂಸುವ ಪೂಮಳೆಯಿಂದ ॥ ೨ ॥

**ಕೃಷ್ಣ : ಹಾಡು** **ರಾಗ : ಜಂಜೂಟಿ - ರೂಪಕತಾಳ**

ಪರಮಾನುರಾಗ ನಾರಿ ಬಾರೆ । ಪಲ್ಲವಾಧರೇ ॥ ಪ ॥
ಶರಣದಿಂದು । ಕರಣವಿಮಲ ಹಾಸ । ಪೇರಿಸಿ । ಮೋದವ ।
ವಿರಚಿಸುತೆ ಬಾರೆ ರಾಧೆ ಸರಸಕೋವಿದೇ ॥ ೧ ॥
ರಾಧೆ ಮನದ ಭೇದವುಳಿದು । ಮೋದವೊಂದಿದೆ ॥
ಮಾಧವನಾಂ ಬಂದೆ ನೋಡು । ಮಧುರಭಾಷಿಣೀ ॥ ೨ ॥

**ರಾಧೆ : ಕಂದ**

ಕಮಲದಳಾಯುತ ನಯನಾ ।
ಹಿಮಕರನಿಭವದನ ಮುದಿತ ಗೋಪೀಲಲನಾ ॥
ಸುಮಧುರತರ ಮೃದುವಚನಾ ।
ನಮಿಪೆಂ ಶ್ರೀಕೃಷ್ಣ ಸರ್ವಮಂಗಳ ಸದನಾ ॥

**ರಾಧೆ : ಹಾಡು** **ರಾಗ : ಯಮನ್ - ಆದಿತಾಳ**

ಶ್ಯಾಮಸುಂದರ । ಪ್ರೇಮವ ತೋರೋ ॥ ಪ ॥
ಕೋಮಲಕಾಯ ದಯಾಮಯ ಬಾರೋ ॥ ಅ.ಪ. ॥
ಸುರಚಿರ ಲೀಲೆಯಿಂ । ಸರಸ ವಿನೋದವ ।
ಕರುಣದೆ ಬೀರುತೆ । ಹರುಷಿ ನನ್ನ ॥ ೧ ॥
ಸುಂದರಾಕಾರಾ । ನಂದಕುಮಾರ ।
ನೊಂದಿಹ ನನಗಾ । ನಂದ ॥ ಮೆಸಗು ನೀಂ ॥ ೨ ॥

**ರಾಧೆ : ಕಂದ**

ವಸುಧಾನಂದಕ ಲೀಲಾ ।
ವಸುಗಣನುತ ಚರಿತ, ವೇಣುಗಾನ ವಿಲೋಲಾ ॥
ಅಸಮಕೃಪಾಕಲ್ಲೋಲಾ ।
ಬಿಸಜೇಕ್ಷಣ ಮಣಿವೆನಿಂದು ನಾಂ ಗೋಪಾಲಾ ॥

ರಾಧೆ : ಹಾಡು ರಾಗ : ಶಂಕರಾಭರಣ - ಆದಿತಾಳ

ಕೃಷ್ಣಾ ಗೋಪೀನಂದನ । ಕೃಷ್ಣಾಂಬುದಾಕಾರ । ಬಾರೋ ॥ ಪ ॥
ಕ್ಷೋಣಿಪಾಲ ಘನಶೀಲ ಕನಕಮಯ ।
ವೇಣುಗಾನಲೋಲ । ಗೀ । ರ್ವಾಣ ವಿನುತ ಲೀಲಾರಮ್ಯ ॥ ೧ ॥
ನಿತ್ಯಮಂಗಳಾಕಾರ ಮೌನಿಗಣ ।
ನುತ್ಯ ಸುಗುಣವಾರ । ಘನ । ಸತ್ಯಧರ್ಮಸಾರ । ಶ್ರೀಶ ॥ ೨ ॥

ನಾರದ : ಹಾಡು ರಾಗ : ಬೇಹಾಗ್ - ಆದಿತಾಳ

ನಂದಕುಮಾರನೆ । ನಾನಾವತಾರನೆ ॥ ಪ ॥
ಸುಂದರ, ನತಜನ । ಮಂದಾರ ಜಯ ಜಯ ॥ ಅ.ಪ. ॥
ವಾರಿಜನಯನ । ವರಗುಣಸದನ ॥
ಸೂರಿಜನಾವನ ಸುತ್ರಾಮ ಶರಣ ॥೧ ॥
ತಾಪಸವಿನುತ । ನಯಗುಣ ಭರಿತ ।
ಶ್ರೀಪರಿಪೂರಿತ । ಶೀತಾಂಶ ವದನ ॥ ೨ ॥

ಕೃಷ್ಣ : ಕಂದ

ಸತ್ಯಾಸತ್ಯಮನರಿಯದೆ ।
ಕೃತ್ಯಾಕೃತ್ಯದ ವಿವೇಚನೆಯ ಮಾಡದೆ ಮೇ ॥
ಣತ್ಯಧಿಕಮದದೆ ಬರ್ಪಾ ।
ದೈತ್ಯರ ಪಿಡಿದೈದೆ ಕಾಲನಗರಿಗೆ ತೋಳ್ವೆಂ ॥

ಕೃಷ್ಣ : ಹಾಡು ರಾಗ : ದೇಶಿತೋಡಿ - ಆದಿತಾಳ

ಕಡುಜನರ । ಪಡೆಯ । ಬಿಡದೆ । ಕಡಿದು ।
ಪೊಡವಿ । ಗಿಡುವೆ । ಸುಡುವೆ । ಸಮರ ಮಾಡಿ ॥ ಪ॥
ಕೂಡಿ ಬಲವ । ಮಾಡಿ ಛಲವ । ಕಾಡುತೆ । ಖಳರ ॥
ಬಡಿವೆ । ಸುಡುವೆ । ಹೂಡುತೆ ಹರವ ॥ ೧ ॥
ಬೀರಿ ಶರವ । ತೋರಿ ಬಲವ । ವೈರಿನಿಕರವ ॥
ಹರಿಸಿ । ಉರಿಸಿ । ದುರಾತ್ಮರನಿರಿವೆ ॥ ೨ ॥

## ದೃಶ್ಯ : ಮಥುರಾಪುರ ಪ್ರಾಂತ

**ಜರಾಸಂಧ : ವೃತ್ತ ॥** **ರಾಗ : ನಾಟಿ**

ಕಡಲೇಳಂ ಕುಡಿವೆಂ ಕುಲಾದ್ರಿಕೂಟಮಂ ಚೆಂಡಾಡುವೆಂ ಶೇಷನಂ ।
ಮಿಡಿವೆಂ ಮತ್ತೆ ಕುಲಾಲ ಚಕ್ರಮೆನಸಲೇ ಭೂಚಕ್ರಮಂ ತಿರ್ರಿಸೆ ॥
ಕರ್ಡೆಯಿಂದ ಸುತ್ತಿಪೆನೆನ್ನ ಬಾಹುಬಲದಿಂ ಬ್ರಹ್ಮಾಂಡಮಾಸ್ಫೋಟಿಪೆಂ ।
ಬಡಗೋವಾಲರನಾರ್ದು ಕೊಲ್ವುದು ಜರಾಸಂಧಂಗದೇಂ ಲಕ್ಷ್ಯಮೋ ॥

**ಶಿಶುಪಾಲ : ಹಾಡು** **ರಾಗ : ಹಂಸಧ್ವನಿ - ಏಕತಾಳ**

ತಲೆ ಹಾರಿಸುವೆನು ಸಲೆ ಸಾರಿ ॥ ಪ ॥
ಅಧಮನವನಲಾ । ದುರ್ಮದಶೀಲ । ವಧಿಪೆನವನನಾಂ ಶೌರ್ಯವಿಶಾಲ ।
ಪದದಿಂ । ದೊದೆದಾಂ । ಸದೆವೆಂ । ಹೃದಯಾ । ಮೋದಮಾಂತು ॥ ೧ ॥
ಬಲವಿಹೀನನಾ । ಖಳ ಪಶುಪಾಲ । ಛಲದೊಳಿಹನಲಾಕಲಿ ಶಿಶುಪಾಲ ।
ಖಳಗೋ । ಪಳನಂ । ಛಲದಿಂ । ದಳಿದು ಧೂಳಿಗೈವೆ ॥ ೨ ॥

**ಶಿಶುಪಾಲ : ಕಂದ**

ಧುರಕೈತರ್ಪಾ ಹರಿಯಂ ।
ಹರಿದಿಡುವೆಂ ಬಲನ ಬಲದ ಬಲಿಯುಂ ಕೊಳ್ವೆಂ ॥
ಶರದಿಂ ಶಸ್ತ್ರದಿನವರಾ ।
ಶರೀರಮಂ ಪರಿದು ತರಿದು ಪಿರಿದುಂ ನಲಿವೆಂ ॥

## ದೃಶ್ಯ : ಮಥುರಾಪುರದ ಕೋಟೆಯ ಬಾಗಿಲು
## (ಕೃಷ್ಣ, ಬಲರಾಮರ ಯುಗಳ ಗೀತೆ)

**ರಾಗ : ಜಂಜೂಟಿ - ರೂಪಕತಾಳ**

**ಕೃಷ್ಣ:** ರಾಮ ಗುಣಧಾಮ ಬಾ । ರಣಜಯ ಘನಬಲ ॥ ಪ ॥
ಸೋಮ । ಧಾಮ । ಮನದೊಳು । ಘನಮುದ । ವನು ತಳೆಯುತ
ಬಲ ॥ ಅ.ಪ. ॥

**ಬಲರಾಮ :** ಬಾರೈ । ಮುರಳೀಧರ । ಪರಬಲ ಹುತವಹ ॥ ಪ ॥
ವೀರ । ಧೀರ । ಮದಿಸಿದ ರಿಪುಗಳ । ವಧಿಸುವುದುಚಿತವು ॥ ಅ.ಪ. ॥

**ಕೃಷ್ಣ:** ನೀಲಾಂಬರ । ಲೀಲಾಕರ । ಕೇಳಾರಿಪು । ಜಾಲಂ ಮಿಗೆ ।
ಖೂಳ । ತನವ ತಾನೆಸಗಿತು ಪರಿಹರಿ ॥ ೧ ॥

**ಬಲರಾಮ :** ಶರಗಳಿ । ನರಿಗಳ । ಶಿರಗಳ । ತರಿಯುತೆ । ಧುರದೊಳು ।
ಭರದೊಳು । ನೆರೆ ಜಯಮೊಂದುವ ॥ ೧ ॥

**ಕೃಷ್ಣ:** ಹಿಂಸಕ ಕಂಸನಂ । ಧ್ವಂಸಗೈದಂತವಂ । ಕೇಳುತೆ ನಿಜಸುತೆಯು
ಮುಖದಿಂ ಕಾಂತನ ತೆರದೊಳು ಮಿಗೆ ಕೆರಳಿ । ಕಾಳಗಕುರೆ
ಬರುತ ಛಲದಿ ॥ ಖೇದಗೊಂಡು । ಮಗಧಾಧಿರಾಜನುರೆ ।
ಬಾಧಿಸೆ ಬರ್ಪನು ಯಾದವಕುಲವನು ॥ ೨ ॥

**ಬಲರಾಮ :** ಆ ಜರಾಸಂಧನ । ಸ್ವಾಜಿಯೊಳ್ ಮರ್ದಿಸಿ ॥ ಯಾದವರಿಗೆ
ಪಿರಿದೊದಗಿರುವಾ । ಬಾಧೆಯನುರೆ ಪರಿಹರಿಸುತಲಿ ।
ಮೋದವನವರಿಗ ವಿರಚಿಸುವ ॥ ಕಾಲನೋಲ್ ಮಗಧ । ಪಾಲ
ದುಷ್ಟ ಶಿಶು । ಪಾಲ ಮುಖ್ಯ ಭೂ । ಪಾಲರ ವಧಿಸುವ ॥ ॥ ೨॥

**(ಜರಾಸಂಧ, ಕೃಷ್ಣ ಬಲರಾಮರ ದ್ವಂದ್ವಗೀತೆ)**

**ರಾಗ : ...... - ತಾಳ .....**

ಜರಾಸಂಧನಪಕ್ಷ : ನೀಚರೇ. ನಿಲ್ಲಿನೀಂ । ನಾಚದೆ । ತೋಚದೆ । ವಾಚಿಪುದೇತಕೆ ॥

ಕೃಷ್ಣಬಲರಾಮರು : ಶಿಕ್ಷಿಪೆ । ವೀಕ್ಷಿಸೋ । ಲಕ್ಷಿಸ । ದೀಕ್ಷಣ । ರಾಕ್ಷಸ ನಿಮ್ಮನು ॥ ಪ ॥

ಜರಾ : ಕಡುಗಲಿಗಳೊಳಾಟ । ಕೇಡು ಸಂಕಟ ॥
ಕೊಡುವುದಲ್ತೆ ನೀಬಾ । ಬೇಡವೀಹಟ ॥

ಕೃಷ್ಣಬಲರಾಮರು : ಅಧಮದನುಜಪಾಲ । ಮದದೊಳೀಂ ಫಲ ।
ಒದರಲೇತಕೋ ಖಳಾ । ಬುಧಜನಾ ಕುಲ ॥

ಜರಾ : ಬಿಡದೆ । ಪಿಡಿದು । ಪೊಡೆಯ । ಕಡಿದು ।
ಪೊಡವಿ । ಗಿಡುವೆ ವೀಕ್ಷಣ ॥ ೧ ॥

ಕೃಷ್ಣಬಲರಾಮರು : ಪದದೊ । ಕೊದೆದು । ಮದವ । ನದೆದು ।
ವಧಿಪೆ । ವಧಮ ನಿಮ್ಮನು ॥

## ದೃಶ್ಯ : ಅರಣ್ಯ ಪ್ರದೇಶ

**ನಾರದ : ಹಾಡು** **ರಾಗ : ಯಮನ್ - ಆದಿತಾಳ**

ಮನುಮುನಿವಂದ್ಯಹರೇ । ಮಾಧವ ಗೋವಿಂದಹರೇ ॥ ಪ ॥
ಭುವನಾಧಾರ ನಿರ್ವಿಕಾರ ॥ ಭೂತದಯಾಮಯ ಶೌರೇ ಜಯ ಜಯ ॥ ೧ ॥
ಜಲದಾಕಾರ । ಜ್ಞಾನಾಸಾರ । ಜನ್ಮಜರಾಪರಿಹಾರ ಜಯಜಯ ॥ ೨ ॥

## ದೃಶ್ಯ : ಪರಶುರಾಮರ ಆಶ್ರಮ

**ಬಲರಾಮ, ಕೃಷ್ಣರು : ಹಾಡು** **ರಾಗ : ಯಮನ್ - ಆದಿತಾಳ**

ದುರಾಗ್ರದೊಳು ವಧಿಸುವ ರಿಪುಕುಲವ ॥ ಪ ॥
ಪರಾಕ್ರಮದೊಳುರಿಸುವ ಪರಬಲವ ॥ ಅ.ಪ. ॥
ದುರ್ಮದಾಂಧತೆಯೊಳುರೆ ನಡೆತರುವ । ಧರ್ಮಘಾತುಕರ ತಲೆಗಳ ತರಿವ ॥
ಸುಜನವ್ರಜಕಾಂ । ಸುಖಮಾಗುತುಂ । ವಿಜಯೋತ್ಸವದಾ ವಿಭವದೆ ನಲಿವ ॥೧॥
ಪರಶುರಾಮರಾಣತಿಸಿದ ತೆರದಿ । ಗಿರಿಯ ದುರ್ಗವಾ ಸೇರುತೆ ಭರದಿ ॥
ಅರಿಭೂಪರನಾ । ವಿರಿದಾಹವದಿ ಧರಣೀ ಭರವಂ । ಪರಿಹರಿಸುವ ಬಾ ॥ ೨ ॥

## ದೃಶ್ಯ : ಗೋಮಂತಗಿರಿ ಪ್ರಾಂತ

**ಮದಿರಾಂಗನೆ : ಹಾಡು** **ರಾಗ : ಜಂಜೂಟಿ - ಆದಿತಾಳ**

ಈ ಮನೋಹರಂ । ಕಾಮಿನೀ ಹೃದಯಾನಂದನೀ ॥ ಪ ॥
ಸ್ಮರನೋ ರಮಾ । ವರನೋ ವಿಭಾ । ಕರತೇಜದಿಂತು । ನೆರೆ ಗಂಜಿಸುವನೀ ॥ ೧ ॥
ಸುಂದರಾಂಗನಾ । ನಂದಲೀಲೆಯ । ನೊಂದಲೀ ಮನ । ಎಂದು
ಬಯಪುದಾಹಾ ॥ ೨ ॥

ಬಲರಾಮ : ಹಾಡು — ರಾಗ : ಕೇತಾರ - ರೂಪಕತಾಳ

ವಿಧು ಸಮಾನನೆ ಯಾವ ಮೋಹನೆ । ಮಧುರಾವಲೋಕನೆ ॥ ಪ ॥
ಮದೋಚ್ಚಲಿತೆ । ಮುದಾಕಲಿತೆ । ಸುಧಾಭರಿತ । ಮೃದೂಕ್ತಿಯುತೆ ॥ ಅ.ಪ. ॥
ಮಂದಯಾನದಿಂದ । ದಿಂದುಹಂಸವ । ನಿಂದಿಸುತ್ತಾ । ನಂದಲೀಲೆಯಿಂ ॥
ಬಂದು ಬೆಡಗಿ । ನಿಂದೆ ನೋಡುತೆ । ನಿಂದಿರ್ವಳು ।
ಕಂದರ್ಪನ । ಸುಂದರಿಯೆಂ ಬಂದಳಿದೋ ॥ ೧ ॥
ಕಾಂತೆ ಸುಸ್ಮಿತ । ಕಾಂತಿಯಿಂದೆ । ಸ್ವಾಂತರಂಗವ । ಭ್ರಾಂತಿಗೈದಳು ॥
ಮುಂತು ಭಾರ್ಗವ । ರಂತು ಪೇಳಿದ । ಕಾಂತೆಯು ಘನ ।
ಶಾಂತೆಯು ಗುಣ । ವಂತೆಯುತಾ ನಿಂತಿವಳೋ ॥ ೨ ॥

ಬಲರಾಮ : ಹಾಡು — ರಾಗ : ಕೇತಾರ -ರೂಪಕತಾಳ

ಲಾಲಿಸೇ ಗಂಭೀರ ಭಾಷಿಣೀ ಮನ್ಮಾನಸತೋಷಿಣಿ
ಲೀಲಾಕರೇ ಸುರಾಂಗನವತಾರೇ । ಬಾಲಿಕೆ ಗುಣ ।
ಮಾಲಿಕೆ ಸುಖ ಲಾಲಿಸೆ ಮದಿ । ರಾಲಸೆ ನೆರೆ
ಅಂಗಭವ ಮೋಹನಮಯೇ । ತುಂಗತರ ಗುಣ ನಿಲಯೇ
ಭೃಂಗಕಾಯೇ । ಮಂಗಳಾಂಗಿಯೆ ಸದಯೇ
ನಿನ್ನಯ ಕೃಪೆ । ಬಿನ್ನೈಸುವ ಹಲಾಯುಧನು । ಬಲ್ಲಂತೆನು ।

ಮದಿರಾಂಗನೆ : ಹಾಡು — ರಾಗ : ಬೇಹಾಗ್ - ಆದಿತಾಳ

ಸುಂದರಾಕಾರ । ನಂದಿಸುದೆನಗತ್ಯಾನಂದ ॥ ಪ ॥
ಇಂದುವದನ ಗುಣಭೂಷಣ ॥ ಅ ॥
ಚಾರುವಿಲಾಸಾ । ಚಂದ್ರಹಾಸಾ । ನಾರಶೃಂಗಾರ ರಸಾಧಾರನೇ ॥ ೧ ॥
ಕರುಣಾಸಾರ । ವರಿಸುತಲೆನ್ನ । ಪೊರೆದ ವಂದಿಸಿನಗಾನಂದದಿಂ ॥ ೨ ॥

ಲಕ್ಷ್ಮಿ : ಕಂದ

ಹೀರ ಕಿರೀಟ ಮನೋಜ್ಞಾ ।
ಕಾರಾ ಘನಮಕರಕುಂಡಲಾಲಂಕಾರಾ ॥

ನಾರಾಯಣ ಭುವನೈಕಾ ।
ಧಾರಾ ಕಮಲಾಮನಸ್ಸರೋಜವಿಹಾರಾ ॥

ಜರಾಸಂಧಾದಿಗಳು : ಹಾಡು ರಾಗ : ನೋಟ್ - ಏಕತಾಳ

ನಡೆಯಿರ್ರೈ । ನಡೆಯಿರ್ರೈ । ಸುಡುವನಾವು । ಕೆಡುಗರ ಆ ॥ ಪ ॥
ಕಂಸನ ಕೊಂದವರನ್ನು । ವಿ । ಧ್ವಂಸವ ಮಾಳ್ಪುದಕಿನ್ನು ॥ ಅ.ಪ. ॥
ಘನ । ಶೈಲವ ಮುತ್ತುವ ಸಾರಿ । ಶಿಖಿ । ಜ್ವಾಲೆಯು ಹಬ್ಬುವ ಮೀರಿ ॥
ಪಶು । ಪಾಲನ ರಾಮನ ಕೊಂದು । ನಿ । ರ್ಮೂಲವ ಗೈವುದು ಕಂಡು ॥ ೧ ॥

ಲಕ್ಷ್ಮಿ : ಹಾಡು ರಾಗ : ಮೋಹನಕಲ್ಯಾಣಿ - ಆದಿತಾಳ

ಜಯಲೋಕಾಧಾರ ಸುಂದರ ॥ ಪ ॥
ಭಯದೂರ ಜಯ ಶ್ರೀಧರ ॥ ಅ.ಪ. ॥
ಇಂದಿರಾ ಹೃದಯಾ । ನಂದ ಮುಕುಂದ ।
ಸಿಂಧುರವರದಾ । ನಂದಮಯ ॥ ೧ ॥
ಬೃಂದಾರಕುವರ । ವಂದಿತಚರಣ ।
ಸಿಂಧುಶಯನ ಗೋ । ವಿಂದ ಸದಯ ॥ ೨ ॥

ಬಲರಾಮ : ಕಂದ

ಅಧಮನೃಪಾಲರೆ ನಿಮ್ಮಂ ।
ವಿಧವಿಧ ದಿವ್ಯಾಸ್ತ್ರತತಿಯನೆಡೆವಿಡದೆಚ್ಚಾಂ ॥
ವಧಿಸುತೆ ಭೂತಾವಳಿಗ ।
ತ್ರ್ಯಧಿಕಾನಂದವನೆ ಗೈದು ಶಾಂತಿಯನಾಂಪೆಂ ॥

ಜರಾಸಂಧ : ಕಂದ

ಕೆಡುಗರೆ ನಿಮ್ಮಿರ್ವರುಮಂ ।
ಪಿಶಿತಯುಕೆ ಹಣಿಹಣಿದು ಬೆಡಗನಡಗಿಸಿ ಪೊಡೆಯುಂ ॥
ಕಡಿವೆಂ ಸುಡುವೆಂ ಮುದವಂ ।
ನಡೆವೆಂ ಧಂಧಂಧಳೆಂದು ಭೇರಿಯ ಪೊಡೆವೆಂ ॥

## (ಕೃಷ್ಣಬಲರಾಮ - ಜರಾಸಂಧಾದಿಗಳ ದ್ವಂದ್ವ ಗೀತೆ)

**ರಾಗ : ಕಮಾಚ್ - ಝಂಪೆತಾಳ**

**ಕೃಷ್ಣ ಬಲರಾಮರು :** ಶಿರಮುರಿದು ತರಿದು ಭರದುರಿಸಿ ಬಹೆವು ॥ ಪ ॥
ದುರುಳರೆಲ್ಲರನು ಧುರದೊಳು ನಾಂ ॥ ಅ.ಪ. ॥

**ಜರಾಸಂಧಾದಿಗಳು :** ತಲೆಯೊಡೆದು ಕಡಿದಪೆವು ಜಡರೆನಿಮ್ಮ ॥ ಪ ॥
ಛಲದಿ ಖಡ್ಗಗಳ ಝುಳಪಿಸುತಲಿ ॥ ಅ.ಪ. ॥

**ಕೃಷ್ಣಬಲರಾಮರು :** ಅಟ್ಟಿ ಬಂದುಮಿಗೆ ಬಿಟ್ಟು ಬಾಣಗಳಕಟ್ಟ ಪಿಡಿದುವುದಿ
ಗುಟ್ಟಿ ನೀಚರೇ ಸುಟ್ಟು ಪಾವಕನೊಳ್ । ಅಟ್ಟಿ ಹಾಸದಿಂ
ನೆಟ್ಟ ನ್ನೆದುವವು । ಪೆಟ್ಟು ಮುದವ ॥ ೧ ॥

**ಜರಾಸಂಧಾದಿಗಳು :** ತಗ್ಗಿಸುತ್ತ ತಲೆ ನೆಗ್ಗಿ ನಿಮ್ಮ ಘೋ । ರದುರ್ಗಗೀಗಲೆ
ನುಗ್ಗಿಸುತ್ತಲಿ । ಹಿಗ್ಗಿ ನಿಮ್ಮಸುರೆ ಭಗ್ನಮಾಳ್ಪೆವಿಂ
ದೊಗ್ಗಿನಿಂದ ಮದ ಮಗ್ನ ಖಳರೆ ॥ ೧ ॥

## (ಶಿಶುಪಾಲ - ಜರಾಸಂಧರ ಹಾಡು)

**ರಾಗ : ಶ್ರೀರಾಗ - ರೂಪಕತಾಳ**

**ಶಿಶುಪಾಲ :** ಏನನಾಂ ಪೇಳಲಿ, ಮುನಿಪುಂಗವರೆ,
ಘನಾಪಮಾನವ ನಹಾ ॥ ಪ ॥
ದ್ರೋಹಿ ಬಲಕೃಷ್ಣರು ಗಿರಿ । ದಾಹದಲಿ ತೋರ್ದರಮಿತ ।
ಸಾಹಸವನು । ಮೋಹನಾಸ್ತ್ರ ।
ದಾಹುತಿಯೊಳು । ಮೋಹಗೊಳಿಸಲೇ ॥ ೧ ॥

**ಜರಾಸಂಧ :** ಠಕ್ಕುಮಿಗೆ ವೈಷ್ಣವಶರ । ದಿಕ್ಕುತೆ ಕಿರೀಟಗಳ ।
ದಿಕ್ಕಿಗೊಂದ ನಿಕ್ಕುತೆಮಗೆ । ದಕ್ಕದಂತೆ ಹಾರಿಸಿರುವರೇನನಾಂ ॥ ೨ ॥

**ಜರಾಸಂಧಾದಿಗಳು : ಹಾಡು** **ರಾಗ : ತೋಡಿ - ಆದಿತಾಳ**

ಭಲಾಭಲಾ ಹರುಷವ ತಳೆದೆ ವೀಗನಾವ್ ॥ ಪ ॥
ಭೂಪಮಂಡಲಿ ಸೇರಿರುವಲ್ಲಿ ಗೋಪಬಾಲ ನಾಟೋಪವದೆಲ್ಲಿ ॥ ೧ ॥

ಸಂಧಿ ಕಲ್ಪಿಸಿ ಸಿಂದಿಸಿ ಕುಂದಿಸಿ ಮಂದಮತಿಗಳು ದಂದುಗವಡಿಸೆ ॥ ೨ ॥

ದುರ್ಮದಾಂಧರ ಧರ್ಮ ಮಿತಗಿಸಿ ಮರ್ಮಸಂಧಿಯುಂ ಸರ್ಮಿಸೆವೆಂದು ॥ ೩ ॥

## ದೃಶ್ಯ : ದ್ವಾರಕಾನಗರಕ್ಕೆ ಹೋಗುವ ಮಾರ್ಗ

ನಾರದ : ಹಾಡು — ರಾಗ : ಹಿಂದೂಸ್ಥಾನಿಕಾಪಿ - ಆದಿತಾಳ

ಗೋಕುಲಾನಂದ ಹರೇ ಜಯ ಹರೇ ॥ ಪ ॥

ಸನಕಸನಂದನ ವಿನುತ ಲೋಕಪಾವನ ದನುಜವಿದಾರಕ ಹರೇ ಸ್ಮರಕೋಟಿ ॥ ೧ ॥

ಭವಭಯಶೋಷಣ ಸವಮ್ಮುದು ಭಾವಕ ಮುನಿಕುಲಗುಣಾಭರಣ

ಕರುಣಾಕರ ॥ ೨ ॥

## ದೃಶ್ಯ : ಕುಂಡಿನಿ ನಗರದಲ್ಲಿ ಶಿಶುಪಾಲ ಬಿಡಾರ

ಶಿಶುಪಾಲ : ವೃತ್ತ ॥ — ರಾಗ : ನಾಟಿ

ಸಿಡಿಮುಂಬಂ ಚಪಲಾಕ್ಷಿ ವೀಕ್ಷಣದಿನಾ ಬೆಳ್ದಿಂಗಳಂ ಹಾಸದಿಂ ।

ಗಳಿಯುಂ ಪಾಲ್ಗುವಿಲಾಸವ್ಯ ಭವದಿ ಶುದ್ಧ ದ್ವಾಸದಿಂ ಮುತ್ತಿಕೂಲ್ ॥

ಕಲಿಸುಂ ರಾಜಮರಾಳನುಂ ಗಮನದಿಂ ಕೇಳ್ದೊಡು ದಾರಾಜಿನಾ ।

ಲಲನಾರತ್ನಮನೆಂತು ಬಣ್ಣಿಸನಹೋ । ಶ್ರೀ ರುಕ್ಮಿಣೀದೇವಿಯಂ ॥

ಶಿಶುಪಾಲ : ಹಾಡು — ರಾಗ : ಕಲಂಗಡ - ತ್ರಿತಾಳ್

ಭುವನಮೋಹಕರೆ ಚತುರೆ ಆ ನೀರೆ ॥ ಪ ॥

ನವವಿಧಗುಣ ಮಣಿಹಾರೆ ರುಕ್ಮಿಣಿಯು ।

ತಾನೀನನಗೇ ಲಭಿಪಳೇಪರಿ ॥ ಅ.ಪ. ॥

ಮಾರವತಾರೆ । ಮೋಹಾಲೋಕೆ । ನಾರುತಲಂದಾ । ನರನಾನಂದ ।

ಬೀರುವೆಳೆನಗೆ ನಲ । ವೇರೆ ಮುದದೊಲಿದು ॥ ೧ ॥

ನಾರದ : ಹಾಡು — ರಾಗ : ಯಮನ್ - ಆದಿತಾಳ

ಪಾಲಯ ಕರಿವರಪಾಲ । ನರಹರೇ ॥ ಪ ॥

ಕಲಾಂಬುಧ ಸಮನೀಲ ॥ ಅ.ಪ ॥

ನಿಗಮನುತಾದ್ಭುತ । ಸುಗುಣಾಲಂಕೃತ । ಜಗತೀಪಾಲನ ಶೀಲ ॥ ೧ ॥
ಪರಮ ಶುಭಾಕರ । ಪಾವನರೂಪ । ಪರ್ವಸುಧಾಕರ ಹಾಸ ॥ ೨ ॥

## ದೃಶ್ಯ : ಕುಂಡಿನಿನಗರದ ರಾಜೋದ್ಯಾನದ ಮುಂಭಾಗ
(ಕೃಷ್ಣ - ಮಕರಂದರು ಕೊರವಂಜಿ ವೇಷ ಧರಿಸುವರು)

**ಕೃಷ್ಣ ಮಕರಂದ : ಹಾಡು** ರಾಗ : .... - ಆದಿತಾಳ

ಕೊರಚಿಯ ವೇಷವ । ನೆರೆ ತಾಳಿರುವೆ ॥ ಪ ॥
ನೆರೆ ತಾಳಿರುವೆ । ಭರದಿಂ ನಡೆವೆ ॥ ಅ.ಪ. ॥
ಕುಟಿಲಕುಂತಲೆಯೊಳು । ನಟನೆಯ ಮಾಡುತೆ ।
ಸಟೆಯನೆನಾಂ ಬಲು ದಿಟದವೊಲೊರೆವೆ ॥ ೧ ॥
ಅರುಹುತೆ ಕಣಿಯನು । ತರುಣಿಯ ಮನವನು ।
ಪರಿಕಿಸಿ ಮಾರ್ಗಕೆ । ತಿರುಗಿಪೆ ನಾನು ॥ ೨ ॥

## ದೃಶ್ಯ : ಉಪವನ
(ರುಕ್ಮಿಣಿ - ಸಖಿಯರ ಹಾಡು)

ರಾಗ : ....- ಆದಿತಾಳ

**ಸಖಿಯರು :** ಭಾಮಿನಿ ಬಾರಮಣಿ । ಗುಣಮಣೀ ॥ ಪ ॥
ಶ್ರೀ ಮಹಿತೇ ಪೂರ್ಣಕಳಾ । ಸೋಮಮುಖೀ ಸಖೀ ॥ ಅ.ಪ. ॥

**ರುಕ್ಮಿಣಿ :** ಸುಂದರ ಮಂದಾರ । ಕುಂದ ಕುಸುಮಸಾರ ॥
ನವಗಂಧ ವಹ ನಂದ ವಾನಂದ । ಸಖೀ ॥ ೧ ॥

**ಸಖಿಯರು :** ಬಂಧುರಮಣಿಮಾಲಾ । ಕಂಧರೆ ನವಲೀಲಾ । ಸುವಿಕಾಸ ।
ದರಹಾಸೇ । ಸುವಿಲಾಸೇ । ಸಖೀ ॥ ೨ ॥

**ಕೊರವಂಜಿಯರು : ಮಂದಾನಿಲ ರಗಳೆ** ರಾಗ : ನಾಗಸ್ವರಾವಳಿ

ಕಣಿಯವ್ವಾ ಕಣಿ, ಕಣಿಯವ್ವಾ । ಕಣಿಯಿದು ಭಾಗ್ಯದ ಕಣಿಯವ್ವಾ ॥ ಪ ॥
ಹಣೆಬರಹ ಪೇಳುವೆನವ್ವಾ । ಗುಣವಂತರು ಲಾಲಿಸಿರವ್ವಾ ॥ ಅ.ಪ. ॥

ಕನಸಿನಫಲಗಳ ನಿಜದರುಹುವುದು । ಮನಸಿನ ಚಿಂತೆಯ ಪರಿಹರಿಸುವುದು ।
ಸನಿದುದನೆಲ್ಲವ ಪೇಳುವ ಕಣಿಯು । ವನಿತೆಯರೇ ಲಾಲಿಸಿ ಮನದಣಿಯ ॥ ೧ ॥
ಹಿಂದಣಫಲಗಳ ನಿಜಮರುಹುವುದು । ಮುಂದಣ ಸುಖಭಾಗ್ಯವ ನೋಡುವುದು
ಕುಂದದ ವಿಸ್ಮಯ ಬೀರುವ ಕಣಿಯು । ಸುಂದರಿಯರೆ ಲಾಲಿಸಿ ಮನದಣಿಯ ॥ ೨ ॥
ಭೂತಪಿಶಾಚವ ಪಿಡಿದಾಡಿಸುವ । ಭೀತಿಗಳೆಲ್ಲವನಿರದೋಡಿಸುವ ।
ರೀತಿಯ ಪೇಳುವ ಕೊರವಿಯ ಕಣಿಯು । ಮಾತೆಯರೇ ಕೇಳಿರಿ
ಮನದಣಿಯ ॥ ೩ ॥
ವಧುವಿಗೆ ಸರಿಯಹ ವರನನು ತಿಳಿಸಿ । ಮದುವೆಗೆ ಪಿರಿದನುಕೂಲತೆ ಸಲಿಸಿ ।
ಮದಿರಾಂಬಕಿಯರ ಹರ್ಷಿಪ ಕಣಿಯು । ಸುದತಿಯರೇ ಲಾಲಿಸಿ
ಮನದಣಿಯ ॥ ೪ ॥

**ಮಕರವ್ವ : ರಗಳೆ**

ಅಂಜಿಕೆಯಳಿಯುವ ಸಂಜಿಪ್ಪನ ಕಣಿ । ಗಂಜನೆ ಹರಿಸುವ ಜುಂಜಪ್ಪನ ಕಣಿ
ಮಂಜನೆ ಕಳೆಯುವ ಮಂಜಪ್ಪನ ಕಣಿ । ಕಂಟಕತೆಗೆದರಿದ ಕೆಂಚಪ್ಪನ ಕಣಿ ॥
ಗಾಳಿಯ ಬಿಡಿಸುವ ಕಾಳವ್ವನ ಕಣಿ । ವ್ಯಾಳವನೋಡಿಪ ಕಾಳಿಂಗನ ಕಣಿ ।
ಗೋಳಿಯ ಶಕುನದ ಗೌರವ್ವನ ಕಣಿ । ಕೇಲಿಕೆನುಡಿಯುವ ಕೆಂಚವ್ವನ ಕಣಿ ॥
ಮುದ್ದಿನ ಗಂಡನ ಮುಖತೋರಿಸುವ । ಸದ್ದಿಲ್ಲದೆ ಸರಸದೊಳಾಡಿಸುವ ॥
ಸುದ್ದಿಯ ಪೇಳುವ ಸಿಂಬಗನ ಗಣಿಯು । ಹೊದ್ದಿಕೆಯಾಗುವ ಹುಸಿಹೊಸ
ಕಣಿಯು ॥

**ಮಕರವ್ವ : ಹಾಡು** **ರಾಗ : ಕಲ್ಯಾಣಿ - ಆದಿತಾಳ**

ಹೇಳುವೆ ನಾಂಕಣಿಯ । ಅಮ್ಮಯ್ಯಾ ॥
ಕಾಳಿಯ ಪದಕೆರಗುತೆ ಮನದಣಿಯ ॥ ಪ ॥
ಅರಗಣಿಯೀ ಹೆಣ್ಣು । ಇವಳಾ । ಹರಿಸವಿಯುವ ಹಣ್ಣು ।
ಕರಿಹುಡುಗನ ಮೇಲಿವಳಿಗೆ ಕಣ್ಣು ॥ ೧ ॥
ಕರಿಯುಗ ವರಿಪುದಕೆ । ವಿಘ್ನವು । ಬರುವುದು ಪರಿಣಯಕೆ ॥

ನೆರೆ ರಕ್ಕಸಗೀ ಹೆಣ್ಣೊಳು ಬಯಕೆ ॥ ೨ ॥
ಕಂಡರೆ ನಿನಗವನು । ಮನಸಿಗೆ । ಕೆಂಡದ ಪರಿಯಹನು ॥
ಗಂಡನು ನಾನೇ ಎಂದು ನಲಿವನು ॥ ೩ ॥
ಮದುವೆಗೆ ಮೊದಲಹುದು । ಮಧ್ಯದಿ । ಕದನವದೊದಗುವುದು ॥
ವಿಧವಿಧದಾಶ್ಚರ್ಯವು ನಡೆಯುವುದು ॥ ೪ ॥

**ರುಕ್ಮಿಣಿ : ಹಾಡು** **ರಾಗ : ಬೇಹಾಗ್ - ಆದಿತಾಳ**

ಪ್ರಿಯ ಗೋಪೀತನಯ । ಘನಬಾಹು । ಜಯಸಾಧನ । ಜನಮೋಹನ ॥ ಪ ॥
ಯದುಕುಮಾರ । ಸದಯ ಧೀರ ॥ ಹೃದಯೇಶನೆಂ । ಮುದವೀವನೇ ॥ ೧ ॥
ನಿರುತಮವನ । ಚರಣಯುಗವ ಸ್ಮರಿಪೆನ್ನನೇಂ । ನೆರೆನೋಳ್ಪನೇ ॥ ೨ ॥
ಪರಮ ಮಹಿಮಾ । ಕರನ ಪ್ರೇಮ । ಬರುವಂದದೇ । ಸುರಸೋಂತನೇ ॥ ೩ ॥

(ಶಿಶುಪಾಲ - ರುಕ್ಮಿಣಿ ದ್ವಂದ್ವಗೀತೆ)

**ರಾಗ : ಸುರುಟಿ - ರೂಪಕತಾಳ**

**ಶಿಶುಪಾಲ :** ಬೆದರದಿರೆಲೆ । ಮಧುರ ವಾಣಿ । ಸದಯೆ ನೀಲವೇಣಿ ॥ ಪ ॥
ವಿಧವಿಧದಲಿ ಸೇವಿಸಿ ಹಿತ । ಮೊದಗಿಸುವೆನು ರಾಣಿ ॥

**ರುಕ್ಮಿಣಿ :** ಕ್ಷಮಿಪುದು ಪದ । ಕಮಲಕೆ ಮಿಗೆ । ನಮಿಸಿಬೇಡ್ವೆ ಭೂಪಾ ॥ ಪ ॥
ರಮಣಿಯೊಳಿದು । ಸಮನಿಸದು ಭ್ರಮೆಯ ವ್ಯಥಾಲಾಪ ॥ ೧॥

**ಶಿಶುಪಾಲ :** ಹರಿಣ ಲೋಚನೆ ।

**ರುಕ್ಮಿಣಿ :** ತರವೆ ಸೂಚನೇ ? ॥

**ಶಿಶುಪಾಲ :** ವರಿಪೆನೆನುತೆ । ಭರವಸವನುರೆ ಕರುಣಿಸೆನಗೆ ಕಾಂತೆ

**ರುಕ್ಮಿಣಿ :** ನರವರ ಇದು । ತರವೆನಿಸದು । ಪಿರಿದು ಹೇಡಿಯಂತೆ

**ಶಿಶುಪಾಲ :** ಲೋಕ ಮೋಹಿನೀ

**ರುಕ್ಮಿಣಿ :** ಸಾಕು ತೆರಳು ನೀಂ

ನಾರದ : ಹಾಡು  ರಾಗ : ಬೇಹಾಗ್ - ಆದಿತಾಳ

ವಿನತಾನಂದನ ವರೂಥಪಾಲಯ ವಿನತಾನಂದಹರೇ ॥ ಪ ॥
ಘನಗುಣ । ಗಾನಲೋಲನ । ಮಾನರಹಿತ ಮ । ಹಾನುಭಾವ ಹರೇ ॥ ಅ ॥
ಜ್ಞಾನವಿಶಾಲ । ದಾನವಕಾಲ ದೀನಾವನ ವಿಮಲ । ಸುರುಚಿರ । ಭಾನು
ಕೋಟಿ ಪ್ರಕಾಶ ಮಹಿಮ ನಿ । ಧಾನ ಯದುತನಯ ॥ ೧ ॥

ಕೃಷ್ಣ : ಹಾಡು  ರಾಗ : ಶಂಕರಾಭರಣ - ರೂಪಕತಾಳ

ಪರಮ ಮೋದವ ನಾಂತೆನೀಗ । ನಿರುಕಿಸುತಲಿ । ನಾರಿ । ಮೀರಿ । ಕೆರೀರಿ ।
ಸರಸದೆ । ಬರೆದಿಹ । ಪರಿಯನು ॥ ಪ ॥
ನೀರೆಯಾ ಲಾವಣ್ಯವಂ । ನೀರೇಜಾಕ್ಷಿಯ ಗುಣಮಂ । ನಿರುತವು
ಕೇಳುತಲೀ ಮನ । ಸರಸಿಜ ಮುಖಿಯೊಳ್ ॥ ನಾರಿ ಸೇರಿ ಮಾರಹತಿಯ ।
ನಾಂತಿರ್ಪೆನು । ಚಿಂತಾಭರ । ಮಿಂತು । ಶಾಂತಿ । ಯಾಂತುದಿಂದು ॥ ೧ ॥

ಕೃಷ್ಣ : ಹಾಡು  ರಾಗ : ಹಂಸಧ್ವನಿ - ಝಂಪೆತಾಳ

ಭ್ರಷ್ಟದಾನವರಧಟ । ದೆಷ್ಟಿಹುದು ನೋಳ್ಪೆ ॥ ಪ ॥
ಮುಷ್ಟಿಯೊಂದರೊಳವರ । ಪಿಷ್ಟವನೆ ಮಾಳ್ಪೆ ॥ ಅ.ಪ. ॥
ಶ್ರೇಷ್ಠ ವಸ್ತುವೊಳಮಿತ । ದುಷ್ಟ ರಾಕ್ಷರೀಗ ।
ಲಿಷ್ಟಪಡಲಿಂತವೆರ ರಿಷ್ಟ ಕಾರಣವು ॥ ೧॥
ಅಂತಕನ ಪುರಗೈದ । ಲಿಂತವರಗೀ ಬುದ್ಧಿ ಯಂತ್ತ
ರಂಗದೊಳುದಿಸಿ । ತಂತ್ಯ ಕಾಲಕ್ಕೆ ॥ ೨ ॥
ದುರ್ಮದಾಂಧರನೆಲ್ಲ । ನಿರ್ಮೂಲ ಮಾಡುತ್ತೆ ।
ನಿರ್ಮಲಾಂಗಿಯ ವರಿಸಿ । ಪೆರ್ಮೆಯಂ ತಳವೆ ॥ ೩ ॥

ದೃಶ್ಯ : ವಿವಾಹ ಮಂಟಪ ಮಾರ್ಗ

ರುಕ್ಮಿ, ಜರಾಸಂಧಾದಿಗಳು : ಹಾಡು  ರಾಗ : ಅಟ್ಟತಾಳ ಚಾಪು

ಜಯ ಘೋಷದಿಂದಲಿ ಸಾರುವ ಪರಿಣಯದ ಮಂಟಪ ಸೇರುವ ॥ ಪ ॥
ನಯತೋಷವಿಕಾಸದೆ ಭೂರಿ ಹರ್ಷೋದಯವನುರ್ವಿಗೆ ಬೀರುವ ॥ ಅ.ಪ. ॥
ಬಾಲಶಾಲಿಯೀ ಶಿಶುಪಾಲ ಭೂ ಪರಿ । ಪಾಲನ ಗುಣಶೀಲನಂ ॥ ಆಳಿ ।
ನೀಲಕುಂತಳೆ ಬಾಲೆ ರುಕ್ಮಿಣಿ । ಲೀಲೆಯಿಂ ವರಿಪಲ್ಲಿಗೆ ॥ ೧ ॥

## ದೃಶ್ಯ : ಕುಂಡಿನ ನಗರ - ಅಂಬಿಕಾ ದೇವಾಲಯ

**ರುಕ್ಮಿಣಿ : ಹಾಡು** **ರಾಗ : ಬೇಹಾಗ್ - ಆದಿತಾಳ**

ಮುದವಾಂತೆ ಮದಿರ ಲೋಚನೇ ॥ ಪ ॥
ಯದುಕುಲ ತಿಲಕನ ಕಾರುಣ್ಯದಿ ॥ ಅ.ಪ. ॥
ಶ್ರೀ ಮಹಿಮಾಕರ । ಸ್ವಾಮಿಯು ಕಳುಹಿದ ॥
ಪ್ರೇಮ ನಿರೂಪದಿ । ಭಾಮಾಮಣೀ ॥ ೧ ॥
ಸಲೆ ಮದನಾಗ್ನಿಯ । ಸಾಕ್ಷಿಯೊಳೆನ್ನಂ ॥
ಒಲಿದು ವರಿಸಿದುದ । ತಿಳಿಸಿರ್ಪನು ॥ ೨ ॥

**ರುಕ್ಮಿಣಿ : ಹಾಡು** **ರಾಗ : ಮಾಂಡ್ - ಆದಿತಾಳ**

ದೇವನುತ ಪಸು । ದೇವಸುತ । ಪಾವನ ಮೌನಿ । ಭಾವಹಿತ ॥ ಪ ॥
ಭಾವಿಸಿ ಬಂದು । ಕಾವನದೆಂದು । ಶ್ರೀವರನೆನ್ನನು । ಕೈಪಿಡಿದು ॥ ಅ.ಪ. ॥
ವಿಜಯ ವಿಲಾಸ । ವಿಮಲ ಸುಹಾಸ । ಸುಜನ ಸುಖಂಕರ । ಗುಣಭಾಸ ॥
ತ್ರಿಜಗದೀಶ । ಬಿಜಯಗೈದೆನ್ನೊಳು । ನಿಜಕೃಪೆ ತೋರ್ಪನೇ । ಗಜ
ಗಮನೇ ॥ ೧ ॥

**ರುಕ್ಮಿಣಿ : ಹಾಡು** **ರಾಗ : ವಸಂತ - ಝಂಪೆತಾಳ**

ದೇವ ಯದುನಾಥ ಪರಿಪೂತ ಪೊರೆ ಮಾಧವ ॥ ಪ ॥
ದೇವ ಮುನಿಪಾವನತ ಪಾವನ ಪದಾಂಭೋಜ ॥ ಅ.ಪ. ॥
ಶ್ರೀವಾಸ ಗುಣಭಾಸ । ಶಿಷ್ಟ ಹೃದಯಾವಾಸ ।
ದೇವಾಧಿದೇವ ಸಂ ॥ ಭಾವಿತ ಕೃಪಾಶೀಲ ॥ ೧ ॥
ಶರಣಾರ್ತಿ ಭಂಗ ಘನ । ಕರುಣಾತರಂಗ ।
ವರರುಕ್ಮಿಣೀ ಹೃದಯ । ಸರಸೀಜ ಭೃಂಗ ॥ ೨ ॥

## ದೃಶ್ಯ : ಅರಮನೆಯ ಮುಂಭಾಗ

**ನಾರದ : ಹಾಡು** **ರಾಗ : ಬೇಹಾಗ್ - ಆದಿತಾಳ**

ಯದುಕುಲ ತಿಲಕ ಗೋಪಾಲ ॥ ಪ ॥
ವಿಧುಕಿರಣಾಮಲ ಹಾಸ ವಿಶಾಲ ॥ ಅ.ಪ. ॥

ನಿರುಪಮಶೀಲ । ನಿರ್ಜರ ಪಾಲ । ವರಮುನಿನುತ ಮಹಿಮ ॥ ಶ್ರೀಧಾಮ ॥ ೧ ॥
ಸತ್ಯಶುಭೋದಯ । ನಿತ್ಯ ನಿರಾಮಯ ಸ್ತುತ್ಯ ಸಕಲ ಸುಗುಣ । ಶ್ರೀ ರಮಣ ॥ ೨ ॥

## ದೃಶ್ಯ : ಕುಂಡಿನ ನಗರದ ಹೊರಭಾಗ
## (ರುಕ್ಮಿಣಿ- ಕೃಷ್ಣರ ದ್ವಂದ್ವಗೀತೆ)

**ರಾಗ : ಶಂಕರಾಭರಣ - ಏಕತಾಳ**

**ರುಕ್ಮಿ :** ಅಧಮ ಬಿಡುಬಿಡೆಲೊ ಕಂಜಾಕ್ಷಿಯ ॥ ಪ ॥
ಸುದತಿಯ ಚೌರ್ಯದೊಳ್ । ಒದಗಿಂತು ಪಿಡಿಯುತೆ । ಪದಪಿಡುದುಯೆಗೆ ಧೀ ।
ಮದಾಂಧ ವದಿಸುವೆನಾ । ನೀಕ್ಷಣ । ಧೀ ॥ ೧ ॥

**ಕೃಷ್ಣ :** ಖಳನೆ ನಡೆನಡೆಯೊ ಧೀ ! ಮೂರ್ಖನೆ ॥ ಪ ॥
ಒಲಿಯುತೆ ತಂದಿಹ ॥ ವಿಲಾಸಿನಿಯ ಮಿಗೆ ।
ಎಲೆ ತರಳ ದೊರೆಗ । ಪಲಾಯನವನೊಸಗಿ । ಜೀವಿಸು । ಪೇಳು । ಖಳನೆ ॥ ೧ ॥

**ರುಕ್ಮಿ :** ವಿಧವಿಧ ಘನಶರ ಜಾಲವ ಬಿಡುತೆ । ವಧಿಸುತೆ ನಿಮಿಷದೆ ಧರಾತಲಕೆ
ಕೆಡಹಿ । ನಿನ್ನನು । ನಾಂ । ನಲಿವ । ಬಿಡುಬಿಡೆಲೊ ॥ ೨ ॥

**ಕೃಷ್ಣ :** ದುರುಳನೆ ನಿನ್ನಯ ಶಿರವನು ನಿಮಿಷದಿ । ತರಿದಿಡುವುದು ನನಗ
ಸಾಧ್ಯಮನಿಸದುಕೇಳ್ । ಪಾಲಿಪ । ನಾಂ ನಿನ್ನ । ನಡೆನಡೆಯೊ ॥ ೨ ॥

## ॥ ಮಂಗಳಂ ॥

**ರಾಗ : ಕಲ್ಯಾಣಿ - ಆದಿತಾಳ**

**ಎಲ್ಲರೂ :** ಜಯ ಜಗದೀಶ । ಲಕ್ಷ್ಮೀಶ ॥ ಪ ॥
ಸುರಪನುತ ಶುಭಾ । ಕರಘನ ಚರಿತ । ಕರುಣಾಕರ ಸುಖಕರ
ಕರಗುಣಭರಿತ ॥ ಗಾನಲೋಲ ಜಯ ಘನಸುಮನೀಲ ॥ ಮುನಿನಿಚಯ
ನುತ ಮಹಿಮ ವಿಶಾಲ ॥ ಮಾನ್ಯರುಕ್ಮಿಣೀ ಲೋಲ ಸುಶೀಲ ।
ಮಂಗಳಮೀವುದು ಯದುಬಾಲಾ ॥ ೧ ॥



# ಶ್ರೀ ಕೃಷ್ಣಭಾಮಾಪರಿಣಯ



ಕರ್ನಾಟಕ ನಾಟಕ ಪಿತಾಮಹ

**ಬೆಳ್ಳಾವೆ ನರಹರಿಶಾಸ್ತ್ರಿಗಳು**

**ಪ್ರಾರ್ಥನೆ : ಹಾಡು** ರಾಗ : ಹಂಸಾನಂದಿ - ಆದಿತಾಳ

ನಾರಾಯಣನೆ ನಾನಾವತಾರನೆ
ನಾರದವಂದ್ಯನೆ ನಮೋ ನಮೋ ॥ ಪ ॥
ಪಾಲನ ಕರ್ತನೆ ಪಾಪ ವಿನಾಶನೆ
ಪರಮಪವಿತ್ರನೆ ಪರಶಿವಮಿತ್ರನೆ ॥ ಅ.ಪ. ॥
ಮೋಹಿನಿರೂಪವ ಧರಿಸುತ ಅಸುರರ
ವಂಚಿಸಿ ಅಮೃತವ ಅಮರರಿಗಿತ್ತ ॥ ೧ ॥
ಬಾಲಕಧ್ರುವನ ಭಕ್ತಿಗೆ ಒಲಿದ
ಬಾಲ ಪ್ರಹ್ಲಾದನ ಲೀಲೆಯಿಂಕಾಯ್ದ ॥ ೨ ॥

**ದೃಶ್ಯ : ರಸ್ತೆ**

**ಸೂತ್ರಧಾರ - ವೃತ್ತ** **ರಾಗ - ನಾಟಿ**

ಶಾ॥ ಶ್ರೀ ವಿಶ್ವಾತ್ಮಕನಿಂದುವಂಶತಿಲಕಂ ಶ್ರೀರುಕ್ಮಿಣೀಚಿತ್ತಗಂ ।
ಜೀವಾದಿತ್ಯನನಂತಭಾಗ್ಯನಿಲಯಂ ಭಕ್ತೇಷ್ಟದಾನೈಕನಂ ॥
ದ್ವಾವಂ ಜಾಂಬವತೀಸ್ಯಮಂತಕಶುಭಾಲಂಕಾರಸುನಾತ್ಮಭಾ ।
ಮಾವೈವಾಹಮುದಂ ಸಮಂತೆಮಗೆ ಮಾಳ್ಕನಂದವಂ ಮಾಧವಂ ॥ ೧ ॥

**ಸೂತ್ರಧಾರ : ಹಾಡು** ರಾಗ : ಕಲ್ಯಾಣಿ - ಆದಿತಾಳ

ದೇವಕೀ ಬಾಲ । ದಿವಿಜಾನುಕೂಲ ॥ ಪ ॥
ದೇವಾಧಿದೇವ । ನವ । ತೇಜೋಮಯ ।

ಶ್ರೀ ವಿಲಾಸಸದನಾ । ತ್ರಿತ ಸುಖಕಲನ ॥ ಅ.ಪ. ॥
ಪಾಲಿತಲೋಕ ಪರಮ ಕೃಪಾಲೋಕ । ಭಾವಜ ಜನಕ । ಭವ್ಯ ಗುಣಾಂಕ ॥
ಸತ್ಯಭಾಮಾಮನ । ಸ್ವರ್ಗಾರ್ಧ್ಯ । ಸತ್ಯಧರ್ಮಾವನ । ಶ್ರೀನರಹರೇಪಾಹಿ ॥ ೧ ॥

## ದೃಶ್ಯ - ಸಮುದ್ರತೀರ

**ಸತ್ರಾಜಿತ : ಹಾಡು** **ರಾಗ : ವಸಂತ - ಆದಿತಾಳ**

ಜಯ ಪ್ರಭಾಮಯಾಕಾರ । ಜಗಪೂಜಕಮಂದಾರ । ಭಾಗ್ಯಕರ ॥ ಪ ॥
ನಿರ್ಮಲಕಿರಣ । ನಿರ್ಜರಾದರಣ ॥
ಧರ್ಮಶೀಲ ಶ್ರೀ । ಧಾಮ ಸೂರ್ಯಜಯ ॥ ೧ ॥
ಪಾತಕಹರಣ । ಪಾಲಿತಾರ್ತಗಣ ।
ಪೂತನಿಗಮ ಸಂ । ಗೀತಸೂರ್ಯ ಜಯ ॥ ೨ ॥

**ಸತ್ರಾಜಿತ : ಕಂದ**

ಸಿರಿಯಂ ವರ್ಷಿಪ ಮಹಿಮಾ ।
ಕರ ರತ್ನವನಿದನೆ ಪಡೆದ ನಾನಲೆ ಧನ್ಯಂ ॥
ಪರಮೈಶ್ವರ್ಯಂ ಗಳಿಸುತೆ ।
ಮೆರೆವೆಂ ಬಲರಾಮಕೃಷ್ಣರಧಟಂ ಮುರಿವೆಂ ॥ ೩ ॥

**ಸತ್ರಾಜಿತ : ಹಾಡು** **ರಾಗ : ಮೋಹನ - ಆದಿತಾಳ**

ಭಲಾ ! ಸಮನಾವನೋ । ಜಗದೆನಗೆ ॥ ಪ ॥
ವಿಲಾಸ ವಿನೋದ । ದೊಳಿಂತು ನಿರಂತ । ವಿಳಾತಳದೀಪಗೆ ॥ ಅ.ಪ. ॥
ನಭೋಮಣಿಯಾದ । ಪ್ರಭಾಕರನಸು ॥
ಪ್ರಭಾವದಿಂದಲಿ । ಪ್ರಭಾರುಚಿರವೀ ।
ಸ್ಯಮಂತಕ ರತ್ನ । ಲಭಿಸಿರಲೆನಗೆ ॥ ೧ ॥
ಅನಂತ ಸುವರ್ಣ । ವನೀವಮಣಿಯಿಂ ।
ಮನೋಜ್ಞಲೀಲಾ । ವಿನೋದದಳಿವೆ ॥
ದಿನೇಶ್ವರಭಕ್ತ । ನೆನಿಸುತೆ ಮೆರೆವೆ ॥ ೨ ॥

## ದೃಶ್ಯ : ದ್ವಾರಕಾನಗರದ ದ್ವಾರ

**ನಾರದ : ಹಾಡು** **ರಾಗ : ಶಂಕರಾಭರಣ - ರೂಪಕತಾಳ**

ಶ್ರೀವರ ಗೋಪಾಲಬಾಲ । ಪಾವನ ಜಯ ಗಾನಲೋಲ ॥ ಪ ॥
ಮಂಗಳಕರ ಪುಣ್ಯಶೀಲ । ಶೃಂಗಾರ ತರಂಗಲೀಲ ॥ ಅ.ಪ. ॥
ಲೋಕಪಾಲಶರಣ ಸರ್ವ । ಲೋಕಾವನಕರುಣ ಸದಾ ॥
ಶ್ರೀಕಾಂತಾಲೀಲ ವಿಮಲ । ರಾಕಾಶಶಿವದನಕೃಷ್ಣ ॥ ೧ ॥
ನರಹರ್‍ಯವತಾರನಿಹತ । ನಾನಾಖಳದನುಜಕುಲ ।
ನಾಕಾಧಿಪ ವಿಜಯಮೂಲ । ನಂದಯಶೋದಾಕುಮಾರ ॥ ೨ ॥

## ದೃಶ್ಯ : ಸತ್ರಾಜಿತನ ಅರಮನೆ

**ಸತ್ರಾಜಿತ : ಕಂದ**

ಇನನಂದದೆ ತೇಜೋಮಯ ।
ಮೆನಿಸುತೆ ನಿತ್ಯಂ ಸುವರ್ಣವೃಷ್ಟಿಯ ಕರೆವಾ ।
ವಿನುತ ಸ್ಯಾಮಂತಕ ಮಣಿ ।
ನಿನಗೊಲವಿಂ ಮಣಿವೆನಮಳ ಸೂರ್ಯಕಲಾಪಾ ॥

(ಎಲ್ಲರೂ ರತ್ನವನ್ನು ಪೂಜಿಸುವರು, ರತ್ನದಿಂದ ಸುವರ್ಣಗಳು ಸುರಿಯುವುವು)

**ಎಲ್ಲರೂ : ಹಾಡು** **ರಾಗ : ಯಮನ್ - ತ್ರಿತಾಳ**

ತರುಣಾರುಣ । ಕಿರಣಾವಳಿ ಭಾಸುರ । ದೇಮಮಣಿಶ್ರೀ । ದಿವ್ಯಾಕಾರ ॥ ಪ ॥
ಭಾರಿಭಾಗ್ಯ ಸುಖ ಮೋದಾಸ್ಪದ ಶ್ರೀ ॥ ಅ.ಪ. ॥
ನಿಜತೇಜೋಧವಳೀ ಕೃತದಿಕ್ತಟ ।
ಸುಜನಾವನ ಶ್ರೀ ಸೂರ್ಯಕಲಾಪ ॥
ಮಣಿವೆವು ನಿನಗೆ । ಮಹಿತಸ್ಯಮಂತಕ ॥ ೧ ॥

**ಹಾಡು : ಸತ್ಯಭಾಮಾದಿ ಸ್ತ್ರೀಯರು** **ರಾಗ : ಯಮನ್ - ತ್ರಿತಾಳ**

ಸೂರ್ಯಸಮತೇಜೋವಿಭಾಸಂ । ಸುಜನನುತಮಹಿಮವಿಕಾಸಂ ॥
ನಿರುಪಮಸುಖಸುವಿಲಾಸಂ । ಕರುಣಿಸಿ ಪೊರೆಯುವ ।

ಸುರುಚಿರದಿವಿಜಮಣಿ । ಮಣಿವೆವಿಂದು ॥ ಪ ॥
ಥಳಥಳಿಸುತೆ ನವ । ಕಳೆಗಳ ಕೆದರುತೆ । ತೊಳಗಿ ಸುವರ್ಣದ ।
ಮಳೆಗರೆದಿಂದು ಇಳೆಯೊಳಗತಿಶಯ ಪ್ರಭಾವದಸೆದೆ ॥ ೧ ॥

## ದೃಶ್ಯ : ಶತಧನ್ವನ ಮನೆ

**ಶತಧನ್ವ : ಹಾಡು** — **ರಾಗ : ಕಾನಡ - ಆದಿತಾಳ**

ಮನಮುಪಹರಿಸಿದಳಾ ಸುಂದರಿ ॥ ಪ ॥
ಘನಗುಣಧಾಮೆ ವರಸತ್ಯಭಾಮೆ ॥ ಅ.ಪ. ॥
ಲೋಲಾಕ್ಷಿಯನಾ । ಲೋಕಿಸಿ ನಾನು । ಸೋಲುತ್ತೀಗಳಾ ।
ನೀಲವೇಣಿಯ । ಲೀಲಾತುರದೊಳು । ಲೀನನಾದೆನು ॥ ೧ ॥
ಸುಂದರೀಸೌಖ್ಯಾ । ನಂದವಿಲ್ಲಾ ಮುಂದುಗೆಮ್ಮೊಳು । ನೊಂದುಬಾಳ್ವೆನೋ ॥
ಕಂದರ್ಪನು ತಾಂ । ಕುಂದಿಸಿರುವನು ।

**ನಾರದ : ಹಾಡು** — **ರಾಗ : ಮೋಹನ -ಆದಿತಾಳ**

ಯದುಕುಲಬಾಲ । ಮೋಹನಲೀಲ ॥
ಉದಯಾರ್ಕಕಲಾ । ಶ್ರೀಲೋಲ ಜಯ ॥ ಪ ॥
ಗಾನಲೋಲ । ಜ್ಞಾನಿಘನಫಲ । ದನುಜಹರಬಲ ।
ಕೃಷ್ಣ । ಸಕಲಕಲಾ । ನಿಕರಮಹೋಜ್ವಲ ॥
ಲೋಕಪಾಲ ಶ್ರೀ । ಗೋಕುಲ ಸುಕಲಾ ।ಶ್ರೀಲೋಲ ಜಯ ॥ ೧ ॥
ಶ್ರೀ ಮುಕುಂದ । ಕೌಮುದೀಸಮ ।
ವಿಮಲತರ ದರಹಾಸ ಯಮಿನುತ ॥
ಕಮಲಸುಲೋಚನ । ಕಾಮದಾನ ನಿಃಸ್ಸೀಮ
ನರಹರೇ ಶ್ರೀಲೋಲ ಜಯ ॥ ೨ ॥

## ದೃಶ್ಯ : ಉಪವನದ ಲತಾ ಮಂಟಪ

**ಸತ್ಯಭಾಮೆ : ಹಾಡು** — **ರಾಗ : ಭೈರವಿ, ಆದಿತಾಳ**

ಎಂತು ನಾಂ ಸೈರಿಪೆ ತಾಪವಂ ! ಸ್ವಾಂತದೀಗ । ಶಾಂತಿಯಿಲ್ಲದೆ ॥ ಪ ॥
ಚಿಂತಾಗ್ನಿಯಿಂ ಬೆಂದೆ । ನಿಂತಾರ್ತಿ ಮೀರಲೆಂತು ॥ ಅ.ಪ. ॥

ಮಂದಾನಿಲನು ಬೀಸೆ । ಬೆಂದಪುದೀದೇಹ ॥
ಕುಂದಾರವಿಂದಾಳಿ । ಕುಂದಿಪುದೆನ್ನ ॥ ೧ ॥

**ಸತ್ಯಭಾಮೆ : ಹಾಡು** **ರಾಗ : ಜಂಜೂಟಿ - ರೂಪಕತಾಳ**

ತಾಳಲಾರೆನೇ ತಾಪವನಿಂದುವದನೇ ॥ ಪ ॥
ಅಂದು ರತ್ನಪೂಜೆಗೆ । ಬಂದ ಶ್ರೀಮುಕುಂದನೊಳ್ ॥
ನಿಂದು ಮನವು । ನೊಂದೆ । ನಾನು ।
ಮುಂದೆ ಬಾಳ್ವೆನೇಪರಿ ॥ ೧ ॥

**ಸತ್ಯಭಾಮೆ : ಕಂದ**

ತ್ರೈಲೋಕ್ಯ ಮೋಹನೈಕ ಸು ।
ಲೀಲಾಮಯ ಕೃಷ್ಣಮೂರ್ತಿ ಭವದೀಯ ಕಲಾ ॥
ಶೀಲಾದ್ಭುತ ಲಾವಣ್ಯಕೆ ।
ಸೋಲುತೆ ನಿನಗರ್ಪಿಸಿರ್ಪೆ ನೀತನು ಮನಮಂ ॥

**ಸತ್ಯಭಾಮೆ : ಕಂದ**

ಶ್ರೀನಿಧಿಯಂ ಲಾವಣ್ಯ ಸು ।
ಧಾನಿಧಿಯಂ ನವರಸೈಕ ಪರಮಾವಧಿಯುಂ ॥
ಧೀನಿಧಿಯಂ ನಿನ್ನಂ ಬಹು ।
ದೀನಧಿ ನಾಂ ನಮಿವೆ ನೊಲಿದು ಪಾಲಿಪುದೆನ್ನಂ ॥

**ಸತ್ಯಭಾಮೆ : ಕಂದ**

ಮನದಾಣ್ಮನೆಂದು ನಿನ್ನನೆ ।
ನೆನೆನೆನೆದಾ ಸ್ಮರಶರಾಗ್ನಿಯಿಂ ತಪಿಸಿರ್ಪೆಂ ॥
ಕನಿಕರದಿಂ ಪೊರೆಯಿಲ್ಲದೊ ।
ಡನಲನೆ ಗತಿಯೆನಗೆನುತ್ತೆ ನಿಶ್ಚಯಿಸಿರ್ಪೆಂ ॥

ಶತಧನ್ವ : ಹಾಡು ರಾಗ : ಸಾರಂಗ - ಆದಿತಾಳ

ಎಂತಿಹಳಾಹಾ । ಲೋಲಲೋಚನೆ ॥ ಪ ॥

ಕಂತುರಿ ವಧೂಮಸಿ । ಯಂತೆ ಕಾಂತಿಯಿಂದೆಂ ॥ ಅ.ಪ. ॥

ಅಂಗನೆ ಮಧುರಾ । ಪಾಂಗದಿ ಪರಿಪರಿ ಅಂಗಭವನಶರ ।
ಸಂಘಟೀರುತೆ ॥ ೧ ॥

ನಗೆಮೊಗದಿಂದ ಸುರ । ನಾರಿಯುರಂದದಿ । ನಲಿಯುತಿರಳೀಸವ
ನಾರಿ ನೋಡಲು ॥ ೨ ॥

ಶತಧನ್ವ : ಹಾಡು ರಾಗ : ದೇಶಿತೋಡಿ - ಏಕತಾಳ

ಬಾ ಗುಣಧಾಮೇ ರಮಣೀಲಲಾಮೇ ॥ ಪ ॥

ಸರಸವಿಲಾಸಾಗಮೆ ಸತ್ಯಭಾಮೇ ॥ ಅ.ಪ. ॥

ಸಾರಂಗನಯನೇ । ಸರಸಿಜವದನೇ ।

ಸಾರೇ ಮರಾಳಮೃದುಯಾನೇ ॥ ೧ ॥

ಸೌಂದರ್ಯಸದನೇ । ಸುಮಧುರವಚನೇ ।

ಕಂದರ್ಪಶುಕಕಲಗಾನೇ ॥ ೨ ॥

## ದೃಶ್ಯ : ಶ್ರೀಕೃಷ್ಣನ ಅರಮನೆ ಮುಂದೆ

ನಾರದ : ಹಾಡು ರಾಗ : ಕಲ್ಯಾಣಿ - ಆದಿತಾಳ

ಭುವನೈಕ ಮೋಹನ । ರವಿಶಶಿಲೋಚನ ॥ ಪ ॥

ದಿವಿಜಾಧಿಪಶರಣ । ದೀನಸಂತಾರಣ ॥

ನವಕಲಾಮಂದಿರ । ನಂದಕುಮಾರ ॥ ಅ.ಪ. ॥

ಸಾಗರಗಂಭೀರ । ಸತ್ಯಧರ್ಮಾಕಾರ ಜಯ ।

ವಾಗಗೋಚರಲೀಲ । ವಾರಿದನೀಲ ॥

ಯೋಗ ವಿಜ್ಞೇಯ । ಆಗಮಗೇಯ ।

ವರನಾರಸಿಂಹ । ವಾಸುದೇವ ॥ ೧ ॥

## ದೃಶ್ಯ : ಶ್ರೀಕೃಷ್ಣನ ಅರಮನೆ

**ಕೃಷ್ಣ : ಹಾಡು** **ರಾಗ : ಬೇಹಾಗ್ - ಆದಿತಾಳ**

ಲೀಲಾಸದನೇ । ನವ । ಲೀಲಾಸದನೇ ॥ ಪ ॥
ಕುವಲಯಸಖಸಮ ಸುಂದರವದನೇ । ಭಾಮೇ । ಗುಣಧಾಮೇ ॥ ಅ.ಪ. ॥
ಮಧುರಸುವಾಣೀ । ಮಧುಕರವೇಣಿ ॥
ಹೃದಯದಿ ನೊಂದೆನೆ ರಾಣೀ ॥ ಮೃದುವಾಣೀ ॥ ೧ ॥
ಸುಮಶರವಿಶಿಖಾಸಾರವು ತನುವಂ । ಸೂರೆಗೊಳುತ್ತಿಹುದೇ ॥
ರಮಣೀ ತಾಪವ । ಶಮನಮೆನಗು ನೀಂ ಭಾಮೇ ಗುಣಧಾಮೇ ॥ ೨ ॥

**ಕೃಷ್ಣ : ಹಾಡು** **ರಾಗ : ಶಂಕರಾಭರಣ - ಆದಿತಾಳ**

ಏನನೊರವೆ ಸುರಮುನಿಪಾ । ಮಾನಸದುದಿಸಿರುವ ತಾಪವ ॥ ಪ ॥
ಸಾರತೇಜೋಧರೆ ಶುಭಾಕರೆ । ಸರಸಲೀಲಾಕಾಸಾರ ॥
ನೀರೆ ಸುಕಳಾ । ಧಾರೆ ಮನದೆ । ನಿಂದಳು ಸುಗುಣಾಗಾರೆ ॥ ೧ ॥
ಲೋಕ ಲೋಕಾಂತರದೆ ನೋಡಲು । ದೊರೆಯುಳಾ ದಿವ್ಯಾಕಾರೆ ॥
ಆಕೆ ವಿಲೋಲಾ । ಲೋಕೆ ನೆಲಸಿಹ । ಳಂತರಂಗದೊಳಾಭಾಮೆ ॥ ೨ ॥

**ಕೃಷ್ಣ : ಹಾಡು** **ರಾಗ : ಮಾಂಡ್ - ಆದಿತಾಳ**

ಮನೋಮುದವಗೈದಳಾ । ಭಾಮಾಮಣಿ । ಎನಗೆ ॥ ಪ ॥
ಕಾಮಿಸಿದಂದದೆ । ಕಾಮಿನಿ ಯೆನ್ನೊಳ್ ।
ಪ್ರೇಮವಾಂತಿಹಳಾ । ಶ್ರೀಮಹಿತೆ ॥ ೧ ॥
ಪ್ರೀತಿಯ ಲಿಖಿತದೆ । ನೂತನವೆನಿಪಾ ।
ಚೇತನಮಾಂತೆನು । ಕೌತುಕದಿ । ೨ ॥

## ದೃಶ್ಯ : ಸತ್ರಾಜಿತನ ಅರಮನೆ ಮುಂದೆ

**ಮಕರಂದ : ಹಾಡು** **ರಾಗ : ಜಂಜೂಟಿ - ಆದಿತಾಳ**

ಧರಿಸಿದೆ ನಾರೀ ವೇಷವ ॥ ಪ ॥
ಗುರುತರಿಯದ ಪರಿ । ನೆರೆ ನಟಿಸಲು ನಾಂ ॥ ಅ.ಪ. ॥
ಮಾನಿನಿ ಭಾಮೆ । ಶ್ರೀನಾಥನೊಳು । ಮಾನಸ ಮಿಡೆ ನಂ । ಧಾನಮೆನಗಲು ॥ ೧ ॥
ನಂದಕುಮಾರ । ಗಿಂದುಪಕಾರ । ಮೊಂದಿಸೆ ನಾನಾ । ನಂದದೆ ಚತುರ ॥ ೨ ॥

## ದೃಶ್ಯ : ಉದ್ಯಾನವನದ ಲತಾಮಂಟಪ

**ಜಯಸೇನ : ಹಾಡು** **ರಾಗ : ತಾಳ**

ಹರುಷವನಾಂತೆ ನಾನೀದಿನ । ಆಹಾ ॥ ಪ ॥
ಸರಸಿಜನಯನೆಯು । ನಾರಲೀಲೆಗಳ । ಸರಸವಿಭವದೊಳು ನಾಂ ಸೇರಿ ॥
ಮೀರಿದ ಸುಖದಿ । ಭೂರಿಭಾಗ್ಯದಿ । ಭರದೆಸೆಯುವೆನಮಮಾ ॥ ೧ ॥
ಮಧುರಸುವಚನದಿ । ಮಾತನಾಡಿನಾತೆ । ವಿಧವಿಧಚತುರತೆಯನು ತೋರಿ ॥
ಸುದತಿಯುಮನವ । ಸೂರೆಗೊಳ್ಳುತೆ । ಮುದವನು ಪಡೆದವೆನಾಂ ॥ ೨ ॥

**ಜಯಸೇನ : ಹಾಡು** **ರಾಗ : ಸಾರಂಗ - ಆದಿತಾಳ**

ಲಲಿತ ಮಧುರವಾಣೀ । ಫಣಿವೇಣೀ । ಲಲಿಸ ಸರೋಜಾತಪಾಣೀ ।
ಲಾಲಿಸೆನ್ನ ನುಡಿಯ ನಿತ್ಯ ಕಲ್ಯಾಣಿ ॥ ಪ ॥
ಕಾಮಬಾಣ ಹತಿಯು ಮೀರಿ । ಕಾಯವು ಕುಂದಿಹುದು ।
ಸೋಮಾನನೆಸಿರಿಂ ಸುಮಶರನಾತಾ ಪರಿಹರಿಸು ಕಮಲಮುಖೀ ರಾಣೀ ॥ ೧ ॥

## ದೃಶ್ಯ : ಉದ್ಯಾನವನದ ವಿಲಾಸಮಂಟಪ ಪ್ರದೇಶ

**ಸತ್ಯಭಾಮೆ : ಹಾಡು** **ರಾಗ : ತಾಳ**

ಘನಲೀಲಾ । ಸುನಿಧಾನಾ । ಜನಮೋಹನ ॥ ಪ ॥
ಮಾನಿತಭಾಮಾ । ಮಾನಸಧಾಮಾ ।
ಮಾನಾಯಕಾ । ಮಹಿಮಾಂಗಾ ॥ ಜಯಕೃಷ್ಣ ॥ ೧ ॥
ಗಾನವಿನೋದ । ದೀನಪ್ರಮೋದ ।
ಮೌನಿಪ್ರಿಯ । ಮಹನೀಯಾ । ಜಯಕೃಷ್ಣ ॥ ೨ ॥

## (ಸತ್ಯಭಾಮೆ - ಕೃಷ್ಣರ ಯುಗಳ ಗೀತೆ)

**ರಾಗ : ಮೋಹನ - ಆದಿತಾಳ**

ಸತ್ಯಭಾಮೆ : ಪಾಲಿಸು ಪರಮಕೃಪಾಲಯ । ಕಾಂತಾ । ಬಾಲೆಯು
ಮೊರೆಯನು । ಲಾಲಿಸು ಶಾಂತಾ ॥ ಪ ॥

ಕೃಷ್ಣ: ಮೋದವಿಕಾಸ ವಿ। ನೋದವನಾಂತೆ ॥ ಈ ದಿನಮೆಮಗೆ
ಶುಭೋಧಯ ಕಾಂತೇ ॥ ಪ ॥

ಸತ್ಯಭಾಮೆ : ನಿರುತ ನಿನ್ನನೇ ಜಾನಿಸಿ ಮನದಿ। ಪರಮ ಭಕ್ತಿಯಿಂ।
ನಂಬಿದೆ ಮುದದಿ। ಕರವಿಡಿದೆನ್ನ। ಪೊರೆ ಮನದನ್ನ।
ಪರಮ ಪುರುಷ ಶ್ರೀಕೃಷ್ಣ॥ ೧ ॥

ಕೃಷ್ಣ: ಪರಮ ಸುಂದರಾಕಾರ ಮನೋಹರೆ। ಹರುಷಮಾಂತೆನಾನ
ನುಪಮ ಚತುರೇ ॥ ವರಿಸಿದ ನಿನ್ನ। ವರಗುಣಧಾಮೇ ॥
ಸರಿಯಾರೆನಗೆನ್ನರಗಿಣಿ ಭಾಮೇ ॥ ೨ ॥

## ದೃಶ್ಯ : ಅರಮನೆ ಮುಂಭಾಗ

(ಪ್ರಸೇನನೂ, ಕಲಹಂಸನೂ ಧನುರ್ಧಾರಿಗಳಾಗಿ ಪ್ರವೇಶಿಸುವರು)

**ಪ್ರಸೇನ : ಕಂದ**

ತನುವಿಗೆ ಮಿಗೆ ಲಾಘವಮಂ।
ಮನಕತ್ಯಾನಂದಮಂ ಸದಾರೋಗ್ಯಮುಮಂ ॥
ಅನುವಿಂ ಮತಿಗತಿಸೂಕ್ಷ್ಮತೆ।
ಯನೆ ಸೀಡುವುದಲ್ತೆ ಬೇಟೆ ಧೀರರೊಳಸಿಶಂ ॥

## ದೃಶ್ಯ : ಸತ್ರಾಜಿತನ ಮನೆ

**ನಾರದ : ಹಾಡು** — ರಾಗ : ಕೇತಾರ - ರೂಪಕತಾಳ

ಜಯ ಜಯ ಗೋಕುಲಬಾಲ। ಜಯ ಸುಶೀಲ ಜಲದ ನೀಲ ॥ ಪ ॥
ನಯವಿಶಾಲ ನವ್ಯಕಳಾ। ಭಯವಾರಣ ಭವತರಣ ॥ ಅ.ಪ. ॥

**ಸತ್ರಾಜಿತ : ಹಾಡು** — ರಾಗ : ಹಿಂದೋಳ - ಆದಿತಾಳ

ಪೇಳುವೆನಿದ। ನೆಂತೋ। ಮುನಿವರ। ತಾಳುವೆನಿದನೆಂತೋ ॥ ಪ ॥

ಇಂದಾ ವನದಿ । ಬಂದು ಕೃಷ್ಣನು । ಕೊಂದನನುಜನನ್ನು । ಶಿವಶಿವ ॥ ೧ ॥
ಚೋರಾಧಮನು । ಸಾರಿರತ್ನವ । ಚೌರ್ಯದಿ ಪಡೆದಿಹನು ॥ ಶಿವಶಿವ ॥ ೨ ॥

## ದೃಶ್ಯ : ರಸ್ತೆ

**ನಾರದ : ಹಾಡು** **ರಾಗ : ಕೇತಾರ - ರೂಪಕತಾಳ**

ಸಕಲಲೋಕ ಪಾಲನ ಸಂಹರಣಾಸ್ಪದಲೀಲ । ವಿಕಸಿತಾಬ್ಜ ಸುಂದರ ಮುಖ ।
ಸುಖಭೋಗಮಯ ॥ ಸುಕರಲೋಕ ಮೋಹನೈಕ । ಸುಲಲಿತಾಂಗ
ಶ್ರೀನಿಲಯ ।
ಪ್ರಕಟಿತಾಗಮಾಳಿಗೀತ ಪಗಮಸಾರಸಿಂಹ ಕೃಷ್ಣ ॥ ೧ ॥

## ದೃಶ್ಯ : ಶ್ರೀಕೃಷ್ಣನ ಅರಮನೆ

**ಕೃಷ್ಣ : ಹಾಡು** **ರಾಗ : ಬೇಹಾಗ್ - ಆದಿತಾಳ**

ಜನಮೋಹನೇ । ಭಾಮೇ । ಚಂದ್ರಾನನೇ ॥ ಪ ॥
ನಿನ್ನ ಪಾಂಗತೇಜವು । ನೀರಜಾಸ್ತ್ರಪುಂಜವು ॥
ನನ್ನ ಬಾಧಿಸಿಪ್ಪರ್ದು । ಮುನ್ನ ಪಾಲಿಸೇ ಪ್ರಿಯೇ ॥ ೧ ॥
ಎಂದಿಗೆನ್ನ ಮಾನಸಾ । ನಂದಮಿಾವೆ ಮಾನಿತೇ ॥
ಕಂದಿ ಕುಂದಿ ನೊಂದೆ ಭಾಮೇ ಬಂದು। ಪಾಲಿಸೇ ಪ್ರಿಯೇ ॥ ೨ ॥

## (ಕೃಷ್ಣರುಕ್ಮಿಣಿಯರ ಯುಗಳ ಗೀತೆ )

**ರಾಗ : ಯಮನ್ - ಆದಿತಾಳ**

**ರುಕ್ಮಿಣಿ :** ನಿಲಿಪೆ ಕಾಯ್ಗಳ । ನಿಡು ನೆರೆ ಪಣವ ॥ ಪ ॥

**ಕೃಷ್ಣ :** ಜಲರುಹನಯನೇ ಸಲೆ ಪಣಮಿಡುವೆ ॥ ಪ ॥

**ರುಕ್ಮಿಣಿ :** ಲಲಿತಭಾವದಿಂ । ಲಾಲಿಸು ರಮಣಾ ॥ ಅ.ಪ. ॥

**ಕೃಷ್ಣ :** ನಲಿದು ನಡೆಯಿಸುವೆ । ಸಲೆ ಕಾಯ್ಗಳನು ॥ ಅ.ಪ ॥

**ರುಕ್ಮಿಣಿ :** ಲೀಲೆಯೊಳಾಡಿ ಪಾಡಿ ।
ಮೇಲೆ ಪಂಥಗಳನು ನಾಂ । ಗೆಲುವೆ ವಿಲಾಸಮಹಿತ ॥ ೧ ॥

**ಕೃಷ್ಣ :** ಸೋಲಿಪೆನೆ । ಲಲನೇ । ಛಲದಿಂ ।
ಸಲೆ ನೋ । ಡೆಲೆ ನೀಂ ॥ ಕಲಕೋ । ಕಿಲವಚನೇ ॥ ೧ ॥

**ನಾರದ : ಹಾಡು** **ರಾಗ : ಏಕತಾಳ**

ಶ್ರೀರಮಣಸದಾ । ವಿಜಯದ । ಘನಮೋದ । ನಿತ್ಯ ವಿನೋದ ॥ ಪ ॥
ಗಾನವಿಲೋಲ । ಘನಗುಣಶೀಲ । ಜ್ಞಾನಿಜನಾವನ ಲೀಲ ॥ ಅ.ಪ. ॥
ಗಂಗಾಜನಕ । ಗರುಡವರೂಢ । ಗರುಡಸುರಾವಳಿಗೀತ ॥
ಮಂಗಳರೂಪ । ಮಧುರಾಲಾಪ । ಮಹರ್ಷಿಮಾನಸದೀಪ ॥ ೧ ॥
ಮಂದರಗಿರಿಧರ । ಮರಕತ ತೇಜ । ಸುಂದರಗೋಪತನೂಜ ॥
ಸಾಂದ್ರವಿಲಾಸ । ಶಶಿರುಚಿಹಾಸ । ಜಯ ನರಹರಿಸರ್ವೇಶ ॥ ೨ ॥

**ಕೃಷ್ಣ : ಹಾಡು** **ರಾಗ : ಹಂಸಧ್ವನಿ - ಆದಿತಾಳ**

ಮರುಗದಿರು । ರಾಣೀ ನೀಲಾಹಿವೇಣೀ ॥ ಪ ॥
ತೆರಳುತಲಿ । ನೆರೆ ಬೆದಕಿ । ತರುವೆ ಮಣಿಯ ॥ ಅ.ಪ. ॥
ನಡೆದುಮಣಿಚೋರ । ಸಡೆಗರಣಧೀರ । ಪಿಡಿದವನವೇರ । ಕೊಡೆದುಮಣಿಹಾರ।
ದೊಡನೆಮುದದಿಂದ । ನೆರೆ ನಡೆತರುವೆ । ನಡೆಗರದೆ ಕಡುಜವದೆ ॥ ೧ ॥

**ದೃಶ್ಯ : ಅರಮನೆ ಮುಂಭಾಗ**

**ಕೃಷ್ಣ : ಹಾಡು** **ರಾಗ : ಭಾಗೇಶ್ವರಿ - ಆದಿತಾಳ**

ಏನೀಘಟನೆ । ಮಾನಸವೇದನೆ । ಮಾನಹಾನಿಯು ಪಿ । ಧಾನ ಪಿದಾಂಗ್ಯೆ ॥ ಪ ॥
ಘೋರಾರಣ್ಯದೆ । ವೀರಪ್ರಸೇನಗೆ ।
ಮಾರಣವೊದಗಿದ । ಕಾರಣ ಕಾಣೆನು ॥ ೧ ॥
ಅಂದಾವೀರನ । ಕೊಂದನಾವನೋ ।
ಬಂದುದು ಲೋಕದೆ । ನಿಂದೆಯು ನನಗೆ ॥ ೨ ॥

## ದೃಶ್ಯ : ಪರ್ವತ ಗುಹೆ

**ಕೃಷ್ಣ : ಹಾಡು** — **ರಾಗ : ...... - ಆದಿತಾಳ**

ಪರಿಕಿಸೆಘೋರ ಗಹ್ವರವಕಟಾ ॥ ಪ ॥
ದೊರೆವುದೇನಿಲ್ಲ ಮಹಾಮಣಿಯಿನ್ನು ॥ ಅ.ಪ. ॥
ಸುತ್ತಲೂ ನೋಡಲು ಕತ್ತಲೆಮುಸುಕಿದೆ ।
ಎತ್ತಪೋಗುವೆನೆನೆ । ಚಿತ್ತ ಕೆತೋರುದು ॥ ೧ ॥
ಮುಂದಕೆ ಸಾರಲು । ಸಂದೆಗ ಮನಸಿಗೆ ।
ಬಂದುದೀಗ ಜಯ । ಮೊಂದುವೆನೇಪರಿ ॥ ೨ ॥

**ಜಾಂಬವತಿ (ನೇಪಥ್ಯದಲ್ಲಿ) : ಹಾಡು** — **ರಾಗ : ನಾಟಿಕುರಂಜಿ - ಆದಿತಾಳ**

ಜಯಜಯಾಂಗಜಾತ ಸುಂದರ । ಜಯಸುಧಾಕರ ॥ ಪ ॥
ಜಯವಿನೋದ ಲೀಲಪರಮ । ನಯಗುಣಾಕರ ॥ ಅ.ಪ. ॥
ಕಾಡದಿನ್ನು । ನೋಡಿಮಣಿಯ । ನಾಡುಸುಂದರಾ ॥
ಕೂಡಿಮುದವ । ದೂಡಿ ಛಲವ । ನೀಡು ಮೋದವ ॥ ೧ ॥
ತರುಣತರಣಿಯಂತೆ ವಿಮಲ । ಕಿರಣಮೆರ ಚುತೆ ।
ಮಿರುಗುತಿರುವ ಮಣಿಯ ನೋಡು । ಸರಸಭಾಷಣ ॥ ೨ ॥
ವನರುಹಾಕ್ಷ ನೋಡು ಮುದದೆ । ಘನಸುರಮಣಿಯ ॥
ನಿನಗಿದೆಂದು । ಮನದೊಳಿಂದು । ನೆನವೆ ಮೋಹನಾ ॥ ೩ ॥

**ಕೃಷ್ಣ : ಹಾಡು** — **ರಾಗ : ಮಧ್ಯಮಾವತಿ - ಆದಿತಾಳ**

ಅವಳೋ ನವಸಾರಂಗಲೋಚನೆಯು ॥ ಪ ॥
ದೇವ ಗಂಧರ್ವ ಭಾಮಿನಿಯೊ ನೋಡಲೀಕೆಯು ॥ ಅ.ಪ. ॥
ಬಾಲೆ ತರುಣ ಚಂದ್ರಫಾಲೆ । ಕಳಾಲೀಲೋಜ್ವಲೆ ।
ನೀಲವೇಣೀ ಲಲತಕನಾ ಮಣಿ ॥
ಲೋಲಾಕ್ಷಿ ಮಾರಶರ । ಜಾಲ ದೆನ್ನ ಸಿಲ್ಕಿಸಿಹಳಾವಳೋ ॥ ೧ ॥

ಜಾಂಬವತಿ : ಹಾಡು ರಾಗ : ನಾಟಿಕುರಂಜಿ - ರೂಪಕತಾಳ

ಇವನಾವನೊ ಮನೋಜಾತರೂಪನು । ನವಮೋಹನನು ॥ ಪ ॥
ಕುವಲಯಾಪ್ತ । ಸುವಿಮಲಾಸ್ಯ । ನಿಪುಣ ದಾನವರಿಪುವಿನೋ ॥ ಅ.ಪ ॥
ಲಲಿತಾಕೃತಾಯಿಂ । ಸೆಳೆಯುತಲೆನ್ನಯ ಮನವ । ನ್ನಸುಖಿಂ ॥
ನಲಿದು ಬಂದು । ನಗುತ ನಿಂದು । ಕಲಕುತಿರ್ಪ । ಸ್ವಾಂತವ ॥ ೧ ॥
ನರನೋ । ಸುರನೋ । ಧರೆಗಿಳಿದಿಹ ಮೃಗಧರನೋ, ಸ್ಮರನೋ ॥
ಪರಮಮೋದ । ವರವಿನೋದ । ಭರಿತನಾದ ।
ಪುರುಷನಿಂದಿ ವನಾವನೋ ॥ ೨ ॥

ಶ್ರೀ ಕೃಷ್ಣ : ಹಾಡು ರಾಗ : ಭೈರವಿ

ಮಧುರಂ ನಿನ್ನಯ ರೂಪಂ ।
ಮಧುರತರಂ ನಿನ್ನ ವಾಂಗಮಿಾ ಮೃದುವಚನಂ ॥
ಮಧುರತರಂ ಕಂಠಸ್ವರ ।
ಮಧುರತೆಯನದೆಂತು ಬಣ್ಣಿಪೆಂ ಶುಕವಾಣೀ ॥

## ಜಾಂಬವತಿ ಕೃಷ್ಣರ ಸಂವಾದ

ಶ್ರೀ ಕೃಷ್ಣ : ಹಾಡು ರಾಗ : ಭೈರವಿ

ಕೃಷ್ಣ : ಕುಲವಾಣೀಮನೋಜ್ಞ ಛಳಿ । ಪೇಳೇ ನುಡಿಯನುರೆಲಾಲಿಸೀ ॥
ಜಾಂಬವತಿ : ಕಲಾಪೂರ್ಣಮಣಿಯಿದು । ಛಲಂ ಮಾಡೆ ದೂರೆಯದು ॥
ಕೃಷ್ಣ : ಲಲಿತಾಂಗಿ ಬೆದರಿಸುವೆಯ ನೀಂ ।
ಛಲವಿದು । ಫಲಿಸದು । ಲಲನೆಯೇ ॥ ೧ ॥
ಜಾಂಬವತಿ : ಇಂದುವದನ ಕೇ । ಳಿಂದು ಬೆದರಿಸೆ । ಬಂದಳಲ್ಲವು ನಾಂ ॥
ಮುಂದುವರಿದರೆ । ಕುಂದುಬರುವುದು । ಹಿಂದಕೆ ಸಾರುವುದು ॥ ೨ ॥
ಕೃಷ್ಣ : ಇಂದೇಕೆ । ಸಂದೇಹ । ಸೌಂದರ್ಯಸಾರೇ ।
ಸಂಧಿಸಿ ಕಾದು ವರಾರ್ ॥ ಧುರದೊ । ಳಿರದೆ । ಬಲದೆ ಕೆಡಹುತೆ ।
ಪೊಡವಿಗೆ । ಅಡಗಿಪೆ । ಬೆಡಗನು ॥ ೩ ॥

**ಜಾಂಬವಂತ : ಕಂದ**

ದುರುಳನದಾವಂ ಭಯವಂ ।
ತೊರೆದೀಪರಿ ಬಂದು ಶಂಖರಾವದಿನೆನ್ನಂ ॥
ಕೆರಳಿಸಿರುವನವನಧಟಂ ।
ಮುರಿದವನಂ ಪಿಡಿದು ಕೆಡಹಿ ಸದೆಬಡಿದಪೆನಾಂ ॥

## ದೃಶ್ಯ : ಜಾಂಬವಂತನ ಮನೆ

**ಜಾಂಬವಂತ : ಕಂದ**

ಶರಣಾಗತನಾಗಿರ್ಪೆಂ ।
ಚರಣಾಬ್ಜಕೆ ಮಣಿವ ಭೃತ್ಯನಂ ಮನ್ನಿಸುತುಂ ॥
ಕರುಣದೊಳೊರೆ ನೀಂ ವಿಧಿಯೋ ।
ತರುಣ ಸುಧಾಕಿರಣಧರನೊ ನಾರಾಯಣನೋ ॥

**ಜಾಂಬವಂತ : ಹಾಡು** ರಾಗ : ಸುರಟಿ - ಆದಿತಾಳ

ಅಪರಾಧಗಳನು ಮನ್ನಿಸಯ್ಯ । ಕೃಪಾತರಂಗನಾನು ಗೈದಿರ್ಪ ॥ ಪ ॥
ವಿಪರೀತಕರಿಣವಚನವಾಡಿ । ಅಪಕಾರಿಯಾದೆನಾನಾದಿ ಕೇಶವ ॥ ಅ.ಪ. ॥
ಘೋರಯುದ್ಧದಿ । ಮೀರಿ ನಿನ್ನನು । ಕ್ರೂರನುನಾನಾಪರಿ । ಪೋರಿಕಾದಿ ॥
ದೂರಿದೆನು ಖತಿಯಿಂ । ದುರಿತದೂರ । ಧೀರರಾಮಚಂದ್ರ ।
ಧೀರಸಂತರಣ ॥ ೧ ॥

**ಜಾಂಬವಂತ : ಹಾಡು** ರಾಗ : ಕಲ್ಯಾಣಿ

ಶ್ರೀರಾಮಾ ಧರ್ಮಗುಣ್ಯೆ ।
ಕಾರಾಮಾ ಪೊರೆವುದೆನ್ನ ದುರಿತವಿರಾಮಾ ॥
ಸಾರಕೃಪಾರಸಧಾಮಾ ।
ಚಾರುಶ್ರೀ ಭೂಮಿಜಾಕ್ಷಿಕೈರವಸೋಮಾ ॥

**ಜಾಂಬವಂತ : ಹಾಡು** — **ರಾಗ : ..... - ಆದಿತಾಳ**

ರಾಮ ರಾಮ ರವಿವಂಶಸುಧಾಂಬುಧಿ । ಸೋಮ ದಿವ್ಯನಾಮ ॥ ಪ ॥
ಭೂಮಿಜಾಕ್ಷಿನವನೀರಜತೇಜೋ । ಧಾಮ ಸಮರಭೀಮ ॥ ಜಯ ಜಯ ॥
ರಾವಣಾದಿ ದನುಜಾವಳಿಕಾನನ । ದಾವ ವಿಮಲ ಭಾವ ॥
ದೇವಜಾಲ ಕುಸುಮಾಂಜಲಿ ಪೂಜಿತ । ಪಾವನಪ್ರಭಾವ । ಜಯ । ಜಯ ॥ ೧ ॥
ಲೋಕಸೃಷ್ಟಿ ಪರಿಪಾಲನಸಂಹರ । ಸ್ವೈಕಲೀಲರಾಮ ॥
ನಾಕನಾಥನುತನಾರದಾದಿಯು । ಶ್ಲೋಕಿತಗುಣಧಾಮ । ಜಯ ಜಯ ॥ ೨ ॥

## ದೃಶ್ಯ : ಅದೇ ಅರಣ್ಯದ ಬೇರೊಂದು ಭಾಗ

**ಶ್ರೀ ಕೃಷ್ಣ : ಕಂದ**

ಥಳಥಳಿಪ ಕನಕ ಕಲಶಾ ।
ವಳಿಯಿಂ ಶಶಿಕಾಂತ ದಿವ್ಯಗೋಪುರಗಣದಿಂ ॥
ತೊಳಪಾದ್ವಾರಾವತಿ ಕಂ ।
ಗೊಳಿಪುದು ರಮಣೀಯಮಾಗಿ ನೋಡೆಲೆ ರಮಣೀ ॥

**ಶ್ರೀ ಕೃಷ್ಣ : ಹಾಡು** — **ರಾಗ : ಕಲ್ಯಾಣಿ - ರೂಪಕ ತಾಳ**

ಸಾಂದ್ರ ವಿಭವ ದ್ವಾರಕೆಯನು । ಚಂದ್ರಾನನೆ ವೀಕ್ಷಿಸುನೀಂ ॥ ಪ ॥
ಇಂದ್ರಾವತಿಯಿಂಮಿಗಿಲೆನೆ । ಚೆಂದವತಳೆ । ದಿಂದೆಸೆಯುವ ॥ ಅ.ಪ. ॥
ಕಲಧೌತ ಸುಕಲಶಾವಳಿ । ಥಳತಳಥಳಿಸುತ್ತ ನಭದಿ । ತೊಳಗಿಬೆಳಗುತಿರಲು
ನಾನಾಗೋಪುರಾಗ್ರದಿ ॥ ಸೆರೆಮೆರೆದಿಹ । ವರಸೌಧಗ । ಳುರರಂಜಿಸು ।
ತಿರೆಪರಿಪರಿ । ಧರಣೀವಧು । ಧರಿಸಿರುವಾ । ಭರಣಮಿದೆನೆ ।
ಪುರಮೆಸೆವುದು ॥ ೧ ॥

**ಜಾಂಬವತಿ : ಹಾಡು** — **ರಾಗ : ......**

ಎಂತಹ ಸೊಬಗಿನ ನೋಟ ಇದು ॥ ಪ ॥
ಸ್ವಾಂತಕಪಾರ ಸಂತಸಮೀವ ॥ ಅ.ಪ. ॥
ಕೋಮಲವಲ್ಲೀ । ಶ್ಯಾಮಲಮಾದ ।

ಭೂಮಿಯು ನಿರ್ಮಲತರ । ವ್ಯೋಮವು ॥ ೧ ॥
ಕೋಕಿಲಕೀರಾ । ನೀಕವನಾಂತ । ಶಾಖೆಗಳೊಪ್ಪಿಹ ತರು ಜಾಲದಿ ॥ ೨ ॥
ಕಂಜಮರಾಳ । ಪುಂಜವಿಶಾಲ । ಮಂಜುಸರೋವರ ವಿದು । ನೋಡಲು ॥ ೩ ॥

## ದೃಶ್ಯ : ಅರಮನೆಯ ಮುಂಭಾಗ

**ನಾರದ : ಹಾಡು** **ರಾಗ : ......**

ನಮಸ್ತೇ ಶ್ರೀ ವೇಣುಲೋಲ ದಯಾಶೀಲ ॥ ಪ ॥
ಪ್ರಮೋದಕರಣ ಕಾರಣ । ಪ್ರಮಾದ ನಿಕರವಾರಣ ॥ ಅ.ಪ. ॥
ಲೋಕಮೋಹನಾಕಾರ । ನಾಕಾಧಿಪಾಧಾರ । ಕೋಕನದಾಲಂಕಾರ ।
ಶೋಕ ಹರಣ ಶುಭಕರಣ । ಶ್ರೀಕರನತಮಂದಾರ । ಶ್ರೀ ವರಕೃಷ್ಣ ॥ ೧ ॥

## ದೃಶ್ಯ : ಸತ್ರಾಜಿತನ ಮನೆ

**ಸತ್ರಾಜಿತ : ಹಾಡು** **ರಾಗ : ಮುಖಾರಿ - ಅಟ್ಟತಾಳ ಚಾಪು**

ಅಕಟಾ ಜಗದೇತಕೆ ನಾನಿರುವೆ ॥ ಪ ॥
ಸುಖಸಂಪದವಂ । ಸುತೆಯಂ ಕಳೆದು ॥ ಅ.ಪ. ॥
ಅನುಜನ ನಳಿದು । ಮಣಿಯಂ ಕಳೆದು ।
ತನುಜಾತೆಯ ಕಾಣದೆ ಬಾಳುವೆನೇ ॥ ೧ ॥

**ಕೃಷ್ಣ : ಹಾಡು** **ರಾಗ : ಬೇಗಡೆ - ಅಟ್ಟತಾಳ ಚಾಪು**

ಮನದೆ ಬೇಸರ ಬೇಡವೈ ಮಾವನೆಕೇಳು ॥ ಪ ॥
ಎನಭಕ್ತನಾಗಿಹ । ನಿನಗೇ ತಕ್ಕುದು ಮಣಿ ॥ ಅ.ಪ. ॥
ಮೋದದದೆ ನೀನಾಶೀ । ವಾರ್ದವೆಸಗೆ ನಿನ್ನ ।
ಪಾದಕೆ ಮಣಿವೆನು । ಭೇದವಿನ್ನೇಕೆ ॥ ೧ ॥
ಘನರತ್ನ ದೊರಕಿತು । ತನುಜೆಯೂ ದೊರೆತಳು ।
ಮನದೆಸಂತಸಮೊಂದು । ಜನನುತ ಚರಿತ ॥ ೨ ॥

## ದೃಶ್ಯ : ವಿವಾಹ ಮಂಟಪ

**ಹಾಡು : ಎಲ್ಲರೂ** **ರಾಗ : ಯಮನ್ - ರೂಪಕತಾಳ**

ಜಯ ಭಾಮಾ ಪ್ರಿಯರಮಣ । ಜಾಂಬವತೀ ಸಂವರಣ ॥ ಪ ॥
ಲೋಕಪಾಲನೈಕಶೀಲ । ಶ್ರೀಕರಮಹಿಮಾಲವಾಲ ॥ ಅ.ಪ. ॥
ನತಸುರಕುಲ । ಜಿತರಿಪುಬಲ । ನುತಮಂಗಳ ಕರಕೃಷ್ಣ ॥ ೧ ॥
ದೇವ ದೇವ ರುಕ್ಮಿಣೀಶ । ದೇವಕೀಕುಮಾರಾಧೀರ ॥
ಭಾವಜಾತತಾತ ಭವ್ಯ । ಭಾವಮಂಗಳಂನ್ಮ ಹರೆ ॥ ೨ ॥

## ಮಂಗಳ

**ರಾಗ : ಮಧ್ಯಮಾವತಿ - ಆದಿತಾಳ**

ಜಯಮಂಗಳಂ ನಿತ್ಯಶುಭಮಂಗಳಂ ॥ ಪ ॥
ಇಂದೀವರಾಕ್ಷಗೆ ಇಭರಾಜವರದಗೆ
ಇಂದಿರಾರಮಣ ಗೋವಿಂದಹರಿಗೆ ॥ ಅ.ಪ. ॥
ನಂದನ ಕಂದಗೆ ನವನೀತ ಚೋರಗೆ
ವೃಂದಾರ ಕೇಂದ್ರ ಉಡುಪಿಯ ಕೃಷ್ಣನಿಗೆ ॥ ೧ ॥



# ಸುಭದ್ರಾಕಲ್ಯಾಣ



ಅಭಿನಯ ವಿಶಾರದೆ
**ಮಳವಳ್ಳಿ ಸುಂದರಮ್ಮ**

ನಾಟಕಕಾರರು
**ತೋರಣಗಲ್ ರಾಜಾರಾಯರು**

**ಪ್ರಾರ್ಥನೆ : ಹಾಡು** — **ರಾಗ : ಹಿಂದೂಸ್ಥಾನಿಕಾಪಿ - ಆದಿತಾಳ**

ಶ್ರೀ ಲಕುಮಿ ರಮಣ ನಾರಾಯಣ
ಸಲಹೈ ಸಕಲರ ಸಂತಸದಿ । ಪ ॥
ಶ್ರೀ ರಮಣೀಕುಚ ಕುಂಕುಮ ರಂಜಿತ
ಪಾಲಯಮಾಂ ಮುನಿ ಗಣದಿಂಪೂಜಿತ ॥ ಅ.ಪ. ॥
ದಿವ್ಯ ಪೀತಾಂಬರ ಭವ್ಯಮನೋಹರ
ನವ್ಯ ಸುಂದರ ಬಹು ಕಾಂತಿಭಾಸುರ ॥ ೧ ॥
ದೀನನಾಥನೆ ದೀನ ಶರಣ್ಯನೆ
ಧ್ಯಾನಿಸುವವರ ಕಾಮಧೇಯನೆ ॥ ೨ ॥
ನೀರಜನೇತ್ರನೆ ನಿರುಪಮ ಚರಿತನೆ
ನಿರ್ಮಲರೂಪನೆ ನಿಖಿಳಾಧಾರನೆ ॥ ೩ ॥

**ಸೂತ್ರಧಾರ : ವೃತ್ತ ॥** — **ರಾಗ : ನಾಟಿ**

ಶ್ರೀ ವೈದರ್ಭಿಯನಾತ್ಮ ಮಿತ್ರ ಶಿಶುಪಾಲಂಗೀವ ಸಂಕಲ್ಪದಿಂ
ವೈವಾಹೋಚಿತಯತ್ನಮಂ ರಚಿಸಿರಲ್ಕಾರುಕ್ಮಿ ಬಂದಾಗಳೊ
ಲ್ದಾವಂಗೋಪ್ಯದೆ ಕೊಂಡು ರುಕ್ಮಿಣಿಯನೇ ಕಲ್ಯಾಣಮಂ ತಾಳ್ದನಾ
ದೇವಂ ಶ್ರೀ ಯದುವಂಶ ಚಂದ್ರನೆಮಗೀಗಾನಂದಮಂ ಮಾಧವಂ

ಸೂತ್ರಧಾರ : ಹಾಡು ರಾಗ : ಕಲ್ಯಾಣಿ - ಆದಿತಾಳ

ಪರಮ ಪಾವನಾ ಶ್ರೀರಮಣ ನತಜಾಲ ಭರಣ ॥ ಪ ॥
ಚರಣ ಸೇವಕಾದರಣ ಶಾಶ್ವತ ಸುಖಭವ ತಾರಣ ॥ ಅ.ಪ. ॥
ಕಮಲಲೋಚನ ಕಾಮ್ಯತತಿ ಕಲ್ಪಕುಜ ಕಾಂಚನ ಭೂಷಣ ॥
ಶಮದಮರಕುಲೋದ್ಧರಣಾ ನಾರದ ಸಂಗೀತಗುಣ ॥ ೧ ॥
ಸಿಂಧುರಪಾಲ ಪುರಂದರನುತ ಪಾದ ಪಂಕಜ ॥
ಇಂದಿರಾರಮಣ ದಯಾಮಂದಿರ ಶುಭಗತಿ ದಾತ ॥ ೨ ॥
ಸದಾನಂದಮಯ ಸದಯಾ ಸಾಂದ್ರಲೀಲ ಸಾಧು ಸುಖದ
ವಿಧಾತೃಮುಖವಂದ್ಯ ವಿಶ್ವಮಯ ಪೊರೆ ಶ್ರೀಶ ॥ ೩ ॥

**ಅಥವಾ**

**ಸೂತ್ರಧಾರ : ಹಾಡು ರಾಗ : ಕುಂತಲವರಾಳಿ - ಆದಿತಾಳ**

ಮಾಧವ ಮೋಹನ ಮಂಗಳರೂಪ
ಮುನಿಜನಮಾನಸ ಮಂದಿರ ದೀಪ ॥ ಪ ॥
ಭವ ಸಾಗರವ ಕಡೆ ಹಾಯಿಸುವ
ತವ ಗುಣಗಾನವ ಭಜಿಸುತ ಮೆರೆವ
ಶ್ರೀಲೋಲ ವಿಮಲ ವಿಶಾಲ
ತುಲಸೀ ವನಮಾಲ ಗೋಪಾಲ ॥ ೧ ॥
ಭೋಗ ವಿಲಾಸದಿ ತನು ನೀಗುವರೇ
ಯೋಗದ ಮಹಿಮೆಯ ಅರಿಯದ ಮೂಢ
ಮಾನವ ಕೋಟಿಯ ಪಾಪವನೀಗೆ
ಪರಗತಿ ಕರುಣಿಸೊ ಕಮಲನಾಭ ಕರುಣಾಮಯ ॥ ೨ ॥

**ದೃಶ್ಯ : ಬಲರಾಮನ ಸಭೆ**
**(ಮಂತ್ರಿ, ಅಕ್ರೂರ, ಸೇನಾಧಿಪತಿ ಕೃತವರ್ಮ**
**ಉಚಿತಾಸನಗಳಲ್ಲಿ ಕುಳಿತಿರುವರು)**

ಬಲರಾಮ : ಹಾಡು ರಾಗ : ಜಂಜೂಟಿ - ರೂಪಕತಾಳ

ಪೇಳ್ವೈ ಸಚಿವಾಗ್ರಗಣ್ಯನೇ
ಇಳೆಯಲ್ಲಿನ ಏಳ್ಗೆಯ ॥ ಪ ॥
ಕ್ರತು ನಿರತರೆ ಸಕಲ ಭೂಸುರರ್

ಹಿತವರಾರತಿ ಶಿಷ್ಟರೆ ಕ್ಷತ್ರಿಯರ್
ಸತತ ಗೋಪರಿಪಾಲನಾ ವೃತ-
ಹಿತರೆ ವೈಶ್ಯರು ಧರ್ಮವ ಪೆರ್ಚಿಪರೆ ॥ ೧ ॥

**ಬಲರಾಮ : ಹಾಡು** **ರಾಗ : ಜಂಜೂಟಿ - ರೂಪಕತಾಳ**

ವೇಳ್ಳೆ ಸೇನಾಧಿನಾಧನೆ ಪಟುಭಟರ ಪೆಳ್ಗೆಯಂ ॥ ಪ ॥
ಹಿತರಣೋತ್ಸಾಹರೆ ಪೇಳಿ ಸತತ ಶಾಸ್ತ್ರ
ಕಲಾಭ್ಯಾಸ ಸತತವ್ಯೂಹ ರಚನೆ ಚಣರು
ಹಿತಮತೀಯುತೆ ಯೋಧ ಸುವೀರರು ॥ ೧ ॥

**ನಾರದ : ಹಾಡು** **ರಾಗ : ಬೇಹಾಗ್ - ಆದಿತಾಳ**

ವಂದಿಪೆ ಮಾಧವ ಸಾಂದ್ರಸುವಿಭವ
ಬೃಂದಾರಕ ಗಣ ವಂದಿತ ಚರಣ ॥ ಪ ॥
ಮುನಿಜನ ಸೇವಿತ ಘನಸುಮನೀಲ
ದಿನಕರ ಪಾಲಿಸು ವನರುಹಮಾಲ ॥ ಅ.ಪ. ॥

**ನಾರದ : ಹಾಡು** **ರಾಗ : ಯಮನ್ - ಆದಿತಾಳ**

ಕೃಷ್ಣಾಮುಕುಂದಾ ಮುರಾರೇ ಜಯ
ಕೃಷ್ಣಾಮುಕುಂದಾ ಮುರಾರೇ ॥ ಪ ॥
ಕರುಣಾಸಾಗರ ಕಮಲಾನಾಯಕ
ಕನಕಾಂಬರಧಾರೀ ಗೋಪಾಲಾ ॥ ಅ.ಪ. ॥
ಕಾಳೀಯ ಮರ್ಧನ ಕಂಸ ವಿಸೂದನ
ಕಮಲದಳ ನಯನಾ ಗೋಪಾಲಾ ॥ ೧ ॥
ಗೋಪಿ ಜನಮನ ಮೋಹನ ವ್ಯಾಪಕ
ಕುವಲಯದಳ ಲೀಲಾ ಗೋಪಾಲ ॥ ೨ ॥

## ದೃಶ್ಯ : ದ್ವಾರಕಾನಗರದ ಹೊರಗಣ ಅರಣ್ಯ ಪ್ರದೇಶ

**ನಾರದ : ಹಾಡು** **ರಾಗ : ಅಭೇರಿ - ಆದಿತಾಳ**

ಶ್ರೀಹರಿ ಮುರಾರಿ ಚಕ್ರಧಾರಿ । ಶೌರಿ ।
ನಾರಾಯಣ ಹರಿ ನಾರಾಯಣ ಹರಿ ನಾರಾಯಣ ಹರಿ ವರದಾ
ನಾರದ ಸಂಗೀಲೋಲವಿಹಾರೀ ನಾರಾಯಣ ವನಮಾಲಿ ॥ ಪ ॥
ನೀರಧಿನಯನ ನೀರಜವದನ ಶ್ರೀ ರಮಣೀ ಮೋಹನಾ
ದೀನಾವನಾ ಮಾಧವ ಮಧುಸೂದನ ಶೌರೀ ॥ ಅ.ಪ. ॥

**ಅರ್ಜುನ : ಹಾಡು** **ರಾಗ : ಜಂಜೂಟಿ - ರೂಪಕತಾಳ**

ವಂದಿಪೆ ಮೌನೀಂದ್ರ, ನಿಮ್ಮ ಚರಣ ಕಮಲಕೆ ॥ ಪ ॥
ಇಂದಿನಾದಿನ ಧನ್ಯನೂನಾಂ ಸಂದೇಹವೇಕೆ ॥ ಅ.ಪ. ॥
ಇಂದಿರಾವರ ಚರಣ ಯುಗಳ ಸರಸಿಜಾ ಬೃಂದ
ಸುಂದರತರ ವೀಣಾಗಾನ ಲೋಲ ಶುಭಾಂಗ ॥ ೧ ॥
ನುತಿಸುವೆ ನಿಮ್ಮ ಸತತವು ಯತೀಂದ್ರನೆ
ಅತುಳಿತಮತಿ ಸಲುಪುದು ಭಾರತಿ ಪತಿಸುತನೇ ॥ ೨ ॥

**ನಾರದ : ಹಾಡು** **ರಾಗ : ಹಿಂದೂಸ್ಥಾನಿ ಕಾಪಿ - ಆದಿತಾಳ**

ಏನಿದು ಕುಂತಿ ಕುಮಾರ ನಿನಗೀ ಸಂಕಟವೇತಕೆ ॥ ಪ ॥
ಕಾನನದೊಳಗಿಹ ಕಾರಣವೇನಿದು ಭಾಮಿನಿಲರಿಯೆನು ಮಾನವ
ಗಣ್ಯನೆ ॥ ಅ.ಪ ॥

ಧರ್ಮಾದಿಗಳ ಬಿಟ್ಟು ದೀನ ವ್ಯಕ್ತಿಯೊಳು
ಮರ್ಮದಿ ಚಲಿಸುತೆ ಕರ್ಮವಿದೇನಿದು ॥ ೧ ॥

**ನಾರದ : ಹಾಡು** **ರಾಗ : ಕಾಂಭೋದಿ ರಾಗ - ಆದಿತಾಳ**

ಪಾರ್ಥಿವೇಂದ್ರನೆ ಕೇಳ್ಳೈ ವಾರ್ತೆಯ ಪೇಳುವೆ ॥ ಪ ॥
ಸಾರ್ಥಕವಲ್ಲವ್ರೋ ವ್ಯರ್ಥವಾಯಿತು ಕೇಳು ॥ ಅ.ಪ. ॥

ರಾಯರಾಯಗೆ ಕುರು ರಾಯಗೆ ರಾಮನು
ಶ್ರೀಯುವರಿಯದೆ ತಂಗಿ ಧಾರೆಯನೆರೆಯುವಾ ॥ ೧ ॥
ಪಾರ್ಥ ನಿನ್ನಯಾ ಜನ್ಮ ವ್ಯರ್ಥವಾಯಿತು ಕೇಳು
ದೂರ್ತರಿಗಂಜಿದೆ ಅನರ್ಥವಾಯಿತು ॥ ೨ ॥

**ನಾರದ : ಹಾಡು** **ರಾಗ : ..... - ತಾಳ .....**

ಪೊರೆಯೊ ಹೇ ಮಾಧವ
ಘನಲೀಲಾ ವಿನೋದ ಪ್ರಭಾವ ॥ ಪ ॥
ಪಾಹಿ ಪರಂಧಾಮನೆ ಭಕ್ತರ ಪರಿಪಾಲನೆ
ಲೀಲಾಮಯ ಗಾತ್ರನೆ ಸರಸಿಜದಳ ನೇತ್ರನೆ ॥ ೧ ॥

**ಅರ್ಜುನ : ಹಾಡು** **ರಾಗ : ತೋಡಿ - ಆದಿತಾಳ**

ಹರಿ ನಿರ್ದಯವೆ ಕರುಣವಿಲ್ಲವೇ ಕೃಷ್ಣಾ ॥ ಪ ॥
ಸೋದರಿಯಳನು - ಸುಯೋಧನಗೀಯುತೆ
ಮಾಧವ ವೈರವ ಸಾಧಿಸಿದೆಯಾ ಕೃಷ್ಣ॥ ೧ ॥
ದುರುಳರ ಮಾತಿಗೆ ಮರುಳಾಗುತಲಿ
ನೆರೆ ನಂಬಿದವರನು ಮರೆತು ಹೋದೆಯಾ ಕೃಷ್ಣಾ ॥ ೨ ॥

**ದೃಶ್ಯ : (ದ್ವಾರಕಾನಗರದ ಹೊರಭಾಗದಲ್ಲಿ ನಗರದ ಮೇಲೆ ಸುದರ್ಶನ ಚಕ್ರವು ಸುತ್ತುತ್ತಿರುವುದು)**

**ಘಟೋತ್ಕಚ : ಕಂದ**

ಅಂಭೋರಾಶಿಯಂ ಈಗಲೆನಾಂ
ಗಾಂಭೀರ್ಯದಿಂ ದಾಂಟಿ ದ್ವಾರಕಾ ಪುರಿಯುಂಪೊಕ್ಕು
ಜಂಭಾರಿ ಸುತನ ಬರುವಿಕೆಯಂ
ಸಂಭ್ರಮದಿಂ ಶ್ರೀ ಕೃಷ್ಣಗರುಹುವೆನೀಗಳ್

ಘಟೋತ್ಕಚ : ಹಾಡು

ರಾಗ : ಧನ್ಯಾಸಿ - ಆದಿತಾಳ

ಎಂತು ತಾಳುವೆ ವಿಷ್ಣು ಚಕ್ರದ ಉರಿಯನು ॥ ಪ ॥
ಪಂಥದಿಂದಲೆಮ್ಮನು ದಹಿಸೆ ಬರುವುದು ಹಾಯ ॥ ಅ.ಪ. ॥
ಸಿಡಿಲಿನ ರವದಂತೆ ಗುಡುಗುಡಿಸುತ್ತಲಿ ಆರ್ಭಟಿಸುತಲೆಮ್ಮನು
ಸುಡಲು ಬರುತಿಹುದು ಹಾ ॥ ೧ ॥
ಭುಗಿ ಭುಗಿಲೆನ್ನುತ್ತೇ ಹೊಗೆಯು ಹಾರುತ್ತಿರಲ್
ನಿಗಿನಿಗಿ ಕೆಂಡಗಳ್ ಧಗಧಗಿಸುವುವು ॥ ೨ ॥

ಘಟೋತ್ಕಚ : ಹಾಡು

ರಾಗ : ಮೋಹನ - ಆದಿತಾಳ

ಮಾಧವನೆ ಹರಿ ಮಧುಸೂದನನೇ ॥ ಪ ॥
ವಿಷ್ಣುಸ್ವರೂಪನೆ ಸುರವರನೆ ॥ ಅ.ಪ. ॥
ವೇದೋದ್ಧಾರಕ ಆದಿ ಸ್ವರೂಪಕ
ಮೇದಿನಿಧರ ದಾಮೋದರ ಜಯ ಜಯ ॥ ೧ ॥
ಸಾಧುಸಜ್ಜನ ಪಾದಕಮಲ ಘನ
ಮೋದಿತ ರಿಪುಕುಲ ಬೋಧನ ನರಹರಿ
ನಾರಾಯಣ ಜಯ ಜಯ ॥ ೨ ॥

## ದೃಶ್ಯ - ಬೀದಿ

ಘಟೋತ್ಕಚ : ಹಾಡು

ರಾಗ : ಶಂಕರಾಭರಣ - ಆದಿತಾಳ

ನರನಿಗೆ ಸರಿ ಗುರುವು - ಗುರುವಿಗೆ ಸರಿ ಶಿಷ್ಯ
ಇರುವರೆ ಮತ್ತೆಲ್ಲಿ ಈ ಮೂರು ಲೋಕದಲ್ಲಿ ॥ ಪ ॥
ಮರುಳು ಜನಕೆ ಯೋಗ - ಇರುಳು ಸಕಲ ಭೋಗ
ತರಳೆ ಸಿಗಲು ಬೇಗ - ನಾವ್ ಕೊರಳಗೊಯ್ಯ ರೋಗ ॥ ೧ ॥
ಜನಿಸಿಹುದು ವಿರಕ್ತಿ - ಜನಕೆ ಮೂಢ ಭಕ್ತಿ
ಮನದೆ ಮಾಳ್ಪಯುಕ್ತಿ - ವನಿತೆಯೊಳಾಸಕ್ತಿ ॥ ೨ ॥
ಗಳಿಗೆ ಒಡ್ಡಿಹ ಬಲೆಯ - ಹಲಧರ ತಾ ತಿಳಿಯ
ತಿಳಿಯೆ ಮಾಳ್ಪ ಕೊಲೆಯ - ತಿಳಿಯ ನೇಗಿಲಯ್ಯ ॥ ೩ ॥

## ದೃಶ್ಯ - ರೈವತಾದ್ರಿಯ ಪ್ರದೇಶ

(ಅರ್ಜುನ ಸನ್ಯಾಸಿ ಮತ್ತು ಘಟೋತ್ಕಚ ಇರುವರು. ಅಲ್ಲಿಗೆ ಬಲರಾಮ ಕೃಷ್ಣರು ಬರುವರು)

(ಬಲರಾಮ, ಕೃಷ್ಣ, ಅರ್ಜುನ ಹಾಗೂ ಘಟೋತ್ಕಚರ ಸಂವಾದ ಗೀತೆ)

**ಹಾಡು : ಯುಗಳ ಗೀತೆ** **ರಾಗ : ಭೈರವಿ - ರೂಪಕತಾಳ**

**ಬಲರಾಮ :** ಯತಿವರ್ಯರೇ ಬಿನ್ನಪವ
ಅತಿಹಿತದೊಳು ಲಾಲಿಸುವುದು ॥ ಪ ॥
ಅತುಳಿತ ಮತಿಯುತ
ತ್ವರಿತ ಸಮ್ಮತಿಪುದು ನಿಮ್ಮನುತಿಪೆ ದೇವ ॥ ಅ.ಪ. ॥

**ಕೃಷ್ಣ:** ಹಿಂದಿನ ಜನ್ಮದ ಫಲದಿ
ಸಂದರುಶನವಾಯ್ತು ನಿಮ್ಮಯ
ಸುಂದರತರ ಚರಣ ಕಮಲ
ದ್ವಂದ್ವವು ಗೋತ್ರಾಮರೇಂದ್ರ ॥ ೧ ॥

**ಅರ್ಜುನ :** ಮೋದವಾಯ್ತು ಯದುಪುಂಗವ
ಸದಮಲ ಸರುಚಿರ ಪ್ರಭಾವ
ಸದಯರೇ ನಮ್ಮೊಳು ತೋರಿದ -
ವಿಧವಿಧೋಪಚಾರಗಳಿಗೆ ॥ ೨ ॥

**ಘಟೋತ್ಕಚ :** ಪರಮ ತಪೋಧನರು ಯತಿ
ವರ ರತಿಕರುಣವನೆ ತಾಳಿ
ನಿರತದಿ ನಿಮ್ಮೆಲ್ಲರನ್ನು
ಉದ್ಧರಿಸೆ ಬಂದಿಹರೀ ಪುರಿಗೆ ॥ ೩ ॥

## ದೃಶ್ಯ : ಸುಭದ್ರೆಯ ಅಂತಃಪುರ

(ಬಲರಾಮಕೃಷ್ಣರ ಯುಗಳ ಗೀತೆ)

**ರಾಗ : ಖರಹರಪ್ರಿಯ - ಆದಿತಾಳ**

ಬಲರಾಮ, ಕೃಷ್ಣ : ಬಾ ಬಾ ಬಾ ತಂಗಿ ಬಾರೇ ಶುಭಾಂಗಿ ॥ ಪ ॥
ಬಾರಮ್ಮ ಭೂನುತೆ-ಯತಿಗೆ ವಂದಿಸಲು ನೀ ॥ ಅ.ಪ. ॥

ಕೃಷ್ಣ: ಪರಮ ಪುರುಷ ಯತಿ-ವರನ ಚರಣಂಗಳಿಗೆ
ಹರುಷದಿ ಪೂಜಿಸು - ಗುಣಮಣಿಯಳೆ ನೀನು ॥ ೧ ॥

ಬಲರಾಮ : ಕಾಮಿತ ಫಲಗಳ-ನೇಮದಿ ನೀಡ್ವರು -
ಸಾಮಜಯಾನೆಯೆ - ಪ್ರೇಮದ ಸೋದರಿ ನೀನು ॥ ೨ ॥

## ದೃಶ್ಯ : ಸತ್ಯಭಾಮೆಯ ಅಂತಃಪುರ

ಸತ್ಯಭಾಮೆ : ಹಾಡು

ರಾಗ : ಬೇಹಾಗ್ - ಆದಿತಾಳ

ವನರುಹಮುಖಿಯಳೆ ಪೇಳಲೆ
ಮನಸಿನಯ್ಯನು ಬರದಿಹ ಕಾರಣ ॥ ಪ ॥
ಆ ಕುಸುಮಶರ ತಾಕಲಂಗದಿ
ಕಾಕುಗೊಳಿಸುವನೆನ್ನನು
ಶ್ರೀಕರನು ಎನ್ನನೇಕೆ ಮರೆತನೋ
ಕೋಕಕುಚಯುಗೆ ಕಳವಳವಾಂತೆನೆ ॥ ೧ ॥

## (ಕೃಷ್ಣ - ಸತ್ಯಭಾಮೆಯರ ಯುಗಳ ಗೀತೆ)

ಕೃಷ್ಣ : ಸಾಕಿ

ಏಳೆಲೆ ಯೋಷಾ ಭೂಷಿಣೆ ಏಳಲೆ ಮುರಹರನರಾಣಿ.
ಪಲ್ಲವ ಪಾಣಿ ಪೇಳಲೆ ಮನದ ವಿಚಾರವ
ಚಾಳಿಸಲೀ ಪರಿ ಯೊಳೆಂತು ತಾಳುವೆ ಪ್ರಿಯಳೆ

ರಾಗ : ಜಂಝೂಟಿ - ಆದಿತಾಳ

ಕೃಷ್ಣ: ಕಾಂತೆಯೇಕೆ ಕೋಪವಾಂತೆಯೆ - ನೀ ಶಾಂತಳಾಗದೆ ॥ ಪ ॥
ಸಾಮಜಯಾನೆಯೆ ಪೇಳಲೆ ॥ ಅ.ಪ. ॥

ಸತ್ಯಭಾಮೆ : ಕಾಂತವಿನುತ ಕೋಪವೇನಿದೆ ನಾ ಶಾಂತಳಾಗಲು ॥ ಪ ॥
ನೀರೇರುಹೇ ಕ್ಷಣ-ಸಾರ್ಯೆ ನಿನ್ನಂ ನಾರಿಯರು
ವಾರಿಗೆಯರು ನೋಡುತಿಹರು - ಧೀರ ನಿನ್ನ ಸೇರಲಿಂತು ನಾ । ಅ.ಪ. ॥

ಕೃಷ್ಣ: ಸುದತಿಯೆ ಮದನನ ಹದವಹ ಸರಳಿಗೆ
ಎದೆಗೂಡ ಬೆದರುತ್ತ - ಜಾಡಿ ಬಿರಲು ಗದರಿಸುವರೇ ನೀ ॥ ೧ ॥

ಸತ್ಯಭಾಮೆ : ನಲ್ಲನೆ ಈ ಬಡಿಯಾಡುವುದೇಕೆ - ಅರಿಯುದನ್ನೊಲ್
ಬಲ್ಲೆನು ಈ ಸೊಲ್ಲುಗಳ ಎಲ್ಲವ ನಾ ವಲ್ಲಭನೆ
ಅಲರ್ಕಣೆಯ ನಲರ್ಚುವೊಡೆ
ಕೆಲರ್ ಸಖಿಯರಿರಲ್ಕೆನಗೆ ॥ ೧ ॥

ಕೃಷ್ಣ: ವಾರಿರುಹ ದಳನಯನೆ ತೋರು ಮುನಿಸಿಂ ತಳಿದು
ಸೇರಿ ಬರೆ ನಿನ್ನ ಬಳಿಗೀ - ಮೋರೆಗಿನ್ನ ದೂರುವರೆ
ಧೀರತನದಿ ತೋರು ಗುಣವಂ ಸರಾಗದಲಿ ಪರಾಂಬರಿಸು
ಮುರಾಂತಕನ ಮರುಳ್ಗೊಳಿಸು ನೀ ॥ ೨ ॥

## ದೃಶ್ಯ : ದ್ವಾರಕೆಯ ಅರಮನೆಯಲ್ಲಿ ಪಡಸಾಲೆ
## (ಬಲರಾಮಕೃಷ್ಣರ ಯುಗಳ ಗೀತೆ)

**ರಾಗ : ಖರಹರಪ್ರಿಯ - ಆದಿತಾಳ**

ಬಲರಾಮ : ಬಾರೈ ಮುರವೈರಿಯೆ-ಜರಿವರೆ ಯತಿಯನು
ಜರಿವರೆ ಯತಿಯನು ॥ ಪ ॥
ಘೋರವಾದ ನರಕಕೆ ಗುರಿಯಾಗುವೆ ನೀ ಭರದೊಳು ॥ ಅ ಪ ॥

ಕೃಷ್ಣ: ಬೇಡೈ ಬಲರಾಮನೆ - ದುಡುಕುವುದಹಿತವು ॥ ಪ ॥
ನಾಡಿನೊಳೀ ದುಡುಕಿಗೆ - ಕೆಡುಕಹುದಿದು ದೃಢ ತಿಳಿ ನೀಂ ॥ ಅ ಪ ॥
ಶ್ರೀನಾಥನೇ ಮುನೀಂದ್ರರ - ನೀನೀತೆರಂ ನಾನಾವರಿ -
ದೂಷಿಸುವುದು ಕೇಳನುಚಿತ ಬಿಡು ಬಿಡು ॥ ೧ ॥

ಕೃಷ್ಣ: ಪುರುಷರು ಚಲಿಸದ - ಅರಮನೆಯೊಳಗತಿ
ಹರುಷದಿ ತಿರುಕನ ಇರಿಸುವುದನುಚಿತ ॥ ೧ ॥

ಬಲರಾಮ : ತಾವಕಾಲಾಪಗಳ ಭಾವಿಸಲ್ಕಾಗದೈ -
ಈ ಮುನಿವರನಿರೆ - ನಮ್ಮ ಪುರದಿ -
ಬಾರದು ಪರಿಭವಗಳು ಎಮಗೆ - ತೋರುವನಿವ

ಸ್ಮರಹರನ ತೆರ - ನಾಕು ನಿನ್ನ ನುಡಿ ಪೂರೈಸಿನ್ನು
ಮುರ ಮಾರನೆ ಎನಗೆದುರಾಡದೆ ಸದನಕೆ ॥ ೨ ॥

**ಬಲರಾಮ : ಹಾಡು** **ರಾಗ : ಪೀಲು - ರೂಪಕತಾಳ**

ತಾಪಸರನ್ನು ದೂರಿದ ಪಾಪದಾ ಫಲವೆಮಗೆ ॥ ಪ ॥
ಆಪದಾವಂ ತಂದು ಕಾಡುವ ಈ ಪರಿಯೊಳು ಅಕಟಾ ॥ ಅ.ಪ. ॥
ಬಂದ ಯತಿಯು ವಂದಿಸದೆ ನೀಂ ಚಂದದಿಂದ ಪೂಜಿಸದೆ
ಮಂದ ಭಾಗ್ಯ ಹಾಸ್ಯದವರ ನಿಂದಿಪರೇನೈ ಕೃಷ್ಣಾ ॥ ೧ ॥
ಅದ್ರಿಚಾಪತಿ ಪೋಲ್ವ ಯತಿಯ ಕ್ಷುದ್ರ ಮಾತುಗಳಾಡಲು
ಭದ್ರವೆಂತೂ ಆಗುವುದೋ ಸುಭದ್ರೆಗಿನ್ನು ಮುರಹರ ॥ ೨ ॥

**ಕೃಷ್ಣ : ಹಾಡು** **ರಾಗ : ರೀತಿಗೌಳ - ಮಿಶ್ರಚಾಪುತಾಳ**

ಮನ್ನಿಸೆನ್ನ ಅಪರಾಧಗಳನು ಸಂಪನ್ನಯತಿವರ ಸಂಪ್ರಿಯಾ ॥ ಪ ॥
ಸನ್ನುತಿಪೆನಾಂ ಸಂತತವು ಸಾಕಿನ್ನು ಕೋಪವು ಅಗ್ರಜಾ ॥ ಅ.ಪ. ॥
ದೇವಕಿ ವಸುದೇವರಾಣೆಗೂ ಆವುದರಿಯನು ಅಗ್ರಜಾ
ಭಾವಿಸಿರುವೆನು ಭೂಸುರರೇಂದ್ರನ ಭಾವ ಜಾರಿಯೆನುತ್ತಲೀ ॥ ೧ ॥
ಛಲವು ಏತಕೆ ಯತಿಯೊಳೆನಗೆ ಹಲಧರ ನೀ ಲಾಲಿಸೈ
ಒಲಿದು ಎಮ್ಮನುದ್ಧರಿಸೆ ಬಗದಿಹ ಕುಲದೈವವು ಆತನು ॥

## ದೃಶ್ಯ : ಸುಭದ್ರೆಯ ಅಂತಃಪುರ
## (ಸುಭದ್ರೆ - ಸಖಿಯರ ಗೀತೆ)

**ರಾಗ : ನಾಟಿಕುರಂಜಿ - ರೂಪಕತಾಳ**

**ಸುಭದ್ರೆ :** ಪದುಮ ಪತ್ರದ ಗಾಳಿ ಎನಗೆ
ಮದನಜಿತೆ ಕ್ಷಣದುರಿಯೋಲ್ ಬಾಧಿಸುವುದು ॥ ಪ ॥
ತಾಪವನಾಂತು ಬಳಲುವೆ ಕೇಳ್ ಪ್ರಿಯಸಖಿ ॥ ಅ. ಪ. ॥

**ಸಖಿಯರು :** ಮುಗದೆ ನಿನ್ನಯ ಮನದ ರೀತಿಯ
ಬಗೆಯನು ಪೇಳ್ವುದು ಕಡುಬೇಗ ನಾಗವೇಣಿಯೆ
ತಾಪವ ನಾಂತು ಬಳಲುವೇಕೆ ಪ್ರಿಯೆ ಸಖಿ

ಸುಭದ್ರ : ಬಾರಿ ಬಾರಿಗೇಕೆ ಎನ್ನನು ಗಾರು ಮಾಳ್ಪೆ ಸರಸಿಜವದನೆಯೆ

ಸಖಿಯರು : ನಿತ್ಯ ಸುಖದೊಳಿರುವ ನೀನು ಖತಿಗೊಳಲೇತಕೆ ಪೇಳಲೇ ॥ ತಾ ॥

ಸುಭದ್ರೆ : ಸುದತಿ ಕೇಳೆ ಇದನು ತಾಳೆ - ಬದುಕಲಾರೆನೆ
ಮಧುರವಾಣಿಯೆ ಏಕೆ ಜೋಕೆಗೈಯುವೆ ॥ ತಾ ॥

ಸಖಿಯರು : ಮಾನಿನಿ ಪ್ರಾಣವ ನೀಗುವುದೇತಕೆ
ದೀನಳ ತೆರದಲಿ ಸಾರಸಾಕ್ಷಿ ಇಷ್ಟು ಕ್ರೂರ ಕರ್ಮವ ಗೈವರೆ ॥ ತಾ ॥

## (ಕೃಷ್ಣ, ಬಲರಾಮ ಹಾಗೂ ಸುಭದ್ರೆಯರ ಹಾಡು)

**ರಾಗ : ಬಿಲಹರಿ - ರೂಪಕತಾಳ**

ಬಲರಾಮ : ಬಂದ ದುಗುಡವೇನೆ ಪೇಳ್ - ಕುಂದಲೇತಕೆ ॥ ಪ ॥
ಚಂದಿರನಂದವ ಕುಂದಿಪ ಮೊಗದರಾಕ್ಷಿ ಇಂದಾಂ ನಿನಗೆ ॥ ಅ. ಪ. ॥(ಬಂದ)

ಸುಭದ್ರ : ಸಂತಾಪವನು ತಾಳೆನಾ - ಅಂತರಂಗದ ॥ ಪ ॥
ಶ್ರಾಂತವ ನಂತಾಗೊಳಿಸುವುದೆಂತು - ರಮಾಕಾಂತ ಭಳಿರೆ ॥ ಅ. ಪ. ॥
(ಸಂತಾಪವನು)

ಬಲರಾಮ : ಈ ಕಾತುರವೇತಕೌ ಬಿಡು ನಾಂ ಕಾಯುವೆ
ನೀ ಕಾಲದೊಳು ಕೋಮಲೆ
ಪರಿಪರಿ ಬಳಲುವುದನುಚಿತ -
ಸದಾಳಿಕಚೆ ಸುಧಾರಿಪುದು ನೀ (ಬಂದ)

ಸುಭದ್ರೆ : ಘನಾನು ತಾಪದಿಂ ಮನಂ ಮಿಗೀಲ್ ಕಳವಳಿಪುದು (ಸಂತಾಪವನು)

ಕೃಷ್ಣ : ಉಡುಪಮುಖಿ ಬಿಡು ಖತಿಯ - ಜಡಳತೆರಂ ಮಿಡುಕುವರೆ ಏಕೆ
ಸಿಂಧುರ ಗಮನೆಯೇ ನೀ ಕುಂದಿದ ಪರಿಯೆನಗೆ
ಚಂದದಿ ತಿಳಿಸಲು ನಾ - ಬಂದ ವ್ಯಥೆಯ ಹರಿಪೆ
ಪೊಂದುವೆ ಸಮ್ಮುದವ - ಸಂದೇಹವೆ (ಬಂದ)

ಸುಭದ್ರೆ : ನೀಲಾಂಬರೇಂದಿರ ಲೋಲರೆ ಎನ್ನಾಲಿಸಿರಿ
ಬಾಲೆಯು ನಾ ಈ ಲೀಲೆಗಳ

ಭರಸಲೇಂ ಧರೆಯೊಳಾಂ ಕೊರಗಲೇಂ
ತ್ವರಿತದೊಲೆನಗರುಹಿರಿ ಪಥ (ಸಂತಾಪವನು)

## ದೃಶ್ಯ : ದುರ್ಯೋಧನನ ಸಭೆ
## (ದುರ್ಯೋಧನ ಹಾಗೂ ಕರ್ಣರ ಹಾಡು)

ರಾಗ : ಜಂಝೂಟಿ - ರೂಪಕತಾಳ

ದುರ್ಯೋಧನ : ಗುರುಸುತಾ ದುಶ್ಯಾಸನ ಕರ್ಣಾದಿ ಪ್ರಮುಖರೆ ॥ ಪ ॥
ಹರುಷವೆ ಸಕಲರಿಗು ಪೇಳಿ ಸಮರಶೂರರೆ ॥ ಅ.ಪ ॥

ಕರ್ಣ : ಕುಶಲವು ಸಕಲರಿಗೆ ಪೇಳಿ ಶಶಿಕುಲಾಬ್ಧಿ ಚಂದ್ರನೆ
ಅತಿಶೌರ್ಯ ಧೈರ್ಯಯುತನೆ ವಸುಧೆ ಕಾಂತನೇ ॥ ೧ ॥

ದುರ್ಯೋಧನ : ಇನ ಗುರುತನು ಜಾತರೆನೀಪೆನಿತು ಪೇಳುವೆ
ಮನದಿ ಯೋಚಿಸೆನು ನಾ । ಅನವರತದಲೀ ॥ ೨ ॥

ಕರ್ಣ : ಕರಿಪುರ ದೊರೆ ಕುರುವರೇಣ್ಯ ಅರುಹು ಎಮ್ಮೊಳು
ಪರಿಪರಿ ಆಲೋಚಿಸುತಿಹ ಪರಿಯನೆಲ್ಲವಾ ॥ ೩ ॥

ಶಕುನಿ : ಹಾಡು

ರಾಗ : ಕಲ್ಯಾಣಿ - ಆದಿತಾಳ

ಇಂಥಾ ಭೂರಿ ಚಿಂತೆ ಏತಕೆ ॥ ಪ ॥
ಸಂತಸವನು ಅಂತರಂಗದಲಿ ಪೇಳ್ವೆ ಧರಣೀಕಾಂತ ॥ ಅ.ಪ. ॥
ವನಜನೇತ್ರ ವರ ಸುಭದ್ರೆಗೆ ಮನುಜೇಂದ್ರ ಸಿಂಹ
ಮನದಿ ಈ ಪರಿ ಘನದಿ ಯೋಚನೆ ಅನವರತವು
ಪೊಂದಲೇಕೆ ಮನಸಿಜ ಸಮ ಸುಂದರ ಕೇಳ್ ॥ ೧ ॥

ದುಶ್ಯಾಸನ : ಹಾಡು

ರಾಗ : ಕಲ್ಯಾಣಿ - ಆದಿತಾಳ

ಆ ಮುರಾರಿ ಎಮಗೆ ವಿರೋಧಿ ॥ ಪ ॥
ಭೂಮಿನಾಥನೆ ಲಾಲಿಸು ಪೇಳ್ವೆ ॥ ಅ.ಪ. ॥

ವೈರವನೆಂದಿಗು ತೋರುವನಾತನು
ಸಾರಸ ನಯನನು ಭೂರಿ ಬಲಾಢ್ಯನು ॥ ೧ ॥
ಜಾತಿವಿರೋಧವು ಆತನಿಗಿರುವುದು
ನೀತಿ ಅರಿಯನಾ ಪೀತಾಂಬರನು ॥ ೨ ॥

ದುರ್ಯೋಧನ : ಕಂದ ರಾಗ : ಬೇಗಡೆ

ದನವನು ಕಾಯುವವನಿಗೆ ಬಲು ಘನತೆಯು
ತಾನೆಂತು ಲಭಿಸುವುದು ಗುರುಸುತನೆ
ವನಿತೆಯರೊಳು ಅನವರತ ಕಾಲಕಳೆಯುವ
ಆ ವನಜನೇತ್ರನ ಅರಿಯನೆ ನಾ

## ದೃಶ್ಯ - ರಸ್ತೆ

ಕೃಷ್ಣ : ಹಾಡು ರಾಗ : ಯಮನ್ ಕಲ್ಯಾಣಿ - ಆದಿತಾಳ

ಬಾರಮ್ಮ ಬಾರೆ ಸೋದರಿ ನೀ ॥ ಪ ॥
ಆಗ್ರಹದಲಿ ನಿನ್ನ ಅಗ್ರಜ ಕಳುಹಿದ
ಶೀಘ್ರದಿ ಯತಿ ಸೇವೆಯ ಮಾಡಲು ನೀ ॥ ೧ ॥
ವನಜನೇತ್ರೆಯೆ ನಿನ್ನ ಮನದಭಿಲಾಷೆಯ
ಮುನಿಯು ತಾತ್ವರಿತದಿ ತೀರಿಸುವನು ನೀ ॥ ೨ ॥
ಏನೊ ಪೇಳಿದೆನೆಂದು ಮಾನಿನಿ ತಿಳಿಯದೆ
ಮಾನವ ಪತಿಯ ಮಾತನು ನಡೆಸಲು ನೀ ॥ ೩ ॥

## ದೃಶ್ಯ - ಕನ್ಯಕಾ ಅಂತಃಪುರದಲ್ಲಿ ಅರ್ಜುನ ಸನ್ಯಾಸಿಯ ಪೂಜಾ ಮಂದಿರ

ಅರ್ಜುನ : ಕಂದ ರಾಗ : ಸಿಂಹೇಂದ್ರ ಮಧ್ಯಮ

ಮನದೊಳ್ ಪ್ರತಿಬಿಂಬಿಸುವವ್ರೋಲ್
ನಿನ್ನ ರೂಪವನ ಧ್ಯಾನಿಸುವ ಧ್ಯಾನವದುವ್ರತಾತ್ರಮುಂ
ನಿನ್ನ ನಾಮ ಸ್ಮರಣೆಯೇ ಜಪಂ
ನಿನ್ನ ನಾ ಪೊಂದುವ ವಿಭೂತಿ ಬ್ರಹ್ಮಾನಂದಂ

**ಸುಭದ್ರೆ : ಹಾಡು - ರಾಗಮಾಲಿಕೆ** **ರಾಗ : ಕಾಂಭೋಜಿ**

ಸಲೆ ಪೂರ್ಣಿಮಾ ಪೂರ್ಣ - ಶಶಿಧರನ ಅಂದವಂ ಜರಿವ
ಚೆಲ್ವಿನ ನಗೆಮೊಗವ ನೋಡೆ ॥ ೧ ॥

**ರಾಗ : ಶಹನ**

ಜಲಜಾಕ್ಷಿಯರ ಮನವ ಅಲರಂಬಿನೊಳ ಪೀರ್ವ
ಈ ಕ್ಷಣಾಳಿಯು ತಾಕ್ಷಿಗಳ ನೋಡೇ ॥ ೨ ॥

**ರಾಗ : ಕೇದಾರ ಗೌಳ**

ಕೆಲವ ಜಯಶ್ರೀ ನಿಲಯದೊಳ ಪೊಳೆವ
ವಿಸ್ತಾರ ವಕ್ಷದ ವಿಭವ ನೋಡೇ ॥ ೩ ॥

**ರಾಗ : ಬೇಹಾಗ್**

ಜಲನಿಧಿಯು ಜರಿವ ಗಾಂಭೀರ್ಯವನು ನೋಡೇ
ಮಲೆವ ಸ್ಮರನಲ್ಲಿ ಮಾರ್ಮಲೆವ ರೂಪು ನೋಡೆ ॥ ೪ ॥

**ರಾಗ : ನೀಲಾಂಬರಿ**

ಮಲೆವ ಮದ್ದಾನೆ ಸೊಂಡಿಲ ಸೌಷ್ಟವವ ಗೆಲ್ವ
ಉದ್ದಂಡ ದೋರ್ದಂಡ ಬಾಹುಗಳ ನೋಡೆ ॥ ೫ ॥

**ರಾಗ - ಸುರುಟಿ**

ಫಲುಗುಣನೆ ಈತನೆಂಬುವ ಪಾಪಿ ಶಂಕೆ
ಚೆಲುವ ಯತಿಯನು ನೋಡೆ ಎನಗಪ್ಪುದಲ್ಲ ॥ ೬ ॥

**(ಅರ್ಜುನ, ಸುಭದ್ರೆಯರ ಪೂಜೆಯ ಹಾಡು)**

**ರಾಗ : ಖರಹರಪ್ರಿಯ - ಆದಿತಾಳ**

**ಅರ್ಜುನ :** ಚಿತ್ತೇ ವಸ ಶ್ರೀ ಪರಮೇಶ - ಅತ್ಯಂತಾದರೇಣ ಸದಾ ॥ ಪ ॥
ಸತ್ಯಂ ಜ್ಞಾನ ಮನಂತಮಿತಿ ಹೃದ್ಯಂಬೋಧಿತ ಚಿದ್ರೂಪ
ಪ್ರತ್ಯಕ್ಷೋ ಭವ-ಪರಮ ಶಿವ
ನಿತ್ಯ ನಿರಾಮಯ ನಿರ್ಮಾಯ ॥ ೧ ॥

**ಸುಭದ್ರೆ :** ಅನವರತಂ ಕೃತ ಪುಣ್ಯೇನ
ಮನಸಾ ತ್ವತ್ ಚಿಂತಾಂ ಕುರುತೇ

ತನು ಮನಸೀಪ್ರಾಣಾ ಗುರುವೇ ತೇ
ಘನತರ ಮೋಕ್ಷಸುಖಂ ಭವತೀ ॥ ೨ ॥

**ಅರ್ಜುನ :** ಶಿವತೇ ಮಂತ್ರಂ ಯೋಜಪತಿ
ಭುವನ ತ್ರಯ ಭೂಪೋ ಭವತಿ
ಭವದುಸ್ಸಾಗರ ಮಪಿ ತರತಿ
ತವ ಕೈಲಾಸ ಪುರೇ ವಸತಿ ॥ ೩ ॥

(ಅರ್ಜುನ, ಸುಭದ್ರೆಯರ ಯುಗಳ ಗೀತೆ)

**ರಾಗ : ತೋಡಿ - ಆದಿತಾಳ**

**ಸುಭದ್ರೆ :** ಲಾಲಿಸಿ ಪೇಳ್ಮೈ ಮುನೀಂದ್ರ ಬುಧೇಂದ್ರ ।
ಶೀಲ ಸುಗುಣ ಗಣ ಜಾಲ ಭೂಷಿತರೇ ॥ ಪ ॥

ಅವ ಕ್ಷೇತ್ರಂಗಳ ತಾವು ನೋಡಿದಿರಿ
ಅವ ತೀರ್ಥಂಗಳೊಳ್ ತಾವು ಮಿಂದಿರಿ ॥ ಅ. ಪ ॥

**ಅರ್ಜುನ :** ವಾರಣಾಸಿ ಮುಖ್ಯ ಭೂರಿ ಕ್ಷೇತ್ರ ತೀರ್ಥ
ಪಾರವನ್ನು ಗೆಲ್ದು ಸಾರಿ ಬಂದೆವೂ
ಆಲಿಸೇ ಲತಾಂತ ಪಾಣಿ ಸುಶ್ರೋಣಿ ॥ ೧ ॥

**ಸುಭದ್ರ :** ಸಲ್ಲಲಿತ ಮೌನಿ ತಲ್ಲಜರೆ ನೀವು
ಇಲ್ಲಿಗೆಲ್ಲಿನಿಂದ ಉಲ್ಲಾಸದಿಂದ ಬಂದಿರಿ ॥ ೨ ॥

**ಅರ್ಜುನ :** ಇಂದ್ರನ ವಸಾದ ಸಾಂದ್ರವನ್ನು ಗೆಲ್ದು
ಇಂದ್ರಪ್ರಸ್ಥಪುರದಿಂ ಬಂದೆವಿಲ್ಲಿಗೆ ॥ ೩ ॥

**ಸುಭದ್ರೆ :** ಸುಂದರಾಂಗ ನಾ ಸಂಕ್ರಂದನಾತ್ಮಜನು
ಇಂದು ಎಲ್ಲಿಹನು ಚಂದದಿಂ ಪೇಳಿರೈ ॥ ೪॥

**ಅರ್ಜುನ :** ತೀರ್ಥಯಾತ್ರೆಗಾಗಿ ಪಾರ್ಥ ಪೋದನೆಂದು
ವಾರ್ತೆ ಕೇಳಲಿಲ್ಲೆ ಕೀರ್ತಿವಂತಳೇ ॥ ೫ ॥

**ಅರ್ಜುನ- ಕಂದ** **ರಾಗ : ತೋಡಿ**

ರಾಕೇಂದು ಮುಖಿಯೇ ಕೇಳ್
ಪಾಕಾರಿಯ ಸುತನ ಕೂಡೆ ಹರುಷವನಾಂತು
ಗೋಕರ್ಣ ಕ್ಷೇತ್ರದೊಳು ಅನೇಕದಿನ
ಕಳೆದೆವು ಕಂಜದಳಾಂಕ್ಷಿಯೇ

**(ಅರ್ಜುನ, ಸುಭದ್ರೆಯರ ಯುಗಳ ಗೀತೆ)**

**ರಾಗ : ಕಾಂಭೋದಿ - ಆದಿತಾಳ**

**ಅರ್ಜುನ :** ವನಜಾಕ್ಷಿ ತಡವೇತಕೆ - ಸೂಸಾನ್ತ್ರಾಳೆ ॥ ಪ ॥
ನಿನಗಾಗಿ ನಾನಾಂತೆ - ಮುನಿವೇಷವನು ಅನುಮಾನ ಬಿಡು ॥ ಅ ಪ ॥

**ಸುಭದ್ರ :** ಘನವಾಹನನ ಸೂನು ನಿನಗೀ ರೀತಿ ಸರಿಯೆ ಕೇಳು
ಘನವಲ್ಲ ಕೈಯ ಬಿಡು - ದೀನಳಾದೆನ್ನ ॥ ಪ ॥

**ಅರ್ಜುನ :** ನಾರಿ ದಾರಿ ತೋರ ನೀರೆ - ಸ್ಮರಪೀಡಿತಗೆ (ವನಜಾಕ್ಷಿ)

**ಸುಭದ್ರೆ :** ಧೀರ ಮಾರಾಕಾರ - ನಾರಿಯರ ಬಾಧಿಪರೆ (ಘನವಲ್ಲ)

**ಅರ್ಜುನ :** ಸುಮನೋರಮಣಿ - ಮಮ ನಾ ಕಮಣಿ
ಗಮಿಸಲ್ ತರವೆ (ವನಜಾಕ್ಷಿ)

**ಸುಭದ್ರೆ :** ನಿನನಾನನಿಶಂ - ಜನನಾಥನೆ ಕೇಳ್
ಘನವಾಗನು ಮೋದಿಸಿರ್ಪೆ (ಘನವಲ್ಲ)

**ಅರ್ಜುನ :** ಘನವೇಣಿ ಘನವೇಣಿ - ಘನವಾಗೆ ಅನುತಾಪ
ಕ್ಷಣಕೊಮ್ಮೆ ಅನುವಾಗಿ - ಅನುಕೂಲಿಸದೆ
ಎನಬಾಧಿಪರೆ (ವನಜಾಕ್ಷಿ)

**ಸುಭದ್ರೆ :** ಸುಮಬಾಣೋಪಮ ಕೇಳಿ ಕಮನೀಯೋಕ್ತಿ ಗಮಿಸಾ ಸೊಲ್ಲ
ಕಮಲಾಕ್ಷಿಯೊಳು ಕ್ಷಮೆಯೆಲ್ಲುಂಟು
ಕಮಲಾರಾತಿ - ನಮಿಪೇಂ ಪಾರ್ಥ (ಘನವಲ್ಲ)

**ಅರ್ಜುನ :** ನಾರಿ ಇದೇನೆ ಈ ರೀತಿಯಾಗಿ -
ಕ್ರೂರಾಂಬುಜಾಸ್ತ್ರನಾರೀವಿಮುಕ್ತ
ನಾರಾ ಚವಾರ ತಾರಾದ ಎನ್ನ
ಅನುಸರಿಸುತೆ ಬರಿಬರಿವುದು ತರವೇ (ವನಜಾಕ್ಷಿ)

**ಸುಭದ್ರೆ :** ಧೀರ ಇದೇನು ಘೋರಾರಿ ಮಾರ
ನೀ ರೀತಿ ಕಾಮನಾರಾಜ ಕಂಜಿ
ಸೂನೂಕ್ತಿ ಧರ್ಮ ನೀರೆಜನೇತ್ರೆಯರ
ಮೊರೆ ಹೋಗುವರೆ ಇವರ ಬಳಿಯುದು (ಘನವಲ್ಲ)

**ಅರ್ಜುನ :** ಮನದೊಳ್ ನೊಂದು ನಿನಗಾಗಿಂದು
ಮುನಿಯೋಲ್ ಬಂದು ವನದೊಳ್ ನಿಂದು
ಘನತರವಹ ಮನಸಿಜನುರಿಯನು
ಸಹಿಸಿರೆ ಅನಾದರಗದಿ ಕಡುಗಾಣುತಿಹೆ (ವನಜಾಕ್ಷಿ)

**ಸುಭದ್ರೆ :** ತರವೇಪಂಥ ವರಧೀಮಂತ
ಧರಣೀಕಾಂತ ಸ್ಮರಸಂಭ್ರಾಂತ
ಪುರುಷನೆ ಪರಿ ಸರಸಕೆ ಬರದಿರು
ನಮಿವೆನು ವಿರೋಧವಿದು ಸರಿಯಲ್ಲ ಬಿಡು (ಘನವಲ್ಲ)

**ಅರ್ಜುನ :** ಆತನು ಶರವನಾಂ ತಾಳೆ ಜಿತಮತಿಯುತೆ ತಡೆಯಲ್ಕೆ
ಅತಿತ್ವರಿತದಿ ಮುಷ್ಟೀವಂ ಗತಿಪುದು ನಿಜ ನಿನ್ನಾಣೆ
ಜಿತರತಿಯೇ ಸಕರುಣದಿಂ ಗತಿ ನೀನೇ ವತಿಕರಿಸೆ
ವೃಥಾ ದಣಿವೆ ಪಥವರಿಯದೆ ಸತೀಮಣಿಯೆ
ಕರುಣ ತೋರಿಸೆಲ ನಿತಾಂತದಲಿ (ವನಜಾಕ್ಷಿ)

**ಸುಭದ್ರೆ :** ಮನಸಿಜಸಮರೂಪ ಕೇಳ್ ಮನದಿನಿತ್ತತಿಖತಿಎಕ್ಕೆ
ನಿನಬೆಡಗಿಗೆ ನಾಂ ಸೋತೆ ಮನದೊಳು ಮುದವ ನಾನಾಂತ್ರೆ
ತನುಮನ ನಿನ್ನದು ಘನನೇ ಇನಿಯನೆ ಕೇಳ್
ನಿನವರಿಸಲ್ ಎನಗ್ರಜನ ಘನತರವಹ
ಅನುಜ್ಞೆ ಪಡೆಸುನಾಸೀರ ತನೂಭವನೆ (ಘನವಲ್ಲ)

ಅರ್ಜುನ- ಕಂದ ರಾಗ : ಮೋಹನ

ಸುರಲೋಕಕೆ ಸೋಪಾನವ ನೆರೆಕಟ್ಟಿ
ಮತ್ಸ್ಯಯಂತ್ರವಂ ಸಲೆ ತರಿದಾ ಧುರಧೀರಂ
ನಿನಗೆ ಸೋತಿಹ ವರಿಸಲೇ ಗಾಂಧರ್ವ
ವಿಧಿಯೊಳಿವನಂ ತರುಣಿ

(ಅರ್ಜುನ ಸುಭದ್ರೆಯರ ಯುಗಳ ಗೀತೆ)

ರಾಗ : ಜಂಝೂಟಿ - ಮಿಶ್ರಛಾಪುತಾಳ

ಸತ್ಯಭಾಮೆ : ಪಾರ್ಥಧೂರ್ತನದಿ ಮಾಡಿದೆ ಅನರ್ಥ ॥ ಪ ॥
ಸಾರ್ಥಕವಾಯಿತು ನಿನ್ನ ಸಾಹಸ ಶೌರ್ಯ ಸಾಮರ್ಥ್ಯ ॥ ಅ.ಪ. ॥
ಕಪಟ ರೂಪದಿ ತಪಸಿ ವೇಷದಿ
ಅಪಹರಿಸಲುದ್ಯೋಗಿಸಿದೆಯಾ -
ನೃಪಕುಲಾಮಣಿಯಳ ಸೋದರಿಯಳ
ಬಳಿರೆ ಸಾಮರ್ಥ್ಯ ॥ ೧ ॥

ಅರ್ಜುನ : ಭಾಮಾ ತೋರುವುದು ಏಕೆನ್ನೊಳು ನೀ ಪ್ರೇಮ ॥ ಪ ॥
ಕಾಮಾಕ್ಷಿ ಬೇಡೆ ಘರ್ಜಿಸಿದರೆ ಬರುವ ಬಲರಾಮ ॥ ಅ.ಪ ॥
ಪದುಮ ನೇತ್ರಿಯೇ ಮೃದು ಸುಗಾತ್ರಿಯೇ -
ಯದುಪನಂದನ ಪ್ರಿಯ ಕಳತ್ರಿಯೇ -
ಸದಯಳೇ ಹೃದಯಳೇ ಸಮ್ಮುದವ ತೋರುವುದು (ಭಾಮಾ) ॥ ೧ ॥

ದೃಶ್ಯ : ಬಲರಾಮನ ಆಸ್ಥಾನ

ಬಲರಾಮ- ಹಾಡು ರಾಗ : ಬೇಗಡೆ - ಆದಿತಾಳ

ಕುರುವರೇಣ್ಯನ ಪುರಿಗೆ ಪೋದ ವಿಪ್ರ
ಮರಳಿಬಾರದೆ ಇರುವುದೇನಚ್ಚರಿ ॥ ಪ ॥
ಪೋದ ವಿಪ್ರನು ಸುಯೋಧನನಲ್ಲಿಗೆ
ಮೋದದಿಂದ ಕಾರ್ಯ ಸಾಧಿಸಿರುವನೇ ॥ ೧ ॥

ಕರೆಸಿ ಕೌರವನಿಗೆ ವರಸುಭದ್ರೆಯನ್ನು
ಹರುಷದಿಂದ ಧಾರೆಯೆರೆದು ಕೊಡುವೆನು ॥ ೨ ॥

**ಕೃಷ್ಣ- ಹಾಡು** **ರಾಗ : ಬೇಗಡೆ - ಮಿಶ್ರ ಛಾಪುತಾಳ**

ಕಾಮಪಾಲ ರಾಮ ನೃಪಾಲ ॥ ಪ ॥
ಸೋದರತ್ತೆಯ ಸುತ ಯಾದವರಿಗೆ ಹಿತ
ಕ್ರೋಧವೇಕವನೊಳು ಯಾದವ ತಿಲಕ ॥ ೧ ॥
ಕುಂತಿಕುವರಗೆ ಶ್ರೀಮಂತ ಸುಭದ್ರೆಯ ನಿಂತು ಕೊಡಲು
ಮನದಿಂತು ಯೋಚಿಪರೆ ॥ ೨ ॥

## ದೃಶ್ಯ : ಸತ್ಯಭಾಮೆ ಅಂತಃಪುರ

**ಸತ್ಯಭಾಮೆ - ಹಾಡು** **ರಾಗ : ಜಂಝೂಟಿ - ಆದಿತಾಳ**

ಕೇಳು ಶ್ರೀಪತಿಯೆ ಪೇಳ್ವೆ ಮುನಿಯ ರೀತಿ ॥ ಪ ॥
ನಾಳಿಕಾಸ್ತ್ರತಾಪಂ ತಾಳದೇ ಬಳಲ್ವಂ ॥ ಅ.ಪ ॥
ಕಾಂತೆ ಬರಲು ಸ್ವಾಂತ ಶಾಂತ ಚಿತ್ತನಾಗಿ
ಸಂತಸದಿಂದಿರುವ ಚಿಂತೆಯನ್ನು ತೊರೆದು ॥ ೧ ॥

## ದೃಶ್ಯ : ಅರಮನೆಯ ಕೋಟೆ

**ಬಲರಾಮ - ಹಾಡು** **ರಾಗ : ಸುರಟಿ - ಆದಿತಾಳ**

ಕೃಷ್ಣಾ ರಣಯಾನಕೆ ನೀನು - ತಡಮಾಡುವುದೇಕೆ ಗೋಪಾಲಕೃಷ್ಣ ॥ ಪ ॥
ಭಾವಿಸಲರಿಯದೆ ಎಮ್ಮಯ ಶೌರ್ಯವ
ಕೇವಲಗರ್ವಿತನಾಗಿ ಭಾವಾಭಾವದಿ ಕಣ್ಣು ಕಾಣದಿಹ ಪಾಂಡು ತನುಜ ॥ ೧ ॥
ಸಂಗರದೊಳಗೆಲ್ಲಿಯು ತಾನರಿಯನು ಭಂಗವ ಪಾರ್ಥನು ತಾನು
ಭಂಗಿಸಿ ಬರುವೆನೀಗಲೆ ಅವನನು ತುಂಬಾ ಬಲದಿ ॥ ೨ ॥

## ದೃಶ್ಯ : ರಸ್ತೆ

### (ಅರ್ಜುನ, ಸುಭದ್ರೆ - ಹಾಡು)

**ರಾಗ : ಬೇಗಡೆ - ಆದಿತಾಳ**

**ಅರ್ಜುನ :** ಛಲವೇಕೋ ಎನ್ನೊಳ್ ಕಾಮಪಾಲ ॥ ಪ ॥
ಹಲಧರ ಸುಗುಣ ಗುಣಶೀಲ ॥ ಅ.ಪ ॥
ಮಾಡಿದ ತಪ್ಪನು ಮನದೊಳಗೆಣಿಸದೇ
ನೋಡು ಎನ್ನೊಳು ದಯಮಾಡು ಬೇಡುವೆ ॥ ೧ ॥

**ಸುಭದ್ರೆ :** ಸೋದರಿಯೊಳು ಕ್ರೋಧವ ಬಯಸದೆ
ಆದರಿಸುವುದು ಯಾದವಾಗ್ರಣಿಯೆ ॥ ೧ ॥

**ಕೃಷ್ಣ - ಹಾಡು** **ರಾಗ : ಕಾಮವರ್ಧಿನಿ - ರೂಪಕತಾಳ**

ಇಂಥ ಪಂಥವೇಕೋ ದೇವ - ಕುಂತಿ ಕುವರನೋಳ್ ॥ ಪ ॥
ಸೋದರತ್ತೆ ಸುತನವ । ಯಾದವಗಿಗೆ ಹಿತನವಾ ।
ಸೋದರಿ ಸುಭದ್ರೆಗೆ ಪ್ರಿಯವಾದ ಬಾಂಧವಾ ॥ ೧ ॥
ಪಾರ್ಥ ಸುಲಭ ಸಾಧ್ಯವೇ - ಆರ್ತನಾಗಿ ಬರುವನೆ
ಪಾರ್ಥಿವೇಂದ್ರ ಸಮಗೆ ಈ ಅಪಕೀರ್ತಿ ಬೇಡವೈ ॥ ೨ ॥

### ಮಂಗಳ

**ರಾಗ : ಕುರಂಜಿ - ಆದಿತಾಳ**

ಶ್ರೀಕೃಷ್ಣಾ ಮಂಗಳಂ ಕಾರುಣ್ಯಪೂರಿತಾ
ಲೋಕಾದೀ ಸೇವಿತಾ ಮುಖರಾಕೆಂದುವಿ
ಲೀಲಾಕಳಕಾಮ ಪಾಲಿತಾ ಕಾರುಣ್ಯ
ಸಿಂಧುವೇ ಸಾರಸಾ ಬಂಧುವೇ
ನೀರೇಶಾಸ್ಯಂದನು ಪೊರೆವೀರಾಂಕಿತ
ಧೀರಾವರ ನಾರಾಯಣನೆ

॥ ಶುಭಂ ಮಂಗಳಂ ನಿತ್ಯಂ ॥



# ಶ್ರೀ ಕೃಷ್ಣ ಪಾರಿಜಾತ



ಕರ್ನಾಟಕ ನಾಟಕ ಪಿತಾಮಹ
**ಬೆಳ್ಳಾವೆ ನರಹರಿಶಾಸ್ತ್ರಿಗಳು**



ರಂಗಭೂಮಿಯ ನಾರದ
**ಸಿ.ಟಿ. ಶೇಷಾಚಲಂ**

**ಪ್ರಾರ್ಥನೆ : ಹಾಡು** **ರಾಗ : ಕಲ್ಯಾಣಿ - ಆದಿತಾಳ**

ಇಂದ್ರಾದಿಸುರನುತನಮಿತ
ಗಂಧರ್ವ ಕಿನ್ನರ ಸೇವಿತ
ಪದುಮನೋದ್ಭವನ
ಮೋದದರಸಿಯೇ ॥ ಪ ॥
ವೀಣಾಪಾಣಿ ಅಮರ ಕಲ್ಯಾಣಿ
ಮನದ ಸಂಶಯಗಳ ಭರದಿ ನಿವಾರಿಣಿ
ವಾಣಿ ಮಣಿವೆವು ಗುಣಮಣಿ
ಘನಾಗಾನ ತಪೋನಿರತ ಜನಾಧರಣಿ ॥ ೧ ॥

## ದೃಶ್ಯ - ರಸ್ತೆ

**ಸೂತ್ರಧಾರ : ವೃತ್ತ** **ರಾಗ - ನಾಟಿ**

ಶ್ರೀ ವೈಮಾನಿಕ ಸಂಕುಲಾಂಜಲಿ ಕಿರನ್ಮಂದಾರ ಬೃಂದಾರ್ಚಿತಂ ।
ದೇವೇಂದ್ರಾರ್ಪಿತ ಪಾರಿಜಾತ ಸುರಭೂಜಾನಂದ ಭಾಮಾನ್ವಿತಂ ॥
ಸೇವಾಸಕ್ತ ಮುನೀಂದ್ರ ಹೃತ್ಕುವಲಯಾನಂದೈಕ ಚಾಂದ್ರ ಪ್ರಭಂ ।
ದೇವಂ ಮಂಗಳಮಾಗೆ ನಮ್ಮೊಳನಿಶಂ ಶ್ರೀ ರುಕ್ಮಿಣೀವಲ್ಲಭಂ ॥

**ಸೂತ್ರಧಾರ : ಹಾಡು** **ರಾಗ : ಕಲ್ಯಾಣಿ ರೂಪಕತಾಳ**

ದೇವ ವಿಜಯ ಮಂದರಧರ - ಸುರವರಪರಿಪೂಜಿತಾಂಘ್ರಿ
ಸರಸೀಜ ಕೃಷ್ಣ ॥ಪ॥

ಪಾವನ ಭುವನನಿಧಾನ - ಅರವಿಂದನಯನ । ಸೇವಕಮಂದಾರ ॥
ದೇವಬೃಂದನುತಾನಂತಗುಣ ।
ಲಾವಣ್ಯ ಕಂದ - ಲಲಿತಮುಖಾರವಿಂದ ॥ಅ.ಪ.॥
ಇಂದಿರಾವಲ್ಲಭ-ಜಲದ ಸನ್ನಿಭಗೋವಿಂದ-ಜಿತಭವಬಂಧ । ಕುಂದಗೌರಮಂದ
ಹಸನಾನನ । ಕಂದರ್ಪಕೋಟಿರೂಪ । ಇಂದ್ರ ವೈರಿಹರ ಚಂದ್ರಾರ್ಕಲೋಚನಾ
ನಂದ। ಸಾಂದ್ರ ಭಾಗ್ಯ ಪ್ರದಕರುಣ ಶ್ರೀ ।
ನರಹರಿಪರಮರೂಪ । ಚರಣಶರಣ ಭರಣ ॥೧॥

## ದೃಶ್ಯ : ಅಮರಾವತಿಯಲ್ಲಿ ದೇವೇಂದ್ರನ ಭವನ
## (ಪಾರ್ವತಿ ಪರಮೇಶ್ವರರ ಪ್ರತಿಮೆಗಳನ್ನಿಟ್ಟು ಪೂಜಿಸುತ್ತಿರುವರು)

**ಇಂದ್ರಾದಿ ದೇವತೆಗಳು : ಹಾಡು** **ರಾಗ : ಬೇಹಾಗ್ - ಆದಿತಾಳ**

ಶ್ರೀ ಲೀಲಾ ಸುಖಭಾಗ್ಯನಿಲಯ । ಶ್ರಿತ ಶುಭೋದಯ ।
ಪುರಾಳಿವಿಜಯ । ಗಿರೀಂದ್ರತನಯಾ । ವರ ಮಹೋದಯ ॥ ಪ ॥
ಜಯ ಜಯ ಶ್ರೀ ಭಯಹರಣಾ । ನತಭರಣ ।
ಜ್ಞಾನಪ್ರದಾನ - ಜಯ ವಿಭೋ ॥೧॥
ದಿವಿಜಪಾಲನ । ನಿಟಾಲಯಿನ । ವಿಲಾಸ ಸದನ । ವಿಶಾಲಕರುಣ ।
ವೇದಶಿರೋನುತಸುಗುಣ । ಸಾಧುಸುರಾರ್ಚಿತಚರಣ ॥
ಶ್ರೀ ದಾನಶೀಲ-ಪರಶಿವ ॥ ೨ ॥

**ನಾರದ : ಹಾಡು** **ರಾಗ : ಅಮೃತವಾಹಿನಿ - ಆದಿತಾಳ**

ಶ್ರೀ ಕಮಲಾಧವ । ಪ್ರಾಕಟವೈಭವ । ಲೋಕಾವನದೇವ ॥ ಪ ॥
ಸಾಗರನಿಲಯ । ಸರಸಶುಭೋದಯ ।
ಯೋಗಿಜನಮಾನಸಸಾರಸವಾಸ ॥ ಅ.ಪ. ॥
ಜ್ಞಾನಿಗಮ್ಯಾನಘ । ದೀನ ಸೌಭಾಗ್ಯದ ।
ದಾನವ ಕುಲಹರ ಶ್ರೀಧರ ಆನತಜನಸುರ ।
ಧೇನು ಶುಭಾಕರ । ಗಾನನರ್ತನಾದಿಸುಖಲೋಲ ಸುಶೀಲ ॥ ೧ ॥

ಇಂದ್ರ : ಕಂದ

ಈ ನವಗಾಯನ ನರ್ತನ ।
ದಾನಂದಾಬ್ಧಿಯೊಳ್ ಮುಳುಗಿ ಪರವಶನಾದೆಂ ॥
ಈ ನನ್ನ ವೊಲತಿ ವಿಭವದೊ ।
ಳಾನಂದಿಪನಾವನಿರ್ದಪಂ ಮೂಜಗದೊಳ್ ॥

ಇಂದ್ರ : ಹಾಡು — ರಾಗ : ಬೇಹಾಗ್ - ರೂಪಕತಾಳ

ಪರವಶನಾಂ । ಪರಮಗಾನ ನರ್ತನಗಳಿಂ ॥ ಪ ॥
ಸುರವಧೂಮಣಿಯುಯುಗ್ಮದ । ನಟನಾಟ್ಯ ಸಲ್ಲೀಲೆ ।
ಪರಿಪರಿ ಸುಖಮರೆದುಪಿರಿದು ॥ ಹರುಷವನೆಸಗಿರ್ಪುದೆನಗೆ ॥ ೧ ॥
ಭುವನಜಾಲ ದರಸಿನೋಡೆ । ವಿವಿಧವೈಭವದೊಳಿಂತು ॥
ಪ್ರವರಪುಣ್ಯ ಶಾಲಿಯೆನಿಪ । ದಿವಿಜಾವಳಿಸು ನಮಿಸಿರುವನೆ ॥ ೨ ॥

ಎಲ್ಲರೂ : ಹಾಡು — ರಾಗ : ಕೇತಾರ - ಆದಿತಾಳ

ಶ್ರೀ ಗಂಗಾ ಗಿರಿಜಾರಮಣ । ಶಂಭೋ ಪಾಹಿ ॥ ಪ ॥
ತುಂಗಶೈಲ । ಶೃಂಗವಾಸ । ಪುಂಗವೇಂದ್ರ ವಾಹನ ॥ ಅ.ಪ. ॥
ಮೌನಿಜಾಲ ಗೀತವೇದ । ಗಾನಲೀನಮಾನಸ ॥
ದೀನಪಾಲ । ದಾನಶೀಲ ॥ ಮಾನಿತಾತ್ಮ ಶಂಕರ ॥ ೧ ॥
ಚಂದ್ರಕಾಂತ ಚಾರುರೂಪ । ಸಾಂದ್ರಲೀಲಾಭಾಸುರ ॥
ಕುಂದಭಾಸ । ಮಂದಹಾಸ । ಸುಂದರಾಸ್ಯ ಶಂಕರ ॥ ೨ ॥

ದೃಶ್ಯ : ದ್ವಾರಕಾನಗರ - ನಾರದ ಪ್ರವೇಶ

ನಾರದ : ಹಾಡು — ರಾಗ : ಯಮನ್ ಕಲ್ಯಾಣಿ - ಆದಿತಾಳ

ಯಾದವಕುಲ ಮಣೀದೀಪ - ಜಯ ಜಯ ॥
ವೇದೋದ್ಧಾರ ಮಹಾ । ಮಾಧವ ಸುರನುತಪಾದ ಜಯ ಜಯ ॥ ಪ ॥
ರವಿಶಶಿಲೋಚನ । ರಾಕ್ಷಸ ಮಥನ ।
ಕುವಲಯದಳ ಸು । ಶಾಮಲ ಕೋಮಲ ॥ ೧ ॥

ಭಕ್ತಿವಂಶಕರ । ಭಜಕ ಸುಖಂಕರ ।
ಮುಕ್ತಿದಾಯಕ ಘನ । ಶಕ್ತಿನಿಧಾನ ॥ ೨ ॥

**ದೃಶ್ಯ : ದ್ವಾರಕಾನಗರದ ಅರಮನೆ ಮುಂದೆ ಗಂಧರ್ವೋದ್ಯಾನಕ್ಕೆ ಹೋಗುವ ಮಾರ್ಗ**

**ಕೃಷ್ಣ : ಹಾಡು** **ರಾಗ : ಸುರುಟಿ - ಆದಿತಾಳ**

ಸಂತಸಮಾಂತೆನೆ ಕಾಂತೇ -ಘನಶಾಂತೆ -
ಗುಣವಂತೆ - ಸುಸ್ವಾಂತೆ - ಶುಭಕಾಂತೇ ॥ ಪ ॥
ಕಾತರನೇತ್ರ । ಪ್ರೀತಿಗೆ ನಾನು । ಸೋತಿಹೆನೇ ಬಲು । ಜಾತಸುನಯನೇ ॥ ೧ ॥
ಈ ವಿಧಮುದವ ಭಾವಿಸ ಮದಿ । ದೇವಿ ಶುಭಂ ಮಿಗೆ । ಕೈವಶವಾದುದು ॥ ೨ ॥

**ದೃಶ್ಯ : ಗಂಧರ್ವೋದ್ಯಾನ**

**ರುಕ್ಮಿಣಿ ಕೃಷ್ಣ : ಹಾಡು** **ರಾಗ : ನಾಟಿ ಕುರಂಜಿ - ಆದಿತಾಳ**

ಜಯ ದಾಕ್ಷಾಯಿಣೀ । ಜ್ಞಾನಸಂದಾಯಿನೀ ॥ ಪ ॥
ಜಾತರೂಪಾಂಗಿ ಶ್ರೀ ಜಯ ವಿಭವಾಸ್ಪದೇ ॥ ಅ.ಪ. ॥
ಪರಮಮಂಗಳಮಾತೇ ಪಾವನೇ ಸುರಗೀತೆ ॥
ಶೀತಾಚಲಸುತೇ । ಶ್ರೀಶುಭದಾತೇ ॥ ಕಲುಷಮೇಘಾನಿಲೆ ।
ಲಲಿತಶ್ಯಾಮಲೇ । ಕಲಾಧರಧರ ಕಾಮಸುಖಂಕರೇ ॥ ೧ ॥

**(ಕೃಷ್ಣರುಕ್ಮಿಣಿಯರ ಯುಗಳ ಗೀತೆ)**

**ರಾಗ : ಕಲ್ಯಾಣಿ - ಆದಿತಾಳ**

**ಕೃಷ್ಣ :** ಶೋಭಾಕರವು । ಸುರವರ ಸುಮವು ॥ ಪ ॥
ಈ ಭೂತಲದಳಿಂತಿಹ ಸೌರಭ ।
ಮಾಂತಿಹ ಸುಮವಿಹುದೇ - ಶ್ರೀರಮಣೀ ॥ ಅ.ಪ. ॥
ಭಾಸುರಪರಮ ಪ್ರಭಾವ ರಂಜಿತ ಸುಮ ।
ವಾಸ ವೈಭವಾ - ವಾಸವಿದೆನಿಸೆ ।
ಲೇಸೇನೆ ನಮಗಿಂ - ದೀ ಸುಮದೊರೆತಿಹು -
ದೀ ಸಮಯವು ಶುಭವು । ಕೇಳ್ ರಮಣೀ ॥ ೧ ॥

ರುಕ್ಮಿಣಿ : ಇಂತಹ ಕುಸುಮವ - ನಿಳೆಯೊಳಗೆಲ್ಲಿಯೂ ಕಾಂತನೆ ಕಾಣೆನಾಂ ।
ಕಾಮಿತ ಪ್ರದವಂ । ಭ್ರಾಂತಿಗೊಳಿಸುವುದು - ಸ್ವಾಂತವನೇ ಪರಿ ।
ಸಂತಸಮಾಂತಿಹೆನ್ನೈ ಶ್ರೀ ರಮಣಾ ॥ ೨ ॥

**ನಾರದ : ಹಾಡು** **ರಾಗ ಹಿಂದೂಸ್ಥಾನಿಕಾಪಿ - ಆದಿತಾಳ**

ಲಾಲಿಸು ಮಧುಸೂದನ । ತ್ರೈಲೋಕ್ಯಮೋಹನ -
ಲೀಲಾ ವಿನೋದನ ॥ ಪ ॥
ಪೂತವೆನಿಸಿಪುರ - ಹೂತನ ಲೋಕದಿ ।
ಖ್ಯಾತಿ ಯಾಂತುದು ಪಾರಿಜಾತ ಸುಮವು ॥ ೧ ॥
ನೆನೆದಭಿಲಾಷೆಯ - ನನುವಿನಿಂಸಲಿಪುದು ।
ಘನತರ ಕುಸುಮವಿದನುಪಮವೆನಿಸಿ ॥ ೨ ॥

**ನಾರದ : ಹಾಡು** **ರಾಗ : ಹಿಂದುಸ್ಥಾನಿಕಾಪಿ - ಆದಿತಾಳ**

ಯದುನಂದನ - ಶ್ರೀನಾಥಜಯ । ವ್ಯಾಸಾದಿಮೌನಿಕೃತವಂದನ ॥ ಪ ॥
ವಿಧಿವಿಷ್ಣು ಶಿವಾತ್ಮಕ ಚೇತನ । ವೇದಾಂತವೇದ್ಯ ಜಿತಬಂಧನ ॥ ಅ.ಪ. ॥
ಜಗದೇಕನಿಜ ಸ್ಥಿತಿಕಾರಣ । ತ್ರಿಗುಣಾತ್ಮಕ ಸಂಸ್ತುತಚಾರಣ ॥
ಜ್ಞಾನದಾಯಕ -ಗಾನನಾಟ್ಯಲೋಲ । ದೀನಾಳಿಪಾಲ - ಶ್ರೀನಾರಸಿಂಹ ॥ ೧ ॥

**ದೃಶ್ಯ : ದ್ವಾರಕಾನಗರದ ಅರಮನೆಯಲ್ಲಿ ಬಲರಾಮನ ಅಂತಃ ಪುರ**

**ಬಲರಾಮ : ಹಾಡು** **ರಾಗ : ಬೇಹಾಗ್ - ಆದಿತಾಳ**

ಆನಂದ ಕರ ಮಧುಮಾಸವು । ಏನೆಂಬೆ ಸುಖದಾವಾಸವು ॥ ಪ ॥
ಭೋಗಿ ಜನರಿಗನು - ರಾಗವ ಪೆರ್ಚಿಸಿ ।
ಭೋಗವಿಭವಕೆ ಸು - ಖಾಗಮಮಿಾವುದು ॥ ೧ ॥

**ರೇವತಿ : ಹಾಡು**

ಆ ಸುಮ ಬಾಣನು ತನ್ನ - ಕುಸುಮಶರಂಗಳಿಂ ।
ಎಸೆವುದಕಾರಂ - ಭಿಸೆ ನೆರೆ ಮೆರೆವುದು ॥ ೨ ॥

**ಮದಿರೆ : ಹಾಡು** **ರಾಗ : ಕಮಾಚ್ - ಆದಿತಾಳ**

ಮಧುವಿದುಮಧುರವು ಮನೋಹರ । ವಿಧವಿಧಸುಖವನ್ನೊದಗಿಪುದು ॥ ಪ ॥
ಪರಮ ಸುಖಾ ಕರವು ಸಖ । ಭರದೊಳು ಸೇವಿಸು ಮನೋಜ್ಞ ಚರಿತ ॥ ಅ.ಪ. ॥
ಸುರಕುಲಕರಿದೆನಿಸಿರುವುದು ನೋಡು ।
ನರವರ ಸವಿಯುತ ಸುಖದೊಳು ಕೂಡ ॥ ೧ ॥

**ರೇವತಿ : ಹಾಡು** **ರಾಗ : ಸುರಟಿ - ಆದಿತಾಳ**

ತರವಲ್ಲವೋ । ಕಾಂತಾ ॥ ಪ ॥
ಮಧುಪಾನವು - ಮಾನಾಪಹಾರಿ । ಮದ ವೇರಿಪ - ಮತಿಹಾನಿಕಾರಿ ॥ ೧ ॥
ನರನಾಥರು - ಪರಿಪೂತರು ॥ ಸರಿಯಲ್ಲವೈ - ಸುರೆಯಾಟವು ॥ ೨ ॥

**ಬಲರಾಮ : ಹಾಡು** **ರಾಗ : ಹಿಂದೂಸ್ಥಾನಿಕಾಪಿ - ಆದಿತಾಳ**

ಆನಂದ ವಿಕಾಸ ಕಾದಂಬರಿ ।
ಮಾನಿನಿ ಸುವೈಭವ ಮಂಜರಿ ಜ್ಞಾನಿಗಳೂ । ಸೇವಿಸುವ ॥ ಪ ॥
ಪಾನವು - ಸುಜ್ಞಾನವು । ಸನ್ಮಾನವು । ಸುಮ್ಮಾನವು ಸೌಭಾಗ್ಯವೇನೆಂಬೆನು ॥ ೧ ॥
ಈ ಕಂಗಳಿಗೆ ದೇವಲೋಕನ ತೋರಿಸಲು । ಸೌಕರ್ಯಮಿಾವುದು ಕಾದಂಬರಿ ।
ನವ ಕಾದಂಬರಿ ॥ ಸಾರವು । ಗಂ-ಭೀರವು ।
ವಿ-ಸ್ತಾರವು । ಸುಖ । ಪೂರವೀನವ್ಯ ಕಾದಂಬರಿ ॥ ೨ ॥

**ದೃಶ್ಯ : ಅರಮನೆಯ ಮುಂಭಾಗ - ಮಕರಂದನ ಪ್ರವೇಶ**

**ಹಾಡು : ನಾರದ** **ರಾಗ : ಯಮನ್ - ಆದಿತಾಳ**

ಪಾವನಚರಿತ । ಶ್ರೀವಿರಾಜಿತ । ದೇವವಿನುತ ವಸುದೇವಸುತ ॥ ಪ ॥
ಗಾನವಿಲೋಲ - ಘನಗುಣಶೀಲ ॥
ದೀನಕಲುಷಕುಲ ಕಾನನಶೀಲ ॥ ೧ ॥
ನೀರದನೀಲ । ನಾರೀವಿಲೋಲ ॥
ಮಾರಜನಕ ಸುಕು-ಮಾರ ಗೋಪಾಲ ॥ ೨ ॥

## ದೃಶ್ಯ : ಸತ್ಯಭಾಮೆಯ ಅಂತಃ ಪುರ

**ಸತ್ಯಭಾಮೆ : ಹಾಡು** ರಾಗ : ಬೇಹಾಗ್ - ಆದಿತಾಳ

ಕಾಂತನೇಕೆ ಬಾರನೇ ಸಖಿ ॥ ಪ ॥
ಯುವತಿಯದಾವಳು - ವಿವಿಧವಿಲಾಸದಿ ।
ಭವನದಿ ನಿಲಿಸಿಹಳವನನು ಮುದದಿ । ಕಾಂತನನ್ನು - ಕಾಣದಾದನೆ ॥ ೧ ॥
ಪರಕಿಸೆ ರುಕ್ಮಿಣೀ - ಸರಸದೆ ಭಾಮೆಯ ।
ಮರೆ ತಿರುವನೊ ನೆರೆ - ಮುರಹರನಮಮಾ ॥ ೨ ॥

**ಸತ್ಯಭಾಮೆ : ಹಾಡು** ರಾಗ : ಶಹನ - ಚಾಪುತಾಳ

ಇನ್ನೇತಕೀಜನ್ಮ । ವಿನ್ನೇತಕೀ ವಿಭವ ।
ನನ್ನಂತರಂಗವಿದು । ದಹಿಸುತ್ತಲಿಹುದಮಮಾ ॥ ಪ ॥
ವಲ್ಲಭನಿಗೀರೀತಿ - ಯೊಲ್ಲದಿರೆ ।
ನಿಲ್ಲುವೆನೆ ಪ್ರಾಣದಲಿ ನೀರಜಾಂಬಕಿಯೇ ॥ ೧ ॥
ಇಂದು ಭೂಷಣವೇಕೆ ಗಂಧಪುಷ್ಪಗಳೇಕೆ ।
ಬೆಂದುವಿರಹಾಗ್ನಿಯೊಳು ನೊಂದಸಿಂದಕಾಟಾ ॥ ೨ ॥

**ಕೃಷ್ಣ : ಹಾಡು** ರಾಗ : ಬೇಗಡೆ - ಆದಿತಾಳ

ಅತಿಕೋಪವೇನಿದು ಸತ್ಯಭಾಮೇ । ಖತಿಯೊಂದಲೇತಕೆಪೂರ್ಣ ಕಾಮೇ ॥ ಪ ॥
ಮಿತಿಮಿಾರಿ ಶೋಕದೀರೀತಿಯೋಳ್ ।
ಮತಿಭ್ರಾಂತಿಯೇಕೆ ಮಾರನಪತಾಕೆ ॥ ಅ.ಪ. ॥
ನಿನ್ನ ನಾರಲೀಲೆ - ಯನ್ನು ನೋಡೆ ನಾರೆ । ನನ್ನೊಳಿಂತು ಕೋಪವೆ ಭಾಮಿನೀ ।
ನನ್ನ ಪ್ರಾಣಸಮಾನಳೆ ಖಿನ್ನವೇಕೆ । ನಯಗುಣಾಕರರೇ ನಾನುರೆ ಬೇಡುವೆ ॥
ನನ್ನುತಾಂಗಿ ನೀಂ - ಸರಸಭಾವದಿ । ನನ್ನೊಳಾಡಿ ಕೂಡೆ - ಧನ್ಯನಾಗುವೆನೆ ॥ ೧ ॥

**ಕೃಷ್ಣ : ಕಂದ**

ವ್ಯಾಕುಲಮೇಂ ಕೋಪವಿದೇಂ ।
ಕೋಕಿಲ ಕಲವಾಣಿ ಮಧುರ ಮಂಜುಳ ವೇಣಿ ॥

ರಾಕೇಂದುವದ ನೆದಿವ್ಯಕ ।
ಳಾಕಲಿತ ವಿಲಾಸಹಾಸದಿಂ ನುಡಿ ರಮಣೀ ॥

## (ಕೃಷ್ಣ ಸತ್ಯಭಾಮೆ ಯುಗಳಗೀತೆ)

**ರಾಗ : ಕಲ್ಯಾಣಿ - ಆದಿತಾಳ**

**ಕೃಷ್ಣ :** ಬಿಡುಕೋಪವ ಭಾಮಿನೀಮಣೀ ।
ನೀಂ ರಾಣೀ - ಸುವಾಣೀ - ಫಣಿರಾಜ ವೇಣೀ ॥ ಪ ॥

**ಸತ್ಯಭಾಮೆ :** ಇದುಬಲ್ಲೆನು ಮಾಧವ । ಸದಾವಿನೋದ
ವಿರೋಧ ಪ್ರಮಾದಾಪ ರಾಧ ॥ ಪ ॥
ಗುಣವಂತೆಯರೊಳ್ - ಗಣನೆಯೆ ನಾಂ ।
ಮಣಿವೆನು ನೀಂ - ಕೆಣಕದಿರನ್ನಂ ॥ ೧ ॥

**ಕೃಷ್ಣ :** ಭಾಮೆ ನಿನ್ನ - ನಾಂ ಭಾವಿಸುತ್ತೆ ಬಂದೆ ।
ಪ್ರೇಮವಿಲ್ಲದೆ ಭೇದತೋರುವರೇ ॥ ೧ ॥

**ಸತ್ಯಭಾಮೆ :** ಕೋಮಲಾಂಗ ನನ್ನ - ಕೋಪದೇನುಫಲ ।
ಭೂಮಿಯಲ್ಲಿ ನಾಂ । ಪುಣ್ಯಹೀನಳಾದೆ ॥ ೨ ॥

**ಕೃಷ್ಣ : ಹಾಡು** **ರಾಗ : ಹಿಂದೂಸ್ಥಾನಿಕಾಪಿ - ಆದಿತಾಳ**

ಸರಸವಾಣೀ ಸ್ಥೈರಿಸೇ । ಸಾರಸಾಯುಕಲೋಚನೇ ॥ ಪ ॥
ಬಿನಜನೇತ್ರೇ - ಕುಸುಮಕೆಂದೀ - ಅನಮಕೋಪಮಾಳ್ಪರೇ ॥
ಎಸೆವೆನಾಂ ಸಂ-ತಸವ ನಿನಗೆ - ಬೆಸನು ನಿನ್ನ ಭೀಷ್ಟವ ॥ ೧ ॥
ಕೇಳು ನುಡಿಯಂ । ತಾಳು ಮುದವಂ ಶ್ರೀ ಲತಾಂಗೀ ಬೇಡುವೆ
ನೀಲಚಿಕುರೇ - ಲೀಲೆತೋರೆ - ಶೀಲವಂತೇ ಮಾನಿತೇ ॥ ೨ ॥
ವಿವಿಧಭೂಷಾ - ನಿವಹಮಾಂತು ಜವದಿ ನನ್ನ ಹರ್ಷಿಸೇ ॥
ಕುವಲಯಾಕ್ಷೀ ಕೋಪಿಸಲು ನೀಂ । ತಾಪವೆನಗಿಂದಾದುದೇ ॥ ೩ ॥

**ನಾರದ : ಹಾಡು** **ರಾಗ : ಮೋಹನ - ಆದಿತಾಳ**

ಸರಸಿಜಲೋಚನ - ಸಾಧುಜನಾವನ । ನಾರದಯಾಕರ - ನಾಗರಶಯನ ॥ ಪ ॥
ಸುಂದರ ಕೋಮಲಕಾಯ - ವಂದಿತ ದಿವಿಜನಕಾಯ -

ಬಂಧವಿಮೋಚನ ಪಾವನ ॥ ೧ ॥

ನಾಗಶಯನ ಗುಣಧಾಮ - ನಾಗವರದ ಶುಭಕಾಮ ।

ರಾಗರಹಿತ ಘನಭೋಗ ॥ ೨ ॥

ಕೃಷ್ಣ : ಹಾಡು — ರಾಗ : ಸುರುಟಿ - ಆದಿತಾಳ

ಸುರಾಧಿಪನ ಗೆಲ್ವೆ । ಸಮರದಿ ॥ ಪ ॥

ದುರಂತಮದದಿಂ - ದಿರಲು ಸುರಪನಾ ।

ದುರಾಗ್ರಹಿಯನಾಂ - ಧುರಾಗ್ರ ಕೆಳೆವೆ ॥ ಅ.ಪ. ॥

ವಿಧೇಯತೆಯೊಳಿಂದು - ಕುಡಿದಿರೆ ।

ಬುಧಾವನಿಜವನು ತಾಂ - ಮದಾಂಧನಂ ರಣ ॥

ವಿಧಾನಕೆಳೆಯುತೆ - ಸುಧಾಶನೇಂದ್ರನ ।

ಮದಂ ಬಿಡಿಸುವೆನು ॥ ೧ ॥

## ದೃಶ್ಯ : ಸ್ವರ್ಗಲೋಕ ಪ್ರಾಂತ

ನಾರದ : ಹಾಡು — ರಾಗ : ಬೇಹಾಗ್ - ಆದಿತಾಳ

ಶ್ರೀ ವಿನೋದವಿಶಾಲ ಗೋಪಾಲ । ರಾಜೀವನೇತ್ರನವವನಮಾಲ ॥ ಪ ॥

ನಾಗರತನಯಾ ಸಾರವಿಲಾಸ । ಭೋಗವಿಕಾಸ - ಸುಮಹಾಸ ॥

ರಾಗರಹಿತ ಮುನಿಭಾಗಧೇಯ ಶ್ರೀ । ನಾಗವರದ ಸುರನರ ಶರಣ ॥ ೧ ॥

ಕಾಲಯುವನ ಮುಖರಿಪುಸಂಹಾರ । ಕಾಳೀಯಮದಾಪಹ ಧೀರ ॥

ಕಾಲವಿಜಯ ಕರುಣಾಲಯ ಸದಯ । ಪಾಲಯ ಪಾವನ ಯದುತನಯ ॥ ೨ ॥

## ದೃಶ್ಯ : ಶಚೀದೇವಿಯ ಅಂತಃಪುರ

ಶಚೀದೇವಿ : ಹಾಡು — ರಾಗ : ಯಮನ್ - ಆದಿತಾಳ

ಮಹಿಯನರನು ಬಯಸಲೆಂತು । ಮಹಿತದೇವಸುಮಹೀಜವನು ತಾಂ ॥ ಪ ॥

ಪಿಡುಗಿಮಾರೆ - ಸಹಿಸಲಾರೆ । ಮಹೇಂದ್ರವೈಭವ ಮಹಿಜವು ನಾರೆ ॥ ೧ ॥

ಪಗನುಫಲವ - ಭರದಿಕೊಡುವ । ತರುವನೀವನೆ ಸುರೇಂದ್ರನಮಮಾ ॥ ೨ ॥

ಮಣಿಸಿ ನರನೀ - ವಿಧದಿ ಬಯಸೆ । ತ್ರಿದಶನಾಥನು - ವಿಧೇಯನಹನೇ ॥ ೩ ॥

**ದೇವೇಂದ್ರ : ಕಂದ**

ವಿಲಸಿತ ಜಲರುಹವನದೊಳ್ ।
ಸುಲಲಿತ ಕಲಹಂಸಿಯಂತೆ ಸುರಕಾಂತಾ ನಂ ॥
ಕುಲದೊಳ್ ಪರಮಾನಂದದೆ ।
ನಲಿವ ಶಚೀದೇವಿಯೆಂತು ರಂಜಿವಳಮಮಾ ॥

**ಶಚೀದೇವಿ : ಹಾಡು** **ರಾಗ : ಕಲ್ಯಾಣಿ - ಆದಿತಾಳ**

ಸುರತರುವ ನರಗೀವರೇ । ಸೌಭಾಗ್ಯದಾತಮೆನಿಸುತೆ ಮೆರೆದಿಹ ॥ ಪ ॥
ಸಾಂದ್ರಶುಭಾಕರನೆಂದೆನಿಸಿರುವೀ ।
ಇಂದ್ರನ ತರುವನುಪೇಂದ್ರನು ಬಯಸಿರೆ ಕುಚೋದವೀ
ವಿಚಾರವು । ವಿಚಿತ್ರವು ಲೋಕವಿನ್ನು ನಗದಿರುವುದೆ ॥ ೧ ॥

**ಶಚೀದೇವಿ : ಹಾಡು** **ರಾಗ : ಬೇಹಾಗ್ - ಆದಿತಾಳ**

ವರಸುರರಮಣಾ ಸುರಚಿರತರಗುಣ ಧುರಚಿತರಿಪುಗಣ - ಕಾಂತಾ ॥ ಪ ॥
ಮದಿಸಿದನರನೊಳು ಕದನವನೆಸಗುತೆ ।
ಮದಮಡಗಿಸಿಬಹು - ದದುನಿಹಗರಿದೇ ॥ ೧ ॥
ಸಮರಕೆ ಸಾರದೆ ಸಮಯವ ಕಳೆವುದು ।
ರಮಣನೆ ಪರಿಕಿಸೆ - ಪ್ರಮಾದವಲ್ಲವೆ ॥ ೨ ॥

**ದೃಶ್ಯ : ನಂದನವನದಲ್ಲಿ ಶ್ರೀ ಕೃಷ್ಣಸತ್ಯಭಾಮೆ**

**ಕೃಷ್ಣ, ಸತ್ಯಭಾಮೆ : ಹಾಡು** **ರಾಗ : ಜಂಜೂಟಿಜಿಲ್ಲಾ - ಆದಿತಾಳ**

ಪಾರಿಜಾತವು । ಏಪರಿ ಮೆರೆದಿಹುದು
ಶಕುಂತ ಕುಲಗಳ ಸುಲಲಿತ । ಕಲಕಲರವದೊಳು ॥ ಪ ॥
ಸಾರಪರಿಮಳವ ನೆರಚಿಮೆರೆವ ನರಸಸುಮವ ।
ಧರಿಸಿಪೊಳೆವ ಇಂದ್ರನ ನಂದನ । ಕಂದವಿದೆಂದೆನೆ - ಮಂದಾರಂ - ತಾಂ ।
ಸುಂದರ ಕುಸುಮ - ಬೃಂದವ ಧರಿಸಿ ಕುಂದ ದಿರ್ವನೊಬ ।
ಗಿಂದ ರಂಜಿಪುದು ॥ ೧ ॥

ಮನದಿಷ್ಟವನು ನೀಡಿ ಪ್ರಮೋದ । ವನು ವಿರಚಿಸುವ ॥
ಸುಂದರ ಸುರತರವು॥ ಸುಖಕರವು ॥
ಮನಕ್ಕೆ ವಿನೋದ । ವನೆಂತು ರಚಿಪುದು ॥ ೨ ॥

**ಇಂದ್ರ : ಹಾಡು**

ತ್ರಿದಶೇಂದ್ರನ ಬಲಮರಿಯದೆ ।
ಕದನಕೆ ಸನ್ನದ್ಧನಾಗಿ ಶಂಖಾರವದಿಂ ॥
ಮದದಿಂ ಕರೆದಿರಲೀಪರಿ ।
ಬೆದರುವನೇಂ ಮರ್ತ್ಯನಾರ್ಭಟಕ್ಕಮರೇಂದ್ರಂ ॥

**ಕೃಷ್ಣ : ಕಂದ**

ಬಲಸೂದನ ನೀಂ ಸಮರದೆ ।
ಬಲವಾಳಿಗನಪಕೀರ್ತಿಯುಂ ಮಹಾ ದುರ್ಯಶಮುಂ ॥
ಸಲೆ ಪೊರ್ದಲ್ ಬಂದಿರ್ದಪೆ ।
ಬಲಭದ್ರಾನುಜನ ಕೆಣಕಿ ಪಿರಿದುಂ ಮದದಿಂ ॥

## ದೃಶ್ಯ : ನಂದನವನ ಪ್ರಾಂತ

**ಇಂದ್ರ : ಹಾಡು** — ರಾಗ : ನವರೋಜು - ಅಟ್ಟತಾಳ ಚಾಪು

ವಂದಿಪೆ ತರು । ಣೇಂದು ಶೇಖರ ದೇವಸಂಕರಾ ।
ಬುಧಸುಶೋಧನ - ಸದಮಲಗುಣ । ಸಾರಪುರಹರ ॥ ಪ ॥
ವಂದಿಪೆ ನರ - ವಿಂದಲೋಚನ । ಕೃಷ್ಣ ಶ್ರೀಧರ ।
ಯದುಕುಲಮಣಿ - ಸದಮಲಗುಣ । ಸಾರಮುರಹರ ॥ ಅ.ಪ. ॥
ದಯಾಸಾಗರಾ - ಧರಾಧರ - ಚರಲೀಲಾ । ವರಶೀಲಾ - ಧರ್ಮಪಾಲನ ॥
ನಾಮಗಾನವಿಲೋಲ ಸರಸನಾಟ್ಯವೈಭವಾ ॥ ಯಮಿಕುಲನುತ -
ಕುಮುದಮಯುತ ಶತಮುಖಪಾತ್ರತಾ ॥ ಕೃಪಾಧನಾ । ಸುಪಾವನಾ ॥
ರಿಪುಕಾಲ - ನೃಪಜಾಲಾ । ಚರ್ಚಿತಪದಾಂಬುಜ ॥ ೧ ॥

## ದೃಶ್ಯ : ಅರಮನೆ - ದೇವೇಂದ್ರನ ಪ್ರವೇಶ

**ದೇವೇಂದ್ರ : ಹಾಡು** — **ರಾಗ : ಸಾರಂಗ - ಅಟ್ಟತಾಳ ಚಾಪು**

ಶ್ರೀನಾಥನಾಕೃಷ್ಣ । ತಾನೆಂಬುದನೆ ಮರೆತು ॥
ಏನಿಂತನರ್ಥವನು । ನಾನಿಂದು ಗೈದಿಹೆನು ॥ ಪ ॥
ಕಾಕುನೀಮಣಿಯಿಂದೆ । ಕಾಮಾಂಧಕಾರದೊಳು ॥
ವ್ಯಾಮೋಹದೊಳಗಾಗಿ । ಪ್ರೇಮವನ್ನವನಾಂತೆ ॥ ೧ ॥
ನಾರದ ನುಡಿಗೇಳ್ದು - ನಾರಾಯಣನ ಜರಿದು
ಘೋರಪಾತಕಿಯಾದೆ । ನೀರೇಕೆ ನಾನಕಟ ॥ ೨ ॥

**ಮನ್ಮಥ : ಹಾಡು** — **ರಾಗ : ಹಂಸಧ್ವನಿ - ಆದಿತಾಳ**

ಜಗವನು ಜಯಿಸಿರುವೆ । ಮೆರೆಯುವೆ ।
ಅಗಾಧ ಶೌರ್ಯ ಬಲಯುತ ನೆನಿಸುತೆ ॥ ಪ ॥
ಕುಸುಮಬಾಣದಿಂ - ದೆಸೆದು ಲೋಕಮಂ ।
ವಶಂಗೊಳುತೆ ಸಂ-ತಸಂದಳೆಯುತೆ
ವೀರ-ಧೀರ-ಶೂರನಾ । ನೆನೆದಿಹನನುಪಮಸಾಹಸಿ ಮನ್ಮಥ ॥ ೧ ॥
ಮುನಿಯನಾದರೂ - ಮನಮಲುಗಿಸುತ । ವಿನೋದವಶದಿ
ಮನೋಜನಿದಿರೊಳ್ ಭ್ರಾಂತಿಯಾದರೇನು - ತಾಂ -
ವನಿತೆಯಲೀಲೆಗಳನು । ಬಯಸುವನಲೆ ॥ ೨ ॥

**ಮನ್ಮಥ : ಹಾಡು** — **ರಾಗ : ಕಲ್ಯಾಣಿ - ರೂಪಕ ತಾಳ**

ಪಂಚ-ಬಾಣ ಸಂದೋಹಬೀರಿ ಗೆಲ್ಲುವೆ ॥ ಪ ॥
ಚಂಚರೀಕಗುಣದ ಪ್ರಬಲ । ಝುಂ - ಝುಣಾ - ರವವ ಮೊರೆಯೆ ॥ ಅ ॥
ಅರವಿಂದದ ಶರಬೃಂದದೆ । ನೆರೆಬಂಧಿಸಿ ಪರಮಯೋಗಿಯ ॥
ಭರದಿಂದಲಿ ತಪವನಳಿದು ತರಹರಿಸುವ ಪರಿಯನೆನಗೆ ।
ಪರಿಪರಿಯೊಳು ಪರಿಕಿಸುವೆನು ॥ ೧ ॥
ಬೀರುತೆ ಸಮಶರಗಳ ಶೃಂ । ಗಾರದಿ ಮುಳುಗಿಸಿ ಮುನಿಗಳನು ।
ನಾರಿಯಸುಖವನು ಬಯಸುವ । ಪರಿಯಮಾಡಿ ಹರುಷಗೊಂಡು ।
ಪರಿಹಸನಕೆ ॥ ಗುರಿಯೆಸಗುವೆ ॥ ೨ ॥

## ದೃಶ್ಯ : ನದೀತೀರ - ನಾರದನ ಪ್ರವೇಶ

**ನಾರದ : ಹಾಡು** **ರಾಗ : ಬೇಹಾಗ್ - ಆದಿತಾಳ**

ಇಂದುಕಳಾಭಾ ನಂದಕರ ಶ್ರೀ । ಮಂದಹಸನಮುಖ ಗೋವಿಂದ ॥ ಪ ॥
ನಂದಕುಮಾರ ಬಂಧನಿವಾರ । ಸಿಂಧುಶಯನ ನತಮಂದಾರ ॥ ಅ.ಪ. ॥
ಪೂತನಿಮುಖ ಬಹು ಪಾತಕಿದಮನ ।
ಭೀತಿನಿವಾರಣ ಘನಕರುಣ ॥
ಖ್ಯಾತಿ ವಿಶಾಲ ಘನಸಮನೀಲ ।
ಗೀತವಿಲೋಲ ಗೋಪಾಲ ॥ ೧ ॥

### (ಮನ್ಮಥ - ರಂಬೆ ಊರ್ವಸಿಯರ ಯುಗಳ ಗೀತೆ)

**ರಾಗ : ಮೋಹನ - ಆದಿತಾಳ**

**ಮನ್ಮಥ :** ಮನೋಜಶರಗಳ ಬೀರಲು ಮನಮುದಿರದೆ ಘನ ।
ಮುನಿವರನಿರುವನೆ ॥ ಪ ॥
ಸುಂದರೀಕಟಾಕ್ಷಕಿರಜಾಸ್ತ್ರಜಾಲ ಬೀರಿ ಮೀರಿ ।
ಆದರಿಸಿ ಮತಿಯ ಚದರಿಸಿ
ಧೃತಿಯ ಮುದದೆ ಬಲೆಗೆ ನವ । ವಿಧದೊಳು ಕೆಡಹುವೆ ॥ ೧ ॥

**ರಂಬೆ, ಊರ್ವಸಿ :** ಮಾರನಿನ್ನದಯದಿ । ನಾರಿ ಲೀಲೆತೋರಿ ಮೀರಿ ॥
ನಾರದಮುನಿಗೆ ಮೀರಿದ ಮುದದಿ
ತಪಮನಿಳಿದು ಮಿಗೆ । ಚಪಲತೆಜನಿಪೆವು ॥ ೨ ॥

**ನಾರದ : ಹಾಡು** **ರಾಗ : ನೋಟ್ - ಅಟ್ಟತಾಳ**

ಏನು ವಿನೋದವೀನರ್ತನಗಾನ ॥ ಈ ನವನಾರಿಯೊಳೆನ್ನಭಿಮಾನ ॥ ಪ ॥
ಮಾನಿನಿಯಲ್ಲಾದುದೆನ್ನ ಯಧ್ಯಾನ । ಸಾನುರಾಗವಿದಾದುದೆನ್ನ ಯಜ್ಞಾನ ॥ ಅ ॥
ಶ್ರೀಹರಿಧ್ಯಾನವದಾರಿಗೆ ಬೇಕು । ಮೋಹಿನಿಯರಲೀಲೆಯಿದ್ದರೆ ಸಾಕು ॥ ೧ ॥
ಚಪಲೆಯನಾಮವೆ ಜಪವಾದುದಿಂದು । ತಪವದು ತರುಣಿಯ ನೆಪದಲ್ಲಿ ನಿಂದು
ವಿಪುಲವಿಲಾಸವನೊಂದಲು ಮುಂದು । ಸಫಲನಾನಾಗುವೆ ನಿಲ್ಲಿಗೆ ಬಂದು ॥ ೨ ॥

**ನಾರದ : ಹಾಡು** ರಾಗ : ಸಾರಂಗ - ಆದಿತಾಳ

ಸಾರಸಮುಖಿಯರೆ । ಸಾರುವಿರೇಕೆ ॥ ಪ ॥
ಸಾರವಿನೋದವ ಬೀರುತಲಿರದೆ ॥ ಅ.ಪ. ॥
ಅಭಿನಯನಾಟ್ಯದ ವಿಭವವತೋರುತೆ ।
ಶುಭವನು ಬೀರದೆ । ಸುಂದರಿಯರೆ ನೀಂ ॥ ೧ ॥
ಪರಿಪರಿವಿಧದಪ ಹರಿಸುತೆಮನವನು
ತೆರೆಳುವಿರೇತಕೆ । ಸುರನಾರಿಯರೇ ॥ ೨ ॥

## ದೃಶ್ಯ : ಶ್ರೀಕೃಷ್ಣಸತ್ಯಭಾಮೆಯರ ಅರಮನೆ

**ಸತ್ಯಭಾಮೆ : ಹಾಡು** ರಾಗ : ಶಂಕರಾಭರಣ - ರೂಪಕತಾಳ

ಹರುಷಮಾಂತೆನಾಂ । ಪ್ರಾಣನಾಯಕ ॥
ವರಶುಭಾಕರವಾರಿಜಾತ ದಿವ್ಯತರುವನು ।
ನೆರೆಪಡೆಯುತೆ ಬಲು ॥ ಪ ॥
ನಾರದನಂದೈತಂದು ನಾರಿಜಾಲದೊಳೆನ್ನ ।
ಜರಿದಿರೆತಾನಾರೀತಿಯೊ । ಳುರೆಮರುಗಿದೆನಾಂ ॥
ಮಾರಿ ಕೋಪವೇರಿ ನಾರುತಲಿ ಸುರಪತಿಯುನು ।
ಪರಿಭವಿಸುತೆ ಸುರಕುಜವನು ನೆರೆತಂದಿರೆ ॥ ೧ ॥

**ನಾರದ : ಹಾಡು** ರಾಗ : ಬೇಹಾಗ್ - ಆದಿತಾಳ

ಸಂತಸ ಮಾಂತೆನು ಸರೋಜಲೋಚನ ॥ ಪ ॥
ಚಿಂತಾನಿವಾರಣೆ । ಯಾಂತುಮುರಹರ ॥ ಅ.ಪ. ॥
ಮನದಭಿಲಾಷೆಯ । ನೆನಗುರೆಸಲಿಸದೆ ॥
ಘನಕರುಣಾಕರ । ಗಾನಪ್ರಿಯ ಹರೀ ॥ ೧ ॥
ಕಾಮವಿತರಣಾ । ಭಾಮಾರಮಣಾ ॥
ಪ್ರೇಮನಿಧಾನ ನಿ । ರಾಮಯಸುಗುಣ ॥ ೨ ॥

## ದೃಶ್ಯ : ದ್ವಾರಕಾನಗರದ ಬೀದಿ

ಮಕರಂದ : ಹಾಡು                                        ರಾಗ : ನೋಟ್ - ಅಟ್ಟತಾಳ / ಚಾಪು

ಮುನಿನಾಥರೆ ನೋಡಿರಿ । ಕೌತುಕಮಿಾವ ನಿ ।
ಕೇತನರಾಜಿಯ । ನೀತೆರದಿ ॥ ಪ ॥
ಕಾತರನೇತ್ರೆಯ - ರೀತೆರದಿರುವರೊ ॥
ಮಾತನಾಡಿಸಿ ನೀ । ವಾತುರದಿ ॥ ಅ.ಪ. ॥
ಹೊಂಬಣ್ಣದಿರುವುದು - ಜಾಂಬವತಿಯಮನೆ ।
ಕಂಬಗಳಿಹುದು ರತ್ನಾಂಬೆ ಮನೆ ॥
ಬೊಂಬೆಗಳಿರುವುದು - ಬಿಂಬಾಧರೆಯಮನೆ ।
ಕೆಂಬಣ್ಣದಿಹುದು ಪದ್ಮಾಂಬೆಮನೆ ॥ ೧ ॥
ಮೌನಿಗಳಿಗೆ ಪರಮಾನಂದಮೆಸಗುವ ।
ಗಾನಮೋಹಿನಿಯರ ಮನೆಗಳಿವು ॥
ಜ್ಞಾನಿಗಳನು ಸನ್ಮಾನಿಸಿ ಸೇವಿಪ । ಮಾನಿನಿ ಲೀಲಾವತಿಯ ಮನೆಯು ॥ ೨ ॥
ಅರಮನೆ ಯಿದನೋಡಿ ಸೆರೆಮನೆಯಿದನೋಡಿ । ಕಿರುಮನೆಯದು ನೋಡಿ
ನೆರೆಮನೆಯು ॥ ವರಮೌನಿಗಳೆ ನೋಡಿ । ಹರುಷದಿ ನಲಿದಾಡಿ ॥
ತರುಣೀಮಣಿಯ ಕೂಡಿ ಕುಣಿದಾಡಿ ॥ ೩ ॥

## ದೃಶ್ಯ : ಉಪವನ
## (ಕೃಷ್ಣರುಕ್ಮಿಣಿ ಯುಗಳ ಗೀತೆ)

ರಾಗ : ಜಂಜೂಟಿ - ಆದಿತಾಳ

ಕೃಷ್ಣ, ರುಕ್ಮಿಣಿ : ಎಂತಿಹುದೀವನವು - ಸ್ವಾಂತದೊಳಮಿತ ।
ಸಂತಸವುದಿಸೆ । ಶಾಂತಿಯು ಪಸರಿಸಲಿಂ ॥ ಪ ॥
ಸಾರಕುಸುಮದಾ ಸೌರಭವನು ನೆರೆ ।
ಬೀರಿಸುಳಿವ ಮೃದು ಮಾರುತನೆಸೆದಿರಲಿಂ ॥ ಅ.ಪ. ॥

ರುಕ್ಮಿಣಿ : , ಕೀರಶಾರಿಕಾ ವಾರದ ಕಲಕಲ ।
ಮರೆಯೆ ಮಧುಪಝೇಂ ಕಾರಗಳೆಸೆದಿಗಲಿಂ ॥ ೧ ॥

**ಕೃಷ್ಣ :** ತರಳಾಕ್ಷಿನೋಡು ಹರಿಣಂಗಳೆಲ್ಲ ।
ನೆರೆನೋಟವನ್ನು ಕಲಿಯಲ್ ॥ ಸಾರಿ ಬಂದು - ನೀರಲೆಂದು
ನೀರೆನಿನ್ನ । ಓರೆನೋಟ - ನಿರುಕಿಸಿ ನಲಿವವು ॥ ೧ ॥

**ರುಕ್ಮಿಣಿ :** ನವಿಲಾಟವಿಂದು ಸವಿನೋಟ ಮಾಗಿ ।
ತವೆ ಮೋದ ಮೀಯೆಮನಕೆ ॥
ಶ್ರೀವಿಲಾಸ ಭಾಸವೆನಿಸಿ ಭಾವಭವನ ವನದ ತೆರದಿ
ನವವಿಧ ವಿಭವದೊಳಿಂ ॥ ೨ ॥

**ಕೃಷ್ಣ : ಕಂದ**

ಶುಕವಾಣಿ ಹಂಸಗಾಮಿನಿ ।
ಸುಕುರಂಗಾಲೋಕೆ ಪಲ್ಲವಾಧರೆ ಮಧುವಾ ॥
ಲಕೆ ಕುಂದರದನೆ ನಿನ್ನೊಳ್ ।
ಪ್ರಕಟಿತ ಮಾರ್ಗಪ್ರದಲ್ತೆ ಈ ವನದಂದಂ ॥

**ಕೃಷ್ಣ : ಸೀಸಪದ್ಯ ಮತ್ತು ಗೀತ**

ಜಲಜಾಕ್ಷಿ ಕೇಳು ಕೋಸಲದೇಶಕರ ನಾಗಿ ದಶರಥಾಂಕಿತ ರಾಜಸಿಂಗನಂದು ॥
ಪುತ್ರಕಾಮೇಷ್ಟಿಯಿಂ ಪುತ್ರರನು ನಾಲ್ವರನು ಪಡೆದನಾನಂದದಿಂ ನುತರು
ಯರೊಳು ॥ ಪಿರಿಯನವರೊಳು ರಾಮ ವಿರಾಮ ಕರುಣಾಧಾಮ
ಜನಕವಂಶ ಲಲಾಮ ದನುಜ ಭೀಮ । ಮುನಿಯಜ್ಞವನು
ಕಾಯ್ದು ಮುನಿಸತಿಯ ತಾಂ ಪೊರೆದು ನಡೆದನು ಸೌಮಿತ್ರಿ
ಸಹಿತಬಂದು ॥

**ಕೃಷ್ಣ : ಗೀತ॥**

ಮಿಥಿಲೆಯೊಳು ವರಭೂಮಿಪತಿ ಜನಕನಿಟ್ಟ ।
ಶಿತಿಕಂಠಚಾಪವನೆ ಶಿಥಿಲಮೆಸಗುತಲಿ ॥
ಕ್ಷಿತಿಜಾತೆಯನು ವರಿಸಿ ಹಿತದೆ ನಿಜಪುರಿಗೆ ।
ಮಿತಮುದದಿಂದ ಬಂದನ ತುಳು ಶುಭಚರಿತ ॥

ರುಕ್ಮಿಣಿ : ಹಾಡು　　　　ರಾಗ : ಬೇಹಾಗ್ - ಆದಿತಾಳ

ಘನಮೋದಾಕಾರವು ನಿರುಕಿಸೆ । ವನವು ಮನೋಹರವು ॥ ಪ ॥
ಲೀಲೆಯೊಳಾಡುವ ಬಾಲಹರಿಣಗಳ । ಸಾಲೋಕಿಸಲಾನಂದವು ॥
ಮೇಲೆನೆಪೀಮೃಗ ಜಾಲಕೆ ಮನಪಿದು । ಸೋಲುವುದಿಂದಮಮಾ ॥ ೧ ॥

ನಾರದ : ಹಾಡು　　　　ರಾಗ : ಜಂಜೂಟಿ - ಆದಿತಾಳ

ಸಂತಸವನು ನಾ । ನಾಂತೆನು ದೇವೀ ॥ ಪ ॥
ಶಾಂತಗೊಳಿಸು ನನ್ನ ಸ್ವಾಂತವನರಸೀ
ಅರಸಿಯೆ ನಿನ್ನ ನರಸುತೆ ವನದಿ ।
ತಿರುಗುತೆ ಬಂದೆನಾಂ ಕರುಣಿಪುದೆನ್ನ ॥ ೧ ॥

## ದೃಶ್ಯ : ಉದ್ಯಾನಕ್ಕೆ ಹೋಗುವ ಮಾರ್ಗ

ಬಲರಾಮ : ಕಂದ

ಬಿಡುವೆಂ ಶರಜಾಲವನಾಂ ।
ಕಡಿದಿಡುವೆಂ ಪೊಡವಿಗಿಂದು ಖಳರಾವಣನಂ ॥
ಸುಡುವೆಂ ರಾಕ್ಷಸ ವಂಶವ ।
ಪಡೆವೆಂ ದಿಕ್ತಟವಿರಾಜಿತಾಮಳಯಶಮಂ ॥

ಬಲರಾಮ : ಹಾಡು　　　　ರಾಗ : ಹಂಸಧ್ವನಿ - ಆದಿತಾಳ

ಮದಾಂಧ ರಾವಣಾಸುರಂಗದೆಷ್ಟು ಪೌರುಷಂ ॥ ಪ ॥
ವಧಾರ್ಹನಂ ಕ್ಷಣಾರ್ಧದೊಳ್ । ಮೊದಲ್ ವಿದಾರಿಪೆ ॥ ಅ.ಪ. ॥
ಈ ಹಲಾಯುಧಾಗ್ರಹದಿಂದ । ದ್ರೋಹಿದೈತ್ಯನ ॥ ಮ ।
ಹಾಹವಾಗ್ರದಲ್ಲಿ ಕೊಲ್ವೆ । ಸಾಹಸಾಂಕನಾಂ ।
ದುರಾತ್ಮ ನೆನ್ನ ಕೈಗೆ ಸಿಕ್ಕಿ ಧೂಳಿಯಾಗುವ ॥ ೧ ॥

## ದೃಶ್ಯ : ಉಪವನದ ಶಿಲಾಮಂಟಪದ ಮುಂದೆ

**ಬಲರಾಮ : ಹಾಡು**

**ರಾಗ : ಹಂಸಧ್ವನಿ - ಝಂಪೆತಾಳ**

ದುರಾತ್ಮನೆನಿಪ ದಶವದನನ ಶಿರವ ತರಿದು ಕೆಡಹುವಿ - ಕ್ಷಣಾರ್ಧ ದಿ ॥ ಪ ॥
ಸುರಮುನಿವನ ತೆರದೊಳು ಮಿಗೆ ಬರುತೆ ಕಾಮರೂಪದಿ ॥
ವಿರೋಧಮೆನಗಿತರುಣಿಯ ವಲ । ತೆರೆದೆ ಬಾಧಿಸಿರ್ವ ಈ ॥ ೧ ॥
ಹಲಧರನತಿ ಬಲಯುತನೆನು । ತೆಳಸದಿಂದು ಗರ್ವ ದಿ ॥
ಕುಲಾಂಗನೆಯನು ಬಳಸಿದನ । ಕುಲವ ಸುಡುವೆನೀಕ್ಷಣ ॥ ೨ ॥

### ಮಂಗಳ

**ರಾಗ : ಸುರುಟಿ**

ಜಯ ರುಕ್ಮಿಣೀ ಮನೋಹರ । ಜಯಜಾಂಬವತೀಪ್ರಮೋದದಾಯಕ ಲೀಲಾ॥
ಜಯಸತ್ಯಭಾಮೆಯರಸಾ । ಜಯ ದಿವಿಜ ಮುನೀಂದ್ರಬಾಲ ವಂದಿತಕೃಷ್ಣಾ ॥



# ಧರ್ಮರಾಜ ರಾಜಸೂಯಯಾಗ



ಅಸ್ಥಾನ ವಿದ್ವಾನ್
**ನಂಜನಗೂಡು ಶ್ರೀಕಂಠ ಶಾಸ್ತ್ರಿಗಳು**

ಪ್ರಾರ್ಥನೆ : ಹಾಡು ರಾಗ : ಸಾರಂಗ - ಆದಿತಾಳ

ನಮಿಪೆ ಸಿರಿವರ ಜಗದೋದ್ಧಾರ
ಸುಮನೋಹಾರ ಶ್ಯಾಮಲಗಾತ್ರ ॥ ಪ ॥
ಸಲೆ ಕರಿರಾಜನ ಕಳವಳಭಾವಕೆ
ಒಲಿದು ನೀ ಬಂದೆ ನಲಿದು ಸಲಹಿದೆ ॥ ಅ.ಪ. ॥
ಇಂಥಾ ಮಹಿಮಾದ್ಯಂತ ಗುಣಂಗಳ
ಸಂತತ ಸ್ಮರಿಪೆ ಕಂತುಜನಕನೆ ॥ ೧ ॥

## ದೃಶ್ಯ : ರಸ್ತೆ

ಸೂತ್ರಧಾರ : ವೃತ್ತ॥ ರಾಗ : ನಾಟಿ

ಆರಂ ಕೃತಿತಿದಾದಿಬಿಂ ಜಿತಜಿಂ ಸೃಷ್ಟಿಕ್ರಿಯಾದಕ್ಷನೋ ।
ಶ್ರೀ ರಾತ್ಮಗ ಮಧ್ಯ ಸುಪ್ತಹರಿಯುಂ ತ್ರೈಲೋಕ್ಯ ರಕ್ಷಾಕ್ರಿಯಾ ॥
ಧೀರಂ ಗ್ರೀಶನನೋ, ಕಪಾಲಧರನುಂ ಸರ್ವಜ್ಞನೋ ಸ್ವಾಟುವಾಗ ।
ರಾಗಾಂಬುಜಾಯುಕ್ತರುರ್ ಸಲವುಗಾ ವಾಣೀಂದಗಾ ಗೌರಿಯುರ್ ॥ ೧ ॥

ಸೂತ್ರಧಾರ : ಹಾಡು ರಾಗ : ಕಲ್ಯಾಣಿ - ಆದಿತಾಳ

ನಗೇಂದ್ರಲಲಿತೇ । ಸುರವರಗೀತೇ । ಶೈಲಜಾತೇ । ಕೃಪಾಲುಹಿತೇ । ವಿಖ್ಯಾತೇ ॥ ಪ ॥
ಸೀಮಾತೀತ । ಪ್ರೇಮಾಸ್ಪಿತೆ ಹಿತೇ । ವಿತತೋತ್ಸವಜಾತೇ । ಸುವಿನೀತೇ ॥ ಅ.ಪ. ॥

ಭೂಮಿಪ ಕೃಷ್ಣಾ । ಚಿತ್ತವಾದಕಮಲೇ । ಸಾಮಗಾನಲೋಲೇ । ಶ್ರೀ ಬಾಲೇ ।
ಕಾಮಿತ ವರದಾನ ಶೀಲೇ ನಿರಾಕುಲೇ । ಕಾರುಣ್ಯ ವಿಶಾಲೇ ಮಹಾಪ್ರೋಲೇ ॥೧॥

**ಸೂತ್ರಧಾರ : ಹಾಡು** **ರಾಗ : ವಿಜಯನಾಗರಿ - ಆದಿತಾಳ**

ವಿಜಯಾಂಬಿಕೆ ವಿಮಲಾತ್ಮಿಕೆ ॥ ಪ ॥
ಅಜವಂದಿತೆ ಅಮರೇಂದ್ರನುತೆ
ನಿಜಭಕ್ತಹಿತೆ ನಿಗಮಾಂತರ್ಗತೆ ॥ ಅ.ಪ. ॥
ಶೃತಿ ಸ್ವರ ಗ್ರಾಮ ಮೂರ್ಛನಾಲಂಕಾರೆ
ನಾದಜನಿತರಾಗ ರಸಭರಿತಸಂ
ಗೀತರೂಪಿಣಿ ಗೌರಿಪಾಲಿಸೌ ಮಾತೆ ಹರಿಕೇಶಮನಮೋಹಿನಿ ॥ ೧ ॥

## ದೃಶ್ಯ : ಧರ್ಮರಾಯನ ಆಸ್ಥಾನ

**ವೈತಾಳಿಕರು : ಹಾಡು** **ರಾಗ : ಸಾರಂಗ - ಆದಿತಾಳ**

ವೀರಸುಜನತಾಧಾರಗಭೀರ ॥ ಪ ॥
ಸರಳಹೃದಯಗುಣ । ಭರಿತ ಮಹೋದಯ ॥ ಅ.ಪ. ॥
ಧೀರ ಮಹಾದರಧರ್ಮಜಶೂರಾ । ವರಬಲ ನಾನಾರವಿತೇಜ ।
ಪರಮಪುರುಷ ನುತಿನಿರ್ಭರ ಭೂವರ ॥ ೧ ॥
ಖ್ಯಾತಸಮಾಶ್ರಿತಮನೋಸಿವಾಜಾತ । ಧರಣೀವನಿತಾ ಕೀರ್ತಿ ಸಮೇತ ॥
ಸತತರಚಿತಹರಿ ಕೀರ್ತನಮೋದಿತ ॥ ೨ ॥

**ಧರ್ಮರಾಯ : ಹಾಡು** **ರಾಗ : ಜಂಜೂಟಿ - ರೂಪಕತಾಳ**

ಆಲಿಸಿರೀ ಎನ್ನ ನುಡಿಯ ಸಕಲ ಸೋದರರೇ
ಪಾಲಿಸಲ್ಕೆ ಆಶಿಸುವೆ ಎನ್ನ ವಚನವಾ ॥ ಪ ॥
ಬಂಧುಗಳನು ಕೊಂದ ಕಾರಣ
ದಿಂದ ಪಾಪವು ಬಂದಿಹುದು ನಮಗೆ
ಅದರಿಂಕುಂದು ತಪ್ಪದೈ ॥ ೧ ॥
ಕೃತುವ ಮಾಡಲಿಚ್ಛಿಸಿದೆನು

ಹಿತದಿ ಕೇಳಿರಿ ಪತಿತರಾಗದಂತೆ ನಾವು
ಸದ್ಗತಿಯ ಪಡೆಯುವ ॥ ೨ ॥

**ನಾರದ : ಹಾಡು** **ರಾಗ : ಮಾಂಡ್ - ಆದಿತಾಳ**

ಕಾಮಿತಾರ್ಥಕರ । ಕಾಮಜನಕಹರಿ ॥ ಪ ॥
ಕಮಲಾರಮಣ । ಕಾವುದು ನೀನೇ । ನೀನೆಗತೀ ನಿತ್ಯಸುಖದಹರಿ ॥ ೧ ॥
ಮಧು ದೈತ್ಯಹರಾ । ನಂದಕುಮಾರಾ । ಪ್ರೀತಿಪರಾ । ಧೀರಸುಕರಹರಿ ॥ ೨ ॥

**ನಾರದ : ಹಾಡು** **ರಾಗ : ಅಭೇರಿ - ಆದಿತಾಳ**

ಗೋವರ್ಧನ ಗಿರಿಧಾರಿ ಶ್ರೀಹರಿ
ಯಮುನಾತೀರ ವಿಹಾರಿ ಶೌರಿ ॥ ಪ ॥
ಶಂಖಚಕ್ರ ಪೀತಾಂಬರಧಾರಿ
ಕರುಣಾಕರ ಶೇಷಾದ್ರಿ ವಿಹಾರಿ ॥ ಅ.ಪ. ॥
ಜಯ ಜಯ ವೆಂಕಟರಮಣ ಮುರಾರಿ
ಜಯ ಜಯ ಪದ್ಮರಮಣ ನರಹರಿ
ಜಯ ಜಯ ಪಾತಕ ಹರಣಾ ಶೌರಿ
ಜಯ ಜಯ ಮುನಿಜನ ಮನೋವಿಹಾರಿ ॥ ೧ ॥

**ನಾರದ : ಕಂದ**

ಧರ್ಮಂ ನೀಂ ಕುಂತೀಸುತ ।
ಧರ್ಮಂ ನಿನ್ನಾಳ್ಕೆ ನಿನ್ನೊಳೆಸೆಗುಂ ಧರ್ಮಂ ॥
ಧರ್ಮಂ ನಿನ್ನಯ ನಡೆನುಡಿ ।
ಧರ್ಮಂ ಮೈದೋರಿ ಭಳಿರೆ ಮೆರೆದಪುದೆತ್ತಂ ॥

**ಅರ್ಜುನ : ಹಾಡು** **ರಾಗ : ಬಿಲಹರಿ - ......**

ಮಾನವೇಂದ್ರನೆ । ಈ ಅನುಮಾನವೇತಕೆ ।
ದಾನವಾರಿಯಾ । ನೆನೆಮನದೆಬೇಗ ॥ ಪ ॥

ನಾನುರಾಗದೆ । ಸಾರಸಾಕ್ಷನೀಗ । ನಾರಿ ನಿನ್ನನೈದೆ । ಸಂತಸಂಗಳಿವ ॥ ಅ.ಪ. ॥
ದೇವದೇವ ವಾಸು । ದೇವನೊಲುಮೆಯ
ಭಾವದಿಂದೆ ನಮ್ಮ । ಕಾವನಾವಗಮುಂ ॥
ಭೂವಧೂವರ । ಭುವನ ಮುಖ್ಯವೀರ ।
ಸಾವಧಾನನಾಗೈ । ಸಜ್ಜನಾಗ್ರಗಣ್ಯ ॥

**ಅರ್ಜುನ : ಕಂದ**

ಎಳೆಗರುವಿನ ಕೂಗಂ ಕೇ ।
ಳ್ದಳಿಯುತೆ ಮುಂದಿರ್ಪಮೇವನಾ ತಾಯಾಕಳ್ ॥
ಘಳಿಲನೆ ಸಾರ್ತರ್ಪವೊಲಾ ।
ನಳಿನಾಕ್ಷಂ ಬಾರದಿರ್ಪನೆಈಂ ನೀಂ ಕರೆಯಲ್ ॥

**ಧರ್ಮರಾಯ : ಹಾಡು** **ರಾಗ : ಮಾಂಡ್ - ಆದಿತಾಳ**

ಪಾಹಿ ದಾನವಹರಣಾ । ಹರೇ । ದೇಹಿಮೇಬೀಷ್ಟಮನಿತಂಹರೆ ॥
ಸೋಮಕಭಂಜನ । ನಿರ್ಜರಾನಂದನ । ಪ್ರೇಮ ಸಂಪೂರ್ಣ ಚೇತನ । ಹರೇ ॥

**ಕೃಷ್ಣ : ಹಾಡು** **ರಾಗ : ನಾಟಿಕುರಂಜಿ**

ಮನೋಭೀಷ್ಟವದೇಂ ನುಡೀ । ಜನೇಶ ಕುಲಶಿರೋಮಣಿ ॥ ಪ ॥
ಅನಾರತಂ । ವಿನೋದದೊಳು । ವಿಶೇಷದಿಂದ । ಮನಂಗೊಡದೆ ॥ ಅ.ಪ. ॥
ಧರಿತ್ರಿಯೊಳು । ಧರಾಧಿಪರು । ಧನಾದಿಗಳ । ಕರಂಬಯಸಿ ।
ನಿರಂತರಂ । ದುರಾಶೆಯೊಳು । ಮುಳುಂಗುವೊಲ್ । ನಯಂ ಗಡದೆ ॥

**ನಾರದ : ಹಾಡು** **ರಾಗ : ಹಿಂದೂಸ್ಥಾನಿತೋಡಿ - ರೂಪಕತಾಳ**

ದೇವದೇವದಿವ್ಯಭಾವ । ಭುವನವಂದಿತ ಗೋಪಾಲ ಮಾಧವ ॥
ಕಾರಣ ನೀನೆ । ಕಾರ್ಯ ನೀನೆ । ಕಾವನು ನೀನೆ । ಕಾಮ ಜನಕ ॥
ನೀನೆ ಸಾಧುಮಿತ್ರಾ । ನೀನೆ ಲೋಕನೇತ್ರಾ ।
ನೀನೆ ಮುಕ್ತಿಗೆ ವಿಜ್ಞಾನ ನೀನೆ ಭಕ್ತಜನಕಧೀನ ॥

**ಧರ್ಮರಾಯ : ಹಾಡು** **ರಾಗ : ಸಾರಮತಿ - ಆದಿತಾಳ**

ಬಾಲರನಿವರಂ । ಖಳನಾಬಳಿಗೇ । ಕಾಳಗಕೆಂತಾಂ । ಕಳುಹುವೇ ॥ ಪ ॥
ಲೀಲಾಜಾಲವೇ । ನೀಂ ಪೇಳು । ಶ್ರೀಲಕ್ಷ್ಮೀಕಾಂತ ॥ ಸುಧೀಮಹಿತಾ ॥ ಅ ಪ. ॥
ಮುಂದೇಂಗತಿಯೋ । ತೋರಗದು ಮನಕೇ । ಮುದದೆ ಕಾವುದು ಶೌರಿ ।
ನತಸುಖಕಾರೀ । ಬೃಂದಾರಕವರ । ವಂದಿತ ಗಿರಿಧರ । ದುಂದುಗವಳಿಸು
ನಂದ ಗೋಪತನಯಾ ॥

**ಭೀಮ : ಕಂದ**

ಎನ್ನಯ ಬಾಹುಬಲಮೆಂ ।
ಬುನ್ನತ ಮಾದಗ್ನಿಗಾ ಜರಾಸಂಧನನಾಂ ॥
ಚೆನ್ನನೆ ಪಶುವಾಗಿಸುವೆಂ ।
ನನ್ನಿಯಿದಿನ್ನೇಕೆ ಬರಿದೆ ಚಿಂತಿಪೆನೋಡೈ ॥

**ಅರ್ಜುನ : ಕಂದ**

ಸಿರಿಯಿಂದೇಂ ? ಕುಲದಿಂದೇಂ ?
ವರರೂಪದಿನೇಂ ಫಲಂ ? ವಿಭಾವಿಸೆ ಶವಕಾ ॥
ಭರಣಮನಿಟ್ಟವೊಲೆಲ್ಲಂ ।
ಬರಿದಕ್ಕುಂ ಶೌರ್ಯಮಿರದೊಡಿದನರಿಯಾನೀಂ ॥

**ಕೃಷ್ಣ : ಹಾಡು** **ರಾಗ : ಭಾಗೇಶ್ವರಿ - ಝುಂಪೆತಾಳ**

ನೀನೇಕೆ ಚಿಂತಿಸುವೆ । ಭೂನಾಥ ಬೇಡಬಿಡು ।
ನಾನಿರ್ಪ ಯಾಗವನು ರಚಿಸೈ ಈಗ ॥ ಪ ॥
ನಿನ್ನಂತೆ ಧಾತ್ರಿಯೊಳು । ಮುನ್ನಾರೊ ಸಾಸಿಗಳು ।
ಇನ್ನೇಕೆ ಚಿಂತಿಸುವೆ ನರಪಾಲ ॥ ೧ ॥
ತನುಬೇರೆ ಯೋಚಿಸಲು । ಮನವೊಂದೆ ಭಾವಿಸಲು ।
ಅನುಮಾನವೇಕೆ ನೃಪ ನಿನಗೇ ಈಗ ॥
ಕ್ಷೋಣೀಶನೀವೆಗಡ । ಪ್ರಾಣಂಗಳಾರಯಲು ।
ಮಾಣೀಗ ಸಂಶಯವಜನಪಾಲಾ ॥ ೨ ॥

**ದ್ರೌಪದಿ : ಹಾಡು** **ರಾಗ : ಬೃಂದಾವನ ಸಾರಂಗ - ಆದಿತಾಳ**

ಸುಜನಜೀವನಾ । ಪಾವನಾ । ನತ ॥ ಪ ॥
ಸುಖಸದನ । ಸುರವರಮೋಹನ ನತ ॥ ಅ.ಪ. ॥
ಯದುಕುಲತಿಲಕ । ಯಮಿಜನಪಾಲಕ ।
ಮಂದಹಸಿತ ಮುಖ । ಕಿರೀಟಿವರಸಖ
ಪದನತವೇದ ಮುರಳೀಹಿತಕರ ।
ನಾದವೊನೋದ । ನತ ॥ ೧ ॥

**ಧರ್ಮರಾಯ : ಹಾಡು** **ರಾಗ : ಜಂಜೂಟಿ - ಛಾಪುತಾಳ**

ಪೋಗಿಬನ್ನಿ ಹರಿಯೊಡನೆ । ನೀವ್ ॥ ಪ ॥
ಬಾಗುತೆ ಶಿರವ । ಬಾಲರೆ ಗುರುವಿಧೇಯರಾಗಿ ಬಾಳಿ ॥ ಅ.ಪ. ॥
ಪರಧನ ಪರಸತಿ । ಪರಗೃಹದಾಸೆಯ । ತೊರೆದು ಸರಳ ಹೃದಯರಾಗಿ ।
ಬಾಳಿರಿ ನಿಮಗೆ ದನುಜಹರನೆ । ಸಕಲಜೀವದೇವ ॥ ೧ ॥

**ದೃಶ್ಯ : ರಸ್ತೆ - ನಾರದನ ಪ್ರವೇಶ**

**ನಾರದ : ಹಾಡು** **ರಾಗ : ಹಂಸಾನಂದಿ - ಆದಿತಾಳ**

ಜಯ ಜಯ ಯಮುನಾ । ತೀರವಿಹಾರ ।
ಜಯ ಜಯ ಸುಂದರ । ನಂದಕುಮಾರಾ । ನೀಲಮೇಘರುಚಿರಾ ॥ ಪ ॥
ಕಮಲಾರಮಣಾ । ವಿಮಲಾಭರಣಾ । ಅಮರಗಣಾಶ್ರಯ ।
ಶಮಿತಮಹಾಭಯ । ಪಾಲಯ ಮೃದುಹೃದಯಾ ॥ ಅ.ಪ. ॥

**ನಾರದ : ಹಾಡು** **ರಾಗ : .......**

ದಾನವದರ್ಪಹಾರಿ । ಗಿರಿಧಾರೀ । ಶ್ರೀಹರೀ ॥ ಪ ॥
ರಾಸವಿಹಾರಿ । ರಾಕ್ಷಸವೈರೀ । ಸುಖಲಹರೀ ।
ಹಿತಕಾರೀ । ಪೊರೆ ಶೌರೀ । ಶ್ರೀಹರೀ ॥ ಅ.ಪ. ॥
ನಿರ್ಗುಣ ನಿರ್ಮಲ । ನೀರದನೀಲ । ಬಹುಕುಶಲ
ಯದುಬಾಲ । ಗೋಪಾಲ । ಕೋಮಲ ॥ ೧ ॥

## ದೃಶ್ಯ : ರಸ್ತೆ - ಜರಾಸಂಧನ ಕಂಚುಕಿ ಪ್ರವೇಶ

**ಕಂಚುಕಿ : ಹಾಡು** **ರಾಗ : ನಾದನಾಮಕ್ರಿಯೆ - ಆದಿತಾಳ**

ಅಳಿಯೆನು । ಉಳಿಯೆನು । ಪಲದಿನ । ಕಳೆದೆನು ।
ಅಳುವೆನು । ಮುಳಿವೆನು । ತೊಳಲುವೆನು ॥ ಪ ॥
ಒಡಯಗೆ ಸಡಗರ । ಬಡವಗೆ । ಬಳಲಿಕೆ । ಪೊಡೆಮುಡೆ ।
ಫಡ ಫಡ । ಮಿಡುಕುವೆನು । ಫಡ । ಏಕೀಬಾಳು ಛಿ ॥ ಅ.ಪ. ॥
ಮೊದಲೊಳು ತುಂಬದೀ ಹೊಟ್ಟೆ । ಹೊದೆಯಲು ಜೀರ್ಣವೀ ಬಟ್ಟೆ ।
ಮುದಿತನದಿಂದೆ ನಾ ಕೆಟ್ಟೆ । ಮನೆಯೊಳು । ಮಡದಿ ಬಲುದಿಟ್ಟೆ ।
ಬಾಳೆಲ್ಲ ಇಷ್ಟೆ । ಬರಿ ಹರಟೆ । ಎಲ್ಲೆಲ್ಲೂ ಬರಿಹರಟೆ ॥

**ಅರ್ಜುನ : ಹಾಡು** **ರಾಗ : ಷಣ್ಮುಗಪ್ರಿಯ - ಆದಿತಾಳ**

ನೀನೊಲಿಯೇ । ಏನಾಗದಂಬುಜಾಕ್ಷ ।
ಮುನಿಕುಲಾನಂದ । ಭಾಗ್ಯಕಂದ । ಶ್ರೀಮುಕುಂದ ॥ ಪ ॥
ಇನ್ನೆಮಗೇ । ಎಣೆಯಾರೂ । ಕಾಣೆದೇವ । ಧುರದೊಳು ಗೆಲ್ವೆವು ।
ದುರುಳನ ಕೊಲ್ವೆವು ತೀರಿತು ವೈರಿಯಾಟವೀಗ । ಘನವೇನೊದೇವ ॥ ಅ.ಪ. ॥

### (ಕೃಷ್ಣ - ಜರಾಸಂಧರ ದ್ವಂದ್ವಗೀತೆ)

**ರಾಗ : ಶಂಕರಾಭರಣ - ಆದಿತಾಳ**

ಕೃಷ್ಣ : ಛೀಛೀಪೊರ । ತೊಲಗೋದೂರ । ಛೀಛೀಕಠೋರ ।
ಜರಾ : ಛೀಛೀಮುಕ್ಕ । ಏಕೀದುಕ್ಕ । ತಡೆತಡೆಮುರಿವೆನು ನಿನ್ನೀ ಸೊಕ್ಕ ॥
ಕೃಷ್ಣ : ಖುಲ್ಲನೆ ಬಿಡುಬಿಡು । ನಲ್ಲದು ನಿನಗಿದು । ಬಲ್ಲೆನಿನ್ನ ಥೂನೀಚ ।
ಜರಾ : ಬಿಡುಬಿಡುಹೇಡೀ । ನೀನಾಡಾಡೀ । ನಾನೀವೆ ಖಾಡಾಖಾಡಿ ।
ಕೃಷ್ಣ : ಬಾಯ್ಮುಡೆ ಬದುಕುವೆಯಾ । ಭಂಡಪಂಡ ಛೀಛೀ ಪುಂಡ ।
ಜರಾ : ಮುಚ್ಚು ಬಾಯನೀ । ವಿಕಾರಿಬಿಕಾರಿ ॥

(ಸುಚರಿತ್ರೆ, ಸಖಿಯರೊಡನೆ ಅಳುತ್ತಾ ಪ್ರವೇಶಿಸುವಳು)

**ಸುಚರಿತ್ರೆ : ಹಾಡು** **ರಾಗ : ಸಾವೇರಿ - ಆದಿತಾಳ**

ಪರಿಣಾಮವೇನೊ । ಪತಿಯಳಿಯಲೀಗ ।
ಕರೆಕರೆಗೊಂಡೆನೆ । ಪೊರೆವರನರಿಯೆ ॥ ಪ ॥
ಮೀರಿದತಾಪವ । ಸೈರಿಪೆನೇಪರಿ ।
ತೊರೆದನೆವಲ್ಲಭ । ತೋರುದೇವ ॥ ೧ ॥
ಕಾಮಿತವೀವನ । ಕಾಂತನ ಕಾಣದೆ ।
ನಿಮಿಷವು ಜೀವಿಸೆ । ಭೂಮಿಯಲ್ಲಿ ॥ ೨ ॥

**ಸುಚರಿತ್ರೆ : ಹಾಡು** **ರಾಗ : ಶುಭಪಂತುವರಾಳಿ - ಆದಿತಾಳ**

ಮನವಾರೆ । ಇನಿಯನಸೇರೆ । ವನಜಾಕ್ಷಕೃಪೆಯನು ಮಾಡೈ ॥ ಪ ॥
ಆನಂದದೆ ಸಹಗಮನವನು । ನಾಮಾಳ್ಪೆನಿದುವೇ ನಡೆವೇ ॥ ಅ.ಪ. ॥
ಇರಲಾರೆ ಈ ಜಗದೊಳು । ತೊರೆದೆನ್ನ ವಲ್ಲಭನಹಾ ।
ಪರಾಧೀನೆಯೆನಿಸೆನಾಂ । ವನಜಾಕ್ಷಕೃಪೆಯನು ಮಾಡೈ ॥ ೧ ॥

**ಸಹದೇವ : ಹಾಡು** **ರಾಗ : ಹಂಸಧ್ವನಿ - ಆದಿತಾಳ**

ಫಡಫಡಬಿಡೆನಾ । ಜಡರಕೊಲ್ಲುವೇ ॥ ಪ ॥
ಅಡಂಗಿಪೇ । ನಡುಂಗಿಪೇ । ಕಡುಗಲಿ ॥ ಅ.ಪ. ॥
ಆರೆನಗಿಳೆಯೊಳ ಗಿದಿರಹರಿರುವರು ।
ಹರಿಯಮರಿಯ । ಸರಸಕರರೆಕರೆವರೆ ॥ ೧ ॥
ಪ್ರಾಣವ ನೆಣಿಸದೆ ಕೆಣಕಿದ ಕೆಡುಕರ ।
ರಣದೆ ಕುಣಿಸಿ ನೆಣಸಿ ಹಣಿವೆ ಕಣೆಯೊಳು ॥ ೨ ॥

**ಸಹದೇವ : ಕಂದ**

ಜನಕನದೆಲ್ಲಿರ್ದಪನೋ ।
ಜನನಿಯದೇನಾದಳೋ ಮಹಾಭಯವೀಗಳ್ ॥

ಮನದೊಳ್ ಮೂಡಿರ್ಪುದು ಹಾ ।
ಘನತರಮೀಬೇಗೆಯಕಟ ಸೈರಿಸಲಾರೆಂ ॥

ಸುಚರಿತ್ರೆ : ಹಾಡು — ರಾಗ : ರಂಜಿನಿ - ಆದಿತಾಳ

ಪತಿಪದಸೇವೆಯು ಪಾವನಸತಿಗೇ । ಕೃತಿಯೊಳಿದೇ ಪರಮಾರ್ಥವೂ ॥ ಪ ॥
ತ್ರಿಗುಣಜಗವನು । ಸಾರುವನೀಗ । ತೋರುವ ಕಾಂತನ ಲೋಕವಾ ।
ಮೆರೆವಾ ॥ ಅ.ಪ. ॥

ಸಹದೇವ : ಹಾಡು — ರಾಗ : ಮಾಂಡ್ - ಆದಿತಾಳ

ನಾಕುನಾಕ ಬಿರುಸುಡಿ(ದಿ)ೀಗಾ । ಏಕ ನೀ ಕಾಯಿಸುವೆ । ತಂದೆಳನು ಬರಿದೇ ॥ ಪ ॥
ದೀನನಾದೇ । ಗತಿಹೀನನಾದೇ ॥ ಅ.ಪ. ॥
ನೀತಿಯು ಪೋಪುದು । ತೂರಿದೇ ಬಾಲನ । ಅದಂತಕಟ ಸೈವೆ ಜನನಿ ।
ಪದಯುಗಕೆ । ನಮಿಸುವೆ ಬೇಡುವೇ । ಪೋಗದಿರೀಗ ॥ ೧ ॥

ನಾರದ : ಹಾಡು — ರಾಗ : ಅಭೇರಿ - ಆದಿತಾಳ

ಏನೊರೆವೇ ಶಿವನೊಳ್ । ದಾನವಮಥನನ । ಬಗೆಗೆಣೆಗಾಣೆ ॥ ಪ ॥
ದುರಿತವಪಾರಿಪಾ । ಶರಣರಪಾಲಿಪಾ
ಧೀರಮನೋಹರ ನಂದ ಕಿಶೋರ ॥ ೧ ॥
ಗಿರಿಧರಸುಂದರ । ವೀರಪರಾತ್ಪರ ।
ಸಾರಸುಖಾಕರ । ಸಾಧುವಿಹಾರ ॥ ೨ ॥

ನಾರದ : ಹಾಡು — ರಾಗ : ಮಿಶ್ರತೋಡಿ - ಆದಿತಾಳ

ಪಾಹಿಲೋಕಕಾರಣಾ । ನಾರಾಯಣ । ಭವಭಯಹರಣಾ ।
ಬಹುಕಲ್ಯಾಣಾ । ಪದನತಚಾರಣ ।
ದಿವ್ಯಭೂಷಣ । ನಿಪುಣಾ । ನಾರಾಯಣಾ ॥ ೧ ॥
ಪರಿಷ್ಕೃತಕಲುಷಾ ವಿಲಸಿತಭಾಷಾ । ಪದಜಿತ ವಿದ್ವಿಷಾ ।
ಪರಮಪುರುಷ । ವೇಷಾ । ನಾರಾಯಣ ॥ ೨ ॥

**ಎಲ್ಲರೂ : ಹಾಡು** — ರಾಗ : ಹಂಸಧ್ವನಿ - ಆದಿತಾಳ

ಧರೆಯನೊಲಿದು ಪಾಲಿಸ್ಥೆ । ಕರುಣೆವೆಗಿಸಿ ವಿಜಯಿಸ್ಥೆ ॥
ಶರಣಕುಲವ ನಲಿಯಿಸ್ಥೆ । ತರಳ ಬಗದೆ ಸೊಗಯಿಸ್ಥೆ ॥
ಪರಮ ಪುರುಷ ಚರಣವಾ । ನಾಗಯೂದ । ಹರಿನದ ॥ ವಿಜಯಿಸ್ಥೆ ॥

## ದೃಶ್ಯ : ಅಂತಃಪುರ

**ದ್ರೌಪದಿ : ಹಾಡು** — ರಾಗ : ಭೈರವಿ - ಆದಿತಾಳ

ಸಾಕು ಬರಿದೆ ಚಿಂತೆಯೇಕೈ । ಜನಪಾಲ ॥ ಪ ॥
ಸಕಲಸುಖಕೆ ಹರಿಯೆನಲುಮು । ಭಾಗ್ಯವಾಗೆ ॥ ಅ ಪ ॥
ಭೀಮಪಾರ್ಥರಬಲವ ತಿಳಿಯೆಯನುಡಿ ।
ಭೂಮಿಯೊಳಗದಾರೊ ಸಮರು ।
ಅಮಿತಬಲರು । ಸಾಮಾನ್ಯರಲ್ಲ । ಭೀತಿಯೇಕೆ ॥ ೧ ॥

**ಅರ್ಜುನ : ವೃತ್ತ॥**

ಮೆಟ್ಟಿದೆನಾರ್ಪಿನಿಂದೆ ಕಟನಾಭನಸುಬಿಡದಯುಕ್ತನಾಗಿ ಮಾನ ।
ಕುಟ್ಟಿದೆನಲ್ಲಿ ದೈತ್ಯಕುಲವಂ ಪೆಡಮೆಟ್ಟಿಸಿದೂಂಗ ಕಟ್ಟಿದಂ ॥
ಕಟ್ಟಿದೆನಾ ಕಿರಾತಜಕರಂ, ಗೆಲಿದಂ ನಡೆದಂ ಯುದ್ಧೋತ್ಸಹಂ ।
ಕಟ್ಟಿರಕಂಗೊಳುತ್ತೆ ನೆರೆನಿಟ್ಟನೆ ದುಷ್ಕರಮಾವುದಿರ್ಪುದಮ್ಮ ॥

**ಧರ್ಮರಾಯ : ಹಾಡು** — ರಾಗ : ಬೇಹಾಗ್ - ಆದಿತಾಳ

ನಾನಲಿಬಹುಸುಕೃತೀ । ಏನೆಂಬೇ ॥ ಪ ॥
ಮಾನವೇಂದ್ರರೊಳಗೆ ಮಾನಿತ । ನಿತಾಂತ ನಿಭಾಗ್ಯ ॥ ಅ ಪ. ॥
ಮೌನಿಜನನುತ ಮುಕುಂದನ ಪಾದವ ಸೇವಿಪೆ ।
ಬಹುಧನ್ಯವದಾನ್ಯ ಮಾನ್ಯಕೃತಸೌಜನ್ಯ ॥
ಭೂರಿ ಪರಾಕ್ರಮ । ಜಿತಭೂಪೋತ್ತಮ ।
ವಾರಾನುಜರೀಗ । ಕೋರಿದ ಬಯ್ಕೆಯ

ಆಂಜನೇಯ : ಹಾಡು ರಾಗ : ಕಾನಡ - ಆದಿತಾಳ

ರಾವಣಮರ್ದನರಾಮ । ರಣಭೀಮ । ರಘುರಾಮಾ । ಶ್ರೀರಾಮಾ ॥
ಪಾವನನಾಮಾ । ಪಾಪವಿರಾಮಾ । ಪಾಲಯ ಸೀತಾರಾಮಾ ।
ಗುಣಧಾಮಾ । ಜಿತಕಾಮಾ । ಶ್ರೀರಾಮಾ ॥

ಆಂಜನೇಯ : ಹಾಡು ರಾಗ : ನಾದನಾಮಕ್ರಿಯೆ - ಆದಿತಾಳ

ರಘುಪತಿರಾಘವರಾಜಾರಾಮ । ಪತಿತಪಾವನಸೀತಾರಾಮ ॥ ಜಯ
ಜಯದಶರಥನಂದನರಾಮ । ಜಯಜಯವಿನತಾನಂದನರಾಮ ॥

(ವಿಶ್ವರೂಪವು ಪ್ರತ್ಯಕ್ಷವಾಗುವುದು)

ಭೀಮ : ಶ್ಲೋಕ ॥ ರಾಗ : ರೇಗುಪ್ತಿ

ನಮಸ್ತೇ ಮಹಾಸತ್ವಬಾಹಾಯ ತುಭ್ಯಂ ।
ನಮಸ್ತೇ ಮಹಾವಜ್ರದೇಹಾಯ ತುಭ್ಯಂ ॥
ನಮಸ್ತೇ ಸದಾ ಬ್ರಹ್ಮಚರ್ಯಾಯ ತುಭ್ಯಂ ।
ನಮಸ್ತೇ ಸದಾ ವಾಯುಪುತ್ರಾಯ ತುಭ್ಯಂ ॥

ಭೀಮ : ಹಾಡು ರಾಗ : ಕಮಾಚ್ - ಆದಿತಾಳ

ಪ್ರಭುನೀನೇ ಕಾಯ್ದೆ । ಅಭಯವನೀಯ್ದೆ । ಅಭಿವಂದಿಪೇ । ಅಭಿವಂದಿಪೇ ॥ ಪ ॥
ಮೀರಿದಚಿಂತೆಗೇ । ನಾನೀಡಾದೇ । ತೋರೀಗ ।
ಉಪಾಯವನು ನೀಂ । ತರಳನಕಾಡದೇ । ದಯೆ ಮಾಡ್ದೆ ॥ ಅ.ಪ. ॥
ಏತೆರತರುವುದೋ । ಪುರುಷಾಮೃಗನನು ।
ಪ್ರೀತಿಸಿ ನೀಸೊಲ್ಲಿಸು ॥ ವಾತಾತ್ಮಜ । ವಾತಾತ್ಮಜ ॥ ೧ ॥

ದೃಶ್ಯ : ಗುಹೆ - ಪುರುಷಾಮೃಗ ಧ್ಯಾನದಲ್ಲಿರುವುದು

ಭೀಮ : ಕಂದ

ಕೊರಲೊಳ್ ರುದ್ರಾಕ್ಷಸರಂ ।
ಮೆರೆದಿರೆ ಭಸ್ಮತ್ರಿಪುಂಡ್ರಮೊಪ್ಪಿರೆ ಹಣೆಯೊಳ್ ॥

ಪರಶಿವನಂ ಪೂಜಿಸುವೀ।
ಪುರುಷಾಮೃಗದೆಸೆವ ತೇಜಮನದ್ಭುತಮಲ್ತೇ॥

**ಪುರುಷಾಮೃಗ : ಹಾಡು** **ರಾಗ : ಪೂರ್ವಿಕಲ್ಯಾಣಿ - ಆದಿತಾಳ**

ಹರಹರಮಹಾದೇವ। ಗಿರೀಂದ್ರಜಾಧವ। ವೀರನತಶಿವ॥ ಪ॥
ಯಮಿಜನ ಸದಯಾ। ಪೂರ್ಣ ವಿಧುತಭಯ।
ಪ್ರೇಮಸುನಿಲಯಾ। ಸುರಗೇಯಾ॥
ಭೀಮನಿರಾಮಯ। ಭಾಗ್ಯಮಹೋದಯ।
ಮುಕ್ತಪಾಯಾ। ನಿರ್ಮಾಯ॥

**ಪುರುಷಾಮೃಗ : ಹಾಡು** **ರಾಗ : ಶುದ್ಧಸಾವೇರಿ - ಆದಿತಾಳ**

ಹರಹರಮಹಾದೇವಾ। ಶಂಭೋ।
ಪುರಹರಶಂಕರಾ। ಶಮಧ ನಜೀವಾ॥ ಪ॥
ಗಂಗಾಧರಸುಖಸಾರಾ। ಶಿವಲಿಂಗನಾ ಮುದಿತ। ನಿಗಮಾಧಾರ॥
ತುಂಗಭಕ್ತ ಪರಿವಾರಾ। ಕೃಪಾಪಾಂಗಯುತಃ ಶ್ರೀ ಶೈಲವಿಹಾರಾ॥ ೧॥
ಮಾಯಮಯ ನಿರ್ಮಾಯಾ। ವರ। ಕಾಯಜಶಮನ ದನುಜಾಜೇಯ॥
ಕಾಲಕಾಲನಿರಪಾಯ। ನಿರಾಕಾರನಿರೀಹ। ನಿಸ್ಸನಿರಾಮಯ॥ ೨॥

**ಪುರುಷಾಮೃಗ : ಕಂದ**

ಕೈಗೊಳ್ವುದು ಪೂಜೆಯನಿದ।
ನೀಗಳ್ ಪರಮೇಶಗಿರೀಶ ಜಿತಕೀನಾಶಾ॥
ತ್ಯಾಗಂ ಭೋಗಂ ರಾಗಂ।
ಯೋಗಂ ತಾನಿದುವೆ ನಿನ್ನ ಪದನುತಿ ಗುರುವೇ॥

**ಪುರುಷಾಮೃಗ : ಹಾಡು** **ರಾಗ : ಮಧ್ಯಮಾವತಿ - ಆದಿತಾಳ**

ಗಿರಿಜಾವರ। ಗಂಗಾಧರ। ಧೀರಶಂಕರಾ। ಪಾದಾದರ॥ ಪ॥
ಭಾನುಕೋಟಿ ತೇಜ। ಭಕ್ತಕಲ್ಪಭೂಜ।

ಮೌನಿನಿಯೋಗಭಾಜ । ವಿನುತ ರಾಜ ರಾಜ ॥ ಅ.ಪ. ॥
ವಾಮದೇವಸಾಂಬಾ । ನುತಸುರಕದಂಬ ।
ಪ್ರೇಮದಿಂದ ನೋಡ್ಯೆ । ನೀಕೃಪೆಯ ಮಾಡ್ಯೆ ॥
ಸೋಮಸೂರ್ಯನೇತ್ರ । ಸಾಮಗಾನ ಪಾತ್ರ ।
ಕಾಮವೈರಿಕಾಯ್ಯೆ । ಕಾಮಿತಾರ್ಥ ಪೀಯ್ಯೆ ॥ ೨ ॥

**ಪುರುಷಾಮೃಗ : ಹಾಡು** **ರಾಗ । ಜಂಜೂಟಿ**

ಯದುಕುಲದೀಪ ಚಿದ್ರೂಪ । ವಿದಳಿತ ಪಾಪಸಂತಾಪ ॥
ಧೃತವನ ಮಾಲ । ಗೋಪಾಲ । ಜಿತಖಲಜಾಲ ಶ್ರೀಲೋಲ ॥ ೧ ॥
ನೀನೆ ಪರೇಶ ಗೌರೀಶ । ನೀನೆಮದೀಶ ಭೂತೇಶ ॥
ನೀನೆಗಿರೀಶ ಲೋಕೇಶ । ನೀನೆರಮೇಶ ಸರ್ವೇಶ ॥ ೨ ॥

## ದೃಶ್ಯ : ಇಂದ್ರಪ್ರಸ್ಥ ಅರಮನೆ

**ದುರ್ಯೋಧನ : ಹಾಡು** **ರಾಗ : ಹಂಸಧ್ವನಿ - ಆದಿತಾಳ**

ಬಾಳ ಕೆಡಿಸುವೆ । ಖಳರನು ತುಳಿಯುವೆ ॥ ಪ ॥
ಧರಧುರದೊಳು ನಲಿ । ಸದಬಡಿಯುವೆ । ತಲೆಗಡಿಯುವೆ ಕತ್ತರಿಸೆ ।
ಬಡಾಯಿ ಪಡುವರ ಬಿಡುವೆನೆ ಬರಿದೇ । ತೋಡುಮಾಡಿ ನೋಡುವೇ ॥ ೧ ॥
ಕ್ಷಣಾರ್ಧದೊಳು ಮಿಗೆ । ರಣದೊಳು ಮಣಿಸುವೆ । ಸೆಣಸಿ ಕುಣಿಸುವೇ ।
ಬಣಗರನರಿವೇ । ಮಾಣೆನೀಗ ಧೀರುರೇ ॥ ೨ ॥

**ದುರ್ಯೋಧನ : ಕಂದ**

ಸೂರೆಯನೀಯುತೆ ತುಂಬಿದ ।
ವೈರಿಗಳಾ ಪಾಂಡುಸುತರ ಭಂಡಾರವನಾಂ ॥
ಸೇರಿದ ಸರಿರಾಯರ ಮುಂ ।
ದೋರಂತಿರೆ ಸಮಯವರಿತು ಪಲ್ಗಿರಿಸಿದಪೆಂ ॥

(ದೃಶ್ಯ : ಅರಮನೆ ಸಭಾಮಂಟಪ - ದ್ರೌಪದಿ ಮತ್ತು ಅರ್ಜುನ ಪ್ರವೇಶಿಸುವರು)

**ದ್ರೌಪದಿ : ಹಾಡು** **ರಾಗ : ಕೇತಾರಗೌಳ - ಆದಿತಾಳ**

ಸೊಗಸು ಬೀರುವುದಿದೋ । ಬಗೆಬಗೆ ಪೂಗಳು ।
ಆಮೋದದದೇನೆರೇ । ರಾಜಿಸೆ ರಮಣಾ ॥ ಪ ॥
ಪಗಲಿರುಳೆಂಬ । ಭೇದವೆ ಕಾಣದಾಗೇ । ನೀಗಾಡುವುದಮ್ಮ ।
ಬೇಸರನ್ನು । ನವವಿಧರತ್ನ ಜಾಲದಿಂದೆ । ಭುವನಮೋಹಕವೀ ।
ಭವನವು ನಾಡೆ । ಸುವಿದಿತ ಶಿಲ್ಪದೆ । ದೇವಲೋಕವನ್ನೇ ।
ತಾನೀಗ । ಸೋಲಿಸುವುದು ನಿರುಕಿಸು ॥ ಅ.ಪ. ॥

**ಅರ್ಜುನ : ಹಾಡು** **ರಾಗ : ಅಠಾಣ - ಝಂಪೆತಾಳ**

ಸರಸಗುಣಾಧಾರೆ ನೋಡೆ । ಸಾರಸಾಕ್ಷಿ ಸೌಖ್ಯಪಡೇ । ಪರಿಪರಿಯಾ
ಕ್ರೀಡೆಯಾಡೆ । ತೋರುತಿರ್ಪುದಿದುವೆಯೆಡೇ ॥ ಪ ॥
ಹರಿಸವನಾಂತೀಗ ಕೂಡೆ ರಾರಾಜಿಕುಂ ರಮಣಿ ನಾಡೆ ॥
ಏನ ಪೇಳ್ವೆ । ಏಣ ನೇತ್ರೆ । ಸೂನಬಾಣ ಪೂಡಿ ಸರಳ ।
ಮಾನಸವಾ । ಈ ಮಾನಸವ । ಮರುಕವ । ತೊರೆದು ಬಾಧಿಪ ।
ರಾಜಸಭಾಮನೋಹರತೆ । ರಮ್ಯಮಾಗಲೀಗ । ಆಹಾ ।
ಸೋಜಿಗಂಗೊಳಿಸಿ । ಸೊಗಯಿಸುತಿಹುದು ॥ ಸೀರೆ ಮನೋಹಾರೆ ।
ನೀ ನಿರುಕಿಸಿದ ॥ ೧ ॥

(ದುರ್ಯೋಧನ ಪ್ರವೇಶ, ಅವನ ಹಿಂದೆ ಭೀಮನ ಪ್ರವೇಶ)

**ದ್ರೌಪದಿ : ಹಾಡು** **ರಾಗ : ಜೋನ್‌ಪುರಿ - ಆದಿತಾಳ**

ಅರಿಯದೆ ಬಿದ್ದಿರೆ ಭಾವ । ಕುರುಡರೆ ಕುರುಕುಲದೇವಾ ॥ ಪ ॥
ಅಡಿಯಿಡೆ ಜಾರಿದಿರೊ । ಸೋಗು ತೋರಿದಿರೊ । ಅರಿಯೇ ।
ಈ ಪರಿಯೇ ॥ ಅ.ಪ. ॥

ನಗೆಗೆಡೆಯಾದಿರೆ ನೀವೂ । ಮಿಗೆ ।
ಒಗೆದುದೆ ಹಣೆಯೊಳು ನೋವೂ । ಮಾನತಗ್ಗಿದುದೆ । ಬಹು ॥
ಮೈಮೆಕುಗ್ಗಿದುದೆ । ಪೋಗೀ । ತಲೆವಾಗೀ ॥ ೧ ॥

### ದೃಶ್ಯ: ಅರಮನೆಯ ಒಂದು ಭಾಗ - ದುರ್ಯೋಧನನ ಪ್ರವೇಶ

**ದುರ್ಯೋಧನ : ಹಾಡು** — ರಾಗ : ಹಂಸಧ್ವನಿ - ಆದಿತಾಳ

ಆಹ । ತುಡುಗತನವೆ । ನರಿಗಗೊಳು । ಕುಹಕವೆಗೆಯೆನ್ನೊಳು ।
ಮಹಿಳೆಗೆ ಫಡ ಫಡ । ಸಹಿಸೆನು ಬಗೆಯಿದು । ದಹಿಸುತಲಿರುವುದು ॥ ಪ ॥
ಆ ವೈಯ್ಯಾರಿಯ ಸೊಕ್ಕನು ಮುರಿವೇ । ದುರುಳೆಯುನಗೆಯಾ ।
ಫಲಂತೋರುವೇ । ಪಡೆಯೆನಗದೆ । ಬದುಕಿರುವೆನೆ । ಬಿಡುವೆನೆ ॥ ೧ ॥
ಅರಿಗೆನ್ನೊಳು । ತೋರುವರಿಹರೂ । ಅರಿಗಳಿಕಿರವಾ । ಕರಂಮುಟ್ಟುವೇ ।
ನರಪತಿಯೊಳು । ಸರಸವೆಫಡ ಮರುಳೆಗೆ ॥ ೨ ॥

### ದೃಶ್ಯ : ಯಾಗಮಂಟಪ - ಧರ್ಮ, ಭೀಮಾರ್ಜುನ, ನಕುಲ, ಸಹದೇವ, ಭೀಷ್ಮ, ದ್ರೋಣ, ಕೃಪ, ದುರ್ಯೋಧನ, ಕರ್ಣ, ಶ್ರೀಕೃಷ್ಣ, ಧೌಮ್ಯ, ದ್ರೌಪದಿ, ಮುಂತಾದವರೂ ಶಿಶುಪಾಲದಂತವಕ್ರರೂ, ಪುರುಷಾಮೃಗವೂ, ಬ್ರಾಹ್ಮಣರೂ ಹಾಗೂ ಸಾಮಂತರೂ ಸೇರಿರುವರು

**ದ್ರೌಪದಿ : ಹಾಡು** — ರಾಗ : ಮಾಂಡ್ - ಆದಿತಾಳ

ನಂದನಂದ ಮುಕುಂದ ನಮೋನಮೋ ।
ಇಂದಿರೇಶ ಪರೇಶ ನಮೋ ನಮೋ ।
ನಾರದಾರ್ಚಿತಪಾದ ನಮೋನಮೋ । ಗೋವಿಂದಾ ॥ ೧ ॥
ಸತ್ಯಧರ್ಮಸಮೇತ । ನಮೋ ನಮೋ । ನಿತ್ಯಮುಕ್ತಿವಿಧಾತ ನಮೋನಮೋ ।
ನುತ್ಯಮೌನಿಪಗೀತ ನಮೋನಮೋ । ಗೋವಿಂದ ॥ ೨ ॥

**ಧರ್ಮರಾಯ : ಹಾಡು** — ರಾಗ : ಹಂಸಾನಂದಿ - ಆದಿತಾಳ

ನಮಿಸುವೇ ನಿನ್ನ ಪಾದಾಬ್ಜಕೆ । ನಾ ॥
ಸೀಮಾತೀತ ಪ್ರೇಮಾನ್ವಿತ । ವಿಮಲಭಾವಾ ॥ ಪ ॥
ಪೊರೆವುದೈನೀಂ । ಮುರಹರಾಮಧುರಾ ।
ಮೆರೆಯಿಸೈ ನಿನ್ನ । ಕಾರುಣ್ಯವಾ ॥ ಅ.ಪ. ॥
ಮುದದಿಂದನುತಿಪೇ । ನಿನ್ನೀಪದವಾ ಇದೆ ಭೋಗ ಸಕಲಭಾಗ್ಯಕರ ।
ಪಿದಳಿತಪಾತಕಾ । ಸದಯನೆಪಾಲಿಸೈ । ಪದುಳದೆನಮಿಪೇ ।
ವೇದರಾಜಿನುತ ॥ ನಮಿಸುವೇ ॥ ೧ ॥

**ಅರ್ಜುನ : ಹಾಡು** **ರಾಗ : ಹಂಸಧ್ವನಿ - ಆದಿತಾಳ**

ಎಲಾಖಲಾ । ಬಲಾ ಬಲವತಿಳಿಯೇ । ಗಳುಹುವೆಯಾ । ಛೀ ದುರುಳನೇ ॥ ಪ ॥
ಪೊಡೆವಿಯೊಡೆಯ ನಡಿಗೆಬೇಗ ಪೊಡಮಡು
ಕೆಡುವೆಯಿಲ್ಲದಿರೆ । ಮಡಿಯುವೆ ಮೂರ್ಖನೆ । ಬಿಡುಬಿಡು ಸೆಡುಕನು ।
ತುಡುಗನೆ । ನಡೆಯದಿದೂ । ಖಡುಗಕೆ । ಎಡೆಬಲಿಗೊಡುವ ॥ ೧ ॥

**ಶಿಶುಪಾಲ : ಹಾಡು** **ರಾಗ : ಹಂಸಧ್ವನಿ - ಆದಿತಾಳ**

ಮನದೊಳಗುದಿಸಿದ ಕ್ರೋಧಕೆ ನಾನು
ಬಲಿಯನು ಕೊಡುವೆನು ಮೂರ್ಖರನು ॥ ಪ ॥
ಧೀರನಾನಿರಲು ಬಿಡುವೆನೆ ಖಳರ
ಸಾರಿ ಕೊಲ್ಲುವೆನು ರಣದೊಳಗೆ ॥ ಅ.ಪ. ॥

**ಭೀಮ : ಹಾಡು** **ರಾಗ: ಹಂಸಧ್ವನಿ - ಆದಿತಾಳ**

ಮುಚ್ಚು ಬಾಯ । ಹುಚ್ಚನಂತೆ । ಕೊಚ್ಚಲೇತಕೆ । ತುಚ್ಛ ನಿನ್ನ । ಕೆಚ್ಚ ಮುರಿವೆ ।
ರಚ್ಚೆಯೇಕೆ ನೀಚ ಮಹಾಪಾಪಿ । ಛೀ । ದುಷ್ಟ ದುರಾಚಾರಧೂ ॥ ೧ ॥
ಹರಿಯೊಳರರೆ । ಸರಿಯಮರಿಗೆ । ಸರಸಾಲುವುದೇ ।
ಪರಮಪುರುಷನನ್ನು ಜರಿವೆ । ದುರುಳನಾರೂ ।
ಮರುಳಮಹಾ ಪಾಪಿ ಛೀ । ದುಷ್ಟ ದುರಾಚಾರಧೂ ॥ ೨ ॥

**ಮಂಗಳ : ಹಾಡು** **ರಾಗ : ನಾಟಿಕುರಂಜಿ - ಅಟ್ಟತಾಳ**

ತಾಯೆ । ಸುರಗೇಯೆ । ನಿರ್ಮಾಯೆ । ಜಯಸುಹೃದಯೇ ।
ಕಾಯೌ ಮಹೋದಯೇ । ಕಾಮಪೀಠಾಶ್ರಯೇ ॥
ಬಹುಶುಭವಿಭವದಾತ್ರಿ । ತುಹಿನಗಿರಿವರಪುತ್ರಿ ।
ಮಹಿಪಾಲ ಕೃಷ್ಣೇಂದ್ರ ಸದಯೇ ॥



# ಪಾಂಡವ ವಿಜಯ

ನಾಟಕಕಾರರು
**ಮೋಟಗಾನಹಳ್ಳಿ ಶಂಕರಶಾಸ್ತ್ರಿಗಳು**

ನಾಟಕಕಾರರು
**ಗಿರಿಭಟ್ಟರ ತಮ್ಮಯ್ಯ**

**ಪ್ರಾರ್ಥನೆ : ಹಾಡು** **ರಾಗ : ಸುರುಟಿ - ಆದಿತಾಳ**

ಜಯ ಜಯ ಜಯ ಜಯ ಓಂ ವಿನಾಯಕ
ಜಯ ಜಯ ಶುಭ ಫಲದಾಯಕ ॥ ಪ ॥
ಪ್ರಶಾಂತನಿಲಯ ವಾಸ ಈಶ ಪ್ರೀತಿನೀಂ ಗಣೇಶ
ಸದಾ ನಿನ್ನ ಧ್ಯಾನದಿಂದ ದುರಿತವೆಲ್ಲ ನಾಶ ಈದುರಿತವೆಲ್ಲ ನಾಶ ॥ ಅ.ಪ. ॥
ನಿನ್ನ ನೆನವದೊಂದೆ ನಮಗೆ ಭವದ ಮೋಕ್ಷ ಸಾಧನ
ನನ್ನು ತಾಂಗ ದೀನ ಬಂಧು ಪಾಲಿಸೈ ಗಜಾನನ ಪಾಲಿಸೈ ಗಜಾನನ ॥ ೧ ॥

**ದೃಶ್ಯ : ರಸ್ತೆ**

**ಸೂತ್ರಧಾರ : ವೃತ್ತ ॥** **ರಾಗ : ನಾಟಿ**

ಶ್ರೀಮನ್ಮಂಗಳದೇವತಾವಿಹರಣೈ ಕಾಂತಃ ಪುರೋರಸ್ಥಲಂ
ಸೀಮಾತೀತಗುಣಾನ್ವಿತಂ ಯದುಕುಲಕ್ಷೀರಾಬ್ಧಿತಾರಾಧಿಪಂ
ಶ್ಯಾಮಾಂಭೋರುಹಧಾಮಸನ್ನಿಭ ತನುಚ್ಛಾಯಂ ಕೃಪೈಕಾಶ್ರಯಂ
ಚಾಮೋರ್ವೀಪತಿಗೀಗೆ ಭದ್ರತತಿಯಂ ಶ್ರೀ ದೇವಕೀನಂದನಂ ॥ ೧ ॥

**ಸೂತ್ರಧಾರ : ಹಾಡು** **ರಾಗ : ಕಲ್ಯಾಣಿ - ಆದಿತಾಳ**

ನಮ್ಮಮ್ಮ ಶಾರದೆ ಉಮಾಮಹೇಶ್ವರಿ
ನಿಮ್ಮೊಳಗಿಹನಾರಮ್ಮ ಅಮ್ಮಯ್ಯ ॥ ಪ ॥

ಕಮ್ಮಗೋಲನ ವೈರಿಸುತನಾದ ಸೊಂಡಿಲ
ಹೆಮ್ಮೆಯ ಗಣನಾಥನೆ ಅಮ್ಮಯ್ಯ ॥ ಅ.ಪ. ॥
ಮೋರೆ ಕಪ್ಪಿನ ಭಾವ ಮೊರದಗಲದಕಿವಿ
ಕೋರೆದಾಡೆಯನಾರಮ್ಮಾ
ಮೂರು ಕಣ್ಣಿನಸುತ ಮುರಿದಿಟ್ಟ ಚಂದ್ರನ
ಧೀರ ತಾ ಗಣನಾಥನೆ ಅಮ್ಮಯ್ಯ ॥ ೧ ॥
ಉಟ್ಟದಟ್ಟಿಯ ಬಿಗಿದುಟ್ಟ ಚಲ್ಲಣದ
ದಿಟ್ಟ ತಾನಿವನಾರಮ್ಮಾ
ಪಟ್ಟದ ರಾಣಿ ಪಾರ್ವತಿಯ ಕುಮಾರ
ಹೊಟ್ಟೆಯ ಗಣನಾಥನೆ ಅಮ್ಮಯ್ಯ ॥ ೨ ॥
ರಾಶಿ ವಿದ್ಯೆಯ ಬಲ್ಲ ರಮಣಿ ಹಂಬಲನೊಲ್ಲ
ಭಾಷಿಗನಿವನಾರಮ್ಮಾ
ಲೇಸಾಗಿ ಸುಜನರ ಪೊರೆಯುವ ನೆಲೆಯಾದಿ
ಕೇಶವದಾಸ ಕಣೆ ಅಮ್ಮಯ್ಯ ॥ ೩ ॥

**ಸೂತ್ರಧಾರ : ಹಾಡು** **ರಾಗ : ಬೇಹಾಗ್ - ಆದಿತಾಳ**

ಕರುಣಿಸು ಕ್ಷೀರಾಬ್ಧಿ ಜಾಕಾಂತ ॥ ಪ ॥
ನೀರದಕಾಯ । ನಾರದಗೇಯ ।
ನೀರೇಜಬಾಣನಯ್ಯ । ಜೀಯ ಕರುಣಿಸು ॥ ೧ ॥
ದಾನವವೈರಿ । ಮಾನವಕೇಸರಿ ।
ಮೀನಾವತಾರೀ । ಶೌರೀ । ಮಾರಿ ॥ ೨ ॥
ಚಾಮನರೇಶಗೆ ಕಾಮಿತಮೀಯುಗೆ ।
ತಾಮಸವೇಕೆ ಹೀಗೆ । ಮಿಗೆ ॥ ೩ ॥

## ದೃಶ್ಯ : ದುರ್ಯೋಧನನ ದರ್ಬಾರ್

**ದುರ್ಯೋಧನ : ಹಾಡು** **ರಾಗ : ಹಂಸಧ್ವನಿ - ಆದಿತಾಳ**

ಸಮರೆ ಎನಗೆ ಜಗದಿ । ಸರಿಸಮರೆ ಎನಗೆ ಜಗದಿ ॥ ಪ ॥
ಭೀಷ್ಮ ದ್ರೋಣ ರವಿಸೂನು ಸಹಜ

ದುಶ್ಯಾಸನ ಶಕುನಿಯ ಬೆಂಬಲವೆನಗಿರೆ ॥
ಧರೆಯನ್ನಾಳುವೆ ಪರಿ ಪರಿಯಿಂದಲಿ ।
ಧರೆಯೊಳಗೆ ಸುಖಿಸುವೆನು ಬಾಳುವೆನು ॥ ೧ ॥

ವಿದುರ : ಹಾಡು                ರಾಗ : ಹಂಸಾನಂದಿ - ಆದಿತಾಳ

ಕ್ಷೀರಸಾಗರ ಶಯನ ಪದ್ಮಭೂಷಣ ನಿಪುಣ
ತುಂಬುರು ನಾರದ ಸಂಗೀತ ಪ್ರಿಯಲೋಲ ॥ ಪ ॥
ಶೇಷಶಯನನೆ ಗರುಡವಾಹನ ಪ್ರಿಯನೆ
ಅದ್ಭುತಲೀಲಾ ಘನ ಮಹಿಮ ॥ ಅ ಪ ॥

ದೃಶ್ಯ : ಅರಣ್ಯ - ಪಾಂಡವರ ಶಿಬಿರ

ಧರ್ಮರಾಯ : ಹಾಡು                ರಾಗ : ಹಂಸಾನಂದಿ - ಆದಿತಾಳ

ಪರಮಾತ್ಮನೆ ನೀ ಪೊರೆ ಕರುಣಾಕರ ಮಾಧವ ಮುರ ವೈರಿ ದೇವ ॥ ಪ ॥
ದೀನರ ಕಾಯುವ ಭಾರವು ನಿನ್ನದೈ ಮಾರ ಜನಕ ಹರಿ ಶ್ರೀವಾಸುದೇವ ॥ ೧ ॥

ದೃಶ್ಯ : ದುರ್ಯೋಧನನ ದರ್ಬಾರ್
(ದುರ್ಯೋಧನ - ಧರ್ಮರಾಯ ದ್ವಂದ್ವಗೀತೆ )

ರಾಗ : ಹಿಂದೂಸ್ಥಾನಿ ಕಾಪಿ - ರೂಪಕ ತಾಳ

ದುರ್ಯೋಧನ : ಕೇಳು ಯಮಾತ್ಮಜ । ಕೇಳು ಮಹೀಭುಜ ।
ಪೇಳುವೆ ನಾನೊಂದ ಕೇಳಿಯೊಳಾನಂದ ॥ ೧ ॥

ಧರ್ಮರಾಯ : ಕೌರವರಾಜನೆ । ಸಾರಗುಣಾಢ್ಯನೆ ।
ಲಾಲಿಸು ನೀತಿಯ । ಪಾಲಿಸು ಕೀರ್ತಿಯ ॥ ೨ ॥

ದುರ್ಯೋಧನ : ಅಕ್ಷಗಳಾಟವ । ಸೂಕ್ಷ್ಮದೊಳಾಡುವ ।
ವೀಕ್ಷಿಸುನೀ ವನ । ಜಾಕ್ಷಸುಪಾನ ॥ ೩ ॥

ಧರ್ಮರಾಯ : ದ್ಯೂತ ವಿಚಾರವು । ನೀತಿ ವಿರೋಧವು ।
ಖ್ಯಾತಿ ಮನಾಶಿಪು । ದೀ ತರ ಭೂಮಿಪ ॥ ೪ ॥

ದುರ್ಯೋಧನ : ಕ್ರೀಡೆಯ ಮೋದವ । ನೀಡು ಕುಂತೀಭವ ।
ನೀಡುವೆ ದ್ರವ್ಯವ ಮಾಡುವೆ ಪಂಥವ ॥ ೫ ॥

ಧರ್ಮರಾಯ : ರಾಜ ಕದಂಬಕೆ । ಪೂಜಿನ ಕೋರಿಕೆ ।
ತೇಜೋ ವಿಹೀನವು । ರಾಜನ ಗರ್ವವು ॥ ೬ ॥

**ದುರ್ಯೋಧನ : ಹಾಡು** **ರಾಗ : ಜಲಾಬು - ಆದಿತಾಳ**

ಬಾರೈ ಬಾರೈ । ವೀರ ಯುಧಿಷ್ಠಿರ । ಭೂರಿ ವಿಚಕ್ಷಣ । ಬಾರೈ ಬಾರೈ ॥ ಪ ॥
ಶಕುನಿಗೆ ಎನ್ನಯ । ಸಕಲ ಸಿರಿಯನು ।
ಮಿಗೆ ಕೊಡುವೆನು ನೀ । ಲ್ಲಗಲದೆ ನೀನು ॥ ೧ ॥
ಹೇಮ ಕಂಟಕವನ್ನು । ಭೀಮ ಸಹೋದರ ।
ಭೂಮ ಭೂಷಣಗಳ । ಕಾಮಿಸು ನೃಪವರ ॥ ೨ ॥
ಪಿರಿಕಿಸಿ ಧರ್ಮಜ । ತೆರಳದೆ ನೀನು ।
ಭರದಾಡುವುದಿದು । ಭೂರಿ ವಿದ್ಯೆಯನು ॥ ೩ ॥

**(ಧರ್ಮರಾಯ - ಶಕುನಿ ದ್ವಂದ್ವಗೀತೆ)**

**ರಾಗ : ಜಂಝೂಟಿ - ರೂಪಕತಾಳ**

ಧರ್ಮರಾಯ ಆಡು ಬಾರೊ ಶಕುನಿದಾಳ । ಗಳನೆ ಬೇಗದಿ ॥ ಪ ॥
ನೋಡು ಎನ್ನ ದೇಶಕೋಶ । ವಾಡು ಬಿಂಕದಿ ॥ ಅ.ಪ. ॥

ಶಕುನಿ : ಧರ್ಮತನುಜ ಧರ್ಮದಿಂದ । ನಿನ್ನೊಳಾಡದೆ ।
ಮರ್ಮವೇಕಿನ್ನ ಸಿರಿಯ । ನೀಗ ಜಯಿಸುವೆ ॥ ೧ ॥

ಧರ್ಮರಾಯ : ಅನುಜನೊಡನೆ ನಾನು ತವ । ಪಣಕೆ ನಿಲ್ಲುವೆ ।
ಮನದಿ ಮದವ ಬಿಡೆಲೋ ದುರುಳ ನಿನ್ನ ಜಯಿಸುವೆ ॥ ೨ ॥

ಶಕುನಿ : ನೋಡು ಎನ್ನ ದಾಳ ಗೆದ್ದಿ । ತೀಗ ಸೋತೆಯೋ ।
ಆಡುವದಕಿನ್ನೇನಿಡುವೆ। ಪೇಳ್ವಿನೋದಿಯೆ ॥ ೩ ॥

ಧರ್ಮರಾಯ : ದುರುಳನೆನ್ನ ಸತಿಯಪಣದಿ । ತೆರದೊಳಿರಿಸುವೆ ।
ಭರದಿ ದಾಳಗಳನು ಹಾಕು । ನಿನ್ನ ಜಯಿಸುವೆ ॥ ೪ ॥

**ದುರ್ಯೋಧನ : ಹಾಡು** **ರಾಗ : ಬೇಗಡೆ - ಮಿಶ್ರ ಜಾತಿ - ರೂಪಕತಾಳ**

ದುಶ್ಯಾಸನೆನ್ನನುಜ । ದುಸ್ಸಹ ರಿಪು ಭೀಮ ॥ ಪ ॥
ನಿಸ್ಸೀಮ ಬಲಶಾಲಿಯು । ಬಳಿಗೀಗ ಬಾರೈ ॥ ಅ.ಪ. ॥
ಸಾಪರಾಧಿನಿಯಾದ । ದ್ರೌಪದಿಯನು ನೀನು ।
ಕೋಪದಿ ಸೆಳತಾರೈ । ಮುಡಿ ಪಿಡಿದು ಸಭೆಗೆ ॥ ೧ ॥
ಈ ಪಾಂಡು ಪುತ್ರರು । ದ್ರೌಪದಿಯೊಡನಿಂತು ।
ಈ ಪರಿ ಜಿತರಾಗಿ । ದಾಸತ್ವದಿಹರು ॥ ೨ ॥
ಕ್ಷತ್ರಿಯ ಪುತ್ರನೆ । ಶತ್ರು ಲತಾಂಗಿಯ ।
ವಸ್ತ್ರಗಳನು ನೀನು । ಸಭೆಯೊಳಗೆ ಸೆಳೆಯೈ ॥ ೩ ॥

**ದುಶ್ಯಾಸನ : ಹಾಡು** **ರಾಗ : ನೋಟ್ - ಆದಿತಾಳ**

ಪಿಡಿವೆನಿದೋ ಕಡುಜವದಿಂದಲಿ ॥ ಪ ॥
ಕಡುಜವದಿಂದಲಿ ಹಠಮಾಡಿಹೆನು
ತವಕದಿ ಪಿಡಿಯುವೆ ಮೋದವ ಪಡೆಯುವೆ ॥ ೧ ॥

## ದೃಶ್ಯ : ದ್ರೌಪದಿ ಭವನ

**ದುಶ್ಯಾಸನ : ಹಾಡು** **ರಾಗ : ಮೋಹನ - ಆದಿತಾಳ**

ನಡೆಯೆ ಬೇಗ ರಮಣಿ ತಡವೇಕೆ ಮಾಳ್ಪೆ ತರುಣಿ ॥ ಪ ॥
ಸನ್ನುತಾಂಗಿಯೆ ಪನ್ನಗ ವೇಣಿಯೆ
ಕನ್ನೆಯೆ ನಿನ್ನನು ಕನಿಕರದಿಂಬಿಡೆ ॥ ೧ ॥

## (ದುಶ್ಯಾಸನ - ದ್ರೌಪದಿ ದ್ವಂದ್ವಗೀತೆ)

**ರಾಗ : ನೋಟ್ - ಆದಿತಾಳ**

ದುಶ್ಯಾಸನ : ನಡೆ ನಡೆನೀ ತಡೆಯದೀಗ ಬಿಡೆನು ನಿನ್ನ ದ್ರೌಪದಿ
ಬಿಡೆನು ನಿನ್ನ ದ್ರೌಪದಿ । ಬಿಡೆನು ನಿನ್ನ ಜಡಮತಿ ॥

ದ್ರೌಪದಿ : ಮುಟ್ಟ ಬೇಡ । ಮುಟ್ಟ ಬೇಡ । ಮುಟ್ಟ ಬೇಡ ನೀಚನೆ ॥
ಮುಟ್ಟದರೆ ಕೆಟ್ಟು ಹೋಗುವೆ ಮುಡಿ ಮುಟ್ಟ ಬೇಡ ನೀಚನೆ ॥

ದುಶ್ಯಾಸನ : ದ್ಯೂತವಾಡಿ ನಿನ್ನ ಪತಿಗಳ್ ಈ ತೆರದಲಿ ಸೋತಿರೆ ।
ಈ ತೆರದಲಿ ಸೋತಿರೆ ದಾಸುತನಗಳಾಗಿರೇ ।

ದ್ರೌಪದಿ : ಏಕವಸ್ತ್ರ ಧಾರಿಣಿಯನು ಏಕೆ ಇಂತು ಸೆಳೆಯುವೆ ।
ನೀಚ ನಿನಗೆ ಯೋಗ್ಯವೇ ವಾಚಿಸುವುದು ಅರ್ಹವೇ ।

ದುಶ್ಯಾಸನ : ಷಂಡರು ನಿನ್ನ ಬಲೆಯೆಂದು ಕಂಡುಕಂಡು ಸೋತಿರೇ
ಭಂಡದಾಸಿಯಾಗಿರೇ । ಪುಂಡು ತನವನೀಗಿಲೆ ।

ದ್ರೌಪದಿ : ಸಾರಶೌರ್ಯವಂತನೆಂದು ಮೀರಿ ನೀನು ಸೆಳೆಯುವೆ ।
ಹಾನಿ ಬರುವುದರಿಯದೇ ನೀನೇಕೆ ಎನ್ನ ದೂರುವೇ ।

ದುಶ್ಯಾಸನ : ಸೊಕ್ಕಿ ಬಿಂಕವಾಡುವೆ ದಿಕ್ಕು ಕಾಣದೋಡುವೆ
ದಕ್ಕದೀಗ ನಿನ್ನಯ ಸೊಕ್ಕು ಮಾತು ಕಂಡೆಯಾ ।

ದ್ರೌಪದಿ : ಮಾನವಿಲ್ಲದಿಂತು ನುಡಿವೆ । ಹೀನ ನೆನ್ನ ದೂರುವೆ
ಹಾನಿ ಬರುವುದರಿಯದೇ ಎನ್ನನೇಕೆ ಕಾಡುವೆ ।

ದುಶ್ಯಾಸನ : ಎಲ್ಲಿ ಪೋಪೆ, ಎಲ್ಲಿ ಪೋಪೆ ನಿಲ್ಲು ನಿಲ್ಲು ನೀಚಳೆ ।
ನಿಲ್ಲು ನಿಲ್ಲು ನೀಚಳೆ । ನಾಬಲ್ಲೆನೆಲ್ಲ ಪುಂಡಳೆ ।

## ದೃಶ್ಯ : ದುರ್ಯೋಧನನ ದರ್ಬಾರ್

**ದ್ರೌಪ಼ದಿ : ಹಾಡು** **ರಾಗ : ದೇಶೀತೋಡಿ - ಏಕತಾಳ**

ಸಭ್ಯರೆಲ್ಲ ಕೇಳಿರಿ ಇವನಿದೇಕೆ ಸೆಳೆಯುವ ॥ ಪ ॥
ಅಭ್ಯನಾಜ್ಞೆ ಕೊಡಿರಿ ಬೇಗ ಯೋಗ್ಯರೇ ನೀವು ॥ ಅ.ಪ. ॥
ಕೌರವ ನ್ಯಾಯಕಿಂತು ಕೇಡು ಬಂದರೆ ।
ಸಾರಗುಣದೆ ನೋಡುತಿಂತು ಸುಮ್ಮನಿರ್ಪರೆ ॥ ೧ ॥
ಚಂದ್ರವಂಶ ವೃದ್ಧ ಭೀಷ್ಮ ನಿರುವನಿಲ್ಲಿಯೇ ।
ತಂದುಯೆನ್ನ ಬಾಧಿಸುವುದ ನೋಡುತಿರ್ಪುದೆ ॥ ೨ ॥
ವಂಚಕಾತ್ಮನೆನ್ನ ಮುಡಿಯ ಪಿಡಿದು ಸೆಳೆಯುವಂ ।
ವಂಚಕಾತ್ಮನೆನ್ನ ಮುಡಿಯ ಪಿಡಿದು ಸೆಳೆಯುವಂತೆ ॥ ೩ ॥
ಖೂಳನಿವನ ಬಾಧೆಯನ್ನು ತಾಳಲಾರದೆ ।
ಕೇಳಿಕೊಳ್ವೆ ಪತಿಗಳಿರಾ ಕಾಯಬಾರದೆ ॥ ೪ ॥

**ಧೃತರಾಷ್ಟ್ರ : ಹಾಡು** **ರಾಗ : ಧನ್ಯಾಸಿ - ಆದಿತಾಳ**

ಸುತನೆ ಲಾಲಿಸೆನ್ನ ಮಾತಾ ಹಿತವಬಯಸಿ ಪೇಳುವೆ ॥ ಪ ॥
ಕ್ಷಿತಿಯೊಳಗೆ ಜ್ಞಾತಿಗಳೊಳು ಉಚಿತವಲ್ಲ ದ್ಯೂತ ನಿನಗೆ ॥ ೧ ॥
ದ್ಯೂತ ದೊಳು ಸೋತ ಸಕಲ ದೇಶ ಕೋಶವೆಲ್ಲವಾ
ಜ್ಞಾತಿಗಳಿಗೆ ತಿರುಗಿ ಇತ್ತು ಖ್ಯಾತಿ ಪಡೆದು ಸುಖದಿ ಬಾಳು ॥ ೨ ॥

**ಧೃತರಾಷ್ಟ್ರ : ಹಾಡು** **ರಾಗ : ಮೋಹನ - ರೂಪಕ ತಾಳ**

ದ್ರೌಪದಿ ಕೋಪಂ । ವಿ ಪರಿತಾಪಂ ॥ ಪ ॥
ಶಾಪವನೀಯದೆ । ಕಾಪಾಡು ತನುಜನ ॥ ಅ.ಪ. ॥
ದುಷ್ಟ ಸಹಾಯಂ । ಭ್ರಷ್ಟನೇ ಹಾ ಹಾ ।
ನಿಷ್ಠಳೆ ಮನ್ನಿಸು । ಕಷ್ಟವಿನ್ನೇಕಿದು ॥ ೧ ॥
ಕಾಮಿನಿ ಕೇಳು । ಶಮನವ ತಾಳು ।
ತಾಮಸನೀತನು । ಕಾವಿನಿಷ್ಟವನು ॥ ೨ ॥
ಮನ ಒಲಿದಂತೆ । ನೀನಿರು ಶಾಂತೆ ।
ಏನಿದು ಮಾತ್ಸರ್ಯ । ಮಾನಿನಿ ಬೇಡವು ॥ ೩ ॥

**ಭೀಮ : ಕಂದ**

ಈ ದುರುಳ ದುರ್ಯೋಧನನ ಪುತ್ರ ಮಿತ್ರ ಕಳತ್ರ
ಬಾಂಧವರಂ ಧುರದೊಳ್ ಬಲಿಯಿಕ್ಕುತೇ
ಖಳದುಶ್ಯಾಸನನಕರುಳಂ ಕಾಳಗದೋಳ್ ಬಗೆದು
ಈ ದ್ರುಪದ ನಂದಿನಿಯ ಬಿರು ಮುಡಿಯಂ ಕಟ್ಟಿಸುವೆ ಇದು ಸತ್ಯಾ ॥

## ದೃಶ್ಯ : ಅರಣ್ಯ

**ಧರ್ಮರಾಯ : ಹಾಡು** **ರಾಗ : ಕಾನಡ - ಆದಿತಾಳ**

ಎಂತು ಸಹಿವೇ ಕೋಮಲಾಂಗೀ ಸಂತಾಪವನು ॥ ಪ ॥
ಕಾಂತೆಯೆ ಸುಗುಣೆ ನೀ । ಶಾಂತೆಯೆ ನಿನಗಿಂಥ
ಚಿಂತೆ ಬಂದುದೇ ರಮಣೀ ಭ್ರಾಂತ ನನ್ನಿಂದಾ ॥ ೧ ॥

**ಧರ್ಮರಾಯ : ಹಾಡು** — **ರಾಗ : ನೀಲಾಂಬರಿ - ರೂಪಕ ತಾಳ**

ನಳಿನಾಯತಾಂಬಕೀ ಎಂತು । ನಡೆಯುವೆ ಮುಂತು ।
ಬಳಲುತ ಬಿಸಿಲಿನ । ಝಳದಿಂದೀ ಮೋಹನ ॥ ೧ ॥
ಲಲಿತ ಗಾತ್ರವಿದೀಗ ಬಳಲಿ । ಇರಲೆಂತು ನೋಡಲೆ ।
ಪುರದಿ ನಾನಾ ವಿಧಮಾದ । ಸುಖದಿರ್ದ ನಿನ್ನ ॥ ೨ ॥
ಕರೆತಂದು ಕಾಡಿಗೆ । ಕರೆ ಕರೆ ಪಡಿಪಗೆ ।
ಮರಣವು ಬಾರದೆ ವಿಧಿಯೆ । ಇನ್ನೇನು ಗತಿಯೇ ॥ ೩ ॥
ಸುರಚಿರಗಾತ್ರಿಯೇ ನೀನು । ಚರಣವನೀಗ ।
ಉರಿಯುವ ನೆಲದೊಳು । ಮೆರೆವ ಕಲ್ ಮುಳ್ಳೊಳು ॥ ೪ ॥
ಇರಿಸುವದೇ ಪರಿ ಮುಗುದೆ । ಪರಿಗಾಣದಾದೆ ।
ಪಾಪಿಯಾದ ನಾನು ಜಗದಿ ಇದ್ದೇನು ಫಲವು ॥ ೫ ॥
ಈ ಪರಿ ನಿನ್ನನು । ತಾಪಗೊಳಿಸುತಿದೆ ।
ಶ್ರೀಪತಿ ಕರುಣಯಿಂತಾಯ್ತು । ಮತಿ ತೋರದಾಯ್ತು ॥ ೬ ॥

**ಅರ್ಜುನ : ಹಾಡು** — **ರಾಗ : ಧನ್ಯಾಸಿ - ಆದಿತಾಳ**

ಸೈರಿಪೆ ಈ ಪರಿ ತಾಪವ ರಮಣಿ ತಾಪವ
ರಮಣಿ ದ್ರೌಪದಿ ತರುಣಿ ॥ ಪ ॥
ಕಡುಬಿಸಿಲಿಂದಲೀ ಸುಡುತಿಹ ಭೂಮಿಯೊಳ್
ತಡೆಯುತಲೀಪರಿ ಅಡಿಯ ನಿಡುವೆಸೀಂ ॥ ೧ ॥

**ಪಾಂಡವರು : ಹಾಡು** — **ರಾಗ : ಕಮಾಚ್ - ಮಿಶ್ರ ಛಾಪುತಾಳ**

ಅರುಣ ಸಹಾಯನೆ । ಅರುಣಾ ಕಿರಣಾ ಭರಣಾ ಶರಣಾ ॥ ಪ ॥
ದುರುಳರು ಯನ್ನಂ । ಮರುಗಿಸುವರು ಹಾ ।
ಪೊರೆಯೋ ದೇವನೆ ಕೃಪಾಳುವೆ । ಕೇಳುವೆ ತಾಳುವೆ ಶೀಲವೆ ॥ ೧ ॥
ಕೀಚಕನೆಂತು । ಯೋಚಿಸೆ ದುಷ್ಟಂ ।
ಯೋಚಿಪೆ ಸರ್ವ ಕಾರಣ । ಕರುಣಾ ಭರಣಾ ಶರಣಾ ॥ ೨ ॥
ಜಗದೊಡೆಯನೆ ಪೊರೆ । ಹಗೆಯವರಿಂದ ।
ಒದಗಿಹ ದುಃಖವನಳಿಸು । ಬೆಳೆಸು ಒಲಿಸು ನಿಲಿಸು ॥ ೩ ॥

## ದೃಶ್ಯ : ದುರ್ಯೋಧನನ ಆಸ್ಥಾನ

**ಧುರ್ಯೋಧನ : ಹಾಡು** **ರಾಗ : ಬೇಹಾಗ್ / ಚತುಶ್ರಜಾತಿ - ಏಕತಾಳ**

ಪೂತನೀತನೆನ್ನ ಮಾವನು । ಮಹಾತ್ಮನು । ಕುಂತಿ ತನುಜರ ।
ಪಂಥದಿಂ ಸೋಲಿಸಿ । ಇಂತೆಲ್ಲ ಭಾಗ್ಯವ । ನಂತ ನದಿತ್ತನು ॥ ೧ ॥
ಎನಗಿಂತ ಸಹಾಯವನು । ಮಾಡಿದೀತನ ।
ಮನದಿಂ ಸಂತಸದಿ । ಮಣಿಯುವೆ ಮೋದದಿ ॥ ೨ ॥
ಮಾನ್ಯ ಶಕುನಿಯಿಂದ । ಧನ್ಯನಾದೆನು ನಾನು ।
ಗಣ್ಯ ನಾಗಿಳೆಯೊಳು । ಪುಣ್ಯವ ಪಡೆದೆನು ॥ ೩॥

## ದೃಶ್ಯ : ಕಾಡು
### (ದುರ್ಯೋಧನ - ಗಂಧರ್ವ ದ್ವಂದ್ವಗೀತೆ)

**ರಾಗ : ನೋಟ್ - ಆದಿತಾಳ**

**ದುರ್ಯೋಧನ :** ಬಾರೆಲೊ ಬಾರೆಲೋ ಹೇಡಿಯೇ ನೀಂ
ಈರಣದೊಳುನಿನ್ನಕೊಲ್ಲುವೇ

**ಗಂಧರ್ವ :** ಕೌರವ ನೀಚನೆ ವೀರನೆಂದರಿಯದೆ
ಮೀರಿದ ಡಂಬವತೋರ್ಪೆಯಾ ನೀಂ

**ದ್ರೌಪದಿ : ಹಾಡು** **ರಾಗ : ಧನ್ಯಾಸಿ - ರೂಪಕತಾಳ**

ಬಳಲಿ ಸುತ್ತಲೆನ್ನಿವನು । ಸೆಳೆದುಕೊಂಡು ಪೋಪನು ॥ ಪ ॥
ಖಳನ ಕೊಂದು ಬೇಗ ಎನ್ನ । ಸಲಹಿ ಪ್ರಾಣ ಕಾಂತರೆ ॥ ಅ.ಪ. ॥
ಭೀಮಸೇನ ಬೇಗ ಬಾರೈ । ಭೀಮ ನಿಜವ ತೋರೈ
ಶ್ರೀ ಮನೋಜ್ಞ ಗಾತ್ರನೆನ್ನ । ನೇಮವನ್ನು ಪಾಲಿಸೈ ॥ ೧ ॥
ನಾಚದಿಂತು ಬಂದು ಎನ್ನ । ನೀಚನೀಗ ಕಾಡುವಂ ।
ಯೋಚನೆಯು ತೋರದೆನಗೆ । ವಾಸಿಸಿನ್ನೊಳು ಬೇಗ ॥ ೨ ॥
ಕ್ರೂರ ಪಾಪಿಯನ್ನು ಕೊಂದು । ಯಾರು ಕಾಯ್ವರಿಲ್ಲವೆ ।
ಸೂರೆ ಪೋದುದೆನ್ನ ದೇಹ । ಯಾರು ದಿಕ್ಕಿಲ್ಲವೆ ॥ ೩ ॥

**ಭೀಮ : ಹಾಡು** **ರಾಗ : ಅಠಾಣ - ಆದಿತಾಳ**

ದ್ರೌಪದಿಯ ಖೂಳನೆ । ಈ ಪರಿಯೊಳೆಳೆಯುವುದೆ ॥ ಅ ॥
ಯಾರು ಇಲ್ಲದಿಹ ಕಾಲದಲ್ಲಿ ನೀನೋರ್ವನೈದಿ ಪರ ನಾರಿಯನು ।
ಕ್ರೂರನಂತೆ ಮಿಗೆ ಘೋರ ಕೃತ್ಯವನು ಚೋರನಂತೆ ನೆರವೇರಿಸುತ್ತಿರುವೆ ॥ ೧ ॥
ಸೈಂಧವಾ ಧಮನೆ ಬಂಧು ವರ್ಗದೊಳಗಿಂಥ ಕೃತ್ಯವನು ಮಾಡುವರೇಂ ।
ಬಂಧಿಸುತ್ತಿರ್ದೊ ಮಧಾಂಧ ನಿನ್ನ ಮದ ಗಂಧವಿಲ್ಲದೊಲು ನಿನ್ನ ಕೊಲ್ಲುವೆನು ॥ ೨ ॥
ದುಷ್ಟ ನಿನ್ನ ಮದವೆಷ್ಟು ನೋಡುವೆನು ಕೆಟ್ಟ ಕೃತ್ಯವನು ಮಾಡುವೆಯಾ ।
ಶಿಷ್ಟಳಾದಿವಳ ಮುಟ್ಟದೀತನನು ಕುಟ್ಟಿ ಕೊಲ್ಲುವೆನು ದಿಟ್ಟವಾಗಿರಲೋ ॥ ೩ ॥

**ಭಾನುಮತಿ : ಹಾಡು** **ರಾಗ : ತೋಡಿ - ಆದಿತಾಳ**

ಸಖಿಯೇ ತಾಪವನು ಸೈರಿಸಲಾರೆನು ॥ ಪ ॥
ಕಾಂತನ ನಾದುಷ್ಟ ಶಾಂತ ಗಂಧರ್ವನು
ಬಂಧಿಸಿ ಸೆಳೆದೊಯ್ದ ಚಿಂತೆ ಗೀಡಾದೆನು ॥ ಅ.ಪ. ॥

**ಧರ್ಮರಾಯ : ಹಾಡು** **ರಾಗ : ಕಾನಡ - ಏಕತಾಳ**

ಏಳು ಭಾನುಮತಿಯೆ । ಏಳು ಶುಭಮತಿಯೆ ॥ ಪ ॥
ಪಾಲಿಸು ನಿನ್ನ ಪತಿಯ । ತಾಳು ನೀಂ ಶುಭಮತಿಯೆ ॥ ಅ.ಪ. ॥
ಮಗಳೆ ಚಿಂತಿಸದಿರು । ಪಗೆಗಳ ಜಯಿಸುವೆ ।
ಸುಗುಣೆ ನಿನ್ನರಸನ । ಬುಗುಡವ ನೀಗುವೆ ॥ ೧ ॥
ಆಯಾಸದಿಂದಲಿ । ಕಾಯವು ಬಳಲ್ದುದು ।
ಕಾಯಲಿ ನಿನ್ನನು । ತೋಯಜನೇತ್ರನು ॥ ೨ ॥
ಅರಿಗಳು ನಾವಲ್ಲ । ತ್ವರೆಯನು ಬಿಡು ನೀನು ।
ಕುರುಪತಿಯನು ಬೇಗ । ಪೊರೆವೆನು ಭಾಮಿನಿ ॥ ೩ ॥

## (ಅರ್ಜುನ - ಗಂಧರ್ವ ದ್ವಂದ್ವ ಗೀತೆ)

**ರಾಗ : ನೋಟ್ - ಏಕತಾಳ**

ಅರ್ಜುನ ಗಗನ ಚರನೇ ಸುಗುಣವರನೇ ಆಗಲಬಾರದೆ
ಪಗೆಗಳಾದೊಡಾವ ಕೇಡು ಬಗೆಯಬಾರದ್ದೆ ।

ಗಂಧರ್ವ ಇಂದ್ರ ತನುಜಾ ಚಂದ್ರಕುಲಜಾ ಸಾಂಧ್ರವದನನೇ
ತಂದ್ರಿಯ ನರೇಂದ್ರ ಬಿಡೆನು ಕಂತುರೂಪನೇ ।

## (ಸೈಂಧವ - ದ್ರೌಪದಿ ದ್ವಂದ್ವ ಗೀತೆ)

**ರಾಗ : ಬೇಹಾಗ್ - ಆದಿತಾಳ**

ಸೈಂಧವ : ಕಾಮಿನಿ ಕೇಳೆಲೆ ಕಾಮನರಗಿಣಿಯೇ
ಕಾಮಿಸುತೆನ್ನೊಳು ಕಾಮರಸಾಂಬಕೀ

ದ್ರೌಪದಿ : ಸೈಂಧವ ರಾಜನೆ ಬಂಧುಗಳೊಳುನೀ
ಕುಂದನೆಣಿಸದೇದಂದುಗ ಪಡುವೇ

ಸೈಂಧವ : ವನದಲಿರುವುದೇನೇ ವನಜಮುಖಿಯೇ
ನೀನು ವಿನಯನಾದೆನ್ನನು ಕನಿಕರಿಸಲೆನೀಂ ।

ದ್ರೌಪದಿ : ಸೋದರನಾಗಿ ನೀಂ ಕ್ರೋಧವನೆಣಿಪುದೆ
ಬಂಧುಗಳೊಳಗಿಂತು ಕುಂದನೆಣಿಪರೇ ।

**ದ್ರೌಪದಿ : ಹಾಡು** **ರಾಗ : ಮೋಹನ - ಆದಿತಾಳ**

ಬಾವನೆ ಬಳಲಿದೆ । ಭಾವಜ್ಞ ನಲುಗಿದೆ ॥ ಪ ॥
ಈವನ ಕೈ ತಂದು । ಈ ವಿಧದಿ ನೊಂದು ॥ ಅ.ಪ. ॥
ಸಚ್ಚರಿತನೆ ನಿನ್ನ । ಯಚ್ಚುತ ಬಂಧವ ।
ಬಿಚ್ಚುವೆನೀಗ ನಾ । ನಚ್ಚರಿಯೇನಿದು ॥೧॥
ಕೋಮಲ ತಲ್ಪದಿ ನೀ ಮಲಗಿರ್ದುದ ।
ತಾಮದುಳಿಯುತ । ಭೀಮಕರ್ಮವ ಗೈದೆ ॥ ೨ ॥

ನೀನಾಗ ಸಭೆಯಲ್ಲಿ । ಮಾನ ಭಂಗವ ಗೈದೆ ।
ಏನಾದುದೀಗಳು । ನೀನಾಲೋಚಿಸು ಶೂರ ॥ ೨ ॥
ಎಮ್ಮಲ್ಲೇನಿರ್ಪುದು । ಸುಮ್ಮಾನ ಮಾಡಲು
ಸಮ್ಮತವಾಗಿರಲು । ದುಮ್ಮಾನವನು ಬಿಡು ॥ ೪ ॥

**ದೃಶ್ಯ : ಸರೋವರ**

**ದ್ರೌಪದಿ : ಹಾಡು** **ರಾಗ : ..... ತಾಳ ......**

ಆಹಾ ಏನ್ ಗತಿ ವಾಹಿನಿ ವಾರಿಯೊಳ್
ಒಯ್ದಾ ಪಾತ್ರೆಯು ನೀರೊಳುಮುಳುಗಿತು ॥ ಪ ॥
ಮನು ಮುನಿಗಳಿಗೆ ಉಣಬಡಿಸುತಲಿದ್ದೆ ।
ಅನುವಿನ ಪಾತ್ರೆಯು ಮುಳುಗಿತು ಜಲದೊಳು ॥ ೧ ॥

**ಧರ್ಮರಾಯ : ಹಾಡು** **ರಾಗ : ಭೈರವಿ - ರೂಪಕ ತಾಳ**

ಏನೈ ಕಂದ । ಜ್ಞಾನಾನಂದ ॥ ಪ ॥
ಏನೀ ಮರಣಂ । ಮ್ಲಾನಂ ವದನಂ ।
ಬಾಲನಿನಗೆ । ಕಾಲವೊದಗೆ । ತಾಳಲೆಂತು । ಪೇಳು ಮುಂತು ॥ ೧ ॥
ವೀರ ನಿನ್ನ । ಸಾರಿ ಕೊಂದ । ಕ್ರೂರನನ್ನು । ನಾರಿಕೊಲ್ವೆ ॥ ೨ ॥
ಪೂತ ನೋಡು । ಮಾತನಾಡು । ಖ್ಯಾತ ತರವೆ । ಕಾತರಿಸುವೆ ॥ ೩ ॥

**ದ್ರೌಪದಿ : ಹಾಡು** **ರಾಗ : ತೋಡಿ - ಆದಿತಾಳ**

ನಾನೇನು ಮಾಡಲಿ । ಈ ನದಿ ಜಲದಲಿ ॥ ಪ ॥
ಕಾಣದಕ್ಷಯ ಪಾತ್ರೆ । ಏನು ತೋರದು ವಿಧಿಯೆ ॥ ಅ.ಪ. ॥
ಆಹಾರವೀವುದು । ಸಹಸ್ರ ಸಂಖ್ಯೆಗೆ ।
ಆಹಾ ಮುಂದೇನು ಗತಿ । ಊಹೆಯು ತೋರದು ॥ ೧ ॥
ಕಾಂತರು ಬಂದರೆ । ಎಂತರುಹುವೆನು ।
ಮುಂತು ತೋರದ ಮುನ್ನ । ಸ್ವಾಂತವು ಕುಂದಿದೆ ॥ ೨ ॥
ತರಣಿಯ ಸೇವಿಸಿ । ಪರಿ ಪರಿ ಭಾವಿಸಿ ।
ದೊರೆತ ಪಾತ್ರೆಯು ಪೋಗೆ । ಪರಿಯೇನು ದೈವವೆ ॥ ೩ ॥

## ದೃಶ್ಯ : ಅರಣ್ಯದ ಒಂದು ಭಾಗ

**ಧರ್ಮರಾಯ : ಹಾಡು** — **ರಾಗ : ನಾದನಾಮಕ್ರಿಯ - ರೂಪಕತಾಳ**

ಸೈರಿಸೆ ನಾನನುಜಾತರೆ । ಮೀರಿದ ದುಃಖವನರರೆ ।
ಘೋರಾರಣ್ಯಕೆ ನಿಮ್ಮನು । ಗಾರುಗೊಳಿಸಿ ಕರೆತಂದೆನು ॥ ೧ ॥
ಪಾಪಿಯು ಬೆನ್ನೊಳು ಬಂದುದಕೀ ಪರಿ ಕಷ್ಟವ ಪಡೆದಿರಿ
ಕಾಪಾಡುವಗಾರೆಮ್ಮನು । ಈ ಪೊಡವಿಯೊಳಗೆ ಹರಿಹರರಿ ॥ ೨ ॥
ಜನಿಸುತ ದ್ರುಪದನ ಮನೆಯೊಳು । ಘನವೀರರೆನುತಲೆಮ್ಮನು
ವನಿತೆಯೆ ನೀಂ ಕೈಪಿಡಿದಿಯಲು । ವನವಾಸವೆ ಗತಿಯಾಯಿತೆ ॥ ೩ ॥

**ಅರ್ಜುನ : ಹಾಡು** — **ರಾಗ : ದೇಶಿಕಾಪಿ - ರೂಪಕ**

ಸುಮುಕೋಮಲೆ ಪರಸೇವೆಗೈಯುವೆಯೆಂತು ಹಾ ಸಖೀ
ನಮಗೇಕೆ ನಾರಿಯಾಗೆ ಮೋಹ । ದಾಳಿ ಶಶಿಮುಖೀ ॥ ೧ ॥
ದ್ರುಪದಾತ್ಮಜಾತೆಯಾಗಿ ಘೋರವನದಿ ತೊಳಲಿದೆ
ಚಪಲಾಕ್ಷಿ ನಮ್ಮ ಕೈಪಿಡಿಯುತಪಾರ ಬಳಲಿದೆ ॥ ೨ ॥
ವನಜಾಕ್ಷಿ ಕಲ್ಲುಮುಳ್ಳುಗಳ್ತುಳಿಯಲಾರದೆ
ಮನದಲ್ಲಿದೇನು ಚಿಂತಿಸುವೆಯೊ ಪೇಳಬಾರದೆ ॥ ೩ ॥

**ಧರ್ಮರಾಯ : ಕಂದ**

ಹನ್ನೆರಡು ವರುಷ ವನದೊಳ
ಗುನ್ನತಕಷ್ಟವನು ಪಡಿಸಿದೆನು ನಿಮಗಾಂ ಮುಂ ।
ದಿನ್ನು ಪರಸೇವೆಗೈಯುವ
ದನ್ನೋಡುತ ನಾನದೆಂತು ಸೈರಿಪೆನಕಟಾ ॥

**ಭೀಮ : ಹಾಡು** — **ರಾಗ : ಕಮಾಚ್ - ಏಕತಾಳ**

ಬಿಡುಬಿಡು ನಿನ್ನಯ । ದುಡುಕಿನ ನುಡಿಯ
ನುಡಿವರೆ ನಾನೋಡ ಬಿಡುವೆನೆ ತಿಳಿಯೆ ॥ ೧ ॥
ಸುರವರರೇ ಕಾದಿರಲಿದನೀಗ ಕರದೊಳು
ತೆಗೆವೆನು ಪರಿಕಿಸು ಬೇಗ ॥ ೨ ॥

ಗದೆಯಿಂ ತಡೆವವರೆದೆಯನು ಸೀಳಿ ನದೆವೆನು
ಬರುವವರನಿದೋ ನೀವ್ಕೇಳಿ ॥ ೩ ॥

## (ವಿರಾಟಪರ್ವ)

### ದೃಶ್ಯ : ಅರಮನೆ - ವಿರಾಟ ಮಹಾರಾಜನ ಸಭೆ

**ವಿರಾಟ : ಹಾಡು** **ರಾಗ : ಸಾರಂಗ - ಆದಿತಾಳ**

ಕ್ಷೇಮವೇನೈ ಸಕಲ ಪ್ರಜೆಗಳು
ಸಮಚಿತ್ತದಿಂದಲೀ ॥ ಪ ॥
ಕಾಲಕಾಲಕೆ ಮಳೆಯು ಬೀಳುತೆ
ಬೆಳೆದು ಬೆಳೆಗಳು
ಇಳೆಯ ಜನ ಸಂತೋಷಿಸುವರೆ
ಅರುಹು ನೀನು ಹರುಷದಿಂದಲೀ ॥ ೧ ॥
ಸುತ್ತಲಿರುತಿಹ ಶತ್ರು ಭೂವರು ಇತ್ತರೇನೈ ಕಾಣಿಕೆಯನು
ಮತ್ತೆ ಕರಿಗಳು ಸುತ್ತ ಭರದೊಳು ಒತ್ತಿ ಮೆರೆವ ವಿಸ್ತಾರವೇನೈ ॥ ೨ ॥

**ಧರ್ಮರಾಯ : ಹಾಡು** **ರಾಗ : ಖರಹರಪ್ರಿಯ - ಮಿಶ್ರಛಾಪುತಾಳ**

ಕೇಳು ನೃಪೆಂದ್ರನೆ । ಕೇಳು ಮಹೀಂದ್ರನೆ ॥ ಪ ॥
ಲಾಲಿಸು ನುಡಿಯನು । ಪಾಲಿಸು ನಮ್ಮನು । ಅ.ಪ. ॥
ಧರ್ಮವನೀತನು । ಎಮ್ಮನು ಕಾಯ್ದನು ।
ಸಮ್ಮತಿಸದೆ ವನಕೆ । ಮರ್ಮವಿನ್ನೇತಕೆ ॥ ೧ ॥
ಪಾಂಡು ಪುತ್ರರು ವಿಪಿನಕೆ ಪೋದರು ।
ಏಪರಿ ತಿಳಿಯದೆ । ಭೂಪನೆ ಸಾರಿದೆ ॥ ೨ ॥
ರಾಜಾಧಿರಾಜರು । ರಾಜ ಭಾಸ್ಕರರು ।
ಆಜ್ಞೆ ನಿಸ್ಸೀಮರು । ರಾಜ್ಯವ ಬಿಟ್ಟರು ॥ ೩ ॥

**ವಿರಾಟ : ಹಾಡು** **ರಾಗ : ಕಮಾಚ್ - ತ್ರಿಪುಟಛಾಪುತಾಳ**

ವಿಧಿಯನು ಮೀರುವರಾರೀ ಜಗದಿ ॥ ಪ ॥
ವೀರ ಪಾಂಡವರು । ನಾರಿಯ ಸೇರಿ

ಘೋರಾರಣ್ಯಕೆ । ಸಾರಿದರೇ ಹಾ ॥ ೧ ॥
ಸರಸಿಜಾಸನನ ಬರಹವ ಮೀರೆ ।
ಹರಿಹರಸುರ ಪಾಮರರಿಗಾಗುವದೆ ॥ ೨ ॥
ನಿಮ್ಮನು ಪೊರೆವೆ । ನೆಮ್ಮದಿಯೊಳಗೆ
ಸಮ್ಮುಖದೊಳಗಿರಿ ಸುಮ್ಮಾನದೊಳಗೆ ॥ ೩ ॥

**ಭೀಮ : ಹಾಡು** — **ರಾಗ : ಜಲಾಬು - ಆದಿತಾಳ**

ನರಪತಿ ರಾಜನೆ । ಸುರರಾಜ ತೇಜನೆ ॥ ಪ ॥
ಪರಿಯಿಸು ಪೇಳುವೆ ಭರಿಸೈ ಕೃಪಾಳುವೆ ॥ ಅ.ಪ. ॥
ಭೀಮನ ಮನೆಯಲಿ ಆ ಮಹಾಸದನದಲ್ಲಿ ।
ಕಾಮಿತ ಪಾಕವನು । ನಾ ಮಾಡುತ್ತಿದ್ದೆನು ॥ ೧ ॥
ಪಾಂಡುಕುಮಾರರು । ಕಾಡಿಗೆ ಪೋದರು ।
ನೀಡವರಿಲ್ಲದೆ । ಪೊಡವೀಶನೆ ಬಂದೆ ॥ ೨ ॥
ಕರುಣದಿ ಪಾಲಿಸೈ । ನರನಾಥ ಮೋದಿ ಸೈ ।
ವರಸುಗುಣಾಂಬುಧಿ । ಪರಮ ದಯಾನಿಧಿ ॥ ೩ ॥

**ಅರ್ಜುನ (ಬೃಹನ್ನಳೆ) : ಹಾಡು** — **ರಾಗ : ಕಾನಡ - ಅಟ್ಟತಾಳ**

ಪ್ರಾರ್ಥನ ಮಗಳಿಗೆ । ನಾಟ್ಯ ವಿದ್ಯೆಯ ।
ಪ್ರಾರ್ಥನೆಯಿಂದಲಿ । ಕಲಿಸುತ್ತಿದ್ದೆನಯ್ಯ ॥ ೧ ॥
ಪಾಂಡುಕುಮಾರರು । ಕಾಡು ಸೇರಿದರೀಗಾ
ಕಂಡು ರಕ್ಷಕರಿಲ್ಲ । ದಿಲ್ಲಿ ಬಂದೆನು ಬೇಗಾ ॥ ೨ ॥
ರಾಜಾಧಿರಾಜರು । ಧರ್ಮಾತ್ಮ ಜಾದಿಗಳು ।
ರಾಜ ತೇಜನೆ ನಮ್ಮ । ಪಾಲಿಸುತಿಲೆ ಬಾಳು ॥ ೩ ॥
ನಿನ್ನ ಮಗಳಿಗೆ ನಾ । ವಿದ್ಯೆಯ ಕಲಿಸುವೆ ।
ಸನ್ನುತ ಗುಣಸಾಂದ್ರ । ನೀ ಎನ್ನ ಬಂಧುವೆ ॥ ೪ ॥

## ದೃಶ್ಯ : ಸುದೇಷ್ಣೆ ಅಂತಃಪುರ

**ಸುದೇಷ್ಣೆ : ಹಾಡು** ರಾಗ : ದರ್ಬಾರಿ - ರೂಪಕತಾಳ

ಯಾರು ನೀನಲೆ । ನಾರಿಯೆ ॥ ಪ ॥
ಕಾರಣವೇನಿಲ್ಲಿಗೆ ಬಾರೆ । ಧೀರೆ ಮಾಜದೆನ್ನೊಳುಸುರೆ॥ ಅ.ಪ. ॥
ಲಲನೆ ನಿನ್ನ ನೋಡೆ ರಾಜ । ಕುಲದಿ ಜನಿಸಿದಂತೆ ತೋರ್ಪೆ ।
ಎಲಲೆ ನಿನ್ನ ಪತಿಯದಾರು ಚಲುವೆ ಹೆಸರದೇನು ಪೇಳು ॥ ೧ ॥

**ದ್ರೌಪದಿ : ಹಾಡು** ರಾಗ : ಬೇಹಾಗ್ - ರೂಪಕತಾಳ

ಕೇಳಮ್ಮ ಮತ್ಸ್ಯರಾಣಿ । ಜಲಜಾತ ರಮ್ಯಪಾಣಿ ॥ ಪ ॥
ಗಂಧರ್ವರೈವರಿಹರು । ಇಂದೆನ್ನ ರಮಣರು ।
ಬಂಧಂಗಳಂ ಮಾಡಿದರು । ಒಂದಬ್ಧಿ ಬಿಡುವೆನವರ ॥ ೧ ॥
ಕುಂತಿ ತನೂಜ ನೃಪರ । ಅಂತಃಪುರಾರೂನೆಯರ ।
ಸಂತೋಷಿಸಿರ್ದೆನವರ । ಶಾಂತಿಯ ಪೇಳ್ವೆ ವಿವರಾ ॥ ೨ ॥
ಅತಿಸತ್ಯಶಾಲಿ ನೃಪರು । ನುತಿಭಾನಮಾನಗುಣರು ।
ಖತಿಗೊಂಡು ವನದಲಿಹರು । ಅತಲಾಬ್ಧ ಕೀರ್ತಿಯುತರು ॥ ೩ ॥
ಬಗವಾಯ್ತು ಬಂದೆನಿಲ್ಲಿ । ಶಿರಿಮುಡಿಯು ಕಟ್ಟಬಲ್ಲೆ ।
ವರಪುಷ್ಪಮಂ ಮುಡಿಸಬಲ್ಲೆ । ಪರನರರ ನೋಡಲೊಲ್ಲೆ ॥ ೪ ॥

**ಕೀಚಕ : ಕಂದ**

ತಾರಾನಿವಹದ ಮಧ್ಯದಿ
ತೋರುವ ರೋಹಿಣಿಯೊ ಕಾಣೆ ನಿವಳುರ್ವಶಿಯೋ ।
ನಾರಿಯು ಮಾರನ ಸತಿಯೋ
ಸೂರೆಯಗೈದಿಹಳು ಮನ್ಮನವ ಸೈರಿಸೆ ನಾಂ ॥

**ಕೀಚಕ : ಹಾಡು** ರಾಗ : ಮುಖಾರಿ - ಆದಿತಾಳ

ಯಾರೊ ಕಾಣೆನಾಹ ಈಕೆ । ಮಾರನಾ ಪತಾಕೆ
ತೋರುತಿರ್ಪಳೀ ನಯನಕೆ । ಸಾರಸಾರಸಾಂಬಕೆ ॥ ೧ ॥

ಚಾರು ಚಂದಿರಾಭವದನೆ । ವಾರಣೇಂದ್ರಯಾನೆ
ಹೀರಮಣಿ ಸಮಾನರದನೆ । ನೀರೆ ಸೊಬಗಿನ್ನೈಸೋನೆ ॥ ೨ ॥
ನೋಟದಿಂದ ಮಾನಸವನು । ಮೀಟುತಿಹಳು ಮಾರನು
ಕೋಟಲೆಯನು ಗೈಯುತಿಹನು ಕಾಟವನ್ನು ಸೈಸೆನು ॥ ೩ ॥

## ದೃಶ್ಯ - ರಸ್ತೆ

**ಕೀಚಕ : ಹಾಡು** **ರಾಗ : ಧನ್ಯಾಸಿ - ರೂಪಕತಾಳ**

ಏತಕೆನ್ನನಿಂತು ! ಘಾತಿಸುವೆ ಕಂತು ॥ ಪ ॥
ಆ ತರುಣೀಮಣಿಗೆ ನಾನು । ಸೋತಿರುವುದ ನೋಡಿ ನೀನು ॥ ಅ.ಪ. ॥
ಕೀರರಥದ ಮೇಲೆ ಕುಳಿತು । ಭೂರಿ ಪುಂಡ್ರಚಾಪವಾಂತು ।
ಸಾರಸಾದಿ ಶರವ ಪೂಡಿ । ಬೀರುತಿರುವೆ ಗುರಿಯ ನೋಡಿ ॥ ೧ ॥
ಇಂದುಕಿರಣವೆನ್ನ ತನುವ । ಕಂದಿಸುವುದು ಬಿಸಿಲಿನಂತೆ
ಮಂದಮಾರುತನೋರ್ವನಕಟ । ಪೊಂದಿ ಕೋಪವನ್ನು ಸುಡುವ ॥ ೨ ॥
ಸೈಸಲಾರೆ ಮಾರಶರಕೆ । ಮಿಾಸಲಾದೆ ನೀನದೇಕೆ ಮೋಸದಿಂದಲೆನ್ನ
ಮನಕೆ । ಗಾಸಿಗೊಳಿಪೆ ನಮಿಪೆ ಪಾದಕೆ ॥ ೩ ॥

**ಕೀಚಕ : ಕಂದ**

ಸುರಭಿಳ ಸುಮತಲ್ಪದೊಳಾ
ತರುಣೀಮಣಿಯೊಡನೆ ಕುಳಿತು ಸರಸೋಕ್ತಿಗಳಿಂ ।
ಮೆರೆವನವನೇನು ಧನ್ಯನೊ
ಧರೆಯೊಳು ನಾನಲ್ತೆ ಪುಣ್ಯಹೀನಂ ನೋಡಲ್ ॥

**ಕೀಚಕ : ಹಾಡು** **ರಾಗ : ತೋಡಿ - ರೂಪಕ**

ಎಂದು ಸೇರುವೆ । ಸುಂದರಾಂಗಿಯ ॥ ಪ ॥
ವಿರಹದುರಿಯ ಸೈಸಲಾರೆ । ತರುಣಿಯ ನಾನಗಲಲಾರೆ
ಭರದೊಳಾಕೆಯನ್ನು ಸೇರೆ । ತೆರನ ಕಾಣೆ ಕಣ್ಣಾರೆ ॥ ೧ ॥

## ದೃಶ್ಯ : ಸುದೇಷ್ಣೆ ಮನೆ - ಕೀಚಕನ ಪ್ರವೇಶ

**ಕೀಚಕ : ಹಾಡು** ರಾಗ : ಜಲಾಪ್ - ಆದಿತಾಳ

ಪೋಗುವೆಯೆಲ್ಲಿಗೆ । ನಾಗವೇಣಿಯೆ ಮಿಗೆ
ಪೂಗಣೆಯನು ಹಗೆ । ಯಾಗಿಹನೆನಗೆ ॥ ಪ ॥
ಸುಡುವುದು ಕಾಮನ । ಜಡಜಬಾಣವದನ್ನ
ತಡೆಯಲಾರೆನು ಮನಸಿಡು । ನೀಂ ಮುನ್ನ ॥ ೧ ॥
ಮಾರುತಗೆನ್ನನು । ಮಾರುತ ನೀನು ಜಾರುವರೇನು ।
ನೀರೆ ನಮಿಪೆನು ॥ ೨ ॥
ಸೈರಿಸಲಾರೆ । ನಾರಿಯೆ ಬಾರೆ ಮೀರಿದ
ಸುಖವನು । ತೋರುವೆ ನೀರೆ ॥ ೩ ॥

**ಕೀಚಕ : ಕಂದ**

ಮಾರಜ್ವರವಂ ಸೈಸೆನು
ನಾರಿಯ ನಿನ್ನ ಧರಸುಧೆಯೆನಿಪೌಷಧಮಂ ।
ಪೀರಿಸು ದಯವಂ ತಾಳುತ
ಮಾರಿದೆ ನಿನಗೀಗಲೆನ್ನ ತನುಮನಧನವಂ ॥

**ಕೀಚಕ : ಹಾಡು** ರಾಗ : ಖರಹರಪ್ರಿಯ - ರೂಪಕತಾಳ

ಏಕೆ ಕೋಪಿಪೆ ನೀನೇಕೆ ಕೋಪಿಪೆ ॥ ಪ ॥
ನಾಕು ನಾಕು ಸುಗುಣರೂಪೆ ಕೋಕಿಲಾಲಾಪೆ ಎನ್ನೊಳೇಕೆ ॥ ಅ.ಪ ॥
ತರುಣಿ ಕಾಲನವರು ಬರಲಿ । ವರದ ಸದ್ಗತಿಯು ಕೆಡಲಿ ನೆರೆದ ಬಂಧುಜನರು
ಬಿಡಲು । ಕರವಿಡಿದರಸಿಯರು ಪೋಗಲೇಕೆ ॥ ೧ ॥
ಒಲಿದೆ ನಿನ್ನ ರೂಪಿಗಾಗಿ । ಕಲಶಕುಚೆಯೆ ಎನ್ನೊಡನೆ ನಲಿಗೆಯಿಂದ
ಮಾತನಾಡು । ಛಲವನೆನ್ನೊಳೆಸಗಬೇಡ ॥ ೨ ॥

**ಕೀಚಕ : ಹಾಡು** ರಾಗ : ಹಿಂದುಸ್ಥಾನಿ ಕಾಪಿ - ಆದಿತಾಳ

ಸೇರುವೆನೆಂತು ಸರೋಜಾಕ್ಷಿಯ ॥ ಪ ॥
ಸೈರಿಸೆ ಮಾರನ ಬಾಧೆಯ ॥ ಅ.ಪ. ॥

ಪರಿಮಳವೀಯುವ । ಪರಿಪರಿ ಪೂಗಳ ।
ತುರುಬಿಗೆ ಮುಡಿಸುತ । ಸರಸವನಾಡುತ ॥ ೧ ॥
ಚಂದನವನ್ನು ನಾಂ । ಸುಂದರಿಯಂಗಕೆ ।
ಚಂದದಿ ಲೇಪಿಸಿ । ಕಂದರ್ಪಕೇಳಿಯೊಳ್ ॥ ೨ ॥
ಮಡಿಸುತ ವೀಳ್ಯವ । ಕೊಡುತಾಕೆಯನ್ನು ।
ನುಡಿಸುತಾಲಿಂಗಿಸಿ । ಕಡು ಸಂತೋಷದಿ ॥ ೩ ॥

## ದೃಶ್ಯ : ಅಂತಃಪುರ

**ಕೀಚಕ : ಹಾಡು** **ರಾಗ : ಕಮಾಚ್ - ತ್ರಿಪುಟಛಾಪು**

ಏನನು ಹೇಳಲಿ । ಕೇಳ್ ಸುಮಬಾಣನು ಬಾಧಿಪುದು ॥ ಪ ॥
ನಿನ್ನಯ ಬಳಿಯೊಳು ಕನ್ನೆಯಲೋರ್ವಳು ।
ಎನ್ನ ಚಿತ್ತವ ಸೂರೆಗೈದಳು । ಪೋದಳು । ಈಗಳು ॥ ೧ ॥
ಜನಿಸಿದಂದಿನಿಂದಲು । ವನಜಾಕ್ಷಿಯಾಗಿಹ । ವನಿತಾಮಣಿಯನು ।
ಕಾಣೆನು । ಮಾಣೆನು । ಮಾತನು ॥ ೨ ॥
ಆ ರಮಣಿಯು ಎನ್ನ । ಸೇರಿದೊಡೀಗಳೆ ।
ಸೂರೆಗೊಡುವೆ ನಾನು । ತನುವಂ । ಮನವಂ । ಧನವಂ ॥ ೩ ॥

**ಸುದೇಷ್ಣೆ : ಹಾಡು** **ರಾಗ : ಕಾಂಭೋದಿ - ಆದಿತಾಳ**

ಸಹಜವೆ ಪೇಳು । ಸಹಜನೆ ಕೇಳು ।
ಸಹನವ ತಾಳು ಮಹಿಯೊಳು ಬಾಳು ॥ ಪ ॥
ಸೀತೆಯ ಕೆಣಕಿದ ಪಾತಕಿ ರಾವಣ ।
ನೇತೆರನಾದನು ನೀ ತಿಳಿದಿಲ್ಲವೆ ॥ ೧ ॥
ವೀರಗಂಧರ್ವರ । ನಾರಿಯ ಕೆಣಕಲು ।
ಸೇರುವೆ ಮೃತಿಯುನು । ಸಾರುವೆನೀಗಳೆ ॥ ೨ ॥
ನಮ್ಮಯ ಕುಲವನು । ತಮ್ಮನೆ ಕೆಡಿಸದೆ ।
ಸುಮ್ಮನೆ ಪೋಗುತ । ನೆಮ್ಮದಿಯಾಗಿರು ॥ ೩ ॥

**ಸುದೇಷ್ಣೆ : ಹಾಡು** **ರಾಗ : ಜಂಝೂಟಿ - ಛಾಪು**

ನಾನೆಂತು ಕಳುಹಲೀಗ ಪರರ । ಕಾಂತೆಯನ್ನು ಹಾ ।
ಚಿಂತೆಯಾಂತೆನೀಗಳು । ಬಲವಂತರವಳ ಪತಿಗಳು ॥ ೧ ॥
ಏನನ್ನು ಗೈವನೋ ಕಾಣೆ । ಮಾನಿನೀಯಿನು ।
ಎನ್ನನುಜಗೇಕೆ ಕಳುಹಿಕೊಡುವೆ ।
ನೆನ್ನುತಾಡಿದೆ । ಇನ್ನು ಮರುಗೆ ಫಲವ ದೇಂ ।
ವಿಧಿಯನ್ನು ಮೀರ್ವರಾರು ॥ ೨ ॥

## ಸುದೇಷ್ಣೆ - ದ್ರೌಪದಿಯರ ದ್ವಂದ್ವಗೀತೆ

**ರಾಗ : ಸುರುಟಿ - ತ್ರಿಪುಟಛಾಪು**

**ಸುದೇಷ್ಣೆ :** ಪೋಗಿ ನೀನನುಜಾತನಾಲಯು । ಕೀಗ ತಾರೆಲೆ ಮಧುವನು ॥
**ದ್ರೌಪದಿ :** ಪೋಗೆನಲ್ಲಿಗೆ ಮನ್ನಿಪುದು ತಲೆ । ವಾಗಿ ಬೇಡುವೆ ನಿಮ್ಮನು ॥ ೧ ॥
**ಸುದೇಷ್ಣೆ :** ನಾಕಿದುದಕೆರಡಾಡುವೆಯ ಫಡ । ಜೋಕೆ ನಿಲ್ಲಿಸು ಬಾಯನು ॥
**ದ್ರೌಪದಿ :** ಏಕೆ ಕೋಪವು ನಿಮ್ಮ ತಮ್ಮನು । ಲೋಕದೊಳು ಬಲುದುರುಳನು ॥
**ಸುದೇಷ್ಣೆ :** ಎನ್ನ ಮನೆಯನು ಸೇರಿ ಜೀವಿಸು । ತೆನ್ನ ತಮ್ಮನ ಬೈವೆಯೇನು ।
**ದ್ರೌಪದಿ :** ಎನ್ನ ವಲ್ಲಭರಿಂದಲಾತಗೆ । ಮುನ್ನ ಕೇಡಹುದರಿಯೆಯು ॥ ೩ ॥

## ದೃಶ್ಯ : ಮಾರ್ಗ

**ದ್ರೌಪದಿ : ಹಾಡು** **ರಾಗ : ವರಾಳಿ - ರೂಪಕತಾಳ**

ಪರಿಪಾಲಯ ನಾರಾಯಣ । ಸುರಮುನಿನುತಚರಣ ।
ಕರಿರಾಜಭಯನಿವಾರಣ । ಧರಣೀರಕ್ಷಣನಿಪುಣ ॥ ೧ ॥
ಶರಣಾಗತರನು ಕಾಯುವ । ಬಿರುದನು ತಾಳಿಹೆ ದೇವ ।
ಪರಸೇವೆಯೊಳಗೆ ಜೀವವ । ಹೊರೆಯಲಾರೆನೈ ಮಾಧವ ॥ ೨ ॥
ಹಿಂದೆ ಸಭೆಯೊಳೆನ್ನ ಪೊರೆದೆ । ತಂದೆ ಗೋವಿಂದ ದಯದೆ
ದಂದುಗ ಬಂತದರಂದದೆ । ಬಂದು ಸಲಹೊ ಕೈಬಿಡದೆ ॥ ೩ ॥

## ದೃಶ್ಯ : ಅರಮನೆ - ಕೀಚಕ ಕುಳಿತಿರುವುದು

**ಕೀಚಕ : ಹಾಡು** ರಾಗ : ಜಂಝೂಟಿ - ರೂಪಕತಾಳ

ಚಾರುಶೃಂಗಾಲಹರಿ । ಮಾರನಕಠಾರಿ ।
ದಾರಿಯೊಳಗೆ ಬಹಳ ಬೆಡಗ । ತೋರಿ ಸುಂದರೀ ॥ ೧ ॥
ಈಕೆ ಪಂಚಬಾಣನಾನೆ । ಕೋಕಿಲಗಾನೆ ।
ಈಕೆ ಸೌಂದರ್ಯಸೋನೆ ಪಂಕಜಾನನೆ ॥ ೨ ॥
ಈ ಸತಿಗೊಳು ಸುಖವ ಪಡುವನೇನು ಧನ್ಯನೊ
ಸೈಸಲಾರೆ ಮಾರಶರಕೆ । ಗಾಸಿಯಾದೆನು ॥ ೩ ॥

**ಕೀಚಕ : ಹಾಡು** ರಾಗ : ಜಂಝೂಟಿ - ರೂಪಕತಾಳ

ಬಾರೆ ವೈಯ್ಯಾರಿ ಮಾರ । ವೀರನಾಟದಿ
ಮೀರಿದ ಸುಖವನ್ನು ನೀಗ । ತೋರು ಬೇಗದಿ ॥ ೧ ॥
ಕಂಬುಕಂಠಿ ನೀನೆನಗೆ । ಬೆಂಬಲವಾಗೆ
ಶಂಬರಾರಿಗಂಜುವೆನೇ । ನಂಬುಜಾನನೆ ॥ ೨ ॥
ಖುಲ್ಲಮದನನೀಗಲೆನ್ನ । ಕೊಲ್ಲುತಿರುವನು
ನಲ್ಲೆಯು ಮನದಾಸೆಯನಲೆ । ನಲ್ಲೆ ನಮಿಪೆನು ॥ ೩ ॥

**ಕೀಚಕ : ಕಂದ**

ದಿಟ್ಟೆಯೆ ನಿನ್ನಯ ಕೋಪಂ
ಪುಟ್ಟಿ ಪುದೇನಗೀಗ.ಸಂತಸವ ನೀನೀಗಳ್ ।
ಗುಟ್ಟಾಗಿ ಸೇರಲೆನ್ನಯ
ಪಟ್ಟದ ರಾಣಿಯರ ನಿನ್ನ ತೊತ್ತಿರ ಮಾಳ್ಪೆಂ ॥

**ದ್ರೌಪದಿ : ಹಾಡು** ರಾಗ : ನಾದನಾಮಕ್ರಿಯ - ಛಾಪುತಾಳ

ವಿಧಿಯೇ । ಈ ವಿಧಿಯೆನಗಾದುದೆ ॥ ಪ ॥
ದುರುಳನು ದಾರಿಗೆ । ಮರೆಯಾಗಿ ಎನ್ನನು
ಧರೆಯೊಳು ಕೆಡಹುತ । ಚರಣದಿಂದೊದೆದನು ॥ ೧ ॥

ಪತಿಗಳೈವರೆ ನೀವೆ । ಗತಿಯೆಂದು ನಂಬಿದ
ಸತಿಗಾದ ಗತಿಯ ನೋ । ಡುತ ಸುಮ್ಮನಿರುವರೆ ॥ ೧ ॥
ಹರನೆ ನೀನಾದರೀ । ತರಳೆಯ ಕಾಯದೆ
ಮರೆಯಾಗಿರುವದು । ಸರಿಯೇ ನಿನಗಿದು ॥ ೨ ॥

## ದೃಶ್ಯ : ಅರಮನೆ

**ದ್ರೌಪದಿ : ಹಾಡು** **ರಾಗ : ಮಾಂಡ್ - ಛಾಪುತಾಳ**

ಸೈಸಲಾರೆ ಶೋಕವನ್ನೈಯ್ಯೋ । ಹಾ ಹಾ ನಾಂ ॥ ಪ ॥
ಲೇಸಗಾಣದೆ । ಹಾ ಹಾ ನಾಂ ॥ ಅ.ಪ. ॥
ಕೀಚಕನೆಂಬುವ । ನೀಚನು ಕಾಲೊಳು
ಯೋಚಿಸದೊದೆದಿಹನು । ಹಾ ಹಾ ನಾಂ ॥ ೧ ॥
ಸೇರಿಹ ಸಭೆಯೊಳು । ಯಾರಿಗಾದರು ದಯ
ಬಾರದೆ ಎನ್ನ ಮೇಲೆ । ಹಾ ಹಾ ನಾಂ ॥ ೨ ॥
ಸತಿಯಾದೆನ್ನಯ ಗೋಳು । ಪತಿಗಳ ತಾಗಲಿ
ಕ್ಷಿತಿಯೊಳು ಪಾಪಿಯಾದೆ । ಹಾ ಹಾ ನಾಂ ॥ ೩ ॥

## ದೃಶ್ಯ : ಮಾರ್ಗ

**ದ್ರೌಪದಿ : ಹಾಡು** **ರಾಗ : ವಸಂತ - ತ್ರಿಪುಟಛಾಪು**

ಗತಿಯಾರೆನಗೆ ಕ್ಷಿತಿತಲದೊಳಗೆ ॥ ಪ ॥
ಜನಿಸುತ ದ್ರುಪದರಾಯನ ಮನೆಯೊಳು
ನಾನು ಘನವೀರ ಪಾಂಡವರ ।
ವನಿತೆಯಾಗುತ ಘೋರ । ವನದೊಳು ಬಲುಕಷ್ಟ ।
ವನು ಪಟ್ಟ ರೀತಿಯ ನೆನೆಸಿಕೊಳ್ಳಲೊ ಹಾ । ಹಾ ॥ ೧ ॥
ಹಿಂದೆ ದುಶ್ಯಾಸನ । ನೆಂದೆಂಬ ಖೂಳನು
ಮುಂದಲೆ ಪಿಡಿದೆಳೆದು । ದಂದುಗಗೊಳಿಸಿದ । ನಂದು ಸೈಂಧವನೆಂಬ ।
ಮಂದಮತಿಯ ಕೈಯೊಳ್ ನೊಂದೆ ನಾನಯ್ಯೊ ॥ ೨ ॥
ಪಾಪಿ ಕೀಚಕನೆನ್ನ । ಕೋಪದಿಂದೊದೆಯಲು
ಭೂಪನ ಸಭೆಗೆ ಪೋಗಿ । ಈ ಪರಿಯನು ।

ಪೇಳಲೋಪರ ಮುಂಗಡೆ ।
ಕಾಪಾಡದಾದರು । ಹಾ ಪಾಪಿಯಾದೆನು ॥ ೩ ॥

## ದೃಶ್ಯ : ಅರಮನೆ

**ಸುದೇಷ್ಣೆ : ಹಾಡು** **ರಾಗ : ದೇಶಿಕಾಪಿ - ರೂಪಕತಾಳ**

ಬರಲಿಲ್ಲವೇಕೊ ಕಾಣೆ ನಾಂ । ಕಾತರಿಸುವೆನು
ಮನದಲ್ಲಿ ಚಿಂತೆಯಾಂತು ಪೋದಳೇನಗೈವೆನು ॥ ೧ ॥
ಅವನೆಂದ ಮಾತ ಕೇಳಿ ಬೇಗ । ವರರ ಕಾಂತೆಯು ಪೋ ।
ಗೆಂದು ಕಳುಹಿಕೊಟ್ಟೆನಕಟ ಮಾನವಂತೆಯು ॥ ೨ ॥
ಸಹಜಾತನಾಕೆಯನ್ನು ಕೆಣಕಿ । ಯೇನಗೈವನೊ ಬಲು ।
ನೊಂತು ಕಾಮಬಾಣಕೇನು ಕೇಡ ತರುವನೋ ॥ ೩ ॥

**ದ್ರೌಪದಿ : ಹಾಡು** **ರಾಗ : ಅಸಾವೇರಿ - ಆದಿತಾಳ**

ಸೇವೆಯ ಮಾಡುತ । ಜೀವಿಸಬಾರದು । ದೈವವೆ ಯಾರಾದರು ॥ ಪ ॥
ಎನ್ನಂತೆ ಲೋಕದಿ । ಮುನ್ನ ನವೆದವರಾರು
ಕನ್ನೆಯರೊಳುಜೀವ । ವಿನ್ನು ಪೋಗದಿದೇಕೆ ॥ ೧ ॥
ಕಾಕುನೃಪರ ಸೇರಿ । ಈ ಕಷ್ಟಪಡುವುದ
ನೇಕೆ ಬರೆದೆ ಅವಿ । ವೇಕಿ ವಿಧಿಯೆ ಹಾ ಹಾ ॥ ೨ ॥
ಯಾರಿಗೆ ಹೇಳಲಿ ಮಾರಿದೆನ್ನಳಲನು
ಯಾರು ಕೇಳುವರಯ್ಯೊ । ಸೈರಿಸಲಾರೆನು ॥ ೩ ॥

## ದೃಶ್ಯ : ಪಾಕಶಾಲೆ

**ದ್ರೌಪದಿ : ಕಂದ**

ಅಂದು ಕುರುರಾಜನ ಸಭೆಯಲಿ
ಹೊಂದಿದೆನವಮಾನವನ್ನು ನಾನಕಟಕಟಾ ।
ಇಂದೀ ಕೀಚಕನೊದೆದನು
ಕೊಂದಿರಿ ನೀವ್ಪತಿಗಳ್ಐವರುಮಿರ್ದುಂ ॥

**ದ್ರೌಪದಿ : ಹಾಡು** — **ರಾಗ : ಪೀಲು - ಛಾಪುತಾಳ**

ಏಕೆ ಮಾನಿನಿಯಾಗಿ । ಲೋಕದಿ ಜನಿಸಿದೆ
ಈ ಕಷ್ಟಪಡುವುದು । ಸಾಕು, ಸಾಕು ಹಾ ॥ ಪ ॥
ಭೂಮಿಯೊಳಗಾವ ಪಾ । ಪವನು ಮಾಡಿದ್ದೆನೊ
ಶಿವನೆ ನಾನಾವ ಧರ್ಮವನುಳಿದೆನೊ ಹಾ ॥ ೧ ॥
ಎನ್ನಂಥ ನಾರಿಯು । ರಿನ್ನು ಭೂಮಿಯೊಳಗೆ
ಮುನ್ನ ಜನಿಸಬಾರ । ದಿನ್ನು ಸಾವುದೆ ಲೇಸು ॥ ೨ ॥
ಅಡರುತ್ತ ಗಿರಿಯನು । ಪೊಡವಿಯೊಳುರುಳೀ
ಬಿಡಲೊ ಈ ಜೀವವ । ಕುಡಿಯಲೊ ವಿಷವ ॥ ೩ ॥

**ದ್ರೌಪದಿ : ಹಾಡು** — **ರಾಗ : ಖರಹರಪ್ರಿಯ - ಆದಿತಾಳ**

ನಿಮ್ಮ ಬಾಳೇತಕೆ ಬಿಡಿ ॥ ಪ ॥
ಮುಳಿದರೆ ಮೂಜಗ । ಗಳ ಜೈಸುವಿರಿ
ಸಲಹದೆ ಪೋದಿರಿ । ಲಲನೆಯ ಬಿಡಿ ॥ ೧ ॥
ತೋಳಿನ ಭಾರವ । ತಾಳುತ ಮೆರೆವಿರಿ
ಕೂಳಿಗೋಸುಗವೆ । ಬಾಳಿರುವಿರಿ ॥ ೨ ॥
ದಿಟ್ಟ ಕೌರವಗೆ । ಬಿಟ್ಟರಿ ಸಿರಿಯನು
ಕೆಟ್ಟ ಕೀಚಕಗೆ । ಕೊಟ್ಟಿರೆನ್ನ ॥ ೩ ॥

**ಭೀಮ : ಕಂದ**

ತರುಣಿಯೆ ಧರ್ಮಜನಾಜ್ಞೆಯ
ಗೆರೆಯಂ ದಾಂಟಿದೆನು ಮಿಕ್ಕ ಸಹಜರ ಮಾತ್ರಂ ।
ತಿರಲಿ ಮುರವೈರಿಯೇ ತಾಂ
ಬರಲಾತನ ಗಣಿಪನಲ್ಲ ನುಡಿದಾಂ ಫಲವೇಂ ॥

**ಭೀಮ : ಹಾಡು** — **ರಾಗ : ಶಂಕರಾಭರಣ - ಏಕತಾಳ**

ನಿನ್ನನ್ನು ಕೆಣಕಿದ । ಕುನ್ನಿ ಕೀಚಕನ ಮುನ್ನವೆ ಕೊಲ್ಲುವೆ ।
ನಿನ್ನ ಭಯವ ಬಿಡು ಬಿಡು ಶೋಕವೇತಕೆ ॥ ೧ ॥

ಇಂದು ವಿರಾಟನು । ಬಂದು ಕೆಣಕಿದರೆ
ಕೊಂದುಬಿಸುಡುವೆನು । ಪೊಂದು ಮುದವ ॥ ೨ ॥
ಇದನರಿದ್ಯೆತರೆ ಗದೆಯಿಂ । ಕೌರವರೆದೆಯನು
ಸೀಳುತ । ಸದೆದಿಡುವೆನು ॥ ೩ ॥

## ದೃಶ್ಯ : ಮಾರ್ಗ

**ಕೀಚಕ : ಹಾಡು** **ರಾಗ : ಖರಹರಪ್ರಿಯ - ರೂಪಕತಾಳ**

ಕಮಲದಳಾಯತಾಕ್ಷಿ ಬಾರೆ ನಿನ್ನ ಬೇಡುವೆ ॥ ಪ ॥
ಬಾರೆ ನಿನ್ನ ಬೇಡುವೆ । ವೈಯ್ಯಾರಿ ನಿನ್ನ ಬೇಡುವೆ ॥ ಅ.ಪ. ॥
ಸುಗುಣೆಯೊಂದು ದಿನವನು । ಯುಗದ ತೆರದಿ ಕಳೆವೆನು
ಮುಗುದೆ ನಿನ್ನ ಪೋಲ್ವರನ್ನು । ಜಗದಿ ಹುಡುಕಿ ಕಾಣೆನು ॥ ೧ ॥
ಸ್ಮರನ ಬಾಣಧುರಿಯನು । ತರುಣಿ ಸೈಸಲಾರೆನು
ಕರುಣದಿಂದಲೆನ್ನನು । ವರಿಸಿ ಪೊರೆಯೆ ನೀನು ॥ ೨ ॥
ಚರಣವ ಪಿಡಿದೊತ್ತುವೆ । ಕರುಣವೆಳ್ಳಿನಿತಿಲ್ಲವೆ
ಮರೆಯಬೇಡ ಬೇಡುವೆ । ವಿರಹದಿಂದ ಬಾಡುವೆ ॥ ೩ ॥

**ಕೀಚಕ : ಕಂದ**

ಇಂದಿನ ದಿನವೇ ಸುದಿನಂ
ಇಂದಾಗುವ ಸುಖವೆ ದೇವಲೋಕದ ಸೌಖ್ಯಂ ।
ಇಂದಾನು ಧನ್ಯನಾದೆನು
ಕಂದರ್ಪನ ದರ್ಪವನ್ನು ನಿಲ್ಲಿಪೆನೀಗಳ್ ॥

## ದೃಶ್ಯ : ನಾಟ್ಯ ಶಾಲೆ

**ಕೀಚಕ : ಹಾಡು** **ಹಾಡು : ತೋಡಿ - ರೂಪಕತಾಳ**

ಮಾತನಾಡೆ ಮುಖವ ನೋಡೆ । ಕಾತರಾಕ್ಷಿಯೆ
ಸೋತೆ ನಿನ್ನ ರೂಪಿಗೆ ನಾಂ । ಪ್ರೀತಿಯಿಂದಲೀ ॥ ೧ ॥
ಮಡದಿಯು ಗಮ್ಮರಲ ತಂದು । ಮಡಗಿರುವೆನು

ಮುಡಿದು ತೋಷವನ್ನು ನಾನಿ । ನ್ನಡಿಗೆ ನಮಿಪೆನು ॥ ೨ ॥
ವೀಳೆಯವನು ಮಡಿಸಿ ಕೊಡುವೆ । ತಾಳು ಮುದವನು
ಪೇಳು ಎನ್ನ ಪೋಲ್ವರುಂಟೆ । ಜಾಲವೇತಕೆ ॥ ೩ ॥

**ಭೀಮ : ಕಂದ**

ಪಾತಕಿಯೆ ನಿನ್ನತನುಮಂ
ಘಾತಿಸಿ ದಿಗ್ಬಲಿಯುನೀವೆ ಭೂತಗಣಂಗಳ್ ।
ಪ್ರೀತಿಯೊಳು ತಿನ್ನಲಿ ನಿನ್ನಂ
ಭೂತರುಣಿಯು ಕೊಡಹಿಕೊಳಲಿ ಭಾರವನೀಗಳ್ ॥

**ದೃಶ್ಯ : ದುರ್ಯೋಧನನ ದರ್ಭಾರ್**

**ದುರ್ಯೋಧನ : ಹಾಡು** **ರಾಗ : ಢಾಲ್‌ಮಟ್ಟು**

ಲಾಲಿಸುವುದು ಬಲ । ಶಾಲಿಮಹಾರಥ । ಜಾಲವೆ ನಮ್ಮೊಡನೆ
ಪೇಳುವೆ ಮನದೊಳ । ಗಾಲೋಚಿಸಿದುದ । ತಾಳುತ ತೋಷವನೆ ।
ಪಾಂಡವರುಗಳನು । ಕಂಡು ಹಿಡಿಯೆ ಭೂ । ಮಂಡಲಗೊಳು ಚಾರರ
ತಂಡವ ಕಳುಹಿದೆ ಕಂಡೆನೆನುತ ಮುಂ । ಕೊಂಡುಬರುವರಿಲ್ಲ
ಖುಲ್ಲರ ಕಪಟವ । ಬಲ್ಲವರಾರದ । ನೆಲ್ಲಿರುವರೊ ಕಾಣೆ
ಸೊಲ್ಲಿಸುವುದು ಮನದಲ್ಲಿಹ ಯೋಚನೆ । ಯೆಲ್ಲವನೆನ್ನೊಡನೆ ॥

**ಚಾರಕ : ಹಾಡು** **ರಾಗ : ನಾದನಾಮಕ್ರಿಯೆ - ಏಕತಾಳ**

ಕೇಳು ರಾಜೇಂದ್ರನೆ । ಪೇಳುವ ಮಾತನು ಗುಣಸಾಂದ್ರನೆ ॥ ಪ ॥
ಚೋಳ ನೇಪಾಳ ಮಳ । ಯಾಳ ಕೇರಳಲಾಳ
ಮಾಳವ ಬಂ । ಗಾಳದೇಶದೊಳು ॥ ೧ ॥
ಹುಡುಕಿದೆವು ಪಾಂಡುವರ । ಬಿಡದೆ ನಾವೆಲ್ಲ
ಅಡಗುತಲೆಲ್ಲಿರುವರೊ । ಮೃಡನೇ ತಾನು ಬಲ್ಲ ॥ ೨ ॥
ತಿರುಗಿ ತಿರುಗಿ ಕಾಲುಗಳ । ನಿರಿಸಲಾರೆವು
ಧರೆಯ ಮೇಲೆ ದೊರೆಯೆ ನಮ್ಮ । ಪೊರೆಯಬೇಕು ನಿಜವು ॥ ೩ ॥

**ದುರ್ಯೋಧನ : ಹಾಡು** **ರಾಗ : ದೇಶಿಕಾಪಿ - ಆದಿತಾಳ**

ಮಾನಸಕನುಮಾನವು ತಾಗುವುದು ॥ ಪ ॥
ಮಾನಿತರೇ ಫಲವೇನು ।
ಬಲಯುತ ಕೀಚಕ । ನಳಿದುದ ಕೇಳಿ ॥ ೧ ॥
ಅರಿಗಳು ಜೀವಿಸು । ತಿರುವರೆ ಹಾ ಹಾ ॥ ೨ ॥
ನಂಬುವದೆಂತಿದ । ಸಾಂಬನೆ ಬಲ್ಲ ॥ ೩ ॥

**ದುರ್ಯೋಧನ : ಕಂದ**

ಬಲರಾಮಂ ಕಲಿಭೀಮಂ
ತಿಳಿಯಲ್ಕೀಚಕನು ಶಲ್ಯರೆಂಬೀ ನಾಲ್ವರ್ ।
ನೆಲದೊಳ್ಸಮಬಲರೆನ್ನು
ತ್ತಲಿ ಪೇಳುವ ಜನರ ನುಡಿಯುನಾಂ ಕೇಳಿರುವೆಂ ॥

**ಕರ್ಣ : ಕಂದ**

ಅವಧಿಯು ಮುಗಿವುದರೊಳ್ಪಾಂ
ಡವರನ್ನು ಕಾಣಿಸಿಕೊಳ್ಳುತ್ತ ಮತ್ತಂ ವನದೊಳ್ ।
ನವೆಯುವ ತೆರನಂ ಮಾಡುವ
ಹವಣವನಾಲೋಚಿಸಿಂದು ಕುರುಕುಲತಿಲಕ ॥

**ಭೀಷ್ಮ : ಹಾಡು** **ರಾಗ : ಕಮಾಚ್ - ರೂಪಕತಾಳ**

ಕೇಳಬೇಡ ಭಾನುಸೂನು । ಪೇಳುವ ಈ ಮಾತನು ।
ಕೀಳು ಸಚಿವರೆಂದ ನುಡಿಯ । ಕೇಳೆ ಕೇಡು ಕಾಣೆಯು ॥ ೧ ॥
ತೀರುವಗರೊಳವಧಿ ಪಾಂಡು । ವೀರರನ್ನು ಮೋದದಿ ।
ಕೌರವೇಂದ್ರ ಕರಸುತೀಯೊ । ಧಾರುಣಿಯನುರಾಗದಿ ॥ ೨ ॥
ಅವರು ಸತ್ಯವನ್ನು ಬಿಡದೆ । ನವೆದರು ವನವಾಸದಿ ।
ಬವಣೆಗಂಜುವವರೆ ಪೇಳ । ತವಕವೇಕೆ ಬೇಗದಿ ॥ ೩ ॥

**ಕರ್ಣ : ಕಂದ**

ಎಳೆಗರುಗಳಗಲಿ ತಾಯಂ
ತೊಳಲುತ್ತಿರೆ ಧರ್ಮಜಾತನದ ಕೇಳುತ್ತಂ ।
ಜಲಪಾನವನ್ನು ಗೈಯನು
ತಿಳಿಯುತ್ತಾ ಸುಳುಹನಡವಿಗಟ್ಟುವದುಚಿತಂ ॥

**ದುರ್ಯೋಧನ : ಹಾಡು** **ರಾಗ : ಶಂಕರಾಭರಣ - ಛಾಪು - ನೋಟು**

ವೀರರೆಲ್ಲರು । ಸಾರಿ ಬೇಗದಿ ।
ಸೇರಿ ನಾವು ಮತ್ಸ್ಯಪುರವ । ಸೂರೆಮಾಡಲು ॥ ೧ ॥
ಕರದಿ ಖಡ್ಗವ ಧರಿಸುತೆಲ್ಲರು
ತರುವ ಸೆರೆಯ ಹಿಡಿವುದಕ್ಕೆ । ಭರದಿ ಪೋಪೆವು ॥ ೨ ॥
ದೊಡ್ಡ ಪಶುಗಳ । ಅಡ್ಡಹಾಕುತ
ದೊಡ್ಡಿಯಲ್ಲಿ ಸೇರಿಸುವೆವು ಅಡ್ಡಿಯೇತಕೆ ॥ ೩ ॥

**ದೃಶ್ಯ : ಅರಮನೆ**
**ಉತ್ತರನ ಸಭೆ**

**ಚಂದ್ರರೇಖೆ : ಹಾಡು** **ರಾಗ : ಪೀಲ್ - ತ್ರಿಪುಟಛಾಪು**

ಸ್ಮರಸುಂದರಾಕಾರ । ವೈರಿಕುಠಾರ ।
ತರುಣೀಮಾನಸಚೋರ । ರಾಜಕುಮಾರ ॥ ಪ ॥
ಸಿರಿಯೊಳ್ಕುಬೇರ । ನೆನುವಾತನನ್ನು ।
ಇನಿಯನೆ ಧಿಕ್ಕಾರ । ವನು ಮಾಳ್ಪೆ ನೀನು ॥ ೧ ॥
ಸುಂದರ ನಿನ್ನ । ಪೊಂದಲು ನಾನು ।
ಚಂದದ ಸುಕೃತವ । ನೆಂದು ಮಾಡಿದೆನೊ ॥ ೨ ॥
ನಿನ್ನನು ಪೋಲ್ವ । ಚೆನ್ನಿಗನಾರು ।
ಎನ್ನ ಮೋಹನನೆ । ಮುನ್ನವೆ ಪೇಳು ॥ ೩ ॥

**ಉತ್ತರ : ಹಾಡು** **ರಾಗ : ಬೇಗಡೆ - ಆದಿತಾಳ**

ಏನು ನುಡಿದೆ ಖೂಳನೆ । ಮಾನವನು ತೊರೆಯುತಲಿ ॥ ಪ ॥
ನತಿಸುತರನು ನೀಂ । ಹಿತದಿಂ ಪೊರೆಯಲು ಗತಿಗೆಟ್ಟೈತಂ । ದತಿ ದೈನ್ಯದೊಳಗೆ ॥೧॥
ಕೌರವನೆನ್ನೊಳು । ವೈರತನವ ತಾಂ ತೋರಿಸೆ ಬಂದರೆ । ಗೌರವವುಳಿವುದೆ ॥ ೨॥
ನಾಕು ಪೋಗು ನೀ । ನೇಕೆ ನಿಂದಿರುವೆ ಜೋಕೆ ಈಗಲೆ । ನೂಕಿಸಿಬಿಡುವೆನು ॥೩॥

**ಉತ್ತರ : ಹಾಡು** **ರಾಗ : ಬೇಹಾಗ್ - ಆದಿತಾಳ**

ವಾರಿಜಾಕ್ಷಿಯರಿರ ವೇಳೀ । ಧಾರುಣಿಯೊಳಗಾರು
ಧೀರನಾದುತ್ತರಕಂ । ರೀರವಗೆ ಸಮಾನರು ॥ ೧ ॥
ಸ್ಮರನ ರೂಪಿನಿಮ್ಮಡಿಯನು । ಹರಿಯು ವಾಲಿಸಿರುವನು
ಸಿರಿಯೊಳಾ ಕುಬೇರನನ್ನು । ತರುಣಿ ಜೈಸಿರುವೆನು ॥ ೨ ॥
ನುಡಿಯೆ ಫಲವ ಕಾಣೆ ಧುರವ । ಕೊಡುತ ಕೇಣಕಲೆನ್ನ
ಪಿಡಿದು ರಿಪುವ ಭೂತಗಣಕೆ । ಬಡಿಸದಿಹೆನೆ ಮುನ್ನ ॥ ೩ ॥

**ಉತ್ತರ : ಹಾಡು** **ರಾಗ: ಖರಹರಪ್ರಿಯ - ಆದಿತಾಳ**

ಬೆದರುವೆನೇನೇ । ಮದಗಜಯಾನೆ ॥ ಪ ॥
ಬೆದರುವೆನೇನೆ । ಮದಗಜಯಾನೆ
ಕದನದಿ ರಿಪುಗಳ । ಸದೆದುರಿಳಿಸಲು ॥ ಅ.ಪ. ॥
ಉಂಡವರೊಳು ಬಲು । ದುಂಡುಮ್ಮೆಯನೊಳ
ಕೊಂಡು ಮೆರೆವ ಬುಧ । ಮಂಡಲಕಾನು ॥ ೧ ॥
ಕೌರವನೆದೆಯನು । ನಾರಿಯೆ ಸೀಳುತ
ತೋರುವೆನೆನ್ನಯ । ವೈರದ ಪರಿಯ ॥ ೨ ॥
ಕಲಕುವೆ ಕುರುಕುಲ । ಜಲಧಿಯನೀ
ದಿನದೊಳು ನೀನೆನ್ನಯ । ಬಲವ ನೋಡು ॥ ೩ ॥

**ಉತ್ತರ : ಕಂದ**

ಧರಣೀಶ್ವರರೈದುತ ತುರು
ಸೆರೆಯಂ ಪಿಡಿಯುವುದ ಕಾಣೆನಿಂದಿನವರೆಗುಂ ।

ಪರಿಕಿಸಲು ನೀಚಕುಲದೊಳ್
ಕುರುಪತಿ ಜನಿಸಿರ್ಪನೆಂಬುದಕೆ ಸಂಶಯಮೇಂ ॥

**ಚಂದ್ರರೇಖೆ : ಹಾಡು** **ರಾಗ : ಜಂಜೂಟಿ - ಛಾಪುತಾಳ**

ಕಾಂತನೆ ಪೋಗಬೇಡ । ಕಂತುಸಮರೂಪನೆ ॥ ಪ ॥
ಪಂಥವನ್ನು ವೈರಿಗಳೊಳು । ನಿಂತು ತೋರುವುದೇಕೆ ನೀಂ ॥ ಅ.ಪ. ॥
ಅರಘಳಿಗೆಯು ನಿನ್ನ ನಾನು । ತೊರೆದು ಸೈಸಲಾರೆನು
ಧುರಕೆ ಪೋಪೆನೆಂಬುದೇನು । ಸರಿಯೆ ಪೇಳು ನೀನು ॥ ೧ ॥
ಕನಸಿನೊಳಗು ನಿನ್ನ ಸುಖವ । ನನುದಿನದೊಳು
ನೆನೆಸುವ । ವನಿತೆಯನು ಬಿಟ್ಟು ಪೋಗೆ । ಗನುಮತವೇ ತೆಗೆತೆಗೆ ॥ ೨ ॥
ಕೊಳುಗೂಳದೊಳು ಸೋಲು ಗೆಲುವ । ತಿಳಿದವರಾರು ಲೋಕದಿ ।
ಚಲುವ ನೀನು ನಿನ್ನ ಪೋಲ್ವ । ಕಲಿಗಳಾರು ಬೇಗದಿ ॥ ೩ ॥

**ಉತ್ತರೆ : ಹಾಡು** **ರಾಗ : ಕೇತಾರ - ಆದಿತಾಳ**

ಸಹಜಾತ ಚಿಂತೆಯೇತಕೆ । ವಹಿಸಿದೆ ಈ ಕಾರ್ಯಕೆ ॥ ಪ ॥
ಇರುವನೋರ್ವನು ಸೂತನು । ಅರಿತು ಬಂದಿರುವೆ ನಾನು
ಧುರಧೀರನಾಗಿ ತೋರ್ಪನು ॥ ೧ ॥
ಕರೆಸು ನೀಂ ಸಾರಥಿಯನು । ತರಿಸು ಬೇಗದಿ ರಥವನು ।
ಧರಿಸೀಗ ಚಾಪಬಾಣವಂ॥ ೨ ॥
ಅರಿಗಳ ರಣರಂಗದಿ । ಉರುಳಿಸಿ ಬಲುಬೇಗದಿ ।
ಪರಿಪಾಲಿಸೆಮ್ಮ ಗೋವ್ಗಳ ॥೩॥

**ಅರ್ಜುನ : ಕಂದ**

ಭರತದಿ ಪರಿಚಯಮಿರ್ದುದು
ಮರೆತೆನು ಬಹುಕಾಲಮಾಯ್ತು ಸಾರಥಿತನವಂ।
ಧುರಧೀರ ಭೀಷ್ಮ ಕರ್ಣಾ
ದ್ಯರ ಗೆಲ್ಲುವದೆಂತೊ ತರಿಸು ರಥವಂ ನೋಳ್ಪೆಂ ॥

**ಚಂದ್ರರೇಖೆ : ಹಾಡು** **ರಾಗ : ಸುರುಟಿ - ಆದಿತಾಳ**

ಆರತಿಯೆತ್ತಿರೆ । ನಾರಿಯರೆಲ್ಲರು । ಮಾರಸುಂದರ ಸುಕು । ಮಾರಶರೀರಗೆ ।
ಮುಂಗಡೆಯೊಳು ನಿಂದು । ಮಂಗಳವಾಗಲೆಂದು ।
ಸಂಗರ ಶೀಲಗೆ । ಸಂಗೀತಲೋಲಗೆ ॥ ೧ ॥
ಅರಭಿ ಮೋಹನ । ಭೈರವಿ ಶಾಹನ ।
ಮಾರವಿ ಮೊದಲಾದ । ಚಾರು ರಾಗದ ಪಾಡಿ ॥ ೨ ॥
ವಾರಿಜವದನಗೆ । ವಾರಣಗಮನಗೆ ।
ವೈರವಿನಾಶಕಗೆ । ವೀರವೈರಾಟಗೆ ॥ ೩ ॥

## ದೃಶ್ಯ : ಯುದ್ಧಭೂಮಿ

**ಉತ್ತರ : ಹಾಡು** **ರಾಗ : ನೋಟ್ - ತಾಳ ....**

ನೋಡಲಾರೆ ನೋಡಲಾರೆ । ಕೇಡು ಬಂದುದು
ಬೇಡಿಕೊಂಬೆ ಬೇಡಿಕೊಂಬೆ ಖೋಡಿಯೇನಿದು ॥ ಪ ॥
ಪ್ರೊಡವಿ ಈದು । ಬಿಡುತಲಿವಾ । ಪಡೆಯೊ ನೋಡಲು ।
ಬಡಬಾನಗತಿ । ಪಡುವುದೆ । ನೋಡಲು ಕಂಗಳು ॥ ೧ ॥
ಕಾಲಹರನ ಫಾಲಶಿಖಿ । ಜ್ವಾಲೆಯೋ ಇದು । ಶೈಲಶಿಖಿಯೊ ।
ಕಾಲಮೇಘ । ಜಾಲವೊ ಇದು ॥ ೨ ॥
ಧರೆಯನೆಲ್ಲ । ಕೊರೆವ ಘೋರ । ಶರಧಿಯೋ ಇದು ।
ಅರರೆ ಸಿಡಿಲ । ಗರುಡಿಯೊ ನಾ । ನರಿಯೆನೇನಿದು ॥ ೩ ॥

**ಅರ್ಜುನ : ಕಂದ**

ಎಲೆ ಮರುಳೆ ಪ್ರಥಮ ಚುಂಬನ
ದೊಳು ಪಲ್ಗಳು ಬಿದ್ದ ತೆರದಿ ನೀಂ ಕಾಳಗವಂ ।
ಬೆಳಿಸದ ಮುನ್ನವೆ ಭೀತಿಯ
ಅಳಿಯುತ್ತುಂ ನಿನ್ನ ಕುಲಕೆ ಕುಂದನು ತಹುದೇಂ ॥

**ಉತ್ತರ : ಹಾಡು** ರಾಗ : ದೇಶಿಕಾಪಿ - ಭಾಪುತಾಳ

ನಿಲ್ಲಿಸು ರಥವನು । ಬೇಡುವೆ ॥ ಪ ॥
ಕೊಲ್ಲುವದಕೆ ಮನಮಾಡುವೆ ॥ ಅ ಪ ॥
ಪೊರೆದವನಲ್ಲವೆ । ಮರೆವುದುಚಿತವೇ ।
ಧುರಕೆ ನಮೋ ಎನುವೆ ॥ ೧ ॥
ಕುಣಿಯುವದೆ ಬಲು । ಒಣಗಿತು ಗಂಟಲು ।
ಮಣಿವೆನೇ ಕರುಣಾಳು । ತಾಳು ॥ ೨ ॥
ಪಿಡಿಯ್ಯೆ ಕುದುರೆಯ । ಬಿಡು ಚಮ್ಮಟಕೆಯು
ಪಿಡಿಯುವೆ ನಿನ್ನಡಿಯ । ಜೀಯ ॥ ೩ ॥

**ಉತ್ತರ : ಹಾಡು** ರಾಗ : ನೋಟ್ - ತಾಳ ....

ಬದುಕಿದೆ ಬದುಕಿದೆ ನಾನಿಂದು ॥ ಪ ॥
ಹುಟ್ಟಿದೆನು ಜನನಿಯ । ಹೊಟ್ಟೆಯೊಳಗಿಂದು ಬಾಯು
ಬಿಟ್ಟೆ ನಾನೀ ಸೂತನನು । ದಿಟ್ಟಿಸದೆ ಪೋಪೆನು ॥ ೧ ॥
ಬಡಬಾಗ್ನಿಯಂದದೊಳು । ಕೂಡಿಹರು ವೈರಿಗಳು
ನೋಡಲಾರಪೀ ಕಂಗಳು । ಓಡುವೆನೀದಾರಿಯೊಳು ॥ ೨ ॥

**ಅರ್ಜುನ : ಹಾಡು** ರಾಗ : ಕಾನಡ - ಭಾಪುತಾಳ

ಓಡುವೆ ಎಲ್ಲಿಗೆ ನೋಡುವೆ । ನೀಂ ॥ ಪ ॥
ಕೂಡುತ ಭೀತಿಯು ಹೇಡಿಯೆ ನೀಂ ॥ ಅ.ಪ. ॥
ಆತುರದಿಂದಲಿ । ಮಾತನು ಕೇಳದೆ
ಪಾತಕಿ ಪೋಗಲು । ಘಾತಿಪೆ ನಿನ್ನನು ॥ ೧ ॥
ದಿಟ್ಟೆಯರೊಳು ಗೋಣ । ಗುಟ್ಟುವದಗೆ ಮನ
ವಿಟ್ಟೆಯೊ ನಿನ್ನನು ಬಿಟ್ಟಪೆನೇ ಛೀ ॥ ೨ ॥
ವೀರಗೆ ನೀಂ ಸುಕು । ಮಾರನೆನಿಸುತೀ ।
ವೈರಿಯ ಜೈಸದೆ । ಪಾರುವೆಯಾ ಛೀ ॥ ೩ ॥

**ಅರ್ಜುನ : ಕಂದ**

ಖ್ಯಾತವಿರಾಟಾನ್ವಯಸಂ
ಜಾತಂ ರಣಭೀತನಾದನೆಂಬೀ ಮಾತಂ ।
ಭೂತಳದೆ ತಳೆಯೆ ನೀಂ ಕುಲ
ಘಾತಕಿಯೆಂದರಿದು ನರಕಕಿಳಿವರು ಪಿತೃಗಳ್ ॥

**ಅರ್ಜುನ : ಹಾಡು** ರಾಗ : ಕಮಾಚ್ - ಆದಿತಾಳ

ನಾಚಿಕೆಯಿಲ್ಲವೇನೋ ನೀಚನೆ ನಿನಗೆ ॥ ಪ ॥
ಆ ಚದುರೆಯರೊಳು । ತೋಚಿದ ತೆರದಲಿ ।
ವಾಚಿಸಿದಂತಿದ । ಯೋಚಿಸಿದೆಯೊ ಬಿಡು ॥ ೧ ॥
ಧುರದೊಳಗಹಿತರ । ತರಿಯದೆ ಚೋರರ ।
ತೆರದೊಳಗೋಡುವೆ । ಪೊರೆಯಲು ಜೀವವ ॥ ೨ ॥
ಹಲ್ಲನು ಕಿರಿಯುತ । ಮೆಲ್ಲನೆ ನುಡಿಯುವೆ ।
ಬಲ್ಲೆನು ನಿನ್ನಯ । ಸೊಲ್ಲಿನ ಪರಿಯ ॥ ೩ ॥

**ಉತ್ತರ : ಹಾಡು** ರಾಗ : ನೋಟ್ - ತಾಳ ....

ಆಗದಾಗದು । ಈಗ ನುಡಿದುದು ।
ಹೀಗೆ ಯೆನಗೆ ನೀನೆಯೆ ಹಗೆ । ಯಾಗುವರೆ ತೆಗೆ ॥ ೧ ॥
ಅರಸು ಮಕ್ಕಳ । ಕರದಿ ಮರದೊಳು ।
ಇರುವ ಹೆಣನ ಮುಟ್ಟುವರೇ । ನೊರೆಯೊ ಮಾಣದೆ ॥ ೨ ॥
ಬೇರೆ ಕೆಲಸವ । ತೋರಿಸೆನಗೆ ನೀಂ ।
ಮೀರದಾನು ಮಾಡುತಿಹೆನು । ಬೀರು ದಯವನು ॥ ೩ ॥

**ಉತ್ತರ : ಹಾಡು** ರಾಗ : ಆನಂದಭೈರವಿ - ರೂಪಕತಾಳ

ಕ್ಷಮಿಸೆನ್ನಪರಾಧವನ್ನು ನೀಂ । ಮಮತೆಯನ್ನು ತಾಳಿ ॥ ಪ ॥
ನಿಮಗೆ ನಾನು ದೊರೆಯೆ ಪೇಳು । ಕುಮತಿಯಾದೆನೀ ಜಗದೊಳು ॥
ಅರಿಯದಾದೆನಕಟ ನಾನು । ಸುರಪಸೂನುವೆಂಬುದನ್ನು ಪರಿ ।
ಪರಿಯಲಿ ಜರಿದುದನ್ನು । ಮರೆಯಬೇಕು ಕರುಣಿ ನೀನು ॥ ೧ ॥

**ಅರ್ಜುನ : ಕಂದ**

ಜನಪಾಲನೆ ನೀ ಕೇಳ
ರ್ಜುನ ಪಾರ್ಥ ಕಿರೀಟಿ ಸವ್ಯಸಾಚಿಯು ಸಿತವಾ ।
ಹನ ಕೃಷ್ಣ ಧನಂಜಯ ಫ
ಲ್ಗುಣಕಲಿಭೀಭತ್ಸು ವಿಜಯನೆನ್ನುವರೆನ್ನಂ ॥

**ಅರ್ಜುನ : ಹಾಡು** **ರಾಗ : ಜುಗಲ್ - ಏಕತಾಳ**

ನೋಡು ತೋರುವೆ ಕೂಡದೆ ಭೀತಿಯನು ॥ ಪ ॥
ಅಂಗಜಾಪಿತನಂತೆ । ಕಂಗೊಳಿಪನು ಮುಂದೆ । ಗಂಗಾತನಯನ ನೀಂ ॥ ೧ ॥
ಬಾಣದಿ ರಿಪುಗಳ । ಗೋಣನು ಮುರಿಯುವ । ದ್ರೋಣನೆಂಬುವನನು ನೀಂ ।೨॥
ಕರದೊಳು ಬಾಣವ । ತಿರಹುತ ಮೆರೆವನು । ತರಣಿ ಕುಮಾರನು ನೀಂ ॥ ೩ ॥

**ಅರ್ಜುನ : ಹಾಡು** **ರಾಗ : ಪೂರ್ಣಷಡ್ಜ - ರೂಪಕತಾಳ**

ಭಂಜಿಸುವೆ ಕೌರವನ । ಅಂಜಬೇಡವೈ ನಾಂ ॥ ಪ ॥
ಕಂಜನಾಭಭಕ್ತರಿಗೆ । ಸಂಜನಿಪುದೆ ಭೀತಿ ಪೇಳು ॥ ಅ.ಪ. ॥
ರಥವ ನಡಿಸು ಸೂತನಾಗಿ । ಪಥದಿ ಬೇಗದಿ ॥
ಮಥಿಸಿ ರಿಪುವ ನಿನ್ನ ಮನೋ । ರಥವ ಸಲಿಸಿಕೊಡುವೆನೀಗ ॥ ೧ ॥

**ದೃಶ್ಯ : ರಣಭೂಮಿ - ಕೌರವನ ಕಡೆ ಸೈನಿಕರ ಪ್ರವೇಶ**

**ದ್ರೋಣ : ಕಂದ**

ಕೆಂಡದ ಮಳೆ ಸುರಿವುದು ರವಿ
ಮಂಡಲವೆರಡಾಯ್ತು ಭೂಮಿ ಕಂಪಿಪುದಿದೊ ಮುಂ ।
ಕೊಂಡ ಧನು ಮುರಿದು ಬಿದ್ದುದು
ಕುಂಡಲಾಶ್ವಗಳು ಕಂಬನಿಯ ಸೂಸುವುವೆ ॥

**ದ್ರೋಣ : ಕಂದ**

ಇದೊ ಕಪಿವರನಬ್ಬರ ತಾ
ನಿದೊ ಶಂಖಧ್ವನಿಯು ಗಾಂಡೀವದ ಬೊಬ್ಬೆಯು ತಾ ।
ನಿದೊ ನರಸಿಂಹನಾದವು ।
ಇದೊ ತಾಂ ಬ್ರಹ್ಮಾಂಡವನ್ನು ಭೇದಿಪುದಲ್ತೆ ॥

**ಕರ್ಣ : ಹಾಡು** **ರಾಗ : ಬೇಹಾಗ್ - ಆದಿತಾಳ**

ಬಲ್ಲೆ ಬಲ್ಲೆನು । ನಿಮ್ಮನು ॥ ಪ ॥
ನರನಾದರದೇಂ ಧುರಕ್ಕೈದಲು ತರಿ ।
ದುರುಳಿಸುವೆನು ವರಿ । ವರಿಯಲಿ ಪೊಗಳ್ವಿರಿ ॥ ೧ ॥
ಕಲಿಯೆಂದರಿಯನು । ತಿಳಿಯದೆ ಪೊಗಳುತ ।
ಬಲವನು ಬೆದರಿಸಿ । ಗಳಹುವದನು । ನಾ ॥ ೨ ॥
ಹರಿಯನು ಕೆಣಕಿದ ನರಿ ಬದುಕುವುದೇ ।
ಧುರದೊಳು ರಿಪುವನು । ತರಿಯುವವರಿದೇ ॥ ೩ ॥

**ಕೃಪಾಚಾರ್ಯ : ಹಾಡು** **ರಾಗ : ಖರಹರಪ್ರಿಯ - ಛಾಪುತಾಳ**

ಫಡಫಡ ನೀನೇನ ಬೊಗುಳಿದೆ ಖೂಳ ।
ಬಿಡುಬಿಡು ಬಲ್ಲೆನು ನಿನ್ನಯ ಬಾಳ ॥೧॥
ಸುರನರದನುಜಕುನ್ನರರೊಳಗಾರು ।
ನರನನು ಗೆಲುವರು ನೋಡುವೆ ತೋರು ॥ ೨ ॥
ನೀಚಜಾತಿಗೆ ತಕ್ಕ ಮಾತುಗಳನ್ನು ।
ಯೋಚಿಸದಾಡಿದೆ ಸೈಸೆ ನಾ ನಿನ್ನ ॥ ೩ ॥

**ಕೃಪಾಚಾರ್ಯ : ಕಂದ**

ಇದನೆಲ್ಲವನರಿಯದೆ ನೀಂ
[illegible]ಗುವೆ ಕಲಿತುದನು ನಿಲ್ಲಿಸಾದರೆ ನರನಂ ।
ಕದನದಿ ಜೈಸಲ್ಕಾಗದ
ಹದನವ ಬಲ್ಲವರೆ ಬಲ್ಲರದರಿಂ ಫಲವೇಂ ॥

**ಕರ್ಣ : ಹಾಡು** **ರಾಗ : ನೋಟ್**

ಮುಣುಗಿ ಜಲದಿ ಬೂದಿಯನ್ನು ! ಹಣೆಗೆ ಬಳಿಯುತ !
ಹಣೆದ ದರ್ಭೆಯನ್ನು ಬೆರಳ್ಗೆ । ಕುಣಿಕೆಗೈಯುತ ॥ ೧ ॥
ಧೋತ್ರವುಟ್ಟು ಕರದಿ ಪಂಚ । ಪಾತ್ರೆಯ ಪಿಡಿದು
ಸತ್ರವನ್ನು ಹುಡುಕಿ ಪೋಪ । ಯಾತ್ರೆಯಲ್ಲಿದು ॥ ೨ ॥
ಗಟ್ಟಿಯಾಗಿ ಮೂಗ ಹಿಡಿದು । ಗುಟ್ಟಿನಿಂದಲೀ ।
ಬೆಟ್ಟನೆಣಿಸಿಕೊಂಬುದನ್ನು । ಬಿಟ್ಟು ಬಂದಿರಿ ॥ ೩ ॥

**ಕರ್ಣ : ಕಂದ**

ಗ್ರಹಗಳ್ಕ್ರೂರವು ಸೂರ್ಯ
ಗ್ರಹಣವು ಪಿತೃದಿನವು ಇಂದಮಾವಾಸ್ಯೆಯು ಎಂ ।
ದಹಹಾ ನಾನಾ ದಾನವ
ವಹಿಸುತ ಜೀವಿಸುವ ನಿಮಗೆ ಸುಭಟರ ಮಾತೇಂ ॥

**ಅಶ್ವತ್ಥಾಮ : ಹಾಡು** **ರಾಗ : ಕಮಾಚ್ - ಛಾಪುತಾಳ**

ಸೂತಜಾತ । ಏತಕಿಂಥ । ಮಾತನಾಡಿದೆ ।
ಪಾತಕಾತ್ಮ ವಿಪ್ರನಿಂದೆ ನೀತಿಯೇನೊ ಛೀ ಛೀ ನೀಚನೆ ॥ ೧ ॥
ಹಂದೆ ಇವರ ಮುಂದೆ ನಿನ್ನ ಕೊಂದು ಕೆಡಹುವೆ ।
ಬಂದುದೆಲ್ಲ ಬರಲಿ ನಿನಗೆ ! ಚಂದವಲ್ಲ ಛೀ ಛೀ ಖೂಳನೆ ॥ ೨ ॥
ಜಗದಿ ದಾನವನ್ನು ಕೊಡುವೆ । ತೆಗೆಯಬಲ್ಲೆಯ
ಬೊಗುಳಬೇಡ । ನಾಯಿಯಂತೆ । ಛೀ ಛೀ ಪಾಪಿಯೆ ॥

**ಭೀಷ್ಮ : ಕಂದ**

ಜಲಧಿಯು ಕುದಿದುಕ್ಕಿದರುಂ
ಇಳೆಯಂ ದಿಗ್ಗಜಗಳಿಳುಹಿದರು ಕುಲಗಿರಿಗಳ್ ।
ಚಲಿಸಿದರು ಪಾಂಡುಪುತ್ರರು
ಕಳೆವರೆ ಧರ್ಮವನು ಮಾಜದೆನ್ನೊಡನುಸಿರೈ ॥

ಅರ್ಜುನು : ಹಾಡು  ರಾಗ : ಕಮಾಚ್ - ಛಾಪುತಾಳ

ನಿಲ್ಲೊ ನಿಲ್ಲೊ । ನೀನೆಲ್ಲಿಗೆ ಓಡುವೆ । ಖುಲ್ಲನೆ ಸಡಗರದಿ ॥ ಪ ॥
ಸೊಲ್ಲಿಸದಿರೆ ನಾ । ನಿಲ್ಲೆ ಕೊಲ್ಲುವೆ ॥ ಅ.ಪ. ॥
ಕಳ್ಳರಂದದಿಂದಲಿ ನೀನೀಗ । ಬಲ್ಲಿದ ಗೋವ್ಗಳನೆಲ್ಲಿ ಕೊಂಡೊಯ್ವೆ ॥

## ದೃಶ್ಯ : ವಿರಾಟನ ದರ್ಬಾರ್

ವಿರಾಟ : ಹಾಡು  ರಾಗ : ಭೈರವಿ - ರೂಪಕತಾಳ

ಸೂನುವು ತಾನೆಲ್ಲಿ ಪೋದ । ಮಾನಿನಿಯೆ ಪೇಳು ಬೇಗ ॥ ಪ ॥
ಒಂದು ನಿಮಿಷವಾದರೆನ್ನ । ಕಂದನನ್ನು ಕಾಣದೆ ।
ಸುಂದರಾಂಗಿ ನೈಸೆ ಬೇಗ । ನಿಂದು ತೋರು ಮಾಜಬೇಡ ॥ ೧ ॥
ಬಿಸಿಲು ಗಾಳಿಯೊಳಗೆ ತಿರುಗಿ । ಬಸವಳಿಯುವನೋ ಹಾ ।
ವಸುಕುಲಾಬ್ಧಿ ಚಂದ್ರನೆಂದು । ಪೆಸರನಾಂತ ಎನ್ನ ಮೋಹದ ॥ ೨ ॥
ಧಾರಿಣಿಯೊಳಗೆನ್ನ ಮಗನು । ಮಾರಮೋಹನಾಂಗನು ।
ನಾರನಾರನೇಕ್ಷಣನು । ವೈರಿಗಜಮೃಗೇಂದ್ರನು ಹಾ ॥ ೩ ॥

ಸುದೇಷ್ಣೆ : ಹಾಡು  ರಾಗ : ಫರಜು - ಛಾಪುತಾಳ

ಪ್ರಾಣೇಶನೆ ಲಾಲಿಸು । ಪೇಳುವ ಮಾತನು ॥ ಪ ॥
ಕರಿಪುರವಾಳುವ । ಕುರುಪತಿಯೈದುತ ।
ತುರುಗಳನೆಲ್ಲವ । ಸೆರೆಪಿಡಿದಿರುವನು ॥ ೧ ॥
ಕೇಳುತ ಸೂನವು । ತಾಳುತ ಕೋಪವ ।
ಕಾಳಗಕೆನ್ನುತ । ಪೇಳದೆ ಪೋದನು ॥ ೨ ॥
ಎಂತಹುದೋ ಮಾ । ಕಾಂತನೆ ಬಲ್ಲನು
ಸಂತಸವಿಲ್ಲದೆ । ಚಿಂತೆಯ ತಾಳಿಹೆ ॥ ೩ ॥

ಬಾರಕ : ಹಾಡು  ರಾಗ : ನಾದನಾಮಕ್ರಿಯ - ಆದಿತಾಳ

ಲಾಲಿಸೆನ್ನ ಮಾತ । ಪೇಳುವೆ ಸಂತೋಷವ ತಾಳುತ ॥ ಪ ॥
ನಿನ್ನ ಮಗನು ಕೌರವ । ನನ್ನಿಯಿಂದ ಬಹನು ಜಯವನ್ನು ಪಡೆಯುತ್ತ ॥ ೧ ॥

ದ್ರೋಣ ಕರ್ಣಕೃಪರನ್ನು ಬಾಣದಿಂದಲೀ
ಖಾಣಿಸಿದನು ಮೂರ್ಛೆಯನ್ನು । ಜಾಣನಾದುತ್ತರನು ॥ ೨ ॥
ಬಂದ ವಂದಿವೃಂದವಿಂದು । ಕಂದಿ ಕುಂದುತ ।
ಪಿಂದೆ ಪಿಂದೆ ಸಂದ ಭೀತಿ । ಯಿಂದಲೋಡಿದರು ಕೇಳು ರಾಜೇಂದ್ರನೆ ॥ ೩ ॥

**ವಿರಾಟ : ಹಾಡು** **ರಾಗ : ಬೇಹಾಗ್ - ಆದಿತಾಳ**

ವಸುಕುಲದೀಪನೆ । ಬಾ ಭೂಪನೆ । ಬಾ ಭೂಪನೆ । ಮಾರರೂಪನೆ ॥ ಪ ॥
ಇಂದು ವೈರಿಗಳ । ಸಂದೋಹವನ್ನು । ಚಂದದಿ ಜೈಸುತ । ಬಂದೆಯ ನೀನು ॥ ೧ ॥
ತಂದೆಯ ಮನಕಾನಂದವನ್ನು । ತಂದೆಯ ಬೇಗದಿ । ಕಂದನೆ ನೀನು ॥ ೨ ॥
ನಿನ್ನಂಥ ಮಗನೆನ । ಗಿನ್ನೆಲ್ಲಿ ದೊರೆವನು ।
ಚನ್ನಾದ ಕೀರ್ತಿ । ಯನ್ನು ತಂದೆಯ ನೀಂ ॥ ೩ ॥

## ದೃಶ್ಯ : ನಾಟ್ಯಶಾಲೆ
## (ಅರ್ಜುನ - ಉತ್ತರೆಯರ ಯುಗಳಗೀತೆ)

**ರಾಗ : ದೇಶಿಕಾಪಿ - ರೂಪಕತಾಳ**

**ಅರ್ಜುನ :** ನಂದನೆ ನೀಂ ಪೇಳಿದಂತೆ । ತಂದಿರುವೆನು ।
ಚಂದವಾದ ಒಡವೆಯ ನೀಂ । ಪೊಂದು ಮುದವನು ॥ ೧ ॥

**ಉತ್ತರೆ :** ನೋಡುವೆನದನೆನ್ನ ಕೈಗೆ । ನೀಡು ಬೇಗದಿ ।
ಆಡುವದಕೆ ಹೋಗಬೇಕು । ನಾಡೆ ಹರುಷದಿ ॥ ೨ ॥

**ಅರ್ಜುನ :** ಚಾರುರತ್ನದುಂಗುರಗಳು । ಮಿರಿ ಪೊಳೆವವು ।
ಹೀರಪದ್ಮರಾಗಮಣಿಹಾರವಾದವು ॥ ೩ ॥

**ಉತ್ತರೆ :** ಕಳೆಯದೆನ್ನ ಮಾತನಿಂದು । ಚಳಕದಿಂದಲಿ ।
ಕಲಿಯೆ ತಂದು ಕೊಟ್ಟೆಯೆನಗೆ । ಭಲರೆ ಮುದದಲೀ ॥ ೪ ॥

## ದೃಶ್ಯ : ಅರಮನೆ

**ಅರ್ಜುನ : ಹಾಡು** **ರಾಗ : ನಾಟಿಕುರಂಜಿ - ಆದಿತಾಳ**

ಮಾನಿನೀಮಣಿಯೆ । ಏನಿದೆನ್ನೊಡನೆ । ನೀನು ಪೇಳು ಬೇಗ ॥ ಪ ॥
ರಾಯನ ಪಣೆಯೊಳು । ಗಾಯವು ಕಾಣ್ಬುದು ।

ನೋಯಿಸಿದವರಾ । ರಾಯತನೇತ್ರಿಯೆ ॥ ೧ ॥
ಎನ್ನಯ ಶಪಥವ । ರನ್ನೆಯೆ ಕಾಣೆಯ ।
ಮುನ್ನವೆ ಪೇಳಾ । ಕುನ್ನಿಯದಾರು ॥ ೨ ॥
ಆರಿಂದೀಪರಿ । ಸೇರಿತು ಬೇಗದಿ ।
ತೋರಿಸಿಕೊಡು ಸಂ । ಹಾರವ ಮಾಡುವೆ ॥ ೩ ॥

**ಭೀಮ : ಹಾಡು** — **ರಾಗ : ಕಮಾಚ್ - ಆದಿತಾಳ**

ನುಡಿನುಡಿ ಯೇನಿದೇನಿದು ॥ ಪ ॥
ತಿಳಿಸೈ ಪಣೆಯೊಳು । ಬಲು ಗಾಯವನಾ ।
ರೊಳಕೊಳಿಸಿರುವಾ । ಖಲನಾವನು ॥ ೧ ॥
ಸುರನರಭುಜಗಾ । ಮರರಿಂದಾಗಿರೆ ।
ಇರಿಯುವೆನವರನು । ಮರೆಮಾಜದೆ ॥ ೨ ॥
ಧರೆಯೊಳು ರಕುತವ । ಸುರಿಸಿದವನ ಪೆಸ ।
ರೊರೆವುದು ಬೇಗದಿ । ಕರುಳ ಬಗೆವೆ ॥ ೩ ॥

## ದೃಶ್ಯ : ಅರಮನೆ ಮುಂಭಾಗ

**ಕಂಚುಕಿ : ಹಾಡು** — **ರಾಗ : ದೇಶಿಕಾಪಿ - ಛಾಪುತಾಳ**

ಲಾಲಿಪುದೈ ದಯಾ । ಶಾಲಿಯೆ ನುಡಿಯ ।
ಪೇಳುವದಕೆ ಭಯ । ದಾಳಿಯೆ ಜೀಯ ॥ ೧ ॥
ಮಾರಜನಕನೋ । ಗೌರೀವರನೋ ।
ಧೀರಸುರೇಶನೊ । ನೀರೇಜಭವನೊ ॥ ೨ ॥
ಹರಿಪೀಠವೇರಿ । ಮೆರೆವರು ಮಾರಿ ।
ಪರಿಕಿಸು ಬಂದು । ದೊರೆಯೆ ನೀನಿಂದು ॥ ೩ ॥

**ಉತ್ತರ ವಿರಾಟ ಮೊದಲಾದವರು : ಹಾಡು** — **ರಾಗ : ಜಂಝೂಟಿ - ಆದಿತಾಳ**

ಕುಮುದಬಾಂಧವವಂಶಸ್ತವನೆ । ಕಮನೀಯಕಾಯರೂಪನೆ ॥ ಪ ॥
ಅರಿಯದೆ ಪೋದುದ । ಕರುಣದೊಳಿಂದು ।
ಕರವಿಡಿದು । ಪೊರೆಯುವದು । ವರ ॥ ೧ ॥

ಶರಣಾಗತರನು । ಪೊರೆಯುವ ಬಿರುದನು ।
ಧರಿಸಿರುವೆ । ಮೊರೆಯಿಡುವೆ । ವರ ॥ ೨ ॥
ಕ್ಷಮಿಸುವುದೆನ್ನಪ । ರಾಘವ ನೀನು ।
ಮಮತೆಯೊಳು । ಕರುಣಾಳು । ವರ ॥ ೩ ॥

### ದೃಶ್ಯ : ಅಭಿಮನ್ಯು ಉತ್ತರೆಯರ ವಿವಾಹ ಮಂಟಪ
### (ಉತ್ತರೆ, ಅಭಿಮನ್ಯು ಯುಗಳ ಗೀತೆ)

ರಾಗ : ಜಂಝೂಟಿ - ಮಿಶ್ರಛಾಪುತಾಳ

**ಉತ್ತರೆ :** ಸುಂದರಾಂಗನ ಪ್ರೇಮಭಾವ ದೊಳಿಂದು ಮುದದಿಂವಾಗುವೆ
ಚಂದದಿಂದಲಿ ಕಂಠದೇಶಕೆ ಕಂಗಿ ಹಾರವ ಹಾಕುವೆ

**ಅಭಿಮನ್ಯು :** ಸುಂದರಾಂಗಿಯ ಪ್ರೇಮಭಾವ ದೊಳಿಂದು ಮುದದಿಂವಾಗುವೆ
ಚಂದದಿಂದಲಿ ಕಂಠದೇಶಕೆ ಕಲಿ ಹಾರವ ಹಾಕುವೆ ॥ ೧ ॥

**ಉತ್ತರೆ :** ಇಂದು ಎನ್ನಯ ಭಾಗ್ಯನಿಧಿಯನು ಚಂದದಿಂದಲಿ ನಾ ಕಂಡೆನು
ಮದನನ ನಗಿಸಿದೀಗಾ ನಂದ ಪ್ರಭವದಿ ನಾಯ ॥ ೨ ॥

**ಅಭಿಮನ್ಯು :** ಎನ್ನ ತಾಪಸಿನ ಫಲವ ನೀ ಇಂದು ಕಂಡೆನು ಮೋದದೊಳ್
ಇನ್ನು ನಗಿಸುವೆ ಸಕಲ ಗುಣಾಭರಿ ನಿಮ್ಮಗಳ ಸನ್ನಾಸದೊಳ್ ॥ ೩ ॥

**ಮಂಗಳ** — **ರಾಗ : ದೇಶಿಕಾಪಿ, ರೂಪಕತಾಳ**

ಜಯ । ಮಂಗಳಂ ಮಕುಟಕೋಟ । ರಾಘವನಿಗೆ ।
ಜಯ ಮಂಗಳಂ । ಜಾನಕೀಮನೋಭಿರಾಮಭಾಸಿಗೆ ॥ ೧ ॥
ಬಾಲಚಂದ್ರಫಾಲೆಗೆ ಕರುಣಾಲವಾಲೆಗೆ ।
ಕಾಲಕಾಲಲೋಲೆಗೆ ಹಿಮಶೈಲಬಾಲೆಗೆ ॥ ೨ ॥
ಶ್ರೀ ಮಹಿಶೂರಪಾಲ । ಚಾಮರಾಜಗೆ ।
ಪ್ರೇಮದಿಂದ ಸುತರನಿತ್ತ ಚಾಮುಂಡಾಂಬೆಗೆ ॥ ೩ ॥



# ಕುರುಕ್ಷೇತ್ರ


ನಾಟಕಕಾರರು
**ಬಿ. ಪುಟ್ಟಸ್ವಾಮಯ್ಯ**


ಅಭಿನವ ಶಿಖಾಮಣಿ
**ಎಂ. ಸುಬ್ಬರಾಯರು**


ರಂಗಮಂಟಪದ ಬುದ್ಧಿಶೇಖರ
**ಎ.ಎನ್. ಶೇಷಾಚಾರ್**

**ಪ್ರಾರ್ಥನೆ : ಹಾಡು** **ರಾಗ : ಭೀಮ್‌ಪಲಾಸ್ - ಝಂಪೆತಾಳ**

ಓಂ ಪ್ರಥಮ ನಿನ್ನನಮಿಪೆ
ಸ್ವಾತಂತ್ರ್ಯ ಮಹಾಗಣಪ ॥ ಪ ॥
ಶಂಕರಸುತ ಉಮಾಭರಣ
ಸನ್ಮಂಗಳ ಸುಕೃತದಾತ
ಸರ್ವಲೋಕ ದೊಡೆಯನೀನೆ
ಸಿದ್ಧಿವಿಜಯ ವಿನಾಯಕನೆ ॥ ೧ ॥
ವಿದ್ಯೆ ಕಲಿಸುವಾತ ನೀನೆ
ತದ್ವಿದ್ಯೆಥಕ ಕುಣಿವ ನೀನೆ
ಸಿದ್ಧರೊಡೆಯಲೋಲ ನೀನೆ
ಸಿದ್ಧಿ ವಿಜಯ ವಿನಾಯಕನೆ ॥ ೨ ॥

**ದೃಶ್ಯ : ರಸ್ತೆ**

**ಸೂತ್ರಧಾರ : ವೃತ್ತ** **ರಾಗ : ನಾಟಿ**

ಶ್ರೀಮತ್ ಶೈಲಸುತ ಮುಖಾಂಬುಜಂ ಸುಧಾಪಾನೈಕಶೀಲಂ ಸುರ
ಸ್ತೋಮಾರಾಧಿತ ಪಾದಪದ್ಮ ಯುಗಳಂ ಸನ್ಮುಕ್ತಿಭಕ್ತಿಪ್ರದಂ ॥
ಕಾಮಾರಾತಿ ಭಯಾಪಹ ತ್ರಿಣಯ ನಂ ಕ್ಷೇಮ ಕರಂ ಶಂಕರಂ ।
ಪ್ರೇಮಂ ಬೆತ್ತಿಮಗೀಗೆ ಮಂಗಳ ಮಹಾಸಾಮ್ರಾಜ್ಯಮಂ ಸಂತತಂ ॥

ಸೂತ್ರಧಾರ : ಹಾಡು　　　　ರಾಗ : ಉದಯಚಂದ್ರಿಕೆ - ಆದಿತಾಳ

ಗಿರಿವರ ತನಯಾರ್ಧಾಂಗ ವಿಭೂಷ ॥
ಪಾಲಯ ಪರಮೇಶ ॥ ಪ ॥
ದುರಿತ ಭಂಜನ ದ್ಯುನದೀ ರಂಜನ
ಮಾರವೈರಿ ಮುನಿ ಮಾನಸ ವಾಸ ॥
ಈಶ ಶುಭಕರ ॥ ಅ.ಪ. ॥
ಪಾಲಯ ಪರಶಿವ, ಸುವಿಮಲ ಭಾವ
ಲೀಲಾರೂಪ ಪ್ರಶಮಿತತಾಪ
ಫಾಲವಿಲೋಚನ, ಪಾಪ ವಿಮೋಚನ
ನೀಲ ಸುಕಂದರ, ಕಲುಷ ವಿದೂರ
ಶೂಲಪಾಣಿ ದಮಿತತ್ರಿಪುರ ॥ ೧ ॥

**ದೃಶ್ಯ : ದ್ವಾರಕೆಯಲ್ಲಿ ಶ್ರೀಕೃಷ್ಣನ ಶಯನಾಗೃಹ**
**(ಕೃಷ್ಣ ಮತ್ತು ರುಕ್ಮಿಣಿ ಯುಗಳ ಗೀತೆ)**

ರುಕ್ಮಿಣಿ : ಹಾಡು　　　　ರಾಗ : ಸಾಮ - ಆದಿತಾಳ

ಕಾಣುವೆ ಮನಮೋಹನ ಕೃಷ್ಣಯ್ಯನ
ಎನ್ನ ಕನಸಲಿ ಮನಸಲಿ ಚಿನ್ಮಯ ರೂಪನ ॥ ಪ ॥
ಬೃಂದಾವನದಲಿ ಅಂದದಿ ನಲಿವ
ಮಂದಹಾಸದಿ ಕಿರುನಗೆ ಬೀರುವ
ಸುಂದರವದನನ ನಂದಕುಮಾರನ
ಮಂದರೋದ್ಧಾರ ಗೋವಿಂದ ಮುಕುಂದನ ॥ ೧ ॥
ಮಾನವನಂತೆ ತೋರೀ ಜಗದಲಿ
ಮಾಯಾಜಾಲವ ಬೀರಿ
ಮಾನನಿಯರ ಮನ ಮರುಳುಗೊಳಿಸುವ
ಮುರಳೀನಾದದಿ ಮನವನು ಸೆಳೆವ
ಮಾಧವನ ಧ್ಯಾನ ಮೋಕ್ಷಕೆ ಸಾಧನ
ಮದುಸೂಧನನ ಹೃದಯದೆ ಅನುದಿನ ॥ ೨ ॥

**ರುಕ್ಮಿಣಿ :** ಸ್ವಾಗತಾ ಸ್ವಾಗತಾ
ರುಕ್ಮಿಣಿ ಹೃದಯ ವಿಹಾರಿಶೌರಿ
ಮೋಹನ ಮುರಳಿ ಗಾನವಾರಿಧಿ ॥ ಪ ॥

**ಕೃಷ್ಣ:** ಭಾಮಿನಿ ರುಕ್ಮಿಣಿ
ಬಾ ನನ್ನ ಮನದನಿ
ಮೋಹನ ಮುರುಳಿ ಗಾನವಾಹಿನಿ
ಮೃದು ಮಧುರಾಧರ
ಸುಮಧುರ ಭಾಷಿಣಿ
ಮಾಧವ ಹೃದಯ ಮಹಾನಂದರೂಪಿಣಿ

**ರುಕ್ಮಿಣಿ :** ಮಧುರ ವಿಲಾಸ
ಮನಮೋಹನಾ
ಹೃದಯ ನಿವಾಸ ನಿರಂತರ
ರುಕ್ಮಿಣಿ ಹೃದಯ ನಿವಾಸ ನಿರಂತರ
ಅನುದಿನ ಅನುಕ್ಷಣ ನಿನಗೆ ನಮನ

**ಕೃಷ್ಣ:** ಪ್ರೇಮ ಪರಾಗ
ಸುಮಶರನಾವೇಗ
ಪ್ರಣಯಾ ನಂದದ ಪಂಚಮವೇದ
ನವಸಿರಿ ಸುರಚಿರ ನವರಾಗಲೀಲ
ನೂತನ ಪ್ರೇಮ ಅಮೋಘಭಾವ

**ರುಕ್ಮಿಣಿ : ಹಾಡು** **ರಾಗ : ಆರಭಿ - ಆದಿತಾಳ**

ದೀನಾವನ ಶೀಲಾ
ಗೋಪಿಲೋಲಾ ವನಮಾಲಾ ಪೊರೆ ॥ ಪ ॥
ದೀನಾರ್ಥಿಪಾಲಾ ನಿಖಿಲ
ಮುನಿಜನ ಪೂಜ್ಯನೆ ಭುವನ ಸೂತ್ರಧಾರಿ ॥ ಅ.ಪ. ॥

**ಸಾತ್ಯಕಿ : ಹಾಡು** **ರಾಗ : ಚಾರುಕೇಶಿ - ಆದಿತಾಳ**

ಏನೀಮಾಯದ ನಿದ್ರೆ ಮಾಧವ ನಿನ್ನ
ದೇನೀ ಮೌನದ ಮುದ್ರೆ ಕೇಶವ ॥ ಪ ॥
ನೀ ಕಣ್ಣಮುಚ್ಚಿರಲು । ಜಗವೆನಿಶ್ಚೇತನವು
ನೀ ಕಣ್ಣತೆರೆದಿರಲು ಚೇತರಿಪುದು ಇಳೆಯು ॥ ಅ.ಪ. ॥
ಆವ ಕಾರ್ಯಕೆ ನಾಂದಿ
ಯಾವ ಭಕ್ತರ ಚಿಂತೆ
ದೇವ ನೀನೀ ತೆರದ
ಭಾವವನೇ ತಳೆದೆ
ಶ್ರೀವರನೇ ನಿನ್ನ ಲೀಲಾವಿನೋದಗಳ
ಭಾವಿಪರನು ಕಾನೆ ಈರೇಳು ಜಗದೊಳಗೆ ॥ ೧ ॥

**ದುರ್ಯೋಧನ : ಹಾಡು** **ರಾಗ : ಮೋಹನ/ತಿಶ್ರನಡೆ - ಆದಿತಾಳ**

ಮಾಧವನರಮನೆಯು ಮನಕೆ ಮೋದಗೊಳಿಸುತಿಹುದು ಭಲಾ
ಮೂಜಗದೊಳೆದರೆ ಸರಿಕಾಣೆನಾ ಭಲಾಭಲಾ ॥ ಪ ॥
ಮುತ್ತು ರತ್ನಗಳಿಂದ ಕೆತ್ತಿರುವ ಗೋಡೆಗಳು
ವಜ್ರಗಳ ಕಂಬಗಳು ನೀಲರತ್ನ ವಚ್ಚೆಗಳು
ಗೋಮೇಧಿಕ ಪುಷ್ಯರಾಗ ವೈಢೂರ್ಯದ ಆ ಹೊದಿಕೆ
ರನ್ನದಾ ಕಲಶಗಳು ಥಳಥಳಥಳ ಹೊಳೆಯುತಿಹವು ॥ ಅ.ಪ. ॥
ಮಾಧವನ ಅರಮನೆಯ ಎನಿತುರಮ್ಯವು
ಶ್ರೀಧರನ ಹೃದಯವದು ಅತಿನಿಗೂಢವು
ಎತ್ತಲು ನೋಡುತಿರೆ ಮುತ್ತಿನ ಪುತ್ಥಳಿಗಳ್
ಚಿತ್ತಕೆ ಮುದವನು ಬೀರುತಲಿರುವುದು ನೋಡಲು ॥ ೧ ॥

**ಅರ್ಜುನ : ಹಾಡು** **ರಾಗ : ಭಾಗೇಶ್ವರಿ - ಝಂಪೆತಾಳ**

ಯೋಗನಿದ್ರೆಯಲ್ಲಿಹನು
ಯೋಗಿಜನ ಬೋಧಕನು

ಭೋಗಿಶಯನ ಕೃಪಾಳು ಪ್ರಾಣಸಖನು ॥ ಪ ॥
ಪೋಗೆ ನಾನವನ ಬಳಿ
ಯೋಗನಿಷ್ಠೆಯೊಳಿರಲು
ಯೋಗಿವರನೀಕ್ಷಿಪನು ಕಣ್ಣ ತೆರೆದು ॥ ಅ.ಪ. ॥
ಹರಿಯು ನಿದ್ರೆಯೊಳಿರಲು
ಧರೆಯೆಲ್ಲ ನಿದ್ರಿಪುದು
ಹರಿಯೇಳೆ ಎಚ್ಚರವು ಸಕಲಭುವಿಗೆ ॥ ೧ ॥
ಹರಿಯೆ ರವಿಯೆನಿಸುತ್ತೆ
ಹರಿಸುವನು ಕತ್ತಲೆಯ
ಹರಿಯು ಕಣ್ತೆರೆಯೆ ಬೆಳಗುವುದು ಜಗವು ॥ ೨ ॥
ಉದಿಸೆ ರವಿ ಕಮಲಗಳು
ಮುದದೊಳರಳುವ ತೆರದೆ
ಉದಯಿಸಿರೆ ಗೋಕುಲದ ಕೃಷ್ಣ ರವಿಯು ! ॥ ೩ ॥
ಉದಿಸೆ ರವಿ ಮಾನವರು
ಸದಮಲಾತ್ಮಜ್ಞಾನ
ಕೊದಗುವರು ಭವಬಂಧ ಸಡಿಲವಹುದು ॥ ೪ ॥

**ಅಥವಾ**

**ಅರ್ಜುನ : ಹಾಡು** **ರಾಗ : ಅಭೇರಿ - ಆದಿತಾಳ**

ಜಗವೆಲ್ಲ ತುಂಬಿದೆ ನಿನ್ನ ಮಾಯಾ
ಅರಿತು ಬೆರೆತು ನೆನೆವೆನು ಜೀಯಾ ॥ ಪ ॥
ಕಪಟನಾಟಕ ಸೂತ್ರಧಾರಿ ಧ್ಯಾನರೂಪಗಾನ ವಿಹಾರಿ
ಆನಂದ ಪರಮಾನಂದ ನಿನ್ನಯ ಧ್ಯಾನ ॥ ಅ.ಪ. ॥
ಶಾಂತಾಕಾರ ಧ್ಯಾನಗೋಚರ ನಿತ್ಯ ನಿರಂಜನ ಸತ್ಯಾಧಾರ ॥ ೧ ॥

**ಅರ್ಜುನ : ಹಾಡು** **ರಾಗ : ವಸಂತ - ಆದಿತಾಳ**

ಜನಾರ್ಧನ ಪರಮ ಪಾವನ ॥ ಪ ॥
ಸನಕಾದಿ ಸನ್ನುತ ಪಾರ್ಥದೇವ
ವನಜಾಸನಾದಿ ಸುರವಂದಿತ ಪಾದ ॥ ಅ.ಪ. ॥

ವ್ಯಾಮೋಹ ಶೋಕ ನಿವಾರಣ
ಭಾಮಾರುಕ್ಮಿಣಿ ಪ್ರಿಯರಮಣ
ಸೋಮಾರ್ಕ ಸನ್ನಿಭಲೋಚನ
ಪ್ರೇಮಾಸ್ಪದಂ ಶ್ರೀ ಪಾರ್ಥರಕ್ಷಣ ॥ ೧ ॥

**ಅರ್ಜುನ : ಹಾಡು** **ರಾಗ : ಋಷಭಪ್ರಿಯ - ಆದಿತಾಳ**

ಹರಿಯೇ ನರ ಹರಿಯೆ ನೀ ಮರೆತಿರುವುದು ಸರಿಯೆ ॥ ಪ ॥
ಸಕಲ ಲೋಕಗಳ ರಕ್ಷಕನೆನಿಸಿಹ ಬಿರುದ ಧರಿಸಿಹ
ಪರಮ ಪುರುಷ ಹರಿಯೆ ।
ಧರೆಯ ಭಾರವ ಇಳಿಸಲವತರಿಸಿ
ಕುರು ಸಹೋದರರ ರುಧಿರವ ಬಯಸಿ
ಪರಿ ಪರಿ ವೀರರ ಪರಗತಿ ಸೇರಿಸೆ
ಧರೆಯ ಭಾರ ಇಳಿಸೆ ॥ ೧ ॥

**ಅರ್ಜುನ : ಕಂದ**

ಯದುಕುಲ ಚೂಡಾರತ್ನವೇ
ಮದನಪಿತ ಕೃಷ್ಣದೇವ ಬೇಡುವೆ ನಿನ್ನಾಂ ।
ಒದಗಿಹುದಿಂದಿನ ಸಮರಕೆ
ಮುದದಿಂದ ನೀನಮ್ಮ ಕಡೆಗೆ ಪಾಂಡವ ಜೀವ

**ದುರ್ಯೋಧನ : ಹಾಡು** **ರಾಗ : ಹಂಸಧ್ವನಿ - ಆದಿತಾಳ**

ಭಲಾಭಲಾ ಭರದಿ ಮೆರೆವೆ ಹರಿಕರುಣದಿನಿರತ ॥ ಪ ॥
ಪರಮ ವಿಭವದೊಳು ಧೀರ ಶೂರನಹ
ದೇಶಾಧಿಪತಿಗಳು ಮೆರೆಯಲು ಸತತ
ವರಸೈನ್ಯದೊಳು ಅಮೋಘವಾಂತು
ಬೀರುತ ಸರಸದಿ ಮೆರೆವೆ ವಿಜಯದೊಳು ॥ ೧ ॥

ಅರ್ಜುನ : ಹಾಡು ರಾಗ : ಹಿಂದೂಸ್ಥಾನಿಕಾಪಿ - ತ್ರಿಪುಟತಾಳ

ವಾರಿಧಿ ಶಯನ ಮುರಹರ
ಭಕುತ ಹಿತಕರ ದುರಿತಹರ ಪೊರೆ || ಪ ||
ವೇದವನು ಪೊರೆದೀ ಭುವಿಯಲಿ
ಸಾಧಿಸಿದೆ ಧನುಜಾಧಿಪರನು
ಮುದದಿ ಮುಕುತಿಯ ಪಥವ ನೀಡ್ಡೆ
ಸದಮಲ ಸುರಚಿರ ಸುವಿಮಲಕರ || ಅ.ಪ. ||
ದುರದೊಳತಿ ಹಿತವೆಸಗಲು
ಕರುಣದಲಿ ಸಮ್ಮತಿಸಿದೆ ।
ಪರಮಗುಣ ಕರುಣಾಭರಣ ನಳಿನಾಚರಣ
ಪೊರೆ ಲಕುಮಿ ಪತಿ ವಿಪುಲ ಘೋಷಗಳ ಜಗಗಮನ || ೧ ||

## ದೃಶ್ಯ : ಕೃಷ್ಣನ ಶಯನಾಗೃಹ
(ರುಕ್ಮಿಣಿ ಮತ್ತು ಕೃಷ್ಣರ ಯುಗಳ ಗೀತೆ )

ರುಕ್ಮಿಣಿ : ತರವೆ ಕಾಂತನಾಥ ನಾಥಾ ಲೋಕ ವ್ಯಾಪಕಾ
ಪ್ರೇಮಮೂರ್ತಿ ಯೆಂಬ ನಿನ್ನ ನಾಮವಿಂದು ವಿಫಲವಾಯ್ತು
ಸಮರದಿಂದ ಪ್ರಾಣ ಹಾನಿ ಸರ್ವಹಾರಿಣಿ

ಕೃಷ್ಣ : ಭಯಪಡುವದೇಕೆ ಕಾಂತೇ ಕಾಂತೇ ಪ್ರೇಮಪೂರಿತೇ
ಸಾಮದಾನ ಭೇದವೆಲ್ಲ ಕೋಮಲಾಂಗಿ
ವಿಫಲವಾಯ್ತು ಸಮರ ದಂಡವಿಂದು ಧರಣೀ ಪಾಲನಾದಿರೆ

ರುಕ್ಮಿಣಿ : ನಾಥಶ್ರೇಷ್ಠ ದಯಾ ನಿಧಾನ ಪಾವನಾತ್ಮ ಭಕ್ತಾಧೀನ
ಲೋಕಕರ್ತೃ ಶಾಂತಿದಾನ ಕಾಯೋ ಮೋಹನಾ

ಕೃಷ್ಣ : ಧರ್ಮರಾಜ್ಯ ಸ್ಥಾಪನೆಗೆ ಧರ್ಮ ಯುದ್ಧ ಮಿಂದೊದಗಿ
ಕರ್ಮಭೂಮಿ ಭಾರತವು ಧನ್ಯಮಾದುದೇ

ಶಕುನಿ : ಹಾಡು ರಾಗ : ಹಂಸಧ್ವನಿ - ಏಕತಾಳ

ಧಗಧಗನೆದ್ದಿದೆ ದ್ವೇಷಜ್ವಾಲೆ
ದಹಿಸುತಿದೆ ಲೋಕಗಳ ಕರಾಳೆ || ಪ ||

ಹರಡಿದೆ ದಾವಾನಲವೆಲ್ಲೆಲ್ಲು
ಉಳಿವುದೆಂತು ಈ ಕುರುವಂಶಜರು || ಅ.ಪ. ||
ಸೋಲಿಸಿ ನಮ್ಮನ್ನು ಕುರುಪತಿ ತಂದನು
ಹಸ್ತಿನಾವತಿಗೆ ಸೆರೆಯೊಳಗಿಟ್ಟನು
ಅಣ್ಣ ತಮ್ಮಂದಿರು ನೂರ್ವರು ನಾವು
ನಮಗೊದಗಿತು ಸೆರೆಮನೆಯೊಳೆ ಸಾವು || ೧ ||
ನೂರ್ವರೊಳೊಬ್ಬನೆ ಉಳಿದಿಹೆ ನೀಗ
ತೀರಿಸಲನುಜರ ಸಾಲವ ಬೇಗ
ಹೆಮ್ಮರವಾಗುವುದೆನ್ನಯ ಸೇಡು
ಸ್ಮಶಾನವೆನಿಪುದು ಕೌರವ ನಾಡು || ೨ ||

**ಅಥವಾ**

**ಶಕುನಿ : ಹಾಡು** ರಾಗ : ಷಣ್ಮುಖಪ್ರಿಯ - ಆದಿತಾಳ

ದಹಿಸುವುದೆನ್ನ ಮನ ಮೌನ || ಪ ||
ಕುರುಕುಲವೆಲ್ಲವ ನಾಶದ ಬಗೆಗೆ
ಪಾಪಿ ಕೌರವನಾಕ್ಷತ್ರಿಯೊಳಗುರುಳಿಪೆ || ಅ.ಪ. ||
ಪತನಕೆ ದಾರಿಯ ತೋರುವೆನೆನುತಲಿ
ಅತಿಹಿಂಸಾತ್ಮಕ ಚಿಂತೆಯಿಂದಲಿನಾ
ಹತಗೈಸುವೆನಾ ಹಿತದಿಂದಲವರ
ಭ್ರಾತೃ ಶೋಕದಿ ಪೀಡಿತನಾದೆ || ೧ ||

**ದುರ್ಯೋಧನ : ಹಾಡು** ರಾಗ : ಮಾಳವಿ - ಆದಿತಾಳ

ದುರದಿಗೆಲ್ವೆನವರ ಸಮರದಿ || ಪ ||
ಮದಾಂಧರನು ಸದೆದು ಧುರದೊಳು ||
ಧೀರತನದಿವರ ಭಾರತವನು ನಾ
ಪರಿಪಾಲಿಸುವೆ ಹರನ ದಯದೊಳಿಂದು || ಪ ||

**ದುಶ್ಯಾಸನ : ಹಾಡು** **ರಾಗ : ಹಂಸಧ್ವನಿ - ಆದಿತಾಳ**

ಧಿಕ್ಕಾರವನು ಸಹಿಸೆನಾ ಯದುಪತಿಯ ॥ ಪ ॥
ಲೆಕ್ಕಿಸದೆ ನಿನ್ನಾ ಸೊಕ್ಕಿಹನು ಮುನ್ನ ॥
ಅಕ್ಕರದಿ ವಿದುರನಾಲಯವ ಪೊಕ್ಕಿಹನು ॥ ಅ.ಪ. ॥

**ದೃಶ್ಯ : ವಿದುರನ ಕುಟೀರ**

**ವಿದುರ : ಹಾಡು** **ರಾಗ : ನಾಗಗಾಂಧಾರ - ರೂಪಕತಾಳ**

ಭಾಮೆರಮಣ
ಶಾಮಲಕಾಯ ಕೃಷ್ಣಾಶ್ರೀ ॥ ಪ ॥
ಮೌನೀಂದ್ರನುತ ನಾಮ
ಸಂಪೂರ್ಣ ಕಾಮ
ಮುನಿಕುಲ ಸೋಮ
ನಿರ್ಗುಣಧಾಮ ॥ ೧ ॥

**ರಾಗ : ಅಭೇರಿ - ಆದಿತಾಳ**

ರುಕ್ಮಿಣಿಲೋಲ ವಾರಿಜಮಾಲಾ
ವರಗುಣ ಶೀಲ
ವಸುದೇವ ಬಾಲ ॥ ೨

**ವಿದುರ : ಕಂದ**

ಗೋಪಾಲರತ್ನಂ ಭುವನೈಕ ರತ್ನಂ
ಗೋಪಾಂಗನೆಯರ
ನವಯೌವ್ವನ ಭಾಗ್ಯರತ್ನಂ
ಶ್ರೀಕೃಷ್ಣರತ್ನಂ ಸುರಮೌಳಿರತ್ನಂ
ಭಜಾಮಿತ್ವಾಂ ಯಾದವ ವಂಶರತ್ನಂ

**ಕೃಷ್ಣ : ಹಾಡು** **ರಾಗ : ಚಾರುಕೇಶಿ - ಆದಿತಾಳ**

ಬಿಡು ಬಿಡು ಬಲ್ಲೆ ನಿನ್ನಯ ಮನವ ।
ಪೊಡವಿಯೊಳ್ ಭಕ್ತ ಶಿರೋಮಣಿ ನೀನೇ ॥ ಪ ॥

ಭಕ್ತಿಯ ಪಾಶದಿ ಚಿತ್ತವನೊಲಿಸಿದೆ
ಎತ್ತ ಪೋದರು ಮನ ಇತ್ತಲೆ ಬರ್ಪುದು ॥ ಅ.ಪ. ॥
ಶಕ್ತನೆಂದೆನಿಸಿಹ ಮತ್ತ ಸುಯೋಧನ
ಭಕ್ತನೆ ನಿನಗಿಂತ ಉತ್ತಮನೆನಿಪನೆ ॥ ೧ ॥

**ವಿದುರ : ಹಾಡು** **ರಾಗ : ಕೇತಾರಗೌಳ - ಆದಿತಾಳ**

ಬೆಳಗಿದೆಯಾಮನಮಂದಿರದಿ
ಹರಿಸಿದೆಯಾ ಅಂಧಕಾರ ಮನದಿ ॥ ಪ ॥
ಪಾಲಕಡಲೊಳು ಲೀಲೆಯಿಂದಾಡುತಾ
ಲೋಲಲೋಚನನೆ ಬಂದೆಯಾ
ಕಡುಶಿಲೆಯಾದ ಈ ಜಡನ ಕಡೆದು ಹರಿಯೆ
ಭವ್ಯ ಮೂರುತಿಯಾ ಮಾಡಿದೆಯಾ ॥
ತರಳ ಮೊರೆ ಕೇಳಿ ದುರುಳ ಹಿರಣ್ಯನ
ಕರಳನ ಕೊರಳೊಳು ಧರಿಸಿದೆಯಾ
ಕರಿಯ ಮೊರೆ ಕೇಳಿ ಹರಿಯೆ ಬಂದು
ಮಕರಿಯ ಸೆರೆಯನು ಬಿಡಿಸಿದೆಯಾ ॥
ಹರಿ ಅನಂತ ಗುಣರೂಪನೆ ನಿನ್ನ
ಚರಣವನು ಮನದೊಳಗೆ ಸ್ಮರಿಸುವೆನು
ನಮೋ ನಾರಾಯಣ ಓಂ ನಮೋ ನಾರಾಯಣ
ಓಂ ನಮೋ ನಾರಾಯಣ ॥ ೧ ॥

**ದೃಶ್ಯ : ದುರ್ಯೋಧನನ ದರ್ಬಾರ್**

**ವೈತಾಳಿಕರು : ಹಾಡು** **ರಾಗ : ಹಂಸಧ್ವನಿ - ಆದಿತಾಳ**

ವಿಜಯಿಸೌ, ಭೂಪಾ, ರಾಜಾನ್ವಯದೀಪಾ !
ಅಜಯರೆಂದೆನಿಸುವೀ ಸಹಜರಿಂದೆ ಸೊಗಯಿಸುತೆ
ತ್ರಿಜಗದೇಕ ವೀರನೆನಿಸಿ, ತಳೆ ಯಶವನು ನಿರತಾ ॥ ಪ ॥
ಭುಜಬಲವಿಖ್ಯಾತಾ, ನೃಪಕುಲ ನಮಿತಾ ವಿನುತ
ತ್ರೈಲೋಕ ಶೋಭಾಕರ, ರಿಪುಭೀಕರ

ಪಾಲಿತಾಶೇಷ ಧರಾಧೀಶ್ವರ. ಕುರುಭಾಸ್ಕರ ॥ ಅ.ಪ. ॥
ದಲಿತ ಸಕಲ ರಿಪುಕುಲಬಲ
ಕಲಿತ ಕೀರ್ತಿಸುಚರಿತಾ
ಇಳೆಯೊಳಧಿಕನೆನಿಸಿ ನಿರತ. ಮೆರೆಯೈ ಚಕ್ರೇಶ್ವರ ॥ ೧ ॥

**ದುರ್ಯೋಧನ : ವೃತ್ತ** **ರಾಗ : ನಾಟಿ**

ನಿರುತಂ ಸಾಮಂತರಾಜರಿಂದೊಡಗೂಡಿ
ಮೆರೆವೀ ಭೀಷ್ಮಾದ್ರೋಣ ಕರ್ಣಾದಿಪಟು
ಭಟರಿಂದಲಂಕೃತನಾಗಿ ಧರಾಮಂಡಲ
ಪರಿವೇಷ್ಠಿತನಾಗಿ। ಸ್ವಧರ್ಮಾವಲಂಬಿಯಾಗಿ ಮೆರೆವೀ
ಧೃತರಾಷ್ಟ್ರನಂದನಗೆ ಅದಾರು ಸರಿಸಮರೂ ॥

**ದುರ್ಯೋಧನ : ಹಾಡು** **ರಾಗ : ನಾಟಿ - ಆದಿತಾಳ**

ಭಲರೆ ಮೆರೆವೆ ಸುಖದಿ
ಈ ಧರೆಯೊಳು ಭಲರೆ ಭಲರೆ ॥ ಪ ॥
ವೀರಧೀರರೊಳು ಘನಗುಣನೆನಿಸಿ
ಸಾರ ಚರಿತ ಸಾಮ್ರಾಜ್ಯದ ಸಿರಿಯ
ನಿರುತವು ಧರೆಯೊಳು ಹರುಷದಿ ಬಾಳ್ವೆ ॥ ೧ ॥
ಭೀಷ್ಮ ದ್ರೋಣ ಮಹಾರಥಿ ಕರ್ಣ
ದುಶ್ಯಾಶನ ಶಕುನಿಗಳಿವರ
ಬೆಂಬಲವೆನಗಿರೆ ಧರೆಯೊಳಗಾಂತು
ಪರಿಪರಿ ವಿಧದಲಿ ಸುಖದಲಿ ಬಾಳ್ವೆ ॥ ೨ ॥

**ಅಥವಾ**

**ದುರ್ಯೋಧನ : ಹಾಡು** **ರಾಗ : ನಾಟಿ - ಆದಿತಾಳ**

ಎನಗೆ ಸಮರಿರುವರೆ
ಜಗದೊಳೆನಗೆ ಸಮರಿರುವರೆ

ಮೂಜಗದೊಳಿನಗೆ ಸಮರಿರುವರೆ ॥ ಪ ॥
ಧುರದಿ ಖಳರ ಗೆಲಿದು ಬಲದಿ ಛಲದಿ
ಸುಖವ ಪಡೆದು ಮೆರೆವೆ ಧೀರನಾಂ
ಸುಗುಣಸಾರ, ಸಮರ ಶೂರ, ಜಗದಿಧೀರ
ಧುರದೊಳಗೆ, ರಿಪುಗಳನು, ವಧಿಸುತಲಿ, ಮೆರೆಯುವೆನು ॥ ೧ ॥
ಬಾಹುಬಲದಿ ವೈರಿಗಳ ಶಿರ ತರಿದು
ದ್ರೋಹಿಗಳನು ವಧಿಪೆ, ಜಗದೊಳಗೆ
ಧುರದಿ ಸದೆಬಡಿದು, ಶೌರ್ಯದಿ ಮೆರೆಯುವ
ಧೀಮಂತ, ಜಗದೊಳಗೆ ಬಲವಂತ, ಕುಲದೊಳಗೆ ಛಲವಂತ ।
ಪಾಪಾತ್ಮಕರ ಪಾಂಡವರ ಪಥಗೆಡಿಸಿ ಮೆರೆಯುವೆನು ॥ ೨ ॥

**ವಿದುರ : ಹಾಡು** ರಾಗ : ಅಭೋಗಿ - ಆದಿತಾಳ

ಸರಿಯೇನಿದು ನೆರೆನೀಂ ನುಡಿವುದು ॥ ಪ ॥
ನಿರಪೇಕ್ಷೆಯಿಂದ ಪರಿಹಾಸ್ಯಗೈಯ್ವುದು ॥ ಅ.ಪ. ॥
ದಾಯಭಾಗವ ನ್ಯಾಯದಿಂದ ಕೊಡದೇ
ಹೇಯ ನುಡಿಗಳ ಆಡುತಲಿರುವುದು ॥ ೧ ॥

**ದುರ್ಯೋಧನ : ಹಾಡು** ರಾಗ : ಹಂಸಧ್ವನಿ - ಆದಿತಾಳ

ಸಾಕು ವಿದುರನೆ ನೀತಿವಾಕ್ಯವು
ಬೇಕು ಬೇಕೆಂದೊದರುವೆಯಾ ॥ ಪ ॥
ನೀಚ ಕೃತ್ಯಗಳ ಎಸಗುತ ಎಮ್ಮೊಳು
ನಾಚಿಕೆ ಇಲ್ಲದೆ ಬೊಗಳುವೆಯಾ
ಯಾಚನೆ ಮಾಡುವ ಕೃಷ್ಣಗು ನಿನಗು
ಹೆಚ್ಚಿಗೆ ಮಾತುಗಳೇತಕೆ ॥ ಅ.ಪ. ॥

**ಕೃಷ್ಣ : ಹಾಡು** ರಾಗ : ಹಿಂದೋಳ - ಆದಿತಾಳ

ಆಲಿಪುದು ನೀವ್ ಕುರುಪಿತಾಮಹರೆ
ನಂದಗೋಪಾಲನ ಅಭಿವಂದನೆಯ ॥ ಪ ॥

ಪಾಂಡು ಸುತರು ಎನ್ನ ಕಳುಹಿದ ಪರಿಯ
ಯುದ್ಧವೆಂಬುದು ಮನ ದಗ್ಧಗೊಳಿಪುದು ॥ ಅ.ಪ. ॥
ಶಾಂತಿ ಸಹೋದರ - ಸಹನೆಯಿಂ ಬಾಳಲು
ಸಂಧಿಗೆ ಸಮ್ಮತಿಸಿ ಸೌಖ್ಯದಿಂ ಬಾಳಿರಿ ॥ ೧ ॥

**ದುಶ್ಯಾಸನ : ಹಾಡು** **ರಾಗ : ಹಂಸಧ್ವನಿ - ಆದಿತಾಳ**

ಏಕೆ ಬರಿದೆ ಬೊಗಳುವೆಯೋ ಛೀ
ಸಾಕು ನಿಲ್ಲಿಸು ಮಾಧವ ॥ ಪ ॥
ಲೋಕ ಭೀಕರನು ನಾನಿರುತಿರೆ
ಆ ಭೀಮ ಪಾರ್ಥರನು ಲೆಕ್ಕಿಪೆನೆ ॥ ಅ.ಪ. ॥
ದಂಡಧರನ ತೆರದೊಳುರಿಯ
ಖಂಡಿಸುವೆನಾಂ ಸಮರ ಭೂಮಿಯೊಳ್
ಭಂಡರ ಆ ಪಾಂಡವರ ಶಿರವ
ಚೆಂಡನಾಡುವೆ ಸಮರ ಭೂಮಿಯೊಳ್

**ದುಶ್ಯಾಸನ : ಹಾಡು** **ರಾಗ : ಹಂಸಧ್ವನಿ - ಆದಿತಾಳ**

ದುರಾತ್ಮರಾದ ದ್ರೋಹಿಗಳ
ಮದವ ಮುರಿವೆ ಈ ಕ್ಷಣ ॥ ಪ ॥
ಪುಂಡರನು ಬೇಧಿಸಿ ಛಲವ
ಜಯಿಸಿ ಬರುವೆನಾ
ಮುದದಿ ಮೆರೆವ ಅಧಮ
ಶಿರವ ಕಡಿದು ಮೆರೆವೆನಾ ॥ ೧ ॥

**ಕರ್ಣ : ಹಾಡು** **ರಾಗ : ಹಿಂದೋಳ - ಆದಿತಾಳ**

ಸಲ್ಲದು ನಿನಗೆ ಶ್ರೀವಲ್ಲಭನೇ ಎಲ್ಲಾ
ವಿಷಯವ ಬಲ್ಲವನೇ ॥ ಪ ॥
ಪಾಂಡುತನಯರ ಹಿತವನು
ಬಯಸುತ । ಸಂಧಿಯ ನಾಟಕವ

ಆಡಲೆಂದು ಬಂದೆ ನೀನು ॥ ಅ.ಪ. ॥

ಹಟವಂತರು ನಾವು । ದಿಟವಿದು ತಿಳಿ ನೀನು ।

ದುರದಲಿ ಪಾರ್ಥನ । ಶಿರವನು ಕಡಿಯುವೆ ॥ ೧ ॥

**ಕೃಷ್ಣ : ಹಾಡು** **ರಾಗ : ಸುರುಟಿ - ಆದಿತಾಳ**

ಭಾರತ ಭೂಮೀಶ ಜೈಸೀ ದುರಾಶ ॥ ಪ ॥

ಸಮಾನಶೌರ್ಯ ಸಾಹಸದಿ ವಿರಾಜಿಸುವ

ಸಹೋದರರ ನಿರಾಕರಿಸಿದಿರ್ಕೈ ॥ ಅ.ಪ. ॥

ಕರಸೀಗನೀ ಅನುಜಾತರ ಧರೆಯನಿತ್ತು

ಖ್ಯಾತಿ ಪಡೆ ಸುಖಿಯಾಗು ವೀರ ॥ ೧ ॥

ವೈರವನೆನೀಗಿ ನೀ ಸ್ವೈರಣೆಯನು ತಾಳ್ಮೆ

ಬಾಳ್ಕೆ ಬಲು ಧರ್ಮನಿರುತ ಸುಗುಣ ಚರಿತ ಕರುಣ

ಭರಿತ ವರಗುಣಯುತ ನೆನಿಸಿ ಪೊರೆ ಧರೆಯೊಳ್ ॥ ೧ ॥

## (ಕೃಷ್ಣ, ದುರ್ಯೋಧನರ ದ್ವಂದ್ವ ಗೀತೆ)

**ರಾಗ : ನೋಟ್ - ಆದಿತಾಳ/ಏಕತಾಳ**

**ಕೃಷ್ಣ :** ಖತಿ ಬೇಡ್ಕೈ ಸುಯೋಧನನೆ
ತೋರೀಗ ಜ್ಞಾತಿಗಳೊಳ್ ಸ್ವೈರಣೆ

**ದುರ್ಯೋಧನ :** ಅದೇಕಿಂತು ಒದರುವೆ
ಅದೇ ಮಾತು ಬೊಗಳುವೆ
ಕುಲಹೀನ ಕುಲವ ಮರೆತೆಯಾ
ಧುರದೊಳು ಕಡಿಯದೆ ಬಿಡುವೆನೆ

**ಕೃಷ್ಣ :** ಕದನದೊಳು ನಿನ್ನ ಮದವ ನಡಗಿಪ
ಚದುರರೊಳು ಮರುಳೆ
ಮಂದಮತಿಯಂತೆ
ಮುಂದನರಿಯದೆ ದಂದುಗವ ಪಡುವೆ

**ದುರ್ಯೋಧನ :** ಛೇ ಸಾರು ನಾಸ್ವೈಸೇ
ಈ ನಿನ್ನ ಮೋಸ

ಕೃಷ್ಣ: ಸೈರಿಸಬಲ್ಲವರಾರ್

ದುರ್ಯೋಧನ : ಪರಮ ಪುರುಷನೆನಿಪ ಬಿರುದನು ಪೊಡವಿಯೊಳ್
ಅಡಗಿಪೆ ಕೆಡುಕನೆ

ಗಾಂಧಾರಿ : ಹಾಡು ರಾಗ : ಅಭೇರಿ - ಆದಿತಾಳ

ತನಯ ಭಾರತ ಕುಲಮಕುಟ ನೀ ಬಾ ॥ ಪ ॥
ಪಾಂಡವರಿಗೆ ನೀನು ರಾಜ್ಯವ ನೀಡಿ
ಧರ್ಮದೆ ನಡೆದು ಕೀರ್ತಿಯ ತಾರೈ ॥ ಅ.ಪ. ॥
ಮಾತೆಯ ಮಾತನು ಲಾಲಿಸು ಧೀರ
ಸಮರದೊಳ್ ನಿನ್ನಯ ಗೆಲ್ಲುವರಾರೈ ॥ ೧ ॥

ಗಾಂಧಾರಿ : ಹಾಡು ರಾಗ : ಮಾರ್ಗಹಿಂದೋಳ - ಆದಿತಾಳ

ಸುಕುಮಾರ ತಾನೆಲ್ಲಿರ್ಪನೋ ಸಕಲಾದಿ ಸಿರಿವಲ್ಲಭನು
ಖಳನಾದಿಯೊಳು ತಾ ತರ್ಕಿಸುತಲೀ ॥ ಪ ॥
ಕುಂತಿ ಕುಮಾರರಂತರಂಗವೆಲ್ಲಾ
ಕಂತುಪಿತನೊಳೀಗ ನೆಲಸಿರ್ಪುದೋ
ಎಂತು ಗೆಲ್ವ ನೆನ್ನ ದುಷ್ಟತನಯನು
ಭೂ ಕಾಂತೆಯನ್ನು ಎಂತುದ್ಧರಿಪನೋ ॥ ಅ.ಪ. ॥

ದುರ್ಯೋಧನ : ಹಾಡು ರಾಗ : ಮಣಿರಂಗು - ಆದಿತಾಳ

ಕೊಡುವುದಿಲ್ಲವೋ ರಾಜ್ಯವ
ಕಡೆಯ ಮಾತಿದು ಮಾಧವಾ ॥ ಪ ॥
ಜಡಮತಿ ಪಾಂಡವರೆಂದರೆ ಎನಗೆ
ಒಡಲೊಳಗುರಿವುದು ಏನ್ ಗೈವೆನು ನಾಂ
ಕಡೆ ನುಡಿ ನುಡಿಯೆನು ನುಡಿವೆನು ಈಗ
ಕೊಡುವೆನು ಅವರಿಗೆ ಧುರದಲಿ ರಾಜ್ಯವ ॥ ಅ.ಪ ॥
ಕೇಳು ಮುರ ಹರಿಯೆ ಹಟಮಾಡಿ ಗೆಲ್ವೆ ನಾಂ ರಾಜ್ಯವ
ಛಲವನು ಬಿಡೆನು ಧರಣಿಯ ಕೊಡೆನು
ರಣದಿ ಜೈಸಿ ಘನ ಮುದದಲಿ ಮೆರೆವೆನು ॥ ೧ ॥

ಗಾಂಧಾರಿ : ಹಾಡು                                                                 ರಾಗ : ಹಂಸಧ್ವನಿ - ಆದಿತಾಳ

ಛಲವೇಕೆ ಕುರುನಂದನ ನಿನ್ನ ಛಲದಾತಿರೇಕವೆ
ಕುರುವಂಶದಮನ ॥ ಪ ॥
ದುಡುಕಿ ನೀ ಕೆಡಬೇಡ ಕೆಡುಕನಾಶಿಸಬೇಡ
ಪಾಂಡವರಲ್ಲಿ ನೀನು ದ್ವೇಷ ತಳೆಬೇಡ ॥ ಅ.ಪ ॥
ಕುರುಪಾಂಡವ ಘನ ಸೋದರ ಪ್ರೇಮ
ಸಾರು ನೀನು ಧರೆಯಲ್ಲಿ ನಿಜಪ್ರೇಮ ॥ ೧ ॥

ಗಾಂಧಾರಿ : ಹಾಡು                                                                 ರಾಗ : ದೇಶಿತೋಡಿ - ಝುಂಪೆತಾಳ

ವಿರಸದಿಂದ ಪೋದನಮಮ
ಪರಮ ದೂರ್ತನಾದ ತನಯ ॥ ಪ ॥
ರಣವ ಬಯಸಿ ರಗಳೆಯರಸಿ
ಬಣಗುಮತಿಯ ಸಹಜರೊಡನೆ
ಗುಣನಿಧಿಯ ಪಾಂಡುಸುತರ
ಮಣಿಯದಿಂತು ಕೆಡುವನಕಟ ॥ ೧ ॥

ದೃಶ್ಯ : ರಸ್ತೆ - ಕರ್ಣ ಮತ್ತು ಕೃಷ್ಣ ಜೊತೆಗೂಡಿ ಬರುವರು

ಕರ್ಣ : ಹಾಡು                                                                 ರಾಗ : ನಾಟಿಕುರಂಜಿ - ಆದಿತಾಳ

ಪರಮಾತ್ಮ ಹರೇ ಪಾವನ ನಾಮ ॥ ಪ ॥
ಪಾಮರನೊಳು ಕೃಪೆಯು ತೋರಿದೆಯ್ಯ ಸ್ವಾಮಿ ॥ ಅ.ಪ ॥
ಇಳೆಯೊಳು ಜನ್ಮವ ಅರಿಯದ ಎನ್ನನು
ಶ್ರೀಲೋಲನೆ ಅತಿಪ್ರೇಮದಲಿ ಕಾಯ್ದೆ ॥ ೧ ॥
ಬಳಲಿದೆಯ್ಯೆ ಸ್ವಾಮಿ ತರಳನ ಆದರಿಸಲು
ಕುಲಗೋತ್ರವಿಲ್ಲದ ಮನುಜನ ಪಾಲಿಸಿದೆ
ದೇವದೇವನೆ ಭಕ್ತ ಬಾಂಧವನೆ ಸ್ವಾಮಿ ॥ ೨ ॥

ಕರ್ಣ : ಕಂದ

ಶ್ರೀರಮಣಂ
ಅಖಿಲ ಗುಣಗಣವಾರಿಧಿ ಸೋಮಂ

ಸಮಸ್ತ ಜಗದಾನಂದಂ
ವಾರಿಜಭವ ತಾತಾ ನೀಂ
ಧಾರಿಣಿಯೊಳ್ ನಿನಗೆ ನಾಂ
ಸಮನೆ ಕುಲಹೀನನು ನಾ

**ಕೃಷ್ಣ : ಹಾಡು** **ರಾಗ : ಮೋಹನ - ಆದಿತಾಳ**

ಮಾತನು ಪ್ರೇಮದಿ ಆಲಿಸು ವೀರ ॥ ಪ ॥
ಸುರುಚಿರ ಶರಧರ ಶರಣರ ಪೊರೆವನೆ ॥ ಅ.ಪ. ॥
ದಾನಶೂರ ನೀ ನಾಂತಿಹ ಬಿರುದ
ಮೆರೆಸೀಗಾ ನಿಜ ವರಗುಣಶೀಲ
ಪರಹಿತಪ್ರೇಮಿ ಸುಕೃತಗಾಮಿ ಬಾ ನಿಷ್ಕಾಮಿ ॥ ೧ ॥
ಪಾಂಡು ಕುವರರ ಸೇರುತೆ ನೀನು
ಧರೆಯನು ಪೊರೆಯುತ ಧರ್ಮದಿನಿರತ
ಅನುಜರ ಸೇರ್ದೈ ಕರುಣೆಯ ತೋರ್ದೈ ನೀ ಬಾಳ್ದೈ ॥ ೨ ॥

**ದೃಶ್ಯ : ಕರ್ಣ - ಶಕುನಿ ಮಾತನಾಡುತ್ತ ಪ್ರವೇಶಿಸುವರು**

**ಕರ್ಣ : ಕಂದ**

ಧುರದೊಳ್ ದುರ್ಜಟಿಯ ದರ್ಪವಂ ಮುರಿಯುವ ಶೌರ್ಯ
ಪ್ರತಾಪಂಗಳೇಂ ಸಿರಿಯುಂ ಮೇ
ವೈಭವದಿಂ ಮಹೇಂದ್ರ ಪದಂ ಳೈಸುವಂತಿರ್ದೊಡೆ
ನರದೇವತ್ ಬೆರಗಾಗುವೊಲ್
ಗುಣಗಣಪ್ರಖ್ಯಾತಿಮೇನಿರ್ದೊಡೇಂ
ಧರೆ ಫಲಕೀರ್ತಿಗಳ್ ಪೊರೆಯವೇ
ದೈವಾನುಕೂಲಂಯಿಲ್ಲಲ್

**ದೃಶ್ಯ : ದ್ರೌಪದಿಯ ಅಂತಃಪುರ**

**ದ್ರೌಪದಿ : ಹಾಡು** **ರಾಗ : ತೋಡಿ - ಆದಿತಾಳ**

ಜ್ವಲಿಸುವುದನವರತಾ ನಿಜಾಂತ
ಕಲುಷಿತಮನದಾ ವ್ಯಾಕುಲಭಾವಾ ॥ ಪ ॥

ತಾಳಲಾರೆನಹ ಕರುಣಿಸು ದೇವಾ
ಐವರಕಾಂತೆ ಎನಿಸಿರೆ ಚಿಂತೆ
ತಳೆದೆ ಪರಿಭವಾ, ಸವೆಸಿದೆ ಜೀವಾ
ಸರ್ವೇಶಾ ಕೊಡು ಚಿರವಿಭವ ॥ ೧ ॥

**ಭೀಮ : ಹಾಡು** **ರಾಗ : ಹಂಸಧ್ವನಿ - ಆದಿತಾಳ**

ಏಕೆ ಅಳುತಿಹೆ ದ್ರುಪದಸುತೆ
ಅರುಹುದು ಗುಣಭರಿತೆ ॥ ಪ ॥
ಧ್ವಂಸಗೈಯ್ವೆ ಕುರುವಂಶ ಭೂಪರ
ಕಂಸವೈರಿ ಕೃಪೆ ಇಂತು ನನಗಿರೆ
ಚಿಂತೆ ಏತಕೆ ಇಂತು ಮಾನಿನಿ
ಕಾದುವೆ ಸಮರದಿ ಕಾಲಯಮನ ಪರಿ ॥ ಅ.ಪ. ॥

**ಧರ್ಮರಾಯ : ಹಾಡು** **ರಾಗ : ಜಂಜೂಟಿ - ಮಿಶ್ರಚಾಪುತಾಳ**

ಸೈರಿಸೈ ಅನುಜಾತನೆ ಮೀರಿದ ಕೋಪವ ॥ ಪ ॥
ಘೋರ ಸಂಗ್ರಾಮವ ನೆಸಗಲು ಧುರದೊಳು
ಭೂರಿ ಕಷ್ಟವು ಮುಂದೆ ಮೀರಿ ಬರ್ಪುದು ಕೇಳ್ಳೆ ॥ ಅ.ಪ. ॥

**ಅರ್ಜುನ : ಹಾಡು** **ರಾಗ : ಕಲ್ಯಾಣಿ - ಆದಿತಾಳ**

ಕೋಪವಿದೇನಿದು ದ್ರೌಪದಿ ಮಾತಿಗೆ ನೀಂ
ಕುದಿಯುವ ಮನದಾ ವ್ಯಾಕುಲ ಬಿಡಗ್ರಜಾ ॥ ಪ ॥
ಧರ್ಮಜನಾಜ್ಞೆಯ ಮೀರಬಾರದು ನಾವು
ವೈರವ ಮರೆಯುತ ಸೈರಿಸು ತಾಪವ ॥ ಅ.ಪ. ॥

**ಕೃಷ್ಣ : ಹಾಡು** **ರಾಗ : ಷಣ್ಮುಖಪ್ರಿಯ - ಆದಿತಾಳ**

ಸಂತಪಿಸುವೆ ಏಕೆ ಸೋದರಿ
ಚಿಂತೆ ಎಂತಿಹುದು ಸಂತೈಸಲು ನಾನಿರೆ ॥ ಪ ॥

ಕುರು ಸಭೆಯಲಿ ಅಂದು
ದುರುಳ ದುಶ್ಯಾಸನ
ಸೀರೆಯ ಸೆಳೆವಾಗ ಮೊರೆಯಿಡು ತಾ
ಕರೆಯೆ ಕೃಷ್ಣಾ ಕೃಷ್ಣಾ ಕೃಷ್ಣಾ ಎಂದು
ಅರಿತಾಕ್ಷಣದೊಳ್ ವರದನಾಗಿ ಬಂದು
ಸಲಹಿದೆನೇ ತಂಗಿ ॥ ೧ ॥

**ಭೀಮ : ಹಾಡು** **ರಾಗ : ತೋಡಿ - ಆದಿತಾಳ**

ಛಲವಿದೇತಕೆ ಭಾಮಿನೀ ಮಣಿ ಗುಣೀ ಸುವೇಣೀ ಮಣಿ ॥ ಪ ॥
ಮತ್ತ ಗಜಗಾಮಿನಿಯೇ ಉತ್ತರವಿದೇತಕೆ
ಶತ್ರುಗಳ ಜೈಸೆನಾನಿತ್ತೆ ಭಾಷೆಯು ಕೇಳ್ ॥ ಅ.ಪ. ॥
ಭಂಡರ ರಕ್ತವ ಹೀರಿ ಮಂಡೆಯು ಬಾಚುವೆನಾರಿ
ಭಂಡ ಮಾತಿದಲ್ಲ ಬಿಡು ಖಂಡಿತವಿದೆಂದು ತಿಳಿ ॥ ೧ ॥

**ಭೀಮ : ಕಂದ**

ಘನಕುಲ ಗಿರಿಗಳು ಚಲಿಸಲಿ
ದಿನಪಂ ಉದಯಿಸಲಿ ಪಶ್ಚಿಮಾಂಬುಧಿಯೊಳ್
ಅನಲಂ ಶೀತಲ ಮಾಗಲ್ ಬಲಿ ಕೊಡದೆ ಬಿಡೆನು
ಕುರುಕುಲವನ್ನೆಲ್ಲಾ

**ಅಥವಾ**

**ಭೀಮ : ಕಂದ**

ಧುರದೋಳ್ ದುರ್ಮದಾಂಧ
ದುಷ್ಟ ಕೌರವನ ತೊಡೆಯಂ ಮುರಿಯುತೆ
ದುರುಳ ದುಶ್ಯಾಸನನ ಕರುಳಂ ಬಗೆದು
ದ್ರುಪದ ಸುತೆಗೆ ವರಮುಡಿ ಕಟ್ಟಿಸುವೆ ಜವದೀ



## ದೃಶ್ಯ : ಗಂಗಾತೀರದಲ್ಲಿ ಕುಂತಿ ಕರ್ಣರ ಸಮಾಗಮ

**ಕರ್ಣ : ಕಂದ**

ದಿನಕರ ಶುಭಕರ ಗಗನಮಣಿ ಸೂರ್ಯದೇವ ನಮಸ್ತೆ
ಹಗರಣ ಒದಗಿಹುದೀ ದಿನ ಬಹುಮಿಗೆಯಿಂ
ಕಾವುದೆನ್ನ ಅಂಬುಜಮಿತ್ರ

**ಕರ್ಣ : ಹಾಡು** **ರಾಗ : ಹಿಂದೋಳ - ಆದಿತಾಳ**

ಮಾತೆ ಮಮ ಜನ್ಮದಾತೆ
ಪುನೀತೆ ನೀ ಧರ್ಮದೇವತೆ ॥ ಪ ॥
ಮಕ್ಕಳೈವರ ಪೆತ್ತು ಅಕ್ಕರೆಯಿಂದಲಿ
ಮುತ್ತನಿಕ್ಕಿ ಸಾಕಿದೆಯೆ ॥ ಅ.ಪ. ॥
ಸಾಕಿದೆ ಒಡಲೊಳು ನೂಕಿದೆ ಮಡು
ವಿನೊಳು । ಗತಿ ಯಾರೆನಗೆ ಈ ಕ್ಷಿತಿಯೊಳಗೆ ।

**ಕರ್ಣ : ಕಂದ**

ನುಡಿದುದ ನಡೆಯಿಸಲಾರದ
ಕಡುಖೂಳನೇ ಈ ಕರ್ಣ ಪೇಳ್ ಸೂರ್ಯ ತನುಜಂ
ಬಿಡು ಬಿಡು ಚಿಂತೆಯ ಮಾತೆಯೆ
ನಡೆಯಿಸುವೇಂ ಧರ್ಮದಾಣೆ ಮತ್ ಪಿತನಾಣೆ ಜನನೀ

**ಕರ್ಣ : ಕಂದ**

ಕೊಲಲೇ ಪಾಂಡುಕುಮಾರರಂ ಕೊಲ್ಲಲೇ
ಧುರದೊಳು ತಮ್ಮಂದಿರಂ ಕೊಲ್ವುದೇ
ಕೊಲ್ವುದಾಂ ಬಿಟ್ಟೊಡೆ ಕೌರವೇಂದ್ರ ಈ
ಧರೆಯೊಳ್ ಸಂಪತ್ತಿನಿಂ ಬಾಳ್ವನೇ
ಛಲದಿಂ ಪಾರ್ಥನ ರುಂಡಮಂತರಿದು
ಮತ್ಸ್ವಾಮಿಗೆ ಆನಂದಮಂ ಸಲಿಸ್ಕಲಾಗದೆ
ಪಾರ್ಥನ ಘೋರ ಶರಕೆ ತುತ್ತಾಗಲೇ ನಾಯಲೇ

## ದೃಶ್ಯ : ಗಾಂಧಾರಿಯ ಅಂತಃಪುರ

**ಗಾಂಧಾರಿ : ಹಾಡು** **ರಾಗ : ಮಲಯಮಾರುತ - ಆದಿತಾಳ**

ಪ್ರಳಯಕೆ ಮೊದಲೇ ದಶದಿಶೆ ಕಂಪಿಸಿ
ಮೊಳಗಿತು ಲೋಕದ ಹಾಹಾಕಾರ !
ಮುಂದೇನಹುದೋ ಕಾಣರಾರು,
ದೇವತೆಗಳಿಗಿದು ಧಿಕ್ಕಾರ !
ಧರ್ಮನೀತಿ ಮಾನವತೆ ಅಳಿದರೆ
ಹಿಂಸೆಯ ಆಳ್ವಿಕೆ ಎಲ್ಲೆಡೆ ನಡೆದಿರೆ,
ಯುದ್ಧದೇವತೆಗೆ ಹಬ್ಬದೌತಣವು
ನಾಗರಿಕತೆಗದೆ ವಿಧ್ವಂಸ !
ನೂರು ಮಕ್ಕಳನು ಹಡೆದ ತಾಯಿನಾ
ಮನದೊಳಗುಂಟೇ ಆನಂದ !
ನೂರು ದುಃಖಗಳ ಪಡೆದವೊಲಿರುವೆನು,
ಬೆಳೆಯೆ ದಾಯಾದದ ಉನ್ಮಾದ !

**ಗಾಂಧಾರಿ : ಹಾಡು** **ರಾಗ : ಸಾರಂಗ - ಆದಿತಾಳ**

ಕನಸಿನ ಪರಿಯನು ಹೇಳಲಾರೆ
ಮನಸಿನ ಭ್ರಾಂತಿಯ ನಾ ತಾಳಲಾರೆ
ಕುರುಪಾಂಡವರ ವರವೈರವನು
ನಿರುಕಿಸಲೂ ಮನ ಕಳವಳವಾಂತೆನು
ರಕ್ತವರ್ಣದ ಕರಾಳಧೂಮ ಕಣ್ಗಳ ಮುಂದೆ ನಿಂತಿತ್ತು
ನೂರಾರಾ ನಕ್ಷತ್ರಗಳು ಭೂಮಿಯಲ್ಲಿ ಚೆಲ್ಲಾಡಿದವೋ

**ದುರ್ಯೋಧನ : ಕಂದ**

ನಡೆವುದು ನುಡಿವುದು ಮಡಿವುದು
ಕಡುಗಲಿಯುಂತಿದುವೆ ಧರ್ಮಮರಸರ್ಗಿಯೊಳ್
ನಡೆವೇಂ ನುಡಿವೇಂ ಪಡೆವೇಂ
ಪೊಡವಿಯನಲ್ಲದೊಡೆ ಮಡಿದು ವೀರಸ್ವರ್ಗಂ

**ಗಾಂಧಾರಿ : ಹಾಡು** **ರಾಗ : ಚಕ್ರವಾಕ - ರೂಪಕತಾಳ**

ಏನ ಬರದೆಯೋ ಪಾಪಿವಿಧಿಯೇ ಹೀನ ಕುವರರ ನೂರ ಪಡೆದುದ ॥ ಪ ॥
ಜಗವ ನಡುಗಿಪ ಗುಡುಗಿನಾರ್ಭಟದಿಂದ ನುಡಿದೆದೆ
ರುದ್ರವೀಣೆ ತಡೆಯಲಾರೆನು ಒಡಲಬೇಗೆಯು
ಕಡಲ ಕದಡಿದ ತೆರದಿ ಸುಡುತಿದೆ ॥ ಅ.ಪ ॥

## ದೃಶ್ಯ : ಯುದ್ಧಭೂಮಿ

**ಕೃಷ್ಣ : ಹಾಡು** **ರಾಗ : ಹಂಸಧ್ವನಿ - ಆದಿತಾಳ**

ವಿಜಯಾ, ಜವದೊಳೀಕ್ಷಿಸೈ ಮೆರೆವೀ
ರಣಭುವಿಯ ಪರಿಯ ॥ ಪ ॥
ಮಹಾಭೀಕರ ಜಯಾಧ್ವನಿಭರ
ಸಹಸ್ರಕೃಪಾಣ ಭಯಂಕರ
ಮಹಾರಥಿಕ ಬಹುಪದಾತಿ ಪರಿವೃತ
ಮಹೋಗ್ರಾರಿ ಭಟ ಸಮಕ್ರಾಂತ ॥ ಅ.ಪ. ॥
ಅಹಿತ ನಿವಹಯುತ, ತುರಗ ಗಜಸಹಿತ ವಿಭವಮುದಿತಾ
ತುಹಿನರೋಚಿ ಕುಲಮಹಾಬ್ಧಿ
ನಿಖಿಲ ನೃಪಭರಿತ, ಕುರುವಿಷಯ ಪರಿಕಲಿತ ॥ ೧ ॥

**ಕೃಷ್ಣ : ಶ್ಲೋಕ**

ಕುತಸ್ತ್ವಾ ಕಶ್ಮಲಮಿದಂ ವಿಷಮೇ ಸಮುಪಸ್ಥಿತಂ ।
ಅನಾರ್ಯಜುಷ್ಟಮಸ್ವರ್ಗ್ಯಮಕೀರ್ತಿಕರಮರ್ಜುನ ॥

**ಅರ್ಜುನ : ಶ್ಲೋಕ**

ಕಥಂ ಭೀಷ್ಮಮಹಂ ಸಂಖ್ಯೇ ದ್ರೋಣಂಚ ಮಧುಸೂದನ ।
ಇಷುಭಿಃ ಪ್ರತಿಯೋತ್ಸ್ಯಾಮಿ ಪೂಜಾರ್ಹಾವರಿಸೂದನ ॥

**ಕೃಷ್ಣ : ಶ್ಲೋಕ**

ದೇಹಿನೋಽಸ್ಮಿನ್ ಯಥಾದೇಹೇ ಕೌಮಾರಂ ಯೌವನಂ ಜರಾ ।
ತಥಾ ದೇಹಾಂತರ ಪ್ರಾಪ್ತಿರ್ಧೀರಸ್ತತ್ರ ನ ಮುಹ್ಯತಿ ॥

ವಾಸಾಂಸಿ ಜೀರ್ಣಾನಿ ಯಥಾ ವಿಹಾಯ
ನವಾನಿ ಗೃಹ್ಣಾತಿ ನರೋಽಪರಾಣಿ ॥
ತಥಾ ಶರೀರಾಣಿ ವಿಹಾಯ ಜೀರ್ಣಾ
ನ್ಯನ್ಯಾನಿ ಸಂಯಾತಿ ನವಾನಿ ದೇಹೀ ॥

**ಅರ್ಜುನ : ಶ್ಲೋಕ**

ಕಾರ್ಪಣ್ಯ ದೋಷೋಪಹತಃ ಸ್ವಭಾವಃ ।
ಪೃಚ್ಛಾಮಿತ್ವಾಂ ಧರ್ಮ ಸಂಮೂಢ ಚೇತಾಃ ॥
ಯಚ್ಛ್ರೇಯಃ ಸ್ಯಾನ್ನಿಶ್ಚಿತ ಬ್ರೂಹಿತನ್ಮೇ ।
ಶಿಷ್ಯಸ್ತೇಹಂ ಶಾದಿ ಮಾಂ ತ್ವಾಂ ಪ್ರಸನ್ನಃ ॥

**ಕೃಷ್ಣ : ಶ್ಲೋಕ**

ಯದಾಯದಾಹಿ ಧರ್ಮಸ್ಯ ಗ್ಲಾನಿರ್ಭವತಿ ಭಾರತ ।
ಅಭ್ಯುತ್ಥಾನಮಧರ್ಮಸ್ಯ ತದಾ ಽತ್ಮಾನಂ ಸೃಜಾಮ್ಯಹಂ ॥
ಪರಿತ್ರಾಣಾಯ ಸಾಧೂನಾಂ ವಿನಾಶಯ ಚ ದುಷ್ಕೃತಾಂ
ಧರ್ಮ ಸಂಸ್ಥಾಪನಾರ್ಥಾಯ ಸಂಭವಾಮಿ ಯುಗೇ ಯುಗೇ ॥

**ಅರ್ಜುನ : ಹಾಡು** **ರಾಗ : ದೇಶಿತೋಡಿ - ಮಿಶ್ರಚಾಪುತಾಳ**

ಕಮಲದಳ ನಯನಾ
ಜಗದೇಕನಾಯಕ
ಗೋಪಾಲಾಜಯ ॥ ಪ ॥
ನಯಗುಣಾಕರ ನವವಿಭವಮಯ
ನಾಗಸುರಗಣಪೂಜಿತಾ

ಮುನಿವಂದಿತ ಮಹಿಪಾಲಕ
ನಂದದಾಯಕ ಗೋಪಾಲಾ ಜಯ
ಶ್ರೀ ನಿಗಮ ತತಿ ಗೋಚರ ವಿಬುಧಶರಣ ॥ ಅ.ಪ. ॥

**ಅರ್ಜುನ : ಶ್ಲೋಕ**

ತ್ವಮಾದಿದೇವಃಪುರುಷಃ ಪುರಾಣಃ
ತ್ವಮಸ್ಯ ವಿಶ್ವಸ್ಯಪರಂ ನಿಧಾನಂ ।
ವೇತ್ತಾಸಿ ವೇದ್ಯಂಚ ಪರಂ ಚ ಧಾಮ
ತ್ವಯಾತತಂ ವಿಶ್ವಮನಂತರೂಪ ॥
ವಾಯುರ್ಯಮೋಗ್ನಿರ್ವರಣಃ ಶಶಾಂಕಃ
ಪ್ರಜಾಪತಿಸ್ತ್ವಂ ಪ್ರಪಿತಾಮಹಶ್ಚ ।
ನಮೋ ನಮಸ್ತೇಽಸ್ತುಸಹಸ್ರಕೃತ್ವಃ
ಪುನಶ್ಚ ಭೂಯೋಪಿ ನಮೋ ನಮಸ್ತೆ॥

ದೃಶ್ಯ : ರಣಾಂಗದ ಇನ್ನೊಂದು ಭಾಗ
**(ಶಿಖಂಡಿ, ಶಕುನಿ, ಕೃಷ್ಣ, ಅರ್ಜುನ ಮುಂತಾದವರು ಇರುವರು)**

**ಶಿಖಂಡಿ : ಹಾಡು** ರಾಗ : ವಸಂತ - ಆದಿತಾಳ

ಏಕೆ ಎನ್ನೊಳು ದುರಂತಭಯವು ಕಾಣೆನಾ ಕಾಣೆನಾ
ಪರಿ ಇದನು ತಿಳಿಯೆನಾ ॥ ಪ ॥
ವಿಧಿಯ ಸಮಯ ಒದಗಿರೆ ಹೃದಯ
ಬರಿದೆರಣದಿಂದೋಡಲೀ ಪರಿ ॥ ಅ.ಪ. ॥

**ಅರ್ಜುನ : ಹಾಡು** ರಾಗ : ಮಾರ್ಗಹಿಂದೋಳ - ಆದಿತಾಳ

ದೇವ ಘನ ಸಮರವಿದು ಉಚಿತವೆ
ಇದು ವಿನೋದವ್ರೋ ಇದು ವಿನಾಶವ್ರೋ
ಇದು ಪ್ರಮಾದಮಾಗಿಹುದೆಂದು ತಿಳಿಯೆ ॥ ಪ ॥
ಬಂಧುವರ್ಗಗಳು ಮಂದಿಮಾರ್ಬಲಗಳಿಂದ
ತುಂಬಿರುವ ವಂದನಾರ್ಹರನು

ನಿಂದೆಯನೆಣಿಸದೆ ಕೊಂದು ಬದುಕಲಿ ।
ಅಂದವೋ ಚಂದವೋ ಕುಂದದೆ ಬೋಧಿಸು ॥ ಅ.ಪ. ॥

**ಶಕುನಿ : ಹಾಡು** **ರಾಗ : ಹಂಸಾನಂದಿ / ವಸಂತ - ಆದಿತಾಳ**

ನಾನಾ ಉಪಾಯದಲಿ ನಾನೀಗ ಕೌರವರ
ಕಾಲನ ಮನೆಯನು ಸೇರಿಸುವೆ ॥ ಪ ॥
ಅಂಬೆಯಚರಿತೆಯ ಇಂದು ವಿವರಿಸಿ
ಬೊಂಬೆಯಂತೆ ಕುಣಿಸುವೆ ಕೌರವರಾ
ಬೊಬ್ಬಿಡುತಲಿ ಕುರುಕ್ಷೇತ್ರ
ಅಬ್ಬರಿಸಿ ಸಾಯಿನೀ ಪಾಪಿ ದುರ್ಯೋಧನ ॥ ೧ ॥

**ಕೃಷ್ಣ : ಹಾಡು** **ರಾಗ : ಹಂಸಾನಂದಿ - ಆದಿತಾಳ**

ನೋಡಲ್ಲಿ ಬೆದರೋಡುತಿಹುದು ಸೈನ್ಯ
ಭೀಷ್ಮರ ರಣದ ಪರಿಯನಿದ ॥ ಪ ॥
ಬಾಡಿಬಸವಳಿದು ಘಾತ ಸಹಿಸದೆಲೆ
ಹೆದರಿ ಹೆದರಿ ಎದೆಯೊಡೆದು ತಲ್ಲಣಿಸಿ ॥ ಅ.ಪ ॥

**ಭೀಷ್ಮ : ಹಾಡು** **ರಾಗ : .......**

ಪಾಪದ ಸಂಚಯವ ಕಳೆಯೊ
ಆಪದ್ಬಾಂಧವ ಅಮೃತ ಕೃಪಾವನ ॥ ಪ ॥
ತಂದೆಯು ನೀನೆ ತಾಯಿಯು ನೀನೆ
ಬಂಧುಬಳಗ ಎಲ್ಲವು ನೀನೆ ನಿನ್ನಡಿ ನಂಬಿ
ಎಂದೆಂದು ಪೊರೆಯೋ ನಂದ ಗೋಪಿಯ ಕಂದ ॥ ೧ ॥

## ದೃಶ್ಯ : ಪಾಂಡವರ ಶಿಬಿರ

**ಧರ್ಮರಾಯ : ಹಾಡು** **ರಾಗ : ಭೀಮಪಲಾಸ್ - ಆದಿತಾಳ**

ಹೃದಯ ಸಂತಾಪವು ಮೇರೆಯೆ ಮೀರಿತು
ಸಾರಿತು ವ್ಯಸನಾ ಇದ ಸೈಪೆ ದೇವಾ ॥ ಪ ॥

ಧುರದೊಳು ಬಳಗವ ಬಲಿಯನು ಕೊಡುತೆ
ಕ್ಷೋಣಿಯೊಳೀ ಪರಿಬಾಳುವುದೆಂತು ॥ ಅ.ಪ ॥

**ಅಭಿಮನ್ಯು : ಹಾಡು** **ರಾಗ : ಹಂಸಧ್ವನಿ - ಆದಿತಾಳ**

ಏಕೆ ಚಿಂತಿಪೆ ಬಿಡು ಜನಕ
ಈ ಕಿರೀಟಿಸುತನಿಹ ಮುದವ ತಳೆ ॥ ಪ ॥
ಕ್ರೂರ ಸಪ್ತಕರು ತಾ ಯೋಜಿಸುತಿಹ
ಕಠೋರವ್ಯೂಹವ ಕಡಿದು ಬರುವೆನಾ ॥ ಪ ॥
ಹೇಡಿ ಕೌರವರ ನಾಶಗೈವೆ ಕೃಪೆ ಮಾಡು
ನೀಡು ಎನಗನುಮತಿಯ
ಭಟರ ಕೊಲ್ವೆ ನಾಂ ದಿಟವಿದು ತಿಳಿ
ಪಟುತರ ಬಲಭಟನೆನಿಪನೀ ನರತನುಜನು ॥ ೧ ॥

**ಧರ್ಮರಾಯ : ಕಂದ**

ಜಯವಂ ಪಡೆಯೈ ಕಂದಾ
ಜಯದಿಂ ಧುರಧೀರನೆನೆಸಿ ಬಾರೈ ಕಂದಾ
ಜಯಲಕ್ಷ್ಮಿ ಕರವ ಪಿಡಿದು
ಜಯಶಾಲಿ ನೀನಾಗು ಕಂದಾ

**ದೃಶ್ಯ : ಉದ್ಯಾನವನ (ಉತ್ತರೆ ಸಖಿಯರ ಜೊತೆ ಬರುವಳು)**

**ಸಖಿಯರು : ಹಾಡು** **ರಾಗ ......**

ಏತಕೆ ಚಿಂತಿಪೆ ಸಾಕಿನ್ನು ಬಿಡುಬಿಡು
ಅತಿಮುದವನು ತಳೆ ಮತಿಗುಣವಂತೆ ॥ ಪ ॥
ಕಾಂತನು ಬರುವನು ಭ್ರಾಂತಿಯ ಬಿಡಿಸುವ
ಅಂತರಂಗದಿ ನೀ ಚಿಂತಿಸದಿರು ಈಗ ॥ ಅ.ಪ. ॥

**ಅಭಿಮನ್ಯು : ಹಾಡು** **ರಾಗ : ವಲಚಿ - ಆದಿತಾಳ**

ಬಾ ಮೋಹಿನಿ ಭಾಮಿನಿ
ಪ್ರೇಮಾನುರಾಗಿಣಿ ಸುಮಶರನಗಗಿಣಿ ॥ ಪ ॥
ಅಂದದಿ ನಿನ್ನಯ ಸುಂದರ ವದನವ
ಇಂದು ನಾ ಬಯಸಿ ಬಂದಿಹೆನೇ ರಮಣಿ
ಕುಂದರದನೆಯೆ ಬಂದುರಗಮನೆಯೆ
ಮಂದಹಾಸದಿ ಬಂದೆನ್ನ ಬಳಿಸಾರೇ ॥ ಅ.ಪ. ॥
ಅಧರ ಮಧುರದ ಸುಧೆಯ ಬೀರುತಲಿ
ವಿಧವಿಧದಿಂದಲಿ ನೀನೊಲಿಯೆ
ಪದುಮನೇತ್ರೆಯ ಮೃದು ಸುಗಾತ್ರೆಯೆ
ಪದುಮದಳಾಕ್ಷಿಯೆ ನೀನೊಲಿಯೆ
ತರಂಗ ವಿನೋದ ಸುನಾದ ಬೀರಿ
ಸರಾಗದಲಿ ಪರಿಹರಿಸಿ ಕರಪಿಡಿಯೆ ॥ ಪ ॥

**ಉತ್ತರೆ : ಹಾಡು** **ರಾಗ : ಆರಭಿ - ರೂಪಕತಾಳ**

ಸುಮೇಶುರೂಪಾ, ಸುಗುಣ
ಸುರಭಿಯುತ ಚಾರು
ಸುಮಗಳಿಂದ ಪೂಜಿಗೈವ ನಿನ್ನನಾಂ ॥ ಪ ॥
ಪ್ರಮುದಿತ ಕೈರವ ಕುರವಾಕಾಶೋಕ
ಕಮನೀಯ ಚಂಪಕ ಸರಸೀರುಹಾದ್ರಿ ॥ ಅ.ಪ. ॥
ಸ್ಮರನಿಭ ತನುರುಚಿ ಸುಂದರ, ನಿನ್ನಯ
ಚರಣಸೇವೆಗೈದು ಪಾವನೆಯೆನಿಸಿದೆ ॥ ೧ ॥
ಕರುಣಿಸಿತೆನ್ನೊಳು ಪ್ರೇಮಭಿಕ್ಷೆಯ ನೀಡು
ಸರಸೀರುಹಾಕ್ಷ ಭಾರತಾನ್ವಯಚಂದ ॥ ೨ ॥

(ಉತ್ತರೆ-ಅಭಿಮನ್ಯು ದ್ವಂದ್ವ ಗೀತೆ)

**ಉತ್ತರೆ :** ಸಾಕೀವಿನೋದ, ಸರೋಜಾನನಾ
ನಾಂಬಲ್ಲೆನ್ನೈ ನಿನ್ನ ಪ್ರೇಮಾರ್ಚನ
ಏಕಾಂಗಿಯಾಗಿ ಕಾಂತೆಯ ನೀಗಿ
ಪೋಗಲ್ಕದೇಂ ನೀತಿಯೋ ಕಾಣೆನಾ

**ಅಭಿಮನ್ಯು :** ನೀರೇಜನೇತ್ರೆ, ವೃಥಾ ಕೋಪವೇ ?
ಆನಂದವ ಬೇರೆ ನಾಂ ಬೇಡುವೆ
ಕಾರುಣ್ಯ ಶೀಲೆ, ಕೋಮಲೆ ಬಾಲೆ
ಸಂಗ್ರಾಮಕೆಂತಾಹ ನೀಂ ಪೋಗುವೆ !

**ಉತ್ತರೆ :** ನಾರಿಯ ಕೋಪ ತಾಳಿರೆ ರೂಪ
ಶರಸಂಧಾನದೊಳೆನ್ನ ಚಾತುರ್ಯ ತೋರಿ
ವೀರಸತಿಯಂತೀಗ ಶೋಭಿಪೆ

**ರಾಗಮಾಲಿಕೆ**

**ಸುಭದ್ರೆ :** ಜನನಿಯ ದಾಸ್ಯವನು ಹರಿಸೆ ಸುರರಂ ಗೆಲ್ದು
ಅಮೃತವನು ತರಲೆಳಸಿ ತಾಯ್ಗೆ ನಮಿಸಿ
ವೀರ ಗುರುತ್ಮಂತನನುಮತಿಯ ಕೇಳ್ದಾಗ
ವಿನತೆಯಿತ್ತ ಮಿತ ಶುಭವಿರಲಿ ನಿನಗೆ;

ವೃತ್ರನನು ಸಂಹರಿಸೆ ದಿವಿಜಪತಿಯೆಳಸಿ ಋಷಿ
ಪುಂಗವರ ಪದಕಮಲಕೆರಗಲಾಗ;
ಅವರಿತ್ತ ಸರ್ವೋತ್ತಮಾಶೀರ್ವಚನದೊಳ್
ಮೊರೆದ ಸನ್ಮಂಗಲವು ನಿನಗಾಗಲಿ;

ಜನಕಜೆಯ ಕೂಡಿ ಕಾನನಕೆ ಪೋಗುವೆನೆಂದು
ರಾಮನತಿಭಕ್ತಿಯಿಂದ ನಮಿಸಲಾಗ,
ಕೌಸಲ್ಯೆಯೊಲಿದಿತ್ತ ಸರ್ವಲೋಕಾಭೇದ್ಯ
ರಕ್ಷೆಯ ಹಿರಿಬಲ್ಮೆ ನಿನ್ನೊಳಿರಲಿ;

ತ್ರಿಪುರರನು ಕೊಲ್ಲಲೆಂದು ಪೊರಮಡುತೆ ಷಣ್ಮುಖಂ
ಮಾತೆ ಕಾತ್ಯಾಯನಿಗೆ ನಮಿಸಲಾಗ,
ಜಗದಾದಿ ಜನನಿಯಿತ್ತ ಸಮ ಶಕ್ತ್ಯಾಯುಧದ
ವಿಜಯ ಲಾಭದ ಗರಿಮೆ ನಿನಗಾಗಲಿ;

ವ್ಯೂಹವನು ಬೇಧಿಸುತೆ ಕಡುಶೌರ್ಯದೆ;
ನಿನ್ನ ಪಿತನಿಗೆ ಸಾಟಿ ಧೀರನಾಗು,
ಶತ್ರು ನಿಕರವ ಹರಿಸಿ ಲೋಕೈಕವೀರನೆನಿಸಿ.
ವಿಜಯವನು ಪಡೆ, ಕೀರ್ತಿಶಾಲಿಯಾಗು.

ಅಭಿಮನ್ಯು : ಹಾಡು ರಾಗ : ಗಂಭೀರನಾಟಿ - ಆದಿತಾಳ

ದ್ರೋಣನ ಚಕ್ರವ್ಯೂಹದ ರಚನಾ
ಬೇಧ ವಿಧಾನವನರಿತಿರುವೆ
ಘನ ಮುರಾರಿ ಭಯವಿದಾರಿ
ದಯದಿ ಜಯವಪೊಂದುವೆ ॥ ಅ.ಪ. ॥
ಅರಿಗಳ ಬಲವನು ತರಿದಿಕ್ಕುತಲಿ
ಕಲಕುವೆ ಕುರುಕುಲ ಜಲಧಿಯನು
ವರಕುಮಾರ ಸುಗುಣಧೀರ
ನೆನಿಸಿ ಮೆರೆವೆ ದುರದೊಳು ॥ ೧ ॥

ದೃಶ್ಯ : ಯುದ್ಧರಂಗ (ದ್ರೋಣ ಚಿಂತಾಕ್ರಾಂತರಾಗಿ ಪ್ರವೇಶಿಸುವರು)

ದ್ರೋಣ : ಹಾಡು ರಾಗ : ವಿಜಯನಾಗರಿ - ಆದಿತಾಳ

ಪೊರೆ ಪರಮೇಶ್ವರ ಪೊರೆ ಜಗದೀಶ್ವರ
ಪರಿಪರಿಯಿಂದಲೀ ಪರಿತಪಿಸುವೆನಾ ॥ ಪ ॥
ಕುರುಪಾಂಡವರು ಅರಿಯದೇ ಸಮರದೀ
ಮರಣವ ಹೊಂದುವ ದುರಿತವ ನೋಡೆನು ॥ ಅ.ಪ. ॥

**ಧರ್ಮರಾಯ : ಹಾಡು** **ರಾಗ : ಷಣ್ಮುಖಪ್ರಿಯ - ಆದಿತಾಳ**

ದಯವಿಡು ಗುರುದೇವ ಅಮಿತ ಪ್ರಭಾವ
ಮೊರೆಯಿಡುತಿಹೆನಾ ಪೊರೆ ನರನಣುಗನ ॥ ಪ ॥
ಚಾಪದಾರಿಯೇ ನಿನ್ನ ಈ ಪರಿ ಕೋಪವದ
ತಾಪವ ತಾಳೆನು ಕಾಪಾಡು ಕರಮುಗಿವೇ ॥ ಅ.ಪ. ॥

**ದುರ್ಯೋಧನ : ಹಾಡು** **ರಾಗ : ಹಂಸಧ್ವನಿ - ಆದಿತಾಳ**

ಮದಾಂಧರೆನಿಪ ಅರಿನಿಕರವ ಸದೆಯ ಬಡಿವೆ ನೀ ಕ್ಷಣ ॥ ಪ ॥
ಮದಿಸಿದಾನೆಯಂತೆ ಅವರ ಮದವ ಮುರಿವೆ ಲಕ್ಷಣ ॥ ಅ.ಪ. ॥
ಕುರುಪತಿಯಾಗಿರುವ ಎನಗೆ ಸರಿಸಮಾನರಾರು ಇಹರು
ಮುರಿದು ಶತ್ರು ಶೌರ್ಯವನ್ನು ಮೆರೆವೆ ಜಗದವೀರನೆನೆಸಿ ॥ ೧ ॥

## ದೃಶ್ಯ : ಯುದ್ಧರಂಗ (ಚಕ್ರವ್ಯೂಹ ಪ್ರದೇಶ)

**ಅಭಿಮನ್ಯು : ಕಂದ**

ಕುರುಸೈನಿಕಧಿಪರೆನಿಸುತೆ
ನಿರಸ್ತ್ರನಾದೆನ್ನೊಳಿಂತು ನಡೆವಿರೆಕೇ ಛೀ
ಕೇಸರಿಯ ಶಿಶುವಂ ಮೇಳೈಸಿದ
ಕರಿಯೂಥಂ ಲಜ್ಜೆಯುಳಿದು ವಿಜೃಂಭಿಪವೋಲ್

## ದೃಶ್ಯ : ಸುಭದ್ರೆಯ ಅಂತಃಪುರ

**ಉತ್ತರೆ : ಹಾಡು** **ರಾಗ : ಪೀಲು - ಆದಿತಾಳ**

ಪ್ರಾಣಪತಿ ನಿನ್ನ ನಾಂ ಕಾಣಲೆಂತು ॥ ಪ ॥
ತನುವ ನೀಗುತೆ ಚಿತಾನಲದೆ, ನಿನ್ನಂಘ್ರಿಯ ಸೇರಲೆಂತು
ಕಂಗಳಲ್ಲಿ ಪ್ರೇಮಾಶ್ರುತುಂಬಿರೆ,
ಅಂಗದೊಳ್ ನವಕಂಪನವೇರೆ,
ವಿಪುಲವು ಹಾ ! ಪತಿ ನಿನ್ನ ನಾಂ ಕಾಣಲೆಂತು !

## ದೃಶ್ಯ : ಯುದ್ಧರಂಗ

**ಅರ್ಜುನ : ಕಂದ**

ಬಗೆವೆ ಸೈಂಧವನ ಶಿರವ
ಬಗೆದೀಡಾಡುವೆ ಈ ಗಾಂಡೀವದ ಶರದೊಳ್
ಗಗನದೊಳ್ ರವಿ ಅಸ್ತಂಗತ ಸಮಯಕೆ
ಹಗೆಯು ಬೈಸದೊಡೆ ಸೀಗುವೆ ತನುವನಿದೆನ್ನ ಶಪಥಂ

**ಅಥವಾ**

ಹರನ ದುರ್ಗದಲಿರಲಿ ಮೇಣ್
ಹರಿಯ ಕಡಲೊಳಗಿರಲಿ ಬ್ರಹ್ಮನ
ಕಗಕಮಂಡಲದೊಳಗೆ ಹುದುಗಲಿ ರವಿಯು ಮರೆಹೊಗಲಿ
ಉರಗ ಭುವನದೊಳಿರಲಿ ಮೇಣ್ ಸಾ
ಗರವ ಮುಳುಗಲಿ ನಾಳೆ ಪಡುವಣ
ತರಣಿ ಕೊಲಗದ ಮುನ್ನ ಕೊಲುವೆನು ವೈರಿ ಸೈಂಧವನ

## ದೃಶ್ಯ : ಯುದ್ಧರಂಗದ ಒಂದು ಸ್ಥಳ (ಶಕುನಿ ಪ್ರವೇಶಿಸುವನು, ಆನಂತರ ದುರ್ಯೋಧನನ ಪ್ರವೇಶ)

**ದುರ್ಯೋಧನ : ಹಾಡು** **ರಾಗ : ಹಿಂದೋಳ - ಆದಿತಾಳ**

ವಂಚಕಿಯೇ ನಿನ್ನ ತಂತ್ರಕೆ ಬೆದರುವೆನೆ
ಈ ದುರ್ಯೋಧನನು ॥ ಪ ॥
ಕಪಟಿಯೆ ನಿನ್ನಯ ಮರುಳು ಮಾತಿಗೆ
ಆಲೈಸಿದೆನು ಬಂದು ನಿನ್ನೊಳು
ನಿನ್ನಯ ಅನುಜರ ನಿಗ್ರಹಗೈದ
ಎನಗೆ ನೀನು ಹಿತವ ಬಯಸುವೆಯಾ ॥ ಪ ॥

ದೃಶ್ಯ : ಯುದ್ಧರಂಗ (ವೈಶಂಪಾಯನ ಸರೋವರ)

**ಗಾಂಧಾರಿ : ಹಾಡು** ರಾಗ : ಪೀಲ್ - ಆದಿತಾಳ

ಎಲ್ಲಿರುವೆ ಮಗನೇ ಸುಯೋಧನ
ಎಲ್ಲೆಲ್ಲು ಹುಡುಕಿನಾ ಕಾಣದೆ ಬಳಲಿದೇ ॥ ಪ ॥
ಗತಿಸಿ ಪೋದೆಯೇ ಜೀವಿಸಿರುವೆಯೇ
ಕಾಣದಾದೆ ಕಂದನೆ ನಿನ್ನ ॥ ಅ.ಪ. ॥

**ಮಂಗಳ**

ಜಯಮಂಗಳದಾಯಕ ಹರಿಯೇ
ಜಯಪಾವನದಾರಿ ಮುರಾರಿ
ಮಂಗಳವರಗುಣ ಶ್ರೀಲೋಲಾಜಯ
ಜಯ ಜಯ ಜಯ ಜಯ ಜೈ ಜೈ ಜೈ



# ಶ್ರೀ ಕೃಷ್ಣ ಗಾರುಡಿ


ಕರ್ನಾಟಕ ನಾಟಕ ಪಿತಾಮಹ
**ಬೆಳ್ಳಾವೆ ನರಹರಿಶಾಸ್ತ್ರಿಗಳು**


ಶ್ರೀಕೃಷ್ಣಗಾರುಡಿಯ ಭೀಮ
**ಆರ್. ನಾಗರತ್ನಮ್ಮ**

**ಪ್ರಾರ್ಥನೆ : ಹಾಡು** **ರಾಗ : ಹಿಂದೂಸ್ಥಾನಿ - ಆದಿತಾಳ**

ಶ್ರೀಕರಿಮುಖ ಸೌಖ್ಯದಾತ
ಲೋಕಾಧೀಶ ಸಲಹೋ ನಮಿಪೆವು ॥ ಪ ॥
ಪಾಹಿದಿವಿಜನುತ ಪಾವನಚರಿತ
ನವಮಹಿತ ಗುಣಭರಿತ
ಶಿವಸುತ ಶ್ರೀ ॥ ಅ.ಪ ॥
ಗಣಪನೆ ತವಪದದಣುದಯದೊಳು ಉರೆ
ಗುಣಚರಿತವ ಕಾಣೆಕಾವ್ಯ ಪರಿಚಯವಾ
ನಮಿಪೆ ಪಾಹಿ ಚರಿತೆಯೊಳು
ಗಣಯ ತಿಪ್ರಾಸದ ನಿಯಮ
ದುರ್ಮತಿಯ ಪರಿಹರಿಸಿ
ಸುಖಪದವ ದಯದಿ ಕೊಡು ॥ ೧ ॥

**ದೃಶ್ಯ : ರಸ್ತೆ**

**ಸೂತ್ರಧಾರ : ವೃತ್ತ ॥** **ರಾಗ : ನಾಟಿ**

ಶ್ರೀ ವಿಖ್ಯಾತಿ ಜಯಪ್ರಮೋದನಿಲಯಂ ಭಾಮಾವಿಲಾಸಪ್ರಿಯಂ ।
ಭಾವಜ್ಞಂ ದಿವಿಜಾನುಕೂಲವಿಜಯಂ ಸೌಭಾಗ್ಯಲೀಲಾಮಯಂ ॥
ಸೇವಾಲೋಲುಪ ಭವ್ಯ ಪಾಂಡವ ಚಕೋರಾನಂದ ತಾರಾಧವಂ ।
ದೇವಂ ಶ್ರೀ ವಸುದೇವಜಾತನೆಮಗೀಗಾನಂದವಂ ಮಾಧವಂ ॥ ೧ ॥

**ಸೂತ್ರಧಾರ : ಹಾಡು** **ರಾಗ : ಕಲ್ಯಾಣಿ - ಆದಿತಾಳ**

ವಸುದೇವ ತನೂಜಾತ । ವಸುಗಣ ಸಂಗೀತ ॥ ಪ ॥
ವಸುಧಾರಮಾಮೋಹನ । ವಾರಿಧಿಶಯನ ॥ ರಸಿಕ ಸಂತೋಷಣ
ರಾಜೀವ ಲೋಚನ ॥ ನಾದವಿದ್ಯಾಲೋಲ । ನಾಟ್ಯಲೀಲಾನಂತಾಕಾರ
ವೇದಗೋಚರ ಶೀಲ । ವೇಣುಗೋಪಾಲ ಶ್ರೀಧರ ಸುಂದರ
ಮಂದರೋದ್ಧರಣ । ಶ್ರಿತಕಲ್ಪಭೂಜ । ಶ್ರೀ ನರಸಿಂಹ ॥ ೧ ॥

**ಸೂತ್ರಧಾರ : ಹಾಡು** **ರಾಗ : ನಾಟಿ - ಆದಿತಾಳ**

ವಾಸುದೇವ ಪೊರೆಯೈ ವಸುಮತಿಯ
ವಾಸುದೇವ ಪೊರೆಯೈ ॥ ಪ ॥
ಕಾಮಿತಾರ್ಥಭರಣ ವಿತರಣ
ಭೂಮಿಜಾತೆರಮಣ ಅತಿಕರುಣ
ಧುರೀಣ ಪ್ರವೀಣ ಭಕ್ತಾ ಮನೋಹರ ॥ ಅ.ಪ. ॥
ಮನಸಿಜಪಿತವಿನುತ ಮುನಿಜನಘನ ಹಿತ ಸತತಾ ।
ಸುಜನನೇತ್ರ ಸುಖಳಾತ್ರ ಸುಚರಿತ್ರ
ಪವಿತ್ರ ಸುಧಾಮವರದಾ ॥ ೧ ॥

**ದೃಶ್ಯ : ಹಸ್ತಿನಾಪುರ - ಪಾಂಡವರ ಪಟ್ಟಾಭಿಷೇಕ ಮಹೋತ್ಸವ ಮಂಟಪ**

**ವಂದಿವೈತಾಳಿಕರು : ಹಾಡು** **ರಾಗ : ಸಾರಂಗ - ರೂಪಕತಾಳ**

ಶ್ರೀ ವಿಜಯಾನಂದ । ಶ್ರೀಶದಯಾಸಾಂದ್ರ, ಮಹೇಂದ್ರ ॥ ಪ ॥
ವಿಲಸಿತ ನಿರುಪಮ । ವಿಭವ ಸುವಿಲಾಸ ವಿಕಾಸ ।
ಲಲಿತ ಚರಿತ ರಸಿಕ ದಿನುತ ॥ ಅ.ಪ. ॥
ಬಂಧುರ ಧರ್ಮ ಕಲಾಪ । ಬೃಂದಾರ ಸ್ತುತ ಭೂಪನಯ ನಿಕ್ಷೇಪ ॥
ಕಲಿತ ಕರುಣ । ಕಲಾಭರಣ । ಕಮಲದಳಾಕ್ಷ ಕಿರಣ ।
ಫಲ ವಿತರಣ ಮಧುರ ವಚನ । ಬೆಳಗು ನೃಹರಿಯಲಘು ದಯದಿ ॥ ೧ ॥

**ಸರ್ವರೂ : ಹಾಡು** **ರಾಗ : ಹಂಸಧ್ವನಿ - ಆದಿತಾಳ**

ಜಯ ಜಯ ಸುಧಾಕರ ವಂಶಾಬ್ಧಿ ಚಂದ್ರ ॥ ಪ ॥
ಧರಾವರ ॥ ದಯಾಕರ ॥ ಅ.ಪ. ॥

ಭೂವರಾಧೀಶ್ವರ । ಶ್ರೀವಿಲಾಸಾಕರ । ದೇವ ವಿನುತ ।
ನಾ । ನಾವಿಧ ವೈಭವ । ಪಾವನ ಚರಿತ । ಮಹಿಮಾಕಲಿತ ॥ ೧ ॥
ಶ್ರೀಮಾಧವ । ಪ್ರೇಮಾಸ್ಪದ. ಸೋಮಾರುಣ ಧಾಮೋಜ್ವಲ ॥ ಕಾಮ
ಮೋಚ ರಹಿತಾಮಲಾತ್ಮರಿಪು । ಭೀಮಭೂರಿಬಲ ಭೂಮಿಪ ತಿಲಕ ॥ ೨ ॥

## ದೃಶ್ಯ : ದ್ವಾರಕಾವತಿ ಅರಮನೆ

**ಕೃಷ್ಣ : ಕಂದ**

ದೈವಾಂಶದೆ ಜನಿಸಿದೊಡಂ ।
ದೈವಮೆ ತತ್ವಾರ್ಥಭೋದೆ ಗೆಯ್ದೊಡಮಿದಿರೊಳ್ ॥ ೧ ॥
ದೈವಮೆ ನಿಂದಿರ್ದೊಡಮಾ ।
ದೈವಕೃತಂ ದೋಷಮೆಂಬುದಲೆ ನರಜನ್ಮಂ ॥ ೨ ॥

## ದೃಶ್ಯ : ಹಸ್ತಿನಾಪುರ ಪಾಂಡವರ ಅರಮನೆ
## (ಭೀಮ - ಅರ್ಜುನ ದ್ವಂದ್ವಗೀತೆ)

**ಭೀಮ, ಅರ್ಜುನ : ಹಾಡು** **ರಾಗ : ಶಂಕರಾಭರಣ - ಆದಿತಾಳ**

**ಭೀಮ :** ಸಾಕು ದುರುಳನ ದುರಾಗತದ ಸರಸ ।
ಸರಸದೊಳು ವಿರಸವನೆಸಗಿದ ॥ ಪ ॥
ಮಾನಹಾನಿಯಂ ವಿರಚಿಸಿ ನಮಗಾ । ಮಹಿಪನೋಲಗದೆ
ಮುರಹರನ ಮಮಾ ॥ ಮೆರೆದುದು ವಿಹಿತವೆ ।
ಪರಿಕಿಸುತವನಧಟ । ನಿರದಿಳಿಪೆ । ತ್ವರಿತದೊಳು । ತೆರಳುತಲಿ ॥ ೧ ॥

**ಅರ್ಜುನ :** ಶೌರಿಸರಸದೆ ವಿರೋಧಮೆಸಗಿದನು ।
ಸಮಯದೆಮಗವ ಮತಿಯೆಸಗುತೆ ॥ ಪ ॥
ಕಾರ್ಯಭಾಗವಂ ನಿಯಮಿಸಿ ನಮಗೆ । ಕರೆದು ನವ್ಯ ಮಧುಮಯ
ವಚನಗಳಿಂ ॥ ಪ್ರಿಯವನು ನಮಗತಿ । ಶಯದಳಿದನು ಸಮರ ।
ಜಯಬಲರ । ಸುಯಶವನು । ಕ್ಷಯಿಸಿದನು ॥ ೨ ॥

**ಭೀಮ :** ನ್ಯಾಯವನೆತೊರೆದು । ನಯವನುಳಿದು । ನಮಗೆ ಪಿರಿದು
ಸಮಯವಿಡಿದೀ ॥ ಕ್ರಮದಹಿತವಂ ॥ ಗೈದಿರುವದೇಂ ।
ಘನತೆಯಹುದೇ । ಕಾಣುವೆನು ॥ ೩ ॥

ಅರ್ಜುನ : ಸಾರಿ ಬಲುಹಿತದಿ । ಸಕಲ ವಿಧದಿ । ಫಲವ ನಳಿದೀ ।
ಪರಿಯಭಲದಿ । ನಲಿದ ಮುದದಿ ॥ ಈ ತೆರನದೇಂ ।
ವಿಹಿತವಹುದೇ । ನೀಕ್ಷಿಸುವೆ ॥ ೪ ॥

**ನಾರದ : ಹಾಡು** **ರಾಗ : ಮೋಹನ - ಆದಿತಾಳ**

ವಿಜಯ ವಿಲಾಸ ಹರೇ । ಶ್ರೀ ॥ ನಿಜಗುಣಶೀಲ ನೀರಜ ಮಾಲ ॥ ಪ ॥
ಪಾರ್ಥಮನೋರಥದಾತಸುಪೂತ । ಪರಮಕೃಪಾನ್ವಿತ ಮಾನಿತ ॥
ಕೀರ್ತಿಮಯೂಖ ವಿಕೀರ್ಣದಿಗಂತ ॥ ೧ ॥
ಪಾಂಡವವಿಜಯಾನಂದ ವಿನೋದ । ಕುಂಡಲೀಪುರಥ ಸನ್ನುತ ॥
ಕುಂಡಲಕಾಂತಿ ವಿಶಾಲ ಕಪೋಲ ॥ ೨ ॥

**ಧರ್ಮರಾಯ : ಹಾಡು** **ರಾಗ : ಸಾರಂಗ - ಝುಂಪೆತಾಳ**

ಏನೀಗಳೀಮೌನ । ವೇನಿಂತು ದುಮ್ಮಾನ ॥ ಮನ । ದೊ
ಳೇನನುಮಾನ । ವೆನಗೆ ಪೇಳದಿಹರೇ ॥ ಪ ॥
ನಾನಾವಿನೋದವಾಂ ॥ ತಾನಂದದಿಂದರ್ದ ।
ಜ್ಞಾನಪ್ರಬಾರುಚಿರ । ಮಾನಿತಗುಣಾಂಕರೆ ॥ ಅ ॥
ಸುಜ್ಞಾನ ಗಾಂಭೀರ್ಯ । ಸುರುಚಿರ ಮಹಾಶೌರ್ಯ ।
ಪ್ರಜ್ಞಾ ವಿಶೇಷ ಬಲ । ಮತಿಯು ಮಿರೆಯೂ ॥
ಅಜ್ಞಾನದಿಂದ ಪಿರಿ । ದಾಂತವರೆ ಚಿಂತೆಯನು ।
ವಿಜ್ಞಾನ ಭಾಗ್ಯರೇ । ವೀರ ನರ ಭೀಮರೇ ॥ ೧ ॥

**ಭೀಮ : ಹಾಡು** **ರಾಗ : ಹಂಸಧ್ವನಿ - ಅಟ್ಟತಾಳ ಚಾಪು**

ಬಲ್ಲೆನೀಗಳೆ । ಖುಲ್ಲನೆನಿಸಿದ । ಗೊಲ್ಲಮಾಡಿದುದೆಲ್ಲವ ॥ ಪ ॥
ನಿಲ್ಲದಾ ಸಭೆ । ಯಲ್ಲಿ ಪರಿಪರಿ । ಸೊಲ್ಲಿಸಿದ ಖಳ ನೆಲ್ಲಮೋಸವ ॥ ಅ.ಪ. ॥
ನಿರ್ಮಲಾತ್ಮಕನಂತೆ ನಟಿಸುತೆ । ಧರ್ಮಪುತ್ರನೊಳಾಪರಿ
ಮರ್ಮಭೇದವ ಗೈದ ನೆಮ್ಮೊಳು । ದುರ್ಮದಂ ದುರಿತಾಸ್ಪದಂ ।
ದುರುಳಂ ಮದದಂದಳೆದಾ ಖಳಂ ॥ ೧ ॥

ಸರ್ವಕಾರ್ಯವ ತನ್ನ ಶೌರ್ಯದಿ । ನಿರ್ವಹಿಸಿದಾರೀತಿಯಿಂ
ಗರ್ವದಿಂಗಳಪುತ್ತ್ರಿಹಂ ಘನ । ಧೈರ್ಯದಿಂ ಗಾಂ ।
ಭೀಗ್ಯದಿಂಚಾತುರ್ಯದಿಂ ಕುಣಿದಾಡಿದಂ ॥ ೨ ॥

**ಭೀಮ : ಸೀಸ ಪದ್ಯ** **ರಾಗ : ಹಂಸಧ್ವನಿ - ಅಟ್ಟತಾಳ ಚಾಪು**

ಅರಿಭಯಂಕರನೆನಿಸಿ ಶರಪರಂಪರೆಗಳಿಂದ
ವೈರಿ ಸೈನ್ಯವ ಸುಟ್ಟ ವೀರ ನಾನು ।
ಕರಿತುರಗರಥಗಳಂ ಘನಗದಾದಂಡದಿಂ
ಘಟ್ಟಿಸುತೆ ಧೂಳ್ಗೈದ ಕಲಿಯು ನಾನು ॥
ಅರಿಗಳಾವ್ಯೂಹಮಂ ಮುರಿಯುತಂ ವಿಧವಿಧದೆಸಮದಮೆಸಗಿದ
ಪರಾಕ್ರಮಿಯು ನಾನು ಕುರುಸೈನ್ಯಗಳನಂದು ತರಿದು ಕೌರವರ
ಮದದೆ ಘೋರರಥುರದೊಳ್ ಕೊಂದ ಧೀರ ನಾನು ॥

**ಭೀಮ : ಗೀತ**

ಇಂತು ಭಾರತ ರಣಕೃತಾಂತನಂದದಲಿ ।
ಪಂಥದಿಂದರಿಜಯವನಾಂತೆ ನಾನಂದು ॥
ಭ್ರಾಂತಿಯಿಂದದನರಿಯದಿಂತು ನುಡಿದಿರಲು ।
ಸ್ವಾಂತಮುರಿದಪುದಮಿತ ಚಿಂತೆಯಿಂದೆನಗೆ ॥

**ಅರ್ಜುನ : ಹಾಡು** **ರಾಗ : ನಾಟಿಕುರಂಜಿ - ರೂಪಕತಾಳ**

ನಾಕೇನುಡಿ । ಸೈರಿಸಲಾರೆನು ಮನದೊಳು ॥ ಪ ॥
ಲೋಕವೆ ನಗುವುದು ಕೇಳಿದೊ । ಡೀ ಕುಹಕದ ವಚನವ ॥ ಅ.ಪ ॥
ಬಾಣ ವಿದ್ಯೆಯ । ಜಾಣ್ಮೆಯಿಂರಿಪು । ಶ್ರೇಣಿಯಂ ಮಿಗೆ ॥
ಕ್ಷೋಣಿಯೊಳುರುಳಿಸಿ ವಿಜಯವ । ಮಾಣದೆ ಪಡೆದವನಾಂ ॥ ೧ ॥
ಆಜಿಯೊಳ್ ಶರವಿಡಿಯದೆ ವಾಜಿಯಂ ಬೆದರಿಸುತಲಿ ।
ಮೋಜಿಗವ ನಿರುಕಿಸಿದಾ ॥ ಹೇಡಿಯ ಕೃಷ್ಣನ ಸಂಸ್ತುತಿ ಮಾಡುವರೇ
ಬಿಡಿ ಬಿಡಿ ॥ ೨ ॥

ಧರ್ಮರಾಯ : ಹಾಡು ರಾಗ : ಕುರಂಜಿ - ಝುಂಪೆತಾಳ

ಏಕೀ ಮಹಾದ್ವೇಷ ಲೋಕೈಕನಾಥನಹ
ಶ್ರೀಕಾಂತನೊಳಗಿಂತು ಕಾಕುಮತಿಯಂ ತಳೆದು ॥ ಪ ॥
ಶ್ರೀಕಾಂತನವನಿಂದ ಲೋಕಾಧಿಪತ್ಯಸುಖ
ಸೌಕರ್ಯ ಒದಗಿಹುದನೇಕ ವಿಧದಿಂದೀಗಳೇ ॥ ಅ.ಪ. ॥
ಸುವಿವೇಕಶಾಲಿಗಳೇ ಪವನಾತ್ಮನಾರ್ಜುನರೇ
ತವೆ ಚಪಲರಾಗಿರುವ ನೆವ ಮುಚಿತವಲ್ಲವಿದು ॥ ೧ ॥
ಕುವಲಯಾನಂದಕನ ಶ್ರವಣ ಕಟು ವಚನವಾ
ಡುವುದೀಗಳೇಂ ತರವೆ ವಿವಿಧಾಪಲಾಪದೊಳು ॥ ೨ ॥

ದೃಶ್ಯ : ದ್ರೌಪದಿ ಅಂತಃಪುರ

ದ್ರೌಪದಿ : ಹಾಡು ರಾಗ : ಯಮನ್ - ರೂಪಕತಾಳ

ಸರಸವಚನ ವಿರಸವಾಯ್ತು
ಸವ್ಯಸಾಚಿ ಭೀಮರಲ್ಲಿ ॥ ಪ ॥
ಪಾದಕೆರಗಿ ನಾನಾ ರೀತಿ ಭೇದಮತಿಯನ್ನುಳಿವುದೆಂತು
ಬೋಧೆಯಂಗೈದೆ ಕಾಂತಾ ॥ ಅ.ಪ. ॥
ಮಾಧವನೊಳು ಕ್ರೋಧ ಮೀರಿ ಭೇದವನೆ ಸಾಧಿಸಿಹರು
ಸಾಧುಭಾವ ತಳೆಯದಿಹರು ॥ ೧ ॥

ದೃಶ್ಯ : ದ್ವಾರಕಾನಗರ ಪ್ರಾಂತ್ಯ

ನಾರದ : ಹಾಡು ರಾಗ : ಬೇಹಾಗ್ - ಆದಿತಾಳ

ಪಾಹಿಭುವನಭರಣ ಶರಣ
ಪರಮ ಪಾವನ ಭವ ಭಯಹರಣ
ಪಾಹಿ ರಮಾರಮಣ ॥ ಪ ॥
ಸಕಲಭುವನ ಸುಖ ವಿತರಣನಿಪುಣ
ಸುಕರ ಮಹಿಮನವಜಲಧರ ಕುಸುಮಾ ।
ಪಾಹಿರಮಾರಮಣಾ ॥ ೧ ॥

ಯದುಕುಲಾಂಬುಧಿಲಲಿತ ಹಿಮಕರ
ಮಧುರ ಮೇಣುರವ ಮೋದಿತಭುವನ
ಪಾಹಿರಮಾರಮಣ ॥ ೨ ॥

## ದೃಶ್ಯ : ದ್ವಾರಕಾನಗರ ಪ್ರಾಂತ್ಯ

**ಮಕರಂದ : ಹಾಡು** — **ರಾಗ : ತೋಡಿ - ರೂಪಕ**

ಪೋಗಿ ಸಾರ ಫಲವ ತರುವೆ । ನೀಗಳೆ ಭರದಿ ॥
ಬೇಗನವುಗಳನ್ನು ಸುಂಗಿ ಬೀಗುವೆ ಮುದದಿ ॥ ಪ ॥
ಬಹು ಮುದದೊ । ಳೊದಗಿ । ಸಿದೆನು । ಮೊದಲು । ಮಧುರ ಫಲಗಳ ॥
ಅಹ ಏನೆಂಬೆ । ನಾ ಸುಂಬೆ । ಸೀನಿಂಬೆ । ದಾಳಿಂಬೆ । ಗೊಡೆಗೊಡೆಗಳ ॥ ಅ ಪ ॥
ಮಾವಿನಹಣ್ಣು । ಮಾವಿನ ಹಣ್ಣು । ಮಾನವನಿಗೆ ಕಣ್ಣು ॥
ಭಾವಿಸಿ ಪೊಂದುತ್ತೆ । ಸೇವಿಪ ಪುಣ್ಯವ । ನಾವನು ಪಡೆಯುವನೋ ॥
ನಾನಾ ವಿಧ ನಲಿಯುವನೋ । ವಂ । ಭಾವಿತನೆನಿಸುವನೋ ॥
ಧೀರ ಗ । ಭೀರನು ದಾರನು । ಶೂರನು । ಧಾರಿಣಿಯೊಳಗವನು ॥ ೧ ॥

## ದೃಶ್ಯ : ದ್ವಾರಕಾನಗರ - ಗಂಧರ್ವೋದ್ಯಾನ

**ಸ್ತ್ರೀಯರು : ಹಾಡು** — **ರಾಗ : ಬೇಹಾಗ್ - ಆದಿತಾಳ**

ಸರಸಲೀಲಜಯ । ಸರಸಿಜನಯನ ।
ಪರಮಭಾಗ್ಯಮಯ । ಧುರವಿಜಯ ॥ ಪ ॥
ವಿಮಲಹಾಸಜಿತ । ಹಿಮಕರಕಿರಣ । ಶಮಿತ ಪಾಪನರ । ಯಮಿಶರಣ ॥ ಅ ಪ ॥
ಪಾವನ ಚರಿತ । ನವಗುಣ ಭರಿತ ॥ ಮಧುರ ಗಾನಘನ ಸುಖ ಕಲಿತ ॥
ಶರಣಾಗತ ಜಂ । ತರಣಾದರಣ । ಸಕರುಣ । ದುರಿತ ಕುಲ ಹರಣ ॥ ೧ ॥
ಯದುಕುಲಾಬ್ಧಿ ಚಂದ್ರ । ವಿಧುವದನ ।
ಮಧುಮಯ ವಚನ ॥ ಲಲನಾ । ವಿನೋದ ವಿಲಸಿತ ।
ವಿಧಿ ಸುರವರ ನುತ । ಪದಕೆ ವಂದಿಪೆವು । ನದಯನೆ ಮುದದೊಳು ॥ ೨ ॥

**ಕೃಷ್ಣ : ಕಂದ** **ರಾಗ : ಬೇಹಾಗ್ - ಆದಿತಾಳ**

ದೇವಾಂಗನೆಯರ ನಾಣ್ಚಿಪ ।
ಭಾಮಿತ ನವ ಭಾವ ರಾಗ ಲಯ ಮೇಳನದಿಂ ॥
ಭಾವಜ್ಞಮೆನಿಪ ನಾಟ್ಯಂ ।
ಭಾವಮಿದಂ ಪರಮಹರ್ಷ ದೋಲಾಡಿಸಗುಂ ॥

**ಕೃಷ್ಣ : ಹಾಡು** **ರಾಗ : ಕಲ್ಯಾಣಿ - ಆದಿತಾಳ**

ಮೋದ । ಪರಮವಿನೋದ । ಕರವಿಭುವೆ । ವರವನವು ॥ ಪ ॥
ಈ । ಕುಸುಮಯುತಲತಾ । ವಿರಸವಿಲಸಿತ ।
ವಸುಧೆಮೆರೆಯೆ ತಾಂ । ಪೊಸತೆರದಿ ॥ ಅ.ಪ. ॥
ನಾ ರತರ ಸುಫಲ । ವಿತತಿ ವಿಪುಲ । ಕ್ಷಿತಿಯೊಳತುಳ । ಹಿತ್ತವೆನಿಸಿ
ಕೀರಕುಲ ಕಲಕಲ ವಿರಾವ ಭರಿತಂ । ಪಿಕರವ ಸಹಿತಂ । ಸುಕರಮಿದು ॥ ೧ ॥
ಲತಾಂಗಿಯರೆ । ಅತಿಮುದವನು ತಳೆದೆನು ।
ಲತಾಗೃಹ ವಿದತಿ । ಹಿತಕರಮೆನಿಸಿರೆ ॥
ವನದ-ವಿಭವ । ಮನಕೆ-ಸುಖವ । ನೆನಗೆ ಕೊಡುವು । ದನುಪಮ ॥
ನಾನೀ ಸೌಭಾಗ್ಯ । ತಳೆದಿಹೆನ । ತ್ಯಾನಂದಾ ಲೋಲ ।
ನೆನಿಸಿಹೆನು । ಸೂನಾಸ್ತ್ರವಾಸ । ವನದೊಳಿದು ॥ ೨ ॥

**ರುಕ್ಮಿಣಿ : ಕಂದ**

ವನಲಕ್ಷ್ಮಿಯನಾ ಮಾಧವ ।
ನನುವಿಂ ವರಿಸಿರ್ಪನೀಗಳಳಿ ಶುಕ ಪಿಕನಿ ॥
ಸ್ವರವಾದ್ಯಂಗಳ್ ಮೊರೆದಪ ।
ಮನುಸಯದಿಂದ ನೋಡಿ ನಲಿವನುದಿರಾಕ್ಷಿಯುಗೇ ॥

**ಕೃಷ್ಣ : ಹಾಡು** **ರಾಗ : ನಾಟಿಕುರಂಜಿ - ರೂಪಕತಾಳ (ಪರಾಕೇಲ)**

ಇದೇಂ ಸೊಗೆವ ಮನೋಹರೆ । ಸದಾಚತುರ ಲೀಲಾಕರೇ ॥ ಪ ॥
ಶುಭಾಕರೇ । ಪ್ರಭಾರುಚಿರೆ ॥ ವಿಭಾವರೀಶ್ವರಾನನೇ ॥ ಅ.ಪ. ॥

ಸದಾ ವಿನೋದವ ಬೀರುವ । ಮಧುರೋಕ್ತಿಸದನೆ ॥ ಕಳಾಧರೇ ।
ಕಲವಾಣಿ ನೀಂ । ಕಾಂತಿಗುಂದಿಹ । ಕತವ ವೇಳೆ ॥ ೧ ॥

**ನಾರದ : ಹಾಡು** **ರಾಗ : ಯಮನ್ - ಆದಿತಾಳ**

ಜಯಮುರಳೀಧರ ಶ್ರೀಧರ ಭಯಹರ ಗೋಕುಲಮಂದಿರ ॥ ಪ ॥
ಬಾಲವಿಭಾಕರ । ಭಾಸುರ ತೇಜ । ಪಾಲಿತಸುರವರ । ಪಾಪ ದೂರ ॥ ೧ ॥
ರಾಧಿಕಾಮುಖವಧೂ । ಮೋದವಿಕಾಸ । ಸಾಧುಶರಣ ವರ । ವೇದ ವಾಸ ॥ ೨ ॥

**ಕೃಷ್ಣ : ಹಾಡು** **ರಾಗ : ಕೇತಾರ - ಆದಿತಾಳ**

ನಾಕೀಭಯವು ತರುಣಿ । ಸಂತೋಷಂದಳಿ ॥ ಪ ॥
ಸಾಕುಭೀತಿ । ಯೇಕೆ ನಿನ್ನೊ । ಳಾಕುಲಂ ಸಹೋದರೀ ಬಿಡು ॥ ಅ.ಪ. ॥
ಸ್ವಾರ್ಥತಾಭಿಮಾನದಿಂತು । ಪಾರ್ಥನೆನ್ನ ದೂರುತ ॥
ಧೂರ್ತನಾದ ಕೀರ್ತಿ ಮೋದ ವ್ಯರ್ಥಗೈದ । ನಾರ್ತಿಯ ಬಯಸುತೆ ॥ ೧ ॥
ಆತನಲ್ಲಿ ಕೌತುಕಂ ಮಿಗೆ । ಭೀತಿ ದೋರುತೆ ಮಾಯೆಯಿಂ ।
ನೀತಿವೇಳ್ದು । ಪ್ರೀತಿಯಿಂದ । ಸೈರಿಸುವೆನು । ಪೂತಗುಣಯುತೆ ॥ ೨ ॥

## ದೃಶ್ಯ : ದ್ವಾರಕಾನಗರ ಪ್ರಾಂತ್ಯ

**ನಾರದ : ಹಾಡು** **ರಾಗ : ಬಿಲಹರಿ - ಆದಿತಾಳ**

ಯಾದವ ಕುಲನಾಥ । ಶ್ರೀನಾಥ ॥ ಪ ॥
ಯಾದವನಾಥ ವೇದ ಸುಗೀತ । ಸಾಧುಜನಾವಳಿ । ಮೋದಸಂದಾತ ॥ ಅ.ಪ. ॥
ವಾಸರಪತಿಸಮ । ಭಾಸುರ ತೇಜ । ವ್ಯಾಸವಿನುತಪದ । ವಾಸುಕೀಶಯನ ॥
ವಾಸವ ನತಪದ । ದಾಸವರದ ಸುವಿ । ಲಾಸ ಪಯೋನಿಧಿ । ವಾಸ ರಮೇಶ ॥ ೧ ॥
ಸಾರಸನಯನ ಸಂ । ಸಾರಸಂತರಣ ॥ ಪೂರಿತಸುಗುಣಾ । ಗಾರ ಸಕರುಣ ॥
ಘೋರದಾನವ ಸುಕು । ಮಾರ ಸುಖಂಕರ । ಶ್ರೀರಮಣೀಪ್ರಿಯ । ಧೀರ
ನೃಸಿಂಹ ॥ ೨ ॥

ದೃಶ್ಯ : ಹಸ್ತಿನಾಪುರದ ಮುಂದಣ ಒಂದು ಮಂಟಪ
(ಕೃಷ್ಣ - ಮಕರಂದ ಗಾರುಡಿಗರ ವೇಷದಲ್ಲಿ - ಯುಗಳಗೀತೆ)

ರಾಗ : ಬಿಲಹರಿ - ಆದಿತಾಳ

**ಗಾರುಡಿಗರು :** ಮಾಯಾಕಾರ ಗಾರುಡಿ । ಮಂತ್ರಕಾರ ಗಾರುಡಿ ॥
ರಾಯರೆಲ್ಲ ಮೆಚ್ಚುವಂಥ । ರಸಿಕರ ಗಾರುಡಿ ॥ ಪ ॥

**ಮಾಧವವರ್ಮ :** ಕನಸಿನಲಿ ಕಾಣದಾ । ಮನಸಿನಲ್ಲಿ ತೋರದ ।
ಘನವಾದ ಯಕ್ಷಿಣಿಯ । ಜನರಿಗೆ ತೋರುವ ॥ ೧ ॥

**ಮಕರ ವರ್ಮ :** ಘೋರ ಸರ್ಪರಾಜನ । ಸಾರಿಪಿಡಿ ದಾಡಿಪ ॥
ಧೀರನಿವನಚ್ಚರಿಯ ಬೀರುವನು ಗಾರುಡಿ ॥ ೨ ॥

**ಮಾಧವ ವರ್ಮ :** ಮಂತ್ರ ಮಾಯಮಾಡುತ ಯಂತ್ರಗಳ ಹಾಕುತ ॥
ತಂತ್ರದಿಂದ ನೋಟಕರ । ಭ್ರಾಂತರನ್ನು ಮಾಡುವ ॥ ೩ ॥

**ಮಕರವರ್ಮ :** ಹಿಂದೆ ಯಾರೂ ಕಾಣದ । ಮುಂದೆ ಯಾರೂ ನೋಡದ ।
ಅಂದಚಂದದಚ್ಚರಿಯ ನಿಂದು ನಿಂದು ತೋರುವ ॥ ೪ ॥

ದೃಶ್ಯ : ಹಸ್ತಿನಾಪುರ - ಧರ್ಮರಾಯನ ಅರಮನೆ

**ಧರ್ಮರಾಯ : ಕಂದ**

ಹರಿಗೆ ಚತುರ್ಬಾಹುಗಳಂ ।
ತಿರೆ ಸಹಜರ್ ನಾಲ್ವರೆನಗೆ ಬಲವಿಶ್ವಾತರ್ ॥
ಸಿರಿಯಂ ಧರೆಯುಂ ವಿಜಯೇಂ
ದಿರೆಯುಂ ತಾವೆನ್ನನಿಂದು ವರಿಸಿಹರಲ್ತೇ ॥

**ನಾರದ : ಹಾಡು** ರಾಗ : ಮಾಳವಿ - ಆದಿತಾಳ

ಕಮಲಾಧವ । ಕಾರುಣ್ಯಧಾಮ ॥
ಕಮನೀಯ ಲೀಲಾ । ರಮಣೀಯಪಾಹಿ ॥ ಪ ॥
ಅಮರಾಧಿಪ ॥ ನಮಿತಾಂಘ್ರಿಯುಗ । ಸುಮನೋಹರ ವಿ ।
ಭ್ರಮ ವಾಸುದೇವ ॥ ಸುವಿಲಾಸ ಲೀಲಾ । ರ್ಣವ ದೇವ ದೇವ ।

ಭುವನೈಕಪಾಲ । ಪ್ರವರಾನಘ । ಭವಲೋಚನ । ಭಾನುಕೋಟಿ ತೇಜ ।
ನವಮೇಘ ನೀಲ । ನರಸಿಂಹ ಲೀಲ ॥ ೧ ॥

**ಮಾಧವವರ್ಮ : ಹಾಡು** **ರಾಗ : ಕೇತಾರ - ಆದಿತಾಳ**

ಲಾಲಿಸು ರಾಜ ಲಲಾಮಾ । ಪಾಲಿಸುವುದು ಘನ ಮಹಿಮಾ ॥ ಪ ॥
ಭೂತಲದೊಳು ನರ । ಸಾಧರನೇಕರ । ಕೌತುಕ ಪಡಿಸುತೆ ಬಹುವಿದ್ಯೆಗಳಿಂ ॥
ಖ್ಯಾತಿಯ ನಾರ್ಜಿಸುತಿಲ್ಲಿಗೆ ಬಂದಿಹೆ । ವೀತರೆದೊಳು ನಾವವನಿಪತಿಲಕಾ ॥ ೧ ॥
ನಿರುಪಮ ಗಾಯನ ನರ್ತನ ನಟನ । ಮುರಳೀ ವಾದನ ವಾಂಛಿತ ಕಥನ ॥
ಪರತರ ಮಾಯಾಮೋಹನ ರಚನಾ । ಪರಿಣತ ರೆನಿಸಿಹೆವವನೀರಮಣಾ ॥ ೨ ॥

**ಮಕರವರ್ಮ : ಹಾಡು** **ರಾಗ : ನಾದನಾಮಕ್ರಿಯ - ಏಕತಾಳ**

ಲಾಲಿಸು ರಾಜಾಧಿರಾಜ । ನಮ್ಮ । ಪಾಲಿಸುಬಾಲ ವಿಭಾಕರತೇಜ ॥ ಪ ॥
ಈತನು ನಮ್ಮಯ ಗುರುವು । ಜಗ । ದೀತನ ದರ್ಶನ ಪಾತಕಹರವು ।
ನೀತಿವಂತರ ಕಲ್ಪತರುವು । ಬಹು । ಭೂತ ಪಿಶಾಚಿಗಳೆಲ್ಲ ಪೀಗುರುವಿನ ।
ಮಾತನೆ ನಡೆಸುವವೇನೆಂಬೆದಿಟವು ॥ ೧ ॥
ನೀತಿ ರೀತಿಗಳೆಲ್ಲ ಬಲ್ಲ । ಪ್ರತಿ । ಮಾತನಾಡುವರನು ಲಕ್ಷಿಪನಲ್ಲ ।
ಸೋತರೆ ಪಾಲಿಸಬಲ್ಲ । ನಿಜ ನೀತಿಯ ಮೀರುವ ।
ಘಾತುಕರನು ಕಾಡು । ಕೋತಿಗಳಂದದಿ ಕುಣಿಸಲು ಬಲ್ಲ ॥ ೨ ॥
ಯಕ್ಷಿಣೀ ಶಕ್ತಿಗಳೆಲ್ಲ । ಕರೆ । ದಾಕ್ಷಣವೇ ಬಂದು ಪೇಳ್ವುದನೆಲ್ಲ ।
ಲಕ್ಷಿಸದೇ ಮಾಳ್ಪುವಲ್ಲಾ ! ॥ ದುಷ್ಟ ಶಿಕ್ಷಕನೀತನು ।
ರಕ್ಷಿಪನೆಮ್ಮ ನೀ । ಅಕ್ಷಿಗೋಚರನಾದ ಲಕ್ಷ್ಮೀಶನೇ ನಿಜ ॥ ೩ ॥

**ಭೀಮ : ಹಾಡು** **ರಾಗ : ನಾಟಿ - ಆದಿತಾಳ**

ಛೀ ಛೀ ! ತಿರುಕಾ ಹರಟದಿರು ।
ಭರದೆ ಪೌರುಷವ । ಮೆರೆಯಿಪುದೆನುಚಿತ ॥ ಪ ॥
ಯಾರ ಸಮುಖದೊಳ । ಗರುಹುವೆ ದುರುಳಾ ।
ಪರಿಪರಿವಿಧದೀ । ವಿರೋಧ ವಚನವ ॥ ೧ ॥

ನೋಡು ನೋಡು ಛಲ । ಮಾಡದೋಡು ಕೃಪೆ ।
ಬೇಡು ಮಾಡುವ ನಮಗವನತಿಯಂ ॥
ಹರವು ಬೇಡ ಬಿಡು । ದಿಟವಿದು ತಿಳಿ ।
ಪಟುತರಬಲ । ಭಟನೆನಿಪನು । ಪವನಜನಲೆ ॥ ೨ ॥

**ಅರ್ಜುನ : ಹಾಡು** **ರಾಗ : ಹಂಸಧ್ವನಿ - ಏಕತಾಳ**

ತುರಂಗಮಂ ವಿ । ಹಂಗದೋಲ । ಭಂಗ ವೇಗದೋಡಿಪೆ ॥ ಪ ॥
ನರಂಗಮಿಂದ್ರ । ಜಂಗಮಂತ । ರಂಗಮೇಂ ಬೆದರ್ಪುದೆ ॥ ಅ ॥
ಪಾರು ಪಮುಂಮಿಗೆ । ಪಾರಿಸಿ ಗಗನದೆ । ಪೌರುಷಪಂ ನಲೆ ತೋರಿಸುವೆ ॥ ೧ ॥
ಸಾರ ವಿಹಾರ ವಿನೋದವ ತಾಳುವೆ । ಭೂರಿಮನೋ ಮುದದ್ಕೆ ತರುವೆ ॥ ೨ ॥

**ಭೀಮ : ಕಂದ**

ಸಾಮಾನ್ಯ ಸರ್ಪವೆಂದು ಮ ।
ಹಾಮದದಿಂ ದುಡುಕಿ ನುಡಿದು ಪಿಡಿದೆಂ ಫಣಿಯಂ ॥
ಭೀಮಾಕಾರಮಿದಮಮಾ ।
ಭೂಮಿಧರಂ ಮೇಲೆಕೆಡೆದ ತೆರನಾಯ್ತು ಕಟಾ ॥

**ನಕುಲ : ಹಾಡು** **ರಾಗ : ನಾಗಸ್ವರಾವಳಿ - ರೂಪಕತಾಳ (ಗರುಡಗಮನ)**

ಭುಜಗಶಯನ ನಮಿಸುವೆ ನಾಂ । ಸುಜನ ಪಾಲಕ ಶ್ರೀ ॥ ಪ ॥
ನಿಜಸುಖಮಂದಿರಾ ಶ್ರೀಶ । ಸಜಲಾಂಬುಧರಾಕಾರ ॥ ಅ ಪ ॥
ಸಕಲಲೋಕನುತ ಮಹಿಮ । ಸಕಲಹಾಸುರಾಳಿಹರ ॥ ಸಕಲ
ಚಾರುಚಂದ್ರಮುಖ । ಸಕಲ ಶಾಬ್ಧಿಜಾ ಲೀಲಕೃಷ್ಣ ॥ ೧ ॥
ಬಲವು ನಿನ್ನ ದಮಿತಬಲಾ । ಛಲವು ನಿನ್ನ ದಾರ್ತಿಹರಾ ॥ ಫಲವು
ನಿನ್ನ ದೈಸೆ ನಿರಾ । ಕುಲನೃಸಿಂಹ ಶ್ರೀ ವಾಸುದೇವ ॥ ೨ ॥

## ದೃಶ್ಯ : ಅರಣ್ಯ

**ಅರ್ಜುನ : ಹಾಡು** **ರಾಗ : ದೇಶಿತೋಡಿ - ಅಟತಾಳ**

ಅಯ್ಯೋ ! ಆಯಾಸವಿದನಾ ।
ನೀಂ ಸೈಪಿಸೇ ಮಹೇಶಾ ! ತಾಳಲಾಗೆ ತಾಪವ ॥ ಪ ॥
ವಾಜಿಯು ವೇಗ । ಸೋಜಿಗವಾಹಾ । ರಾಜಿತ ಬಲನು । ತೇಜವಳಿದನೇ ॥ ೧ ॥

**ಅರ್ಜುನ : ಹಾಡು** **ರಾಗ : ಅಠಾಣ - ಝಂಪೆತಾಳ**

ವನರುಹ ದಳಾಂಬಕೇ । ಮನಸೋತೆ ನಿನಗಿನ್ನು ।
ಮನಸಿಜಾಸ್ತ್ರದ ತಾಪದಿಂದ ॥ ಪ ॥
ನಿರುಪಮಲಾವಣ್ಯ । ಪರಮತಾರುಣ್ಯದಿ ॥
ಮೆರೆವನೀನೆನಗೆ । ನೆರೆ ಸೌಖ್ಯವ ನೀಡೆ ॥ ೧ ॥
ಸಾರತರಸುಖಲೀಲೆ । ಬೀರಿ ಗುಣಶೀಲೆ ।
ಸ್ಮರವೀಗಗರ್ವವ । ವಾರಿಸಿಂದು ಕುಶಲೇ ॥ ೨ ॥

**ಅರ್ಜುನ : ಹಾಡು** **ರಾಗ : ಬೇಹಾಗ್ - ಆದಿತಾಳ**

ಲಾಲಿಸೇಲೋಲಲೋಚನೆ ॥ ಪ ॥
ಲಾಲಿಸೆ ನುಡಿಯ ಸುಖ ಲೀಲಾನಿಲಯೆ ॥ ಅ.ಪ. ॥
ಶೀತಕರ ಹಾಸೇ ನವ । ಚೇತೋಜ ವಿಲಾಸೆ ಪ್ರತಿ ।
ಮಾತಾಡದೆ । ಪ್ರೀತಿಪುದು । ಸೋತೆನು ನಿನಗೆ ॥ ೧ ॥
ಇಂದುಮುಖಿ । ಸಂದೇಹವ । ನಿಂದು ಬಿಡು ।
ಬಂದೆನ್ನೊಳು ಕಂದರ್ಪನಾ । ನಂದಸುಖ । ಪೊಂದಿಪದು ನೀಂ ॥ ೨ ॥

**ಮೋಹಿನಿ : ಹಾಡು** **ರಾಗ : ಹಿಂದೂಸ್ಥಾನಿ - ಆದಿತಾಳ**

ಸುಖವಿಲಾಸ ಲೀಲಾಕರ ಬಾರೊ ಸುಂದರಾ ।
ಸುಖನಾಗಮಂದಿರ । ಶೃಂಗಾರ ಬಂಧುರಾ ॥ ಪ ॥
ಮಾರಲೀಲಾ । ಧಾರಧೀರಾ । ಸಾರೊ ಸುಗುಣಾ । ಗಾಗನೇ ॥
ಸಾರಿ ಬಂದ । ನೀರೆಗಿಂದಾ । ಮಾರಬಂಧ । ತೋರುನೀಂ ।

ವೀರಗಂ । ಭೀರದಯಾ ಸಾರ ನತ । ಮಂದಾರ ಪ್ರಿಯಾ ।
ಸಾರೊ ಮುಖ । ತೋರೋ ಸುಖ । ಬೀರೆನ್ನೊಳ್ ।
ಗಾನ ನಾಟ್ಯ ಸೌಭಾಗ್ಯ-ದಾನಂದವನಾಂತು ।
ಸುಖ ಮೀರಿ ಮೆರೆಯುವ ಶೂರವರ ನಾವಿನ್ನು ॥
ಸುಖನೇ ಸಂತಸದಿ ಸಾರು ಮನೋವಲ್ಲಭನೇ ॥ ೧ ॥

**ದೃಶ್ಯ : ಬೆಟ್ಟದ ತಪ್ಪಲು**
**(ರಾಕ್ಷಸಿ - ಅರ್ಜುನರ ದ್ವಂದ್ವಗೀತೆ)**

**ರಾಕ್ಷಸಿ : ಹಾಡು** **ರಾಗ : ಹಂಸಧ್ವನಿ - ಏಕತಾಳ**

**ರಾಕ್ಷಸಿ :** ಬಾರೊ ಮುದವ । ಬೀರಲೊ ಸುಕು ಮಾರ ಸುಂದರಾ । ಪ್ರಿಯಾ ॥ ಪ ॥
ಮದನ । ಕದನ । ಮೊದಗಿ । ಪುದತಿ । ಮುದದಿ । ಸುದತಿಯೊಳ್ ॥ ಅ.ಪ. ॥
ಪರಮ ಸುಖಾ । ಕರ ಸಮುಖಾ ಪೊರೆಯೊ ಪ್ರಿಯಸಖಾ ॥
ಧರಿಣಿಯೊಳಗೆ । ಸರಿಯೆ ನಮಗೆ । ಸರಸವಿಭವದಿ ॥ ೧ ॥

**ಅರ್ಜುನ :** ನಾರೆ ದುರುಳೆ । ದೂರ ಮರುಳೆ । ಘೋರದನುಜಳೇ ॥ ಪ ॥
ಪದದೊ । ಳೊದೆದು ಮುದವ ಸದೆದು । ವಧಿಪೆ । ನಧಮಳೇ ॥ ಅ.ಪ. ॥
ಅತಿ ಲಲಿತಾ । ಕೃತಿಯ ಕಲಾ । ವತಿಯ ರೂಪದಿ ।
ಹಿತವ ನೆನಗಿ ಮತಿಯ ಕೆಡಿಸಿ । ದತುಳ ಪಾತಕೀ ॥ ೨ ॥

**ರಾಕ್ಷಸಿ :** ಕೆಡುಗನೆ ಯೇಂ ನುಡಿಯುವೆ ಛೀ ! । ಮಡದಿಯೊಳಧಮಾ ॥
ಅಡಿಯ ಪಿಡಿದ ಬೆಡಗ । ಮರೆತು । ದುಡುಕಿ ನುಡಿವೆಯಾ ॥ ೩ ॥

**ಅರ್ಜುನ :** ಕೆಡುಗಳೆ ಛೀ ! ನುಡಿಯದಿರೀ । ದುಡುಕಿನ ನುಡಿಯ ॥
ಪಿಡಿದು ನೆಲಕೆ । ಬಡಿದು ತಲೆಯ । ನೊಡೆದು ಕೆಡಹುವೆ ॥ ೪ ॥

**(ರಾಕ್ಷಸಿ - ಅರ್ಜುನರ ದ್ವಂದ್ವಗೀತೆ )**

**ರಾಗ : ಬೇಹಾಗ್ - ಆದಿತಾಳ**

**ರಾಕ್ಷಸಿ :** ನೀಚನೇ ಛೀ ! ಛೀ ! ನಾಚಿಕೆಯುಳಿದು ।
ವಾಚಿಪೆಯೇ ಪರಿ ವಿಧವಿಧದಿ ॥ ಪ ॥

**ಅರ್ಜುನ :** ಪೋರುವೆಯೇಕೆ । ಮಾರಿಯೆ ಸಾಕೆ ।
ಹಾರಿಸುವೆನು ತಲೆಯನು ಜೋಕೆ ॥ ಅ.ಪ. ॥

**ರಾಕ್ಷಸಿ :** ಚರಣದೊಳೆರಗುತೆ । ತರುಣಿಯವರಿಸಿದ ।
ದುರುಳನೆನಿನಗೀ । ತೆರನುಚಿತವೆ ಛೀ ॥

**ಅರ್ಜುನ :** ಪಾಪಿಯೆ ನನ್ನನು । ರೂಪದೆ ವಂಚಿಸಿ ।
ತಾಪಕೆಗುರಿಗೈ । ದೀಪರಿಮೆರೆದು ॥ ೨ ॥

**ರಾಕ್ಷಸಿ :** ಮೃದು ವಚನದೆ ನೀಂ । ವಿಧವಿಧದೊಲಿಸೀ ।
ವಿಧದೊಳು ಖತಿಯಿಂ । ದೊಡರಲು ತರವೇ ॥ ೩ ॥

**ಅರ್ಜುನ :** ಘಾತಕಿ ಬೆಡಗಿನ । ಮಾತಿದು ಸಾಕೆಲೆ ।
ಭೂತಲದೊಳಗಾಂ ಹೂತಿಡುವೆನು ಬಾ ॥ ೪ ॥

## ದೃಶ್ಯ : ದ್ವಾರಕಾನಗರ ಅಂತಃಪುರ
## (ಕೃಷ್ಣಸತ್ಯಭಾಮೆಯರ ಯುಗಳ ಗೀತೆ)

**ರಾಗ : ... – ಆದಿತಾಳ**

**ಶ್ರೀಕೃಷ್ಣ :** ಬಾ ಬಾ ಭಾಮೇ । ಪಗಡೆಯ ನಿಡುವೆ ।
ಭರದೊಳಾಡಿಬಲು ಹರುಷವಂತಳೆವ ॥ ಪ ॥

**ಸತ್ಯಭಾಮೆ :** ಬಾರೈ ಕಾಂತಾ । ಭರದೊಳು ಮುದವ ।
ಪಡೆಯುತಾಡೆ ನೆರೆ । ಪಗಡೆಯಾಟವನು ॥ ಪ ॥

**ಕೃಷ್ಣ :** ಬಿಡುದಾಳಗಳನು ಬಿಸಜಮುಖೀ ।
ನಡೆಯಿಪ ಪಗಡೆಯ । ತಡೆಯದೆ ವಿಧುಮುಖಿ ॥ ೧ ॥

**ಸತ್ಯಭಾಮೆ :** ಬಿಡುವೆಂ ಗರಗಳ ಪ್ರಿಯರಮಣಾ ।
ತಡೆದು ಕಾಯ್ದುಳ್ಳಂ । ಕೆಡಹುವೆ ನಿಮಿಷದಿ ॥ ೨ ॥

**ಕೃಷ್ಣ :** ಸರಸದೆ । ಸರಸಿಜ ದಳನಯನೇ ।
ಸಮರಸದಳೆಯುತೆ । ಕ್ರಮದೊಳು ನಾಂ ॥

ವರವಿನೋದ-ವೆರಸಿ-ಪರಿಪರಿ ನಲಿಯುವ ॥
ಮತಿಯುತಳೆ । ಹಿತವ ತಳೆ । ದತಿ ಮುದದಿ ॥ ೩ ॥

**ಸತ್ಯಭಾಮೆ :** ವಿಧವಿಧ ಗತಿಯೊಳು ವಿಧುವದನಾ ॥
ಹೆದರದೆ ನಡೆಯಿಪು । ದಿದು ತರವೇ ॥
ವರವಿಲಾಸ-ದಿರಲು-ನೆರೆದಿರೆ ಸಮಯವು ।
ಪರಿಪರಿಯ ಸರಸದೊಳು । ಹರುಷಿಸುವ ॥ ೪ ॥

**ನಾರದ : ಹಾಡು** **ರಾಗ : ಧನ್ಯಾಸಿ - ಆದಿತಾಳ**

ಕಮಲಾಪ್ರಿಯ ಶ್ರೀ ಕೈರವ ಶ್ಯಾಮಾ । ಕಮಲನಯನ ಶೌರಿ ॥ ಪ ॥
ಯಮಿಜನ ಮಾನಸ । ಕಮಲ ನಿವಾಸ ।
ಕಮಲನಾಭ ಪೀತಾಂಬರಧಾರಿ ॥ ಅ.ಪ. ॥
ತ್ರಿಗುಣಾತೀತ । ಜಗತೀನಾಥ । ಖಗರಾಜವರೂಢ ಲಲಿತ ॥
ಅಗಣಿತ ಪಾಪಪಿ । ಧಾತಾಮರನುತ । ನಿಗಮಗೀತ ನಿರ್ಮಲಚರಿತ ॥ ೧ ॥
ಪರಮಾನಂದ ಮನೋಜ್ಞವಿಲಾಸ । ಶರಣಾಗತ ಫಲಸುಪಿಕಾಸ ॥
ದುರಿತದಾ ವಾನಲ । ವರ ಮಹಿಮೋಜ್ವಲ । ಪೊರೆ ನರಹರಿ
ಕರುಣಾಲಹರೀ ॥ ೨ ॥

**ದೃಶ್ಯ : ಅರಣ್ಯ**
**(ಅರ್ಜುನ ನೀರಿನ ಗಡಿಗೆಯನ್ನು ಹೊತ್ತುಕೊಂಡು ಪ್ರವೇಶಿಸುವನು)**

**ಅರ್ಜುನ : ಸೀಸಪದ್ಯ**

ಕಾಲಕೇಯನಿವಾತಕವಚರಂ ಮರ್ದಿಸಿದ ಧೀರನಾಂ ರಾಕ್ಷಸಿಗಧೀನನಾದೆ ।
ಕಾಳಗದೆ ಲಕ್ಷಿಸದೆ ಕರ್ಣನಂಧುರದೊಳ್ಗೆಲ್ದಗಾಂಡೀವಿದೀನನಾದೆ ಪಶ್ಚೆನೋಡೆ ॥
ಕಾಲಾಂತಕನೊಳಂದು ಕಾದಿಬಂದಿಹನಾನು ರಕ್ಕಸಿಯ ಕೈಗಿಂತು ಸಿಕ್ಕನೊಂದೆ ।
ಮೇಲಾಗದಿನ್ನೆನಗೆ ಕಾಲನೇ ಗತಿದಿಟವು ಮೃತ್ಯುವೈತರಲು ಕೃತಕೃತ್ಯನಹೆನು ॥

**ಅರ್ಜುನ : ಗೀತ**

ವಾಜಿಯೇರುತೆ ಬಂದು ಮನದೆ ಬಲುನೊಂದು ।
ರಾಜ್ಯಕೋಶವನುಳಿದು ತೇಜವನೆ ಕಳೆದು ॥

ರಾಜಭೋಗ ತೊರೆದರಣ್ಯ ದಳಲಿಡಿದು ।
ಸೋಜಿಗದ ರಕ್ಕಸಿಗೆ ಸೋತೆನಕಟಕಟಾ ॥

## ದೃಶ್ಯ : ಅರಣ್ಯ - ಸರೋವರ ಪ್ರದೇಶ

**ಅರ್ಜುನ : ಹಾಡು** **ರಾಗ : ಅಸಾವೇರಿ - ಆದಿತಾಳ**

ಜಗದೊಳದೇತಕೆ ಜೀವಿವೆನೋ ಹಾ । ಜೀವಿವೆನೋ ॥ ಪ ॥
ರೂಪಕೆ ಬೆರಗಾ । ಗೀಪರಿ ವನದಿ ।
ತಾಪವ ತಳೆದೆನು । ಪಾಪಿನಾನಾಕಟಾ ॥ ೧ ॥
ದುರುಳೆಯ ನಿಜವ । ನರಿಯದೆ ಮನದಿ ।
ತರಳತೆಯಾಂತು । ಮರುಳಾದೆ ನೆಹಾ । ೨ ॥

**ನಾರದ : ಹಾಡು** **ರಾಗ : ಮೋಹನ - ಆದಿತಾಳ**

ನೀಲಾಂಬುದನಿಭ ನಿಜಕಾಯ ॥ ಲೀಲಾಮಯ ಜಿತಘನ ಮಾಯ ॥ ಪ ॥
ಶತದಳಲೋಚನಾ । ನತಭವಮೋಚನ ॥
ಗತಿಮತಿದಾನಾ । ಶ್ರಿತತ್ರಾಣ ॥ ೧ ॥
ದನುಜ ವಿದಾರ । ವನಧಿ ಗಭೀರ ॥ ಮನುಮುನಿಸಂಕುಲ ಮಂದಾರ ॥ ೨ ॥
ಇಂದಿರಾ ಹೃದಯಾ । ನಂದ ವಿಕಾಸ ॥
ಮಂದರಧರ ಗೋ । ವಿಂದ ಹರೇ ॥ ೩ ॥

**ರಾಕ್ಷಸಿ : ಹಾಡು** **ರಾಗ : ಹಂಸಧ್ವನಿ - ಏಕತಾಳ**

ಎಲ್ಲಿಹನಾ । ದುರುಳ ನರನು ।
ದುರಿತ ಭರನು । ದುರಾತ್ಮ ॥ ನರ್ಜುನನು ॥ ಪ ॥
ಪರಿಪರಿ ಮೃದುವಚನಗಳನು ಪೇಳೆ । ವರಿಸುತೆ ನನ್ನನು ಕುತುಕವ ತಾಳೆ ॥
ಪೊರೆಯುವೆನೆನುತಲಿ । ಭರವಸೆ ಕೊಡುತಲಿ ।
ಪರಿದೋಡಿದ ಖಳವಂಚಕನು ॥ ೧ ॥
ಮಕ್ಕಳಿಗಾಹಾರವ ತರಲೆನುತ । ರಕ್ಕಿನ ನೆಪವನು ನೆರೆ ಕಲ್ಪಿಸುತ ॥
ದಕ್ಕದೆ ಪಾರಿದ ನೀಚನ ಪಿಡಿದು ।
ಸೊಕ್ಕಡಗಿಪೆ ಛಲದೊಳು ನಾಂ ಬಡಿದು ॥ ೨ ॥

**ಸಹದೇವ : ಹಾಡು** **ರಾಗ : ಕದನ ಕುತೂಹಲ - ಆದಿತಾಳ (ರಘುವಂಶ ಸುಧಾ)**

ಯದುನಾಥ ದಯಾನಿಧಿ ಕೃಷ್ಣ ಶ್ರೀ । ಯಾಮಿ ನೀಶಹಾನಾನನ ॥ ಪ ॥
ಸದಯಾಶ್ರಿತಾವನ ಕೋವಿದ । ತ್ರಿದಶೇಂದ್ರ ವಿರಂಚಿನುತ
ಶ್ರೀನಾಥ ॥ ಅ.ಪ. ॥
ಪಿಶಿತಾಶನಾನ್ವಯನಾಶನ । ಪೀತಾಂಬರೋದ್ಭಾಸ ಸುಖಸದನ ॥
ಕುಶಲ ಪ್ರದಾಧಿಕ ಸಂಪದ । ಕೋಮಲಾಂಗ ಶ್ರೀ ರಮಾವರ ॥ ೧ ॥
ವಿಜಯಾಸ್ಪದಾದ್ಭುತ ವಿಕ್ರಮಾ । ವಿದ್ಯಾಧರಾನೀಕನುತ ಚರಣ ॥
ಸುಜನೇಷ್ಟದಾನ ವಿಶಾರದ । ಶೂರ ನಾರಸಿಂಹ ಪಾಲಿಸೈ ॥ ೧ ॥

**ಪಾಂಡವರು : ಹಾಡು** **ರಾಗ : ವಸಂತ - ಆದಿತಾಳ**

ಶ್ರೀಧರ ಶುಭಕರ । ಮೋದಿತ ಸುರವರ ।
ಮಾಧವ ಜಯಜಯಶ್ರೀಲೋಲ
ಭೂಧರಾ ಮುರಳೀಧರಾ । ವೇದಶಿರೋಮಯ ।
ಸಾಧುಶುಭೋದಯಮಾಧವಜಯ ಜಯ ಘನಲೀಲಾ
ಶ್ರೀಕರಾ ಕರುಣಾಕರ । ವ್ಯಾಕುಲಪರಿಹರ ।
ಲೋಕ ಸುಖಾಕರ । ಪ್ರಾಕಟ ಗುಣ ಜಯ ನತಪಾಲಾ

**ಕೃಷ್ಣ : ಕಂದ**

ಆನಂದಮನಿಂದಾಂತೆಂ
ಮಾನಿತಗುಣಶೀಲ ಪಾಂಡುಪುತ್ರರೆ ಪಿರಿದುಂ ॥
ಸ್ವಾನುಭವ ಕಷ್ಟದಿಂ ಸು ।
ಜ್ಞಾನಂ ದೂರೆಕೊಂಡುದಿಂದು ನಿಮಗೀ ತೆರದಿಂ ॥

**ಮಂಗಳ**

**ರಾಗ : ... - ಆದಿತಾಳ**

ಜಯಜಯ ಶುಭಕರ । ಜಲಜ ರುಚಿಕರ ಜಯ
ನಂದಕುಮಾರ । ದಯಾಕರ । ಭವ್ಯ ವಿಭವ ಸುರ । ಸೇವ್ಯ ಚಕ್ರಧರ ।
ದಿವ್ಯಜಲದರುಚಿ । ದೀಪ್ತ ಮನೋಹರ । ಸತ್ಯ ದಯಾಕರ ।
ಸಾಧು ಸೌಖ್ಯಕರ ನಿತ್ಯ ಮಂಗಳವ । ನೀವುದು ಮಾಧವ ॥ ೧ ॥

ಮಂಗಳಮಸ್ತು



# ಬಬ್ರುವಾಹನ



## ಪ್ರಾರ್ಥನೆ

**ಪ್ರಾರ್ಥನೆ : ಹಾಡು** **ರಾಗ : ಬೇಹಾಗ್ - ಆದಿತಾಳ**

ಜಯ ಜಯ ಜಯ ಹರಿ ಶ್ರಿ ಮಾಧವನೇ ।
ಜಯ ಕರುಣಾಕರ ಶ್ರೀಧವನೇ ॥ ಪ ॥
ಕಲಾಸಂಘವನು ಪರಿಪಾಲಿಸುತ ।
ಕಲಾವಿದರುಗಳ ಕನಿಕರಿಸು ।
ಕಾಮಜನಕ ಜಯ ಕರುಣಾಕರನೆ ।
ಕಾಮಿತ ಫಲವನು ನೀಡೈ ದೇವ ॥ ೧ ॥
ನವರಸಭರಿತವು ನಾಟಕ ಕಲೆಯು ।
ರಸಿಕರ ಮನಸಿಗೆ ಮೋದಕರ ।
ಧರ್ಮವ ಪಾಲಿಪ । ಧರ್ಮೋದ್ಧಾರವು ।
ನಾರಸಿಂಹ ಪರಮಾದ್ಭುತರೂಪ ॥ ೨ ॥

## ದೃಶ್ಯ : ರಸ್ತೆ

**ಸೂತ್ರಧಾರ : ವೃತ್ತ ॥** **ರಾಗ : ನಾಟಿ**

ಗಜಮುಖನೆ ಮೆರೆವೇಕದಂತನೆ
ನಿಜಗುಣಾನ್ವಿತ ಪರಶುಧಾರನೆ
ರಜತ ಗಿರಿ ಗೊಡೆಯನ ಕುಮಾರನೆ ವಿದ್ಯೆವಾರಿಧಿಯೆ
ಅಜನು ಹರಿರುದ್ರಾದಿಗಳು ನೆರೆ
ಭಜಿಸುತಿಹರ ನವರತ ನಿನ್ನನು
ತ್ರಿ ಜಗವಂದಿತ ಗಣಪ ಮಾಳ್ಪುದು ಮತಿಗೆ ಮಂಗಳವ

**ಸೂತ್ರಧಾರ : ಹಾಡು** **ರಾಗ : ಶುದ್ಧಧನ್ಯಾಸಿ - ಆದಿತಾಳ**

ಹಿಮಗಿರಿ ತನಯೆ ಹೇಮಲತೆ ಅಂಬ । ಈಶ್ವರಿ ಶ್ರೀಲಲಿತೆ ಮಾಮವ ॥ ಪ ॥
ರಮಾವಾಣಿ ಸಂಸೇವಿತೆ ಸಕಲೇ ರಾಜ ರಾಜೇಶ್ವರಿ ರಾಮಸಹೋದರಿ ॥ ಅ.ಪ. ॥
ಪಾಶಾಂಕುಶೇಕ್ಷುದಂಡಕರೇ ಅಂಬ । ಪರಾತ್ಪರೇ ನಿಜಭಕ್ತಪರೇ ।
ಆಶಾಂಬರೇ ಹರಿಕೇಶವಿಹಾರೆ । ಆನಂದ ರೂಪೆ । ಅಮಿತಪ್ರತಾಪೆ ॥ ೧ ॥

**ಸೂತ್ರಧಾರ : ಹಾಡು** **ರಾಗ : ಕಮಲಮನೋಹರಿ - ಆದಿತಾಳ**

ಕಂಜದಳಾಯತಾಕ್ಷಿ ಕಾಮಾಕ್ಷಿ
ಕಮಲ ಮನೋಹರಿ ತ್ರಿಪುರ ಸುಂದರೀ ॥ ಪ ॥
ಕುಂಜರಗಮನೆ ಮಣಿ ಮಂಡಿತ ಮಂಜುಳ ಚರಣೆ
ಮಾಮವ ಶಿವೆ ಪಂಜರಮುಖಿ ಪಂಕಜಸಖಿ
ಗುರುಗುಹ ರಂಜಿನಿದುರಿತಭಂಜಿ ನಿರಂಜಿನಿ ॥ ಅ.ಪ. ॥
ರಾಖಾಶಶಿವದನೆ ಸುರಸನೆ ರಕ್ಷಿತ ಭುವನೆ ರತ್ನಸದನೆ
ಶ್ರೀ ಕಾಂಚನಭೂಷಿತೆ

**ದೃಶ್ಯ : ರಸ್ತೆ**

**ನಾರದ : ಹಾಡು** **ರಾಗಮಾಲಿಕೆ**

ನಮೋ ತ್ರಿಭುವನಾ ನಾಯಕನೆ
ವನುರುಹ ಲೋಚನ ಶ್ರೀ ಹರಿಯೆ ॥ ಪ ॥
ವೇದವನುದ್ಧರಿಸೆ ವಾಸುದೇವನೆ
ವರಹಮತ್ಸ್ಯರೂಪ ಧರಿಸಿ
ಮಹಿಯೊಳು ಮೆರೆದ ಮಹಿಮನೆ ॥ ಅ.ಪ. ॥
ಮಂದರಗಿರಿಯಾ ಬೆನ್ನೊಳು ಹೊತ್ತು
ಅಮರರ ಸಲಹಿದ ಕೂರ್ಮನೇ
ಶ್ವೇತ ವರಾಹ ರೂಪವಧರಿಸಿ
ಧರಿತ್ರಿ ಸೆರೆಯ ಬಿಡಿಸಿ ದುರ್ಮತಿ
ಹಿರಣ್ಯಾಕ್ಷನನು ಕೊಂದವನೆ

ಪೇಳಲಸದಳ ಪದುಮನಾಭನು ಭಕುತರ ಸಲಹಿದ ಈ ಚರಿತ
ತರಳ ಪ್ರಹ್ಲಾದನು ಮೊರೆಯಿಡಲಾಕ್ಷನ
ಸ್ಥಂಭದಿ ಬಂದ ನರಹರಿಯೆ ।
ಧರೆಯ ನಳೆದ ಪುಟ್ಟ ಬಾಲಜನ ರೂಪದಿ
ಬಲಿಯ ಮೆಟ್ಟಿದ ಶ್ರೀವಾಮನ
ಕೊಡಲಿಯ ಪಿಡಿದು ಕೆಡುಗರ ಕಡಿದು
ಪೊಡವಿಯೊಳ್ ಮೆರೆದಾ ಭಾರ್ಗವ ರಾಮ
ಶಿವಧನು ಮುರಿದು ಜಾನಕಿ ಕರ ಪಿಡಿದು
ರಾವಣಾದಿಗಳ ವಧಿಸಿದ ಶ್ರೀ ರಾಮಾ ರಾಮಾ ।

ಮಹಿಮೆ ಪೇಳಲೆನಿತು ಅಂದವೋ
ಗೋಕುಲ ನಂದನಾ ಗೋಪಿಕಾ ಕಂದನ
ಕರುಣಾವರಭರಣ ಶ್ರೀ ರಮಣ ಶ್ರೀಕೃಷ್ಣನ
ಪಾಂಡವ ಕುಲ ಪರಮ ಪುರು ಕಂಸಾಂತಕ ಲಕ್ಷ್ಮೀಶ ॥
ಮಹಿಮೆ ಪೇಳಲೆನಿತು ಅಂದವೋ ಕೃಷ್ಣಾ ಕೃಷ್ಣಾ ಕೃಷ್ಣಾ

**ನಾರದ** **ರಾಗ : ದರ್ಬಾರಿ ಕಾನಡ - ಆದಿತಾಳ**

ಶ್ರೀಹರೀ ಮುರಾರಿಶೌರಿ
ದೈತ್ಯ ಸಂಹಾರಿ ಹರೀ ॥ ಪ ॥
ಶ್ರೀಶನೆ ನಿನ್ನ ವೇಷದಫಲವೂ
ದಹಿಸದೆ ಬಿಡದು ದರ್ಪದ ಜೀವಿಗೆ
ಅರಿಯುವರೆಂದಿಗೆ ಪಾಮರದಿದನು
ಪರಮಪುರುಷನಾ ಪರಂಧಾಮನಲೀಲೆ ॥ ಅ.ಪ. ॥

**ದೃಶ್ಯ : ಧರ್ಮರಾಯನ ದರ್ಬಾರ್**

**ಧರ್ಮರಾಯ : ಹಾಡು** **ರಾಗ : ಹಂಸಧ್ವನಿ - ಆದಿತಾಳ**

ಶ್ರೀ ಹರಿದಯವಿದು ಅನುಪಮವು ।
ಭಾವಾತೀತವು । ಭುವನಾಧಾರವು ॥ ಪ ॥

ಧರ್ಮೋದ್ಧಾರಕ । ಧರ್ಮಗೋಚರನು ।
ನಿರ್ಮಲ ಮನದಲಿ । ಪಾಲಿವ ಪ್ರಭುವು ॥ ಅ.ಪ. ॥
ಪಾವನ ಮೂರ್ತಿಯು । ಪರಮಾಧಾರ ।
ಪವಮಾನಪ್ರಿಯ । ಪನ್ನಗಶಯನನು ॥ ೧ ॥

**ಭೀಮ : ಹಾಡು** **ರಾಗ : ನಾಟಿಕುರಂಜಿ - ರೂಪಕತಾಳ**

ಹೇಡಿತನವು ಕಾಡುತಿಹುದು । ಮೂಢತನವಿದು ನಿರತ ॥ ಪ ॥
ಕಾಕುತನದ ನಡತೆಯಿದು । ಸಹಿಸೆನು ನಾನು ।
ಪಾಕಶಾಸನಾದಿದಿವಿಜ । ಗಳಾವುನುಡಿಯುಲು ॥ ಅ.ಪ ॥
ದುರುಳ ಕುರುವ । ಶಕುನಿ ಕರ್ಣರ । ಕುಟಿಲ ತನವಿದು ।
ನರಸವೆಂದು । ಭರದಿಯೋಚಿಸೇ ಅಹಿತವಪ್ಪುದು ॥

**ದೃಶ್ಯ : ದ್ರೌಪದಿ ಅಂತಃ ಪುರ**
**(ಧರ್ಮರಾಯ - ದ್ರೌಪದಿ ದ್ವಂದ್ವಗೀತೆ)**

**ರಾಗ : ಅಭೇರಿ - ಆದಿತಾಳ**

**ಧರ್ಮರಾಯ :** ಶೃಂಗಾರ ಸಂಭ್ರಮವು ।
ಮಧುರಾನಂದವೀ ಸಮಯವು ಭಾಮಿನೀ ॥ ಪ ॥
ಚಾರುರೂಪಳೆ । ಸುಮಮೋಹಿತಳೆ ।
ಸಾರಸಾಕ್ಷಿಯೆ । ಪ್ರೇಮದಾಮೋದ ॥ ಅ.ಪ ॥

**ದ್ರೌಪದಿ :** ಆನಂದಮೋದವಿದು । ಮನಕಾಮೋದ ಭಾವನೆಯು ।
ಮಧುರತರ ಸಮಯವಿದು ।
ಪ್ರಣಯದ ಭಾವ । ಮಧುಮಯ ವೀವ ।
ಸದಾಶುಭಕರವು । ಅನುನಯವು ಇದು ॥ ೧ ॥

**ಧರ್ಮರಾಯ :** ಬಾರೇ ನೀರೇ ಸಾರಗುಣಾಕರೆ ।
ತಾರಾ ಮಣಿಮಯ ಕಾಂತಿಯುತೆ । ಸಾರಾಸಾರೆ ।
ನೀರೇಜಗಂಧಿಯೆ । ಸಾರಯುತಳೆನಿನ್ನ ಸೇರುತನಲಿಯುವೆ ॥ ೧ ॥

ದ್ರೌಪದಿ : ನರಸ ಸುಧಾಮಯ ರಸಿಕ ಚತುರರೆ ।
ವಿಲಸಿತ ಭಾವದಿ ಮನವ ತಣಿಸುತ ।
ಸಾರುತ, ನಲಿಸುತ, ಹಿತವನು ತರುತಿಹ ॥ ೨ ॥

## ದೃಶ್ಯ : ಅರಣ್ಯ ಪ್ರದೇಶ

**ಅರ್ಜುನ : ಹಾಡು** **ರಾಗ : ರಂಜಿನಿ - ಆದಿತಾಳ**

ಸದಾ ನಿನ್ನ ಅಭಯಂ ನಿರಂತರಂ
ಪೊರೆದಯದೀ ಶ್ರೀ ವಾಸುದೇವ ॥ ಪ ॥
ದೀನಬಂಧು ನಿಗಮಾಗಮ ಸಿಂಧು
ಅಗಣಿತ ಗುಣಗಣ ಅರಿಕುಲ ಮರ್ಧನಾ
ಜಗದಾವ್ಯಾಪಕ ಜಗದ ಜೀವಾತ್ಮಕ
ನಂಬಿದ ಭಕುತರ ಅಭಯ ಪ್ರದಾತ
ಸಿಂಧು ಶಯನ ಅರಪಿಂದ ನಯನಪೊರೆ ॥ ಅ.ಪ. ॥

**ಅರ್ಜುನ : ಕಂದ**

ವನದ ಸೊಬಗಿದು ಎನಗೆ । ಮುದವ ನೀಯುವದಿಂದು ।
ವಿಧಿಗೈದ ಬಗೆಯಿದನು । ಅರಿಯದಾದೆ ॥
ಘನತರದ ಫಲವನರಿಯದೆ । ಈ ವಿಪಿನದೊಳ್ ।
ಅಲೆಯುವ ಪರಿಯಿದೆಂತು ಕೃಷ್ಣ ॥

**ಅರ್ಜುನ : ಹಾಡು** **ರಾಗ : ತೋಡಿ - ಮಿಶ್ರಚಾಪು**

ಏನಗೈದೆನುನಾ ಹರಿಯೆ । ವಿಧಿಸಲೀ ಪರಿ ಘೋರ ತನವಿದು ॥ ಪ ॥
ಧರ್ಮವಂತನು ಧರ್ಮತನುಜನ । ನಿರ್ಮಲದ ಏಕಾಂತ ಭವನಕೆ ।
ಮರ್ಮವರಿಯದೆ । ತೆರಳುತಾ ನಾ । ಧರ್ಮದ್ರೋಹವ ಗೈದೆನಕಟಾ ॥ ೧ ॥
ಹರಿಯೆ ನಿನ್ನಯ ಲೀಲಾಜಾಲ । ಅರಿಯಲಾರಿಗೆ ಸಾಧ್ಯವೇ ।
ಮರುಳ ತನದಲಿ । ಮಾರ್ಗತೋರದೇ ಪರಿತಪಿಸುವೆನು ಕಾಯ್ವೆ ದೇವ ॥ ೨ ॥

## ದೃಶ್ಯ : ಚಿತ್ರಾಂಗದೆ ಉದ್ಯಾನವನ

**ಚಿತ್ರಾಂಗದೆ : ಹಾಡು** **ರಾಗ : ಹಿಂದೂಸ್ತಾನಿ - ಆದಿತಾಳ**

ಮನಕಾನಂದವ ಬೀರುತಲಿರುವುದು । ಸುಂದರವೀವನವು ಸಖಿಯೆ ॥ ಪ ॥
ನಾನಾವಿದದಲಿ ಕೂಗುವ ನಾದದ । ಸುಂದರ ಶುಕಪಿಕ ಸಮೂಹವಿರುತಿರೆ ॥ ಅ.ಪ.।
ಮಲ್ಲಿಕ, ಚಂಪಕ, ಜಾಜಿ ಸೇವಂತಿಗೆ । ಹೂಗಳರಾಶಿಯು ಮೋದವ ನೀಡಿದೆ ॥೧॥

**ಅರ್ಜುನ : ಹಾಡು** **ರಾಗ : ತೋಡಿ - ಆದಿತಾಳ**

ಶೃಂಗಾರ ಮೋದಕರೆ । ನವ ಸುವಿಲಾಸ
ಬೀರುವ ಸುಮನೋಹರೆ ಚತುರೆ ॥ ಪ ॥
ಕಾಮಿಸಿ ನಾ ಬಂದೆ ಕಾಮಿನಿಯೆ ।
ಮನಕಾನಂದವ ನೀಡು ಮೋಹಿನಿಯೆ ।
ಇನ್ನೇತಕೀ ಮೌನ ಮೋಹಿನಿಯೆ ।
ಸುಮಂದಾರ ಮಾಧುರ್ಯ ಲಾವಣ್ಯರಸಭರಿತೆ ॥ ಅ.ಪ. ॥
ಓರೆ ನೋಟವನು ಬೀರುತಲಿ ।
ಸುಕುಮಾರಿ ಮೋದವನು ತೋರುತಲಿ ।
ಬಾಸಖಿ ನೀ ಸಲಿಸೆ ಒಲವ ।
ಲತೆಯಂತೆ ಬಳಸಿ, ಅನವರತ, ಮುದ ತರುವ ॥ ೧ ॥

**ಕೌರವ್ಯ : ಹಾಡು** **ರಾಗ : ಹಿಂದೋಳ - ಝಂಪೆತಾಳ**

ತರುಣಿಯನು ಮೋಹಿಪುದು ತರವಲ್ಲ ನಿನಗೆ ।
ಅಹಿತವಿದು, ಘೋರವಿದು ಯೋಚಿಸುತ ತಿಳಿ ಇದನು ॥ ಪ ॥
ಕ್ಷತ್ರಿಯೋಚಿತ ಧರ್ಮಭಾವವನು ಮರೆಯುತ ।
ಸಂಯಮದ ಭಾವವನು ನೀ ತೊರೆಯುತ ।
ಧಾತ್ರಿಯೊಳು ಈ ವಿಧದ ಪ್ರಣಯದಾಟವು ತರವೇ ।
ಕ್ಷಿತಿಪತಿಯ ಪ್ರಿಯತನುಜ ವರ ವೀರ ಶೂರನೆ ॥ ಅ.ಪ. ॥

## ದೃಶ್ಯ : ಚಿತ್ರಾಂಗದೆ ಅಂತಃಪುರ

### (ಅರ್ಜುನ - ಚಿತ್ರಾಂಗದೆ ಯುಗಳ ಗೀತೆ)

**ರಾಗ : ದೇಶೀ ತೋಡಿ - ಆದಿತಾಳ**

**ಚಿತ್ರಾಂಗದೆ :** ಚಂದ್ರ, ಕಳಾದವ ಮೋಹನ ಶಿಶುವೆ । ಮನಕಾನಂದವ ನೀಡಿದೆ ನೀ ॥
ಅನುಪಮ ಸುಂದರ ಸುಧಾ ಶರಧಿಯೆ । ತನುವಿದು ಸೋತಿದೆ ಬಾ ಕುವರ ।
ಬಾಬಾ ಮೋಹದ ಮೋಹನ ಖಣಿಯೆ । ಬಾಬಾ ಸುಂದರ ಚಂದದ
ಶಿಶುವೆ ॥ ಪ ॥

**ಅರ್ಜುನ :** ಮನವನು ತಣಿಸುವ ಚಂದದ ಕುವರ । ಬಾಬಾ ಎನ್ನಯ ಪ್ರಾಣಾಧಾರ ॥
ಸ್ವರ್ಗದ ಸೀಮಾ ವೈಭವ ಸಾರ । ಮನದಾನಂದದ ಸುಧಾ ಸಾಗರ ॥ ೧ ॥
ನೀ ನಗುನಗುತಿರೆ ಎನಗಾನಂದ । ನೀನಳುತಿರೆ ಬಲು ಕ್ರೋಧ ॥
ಅರ್ಜುನ ಜೀವನದಾಶಾಗೋಪುರ । ಚಿರಕಾಲ ಬಾಳುತ ಯಶ
ಪಡೆಯೈ ॥ ೨ ॥

## ದೃಶ್ಯ : ಧರ್ಮರಾಯನ ಯಾಗ ಮಂಟಪ

**ಧರ್ಮರಾಯ : ಹಾಡು** **ರಾಗ : ಷಣ್ಮುಖಪ್ರಿಯ - ಆದಿತಾಳ**

ಪರಮ ಪುರುಷ ಹರಿ ಮಾಧವದಯದಲಿ ।
ನಿರತಯಾಗವನು ರಚಿಸಿದೆನಾ ॥
ಪರಮ ಪವಿತ್ರವು ಹಯಮೇದವಿದನು ।
ನಡೆಸುವ ಕಾರ್ಯವು ಹರಿ ಕರುಣೆಯದಿರೆ ॥ ಪ ॥
ಪರಮವೀರ ದೀನರ ಪ್ರಮುಖರಿ ।
ನಿರತದಿ ಯಾಗವ ನಡೆಸುವರು ಸತತ ॥ ಅ.ಪ. ॥
ಮೆರೆಯುವ ರಾಜರ । ರಣದಲಿ ಮಣಿಸುತ ।
ಉರುತರ ಕಾಣಿಕೆತರುತಲಿ ನಿರತವು ॥ ೧ ॥

**ಅರ್ಜುನ : ಹಾಡು** **ರಾಗ : ಕಲ್ಯಾಣಿ - ಝುಂಪೆತಾಳ**

ಯಾಗವನು ನಡೆಸುವೆನು ಶೌರ್ಯದಲಿನಾ ।
ನಾಗಭೂಷಣನಾಣೆ ಸರಿಯೆನಗೆ ಕಾಣೆ ॥ ಪ ॥

ಮಲೆತು ಮೆರೆಯುತಲಿರುವ ಕ್ಷತ್ರಿಯಾಧಮರನ್ನು।
ನಿಶಿತ ನಾರಾಚದಲಿ ಸೀಳಿ ಮೆರೆವೆ ॥ ಅ.ಪ. ॥
ಅಸಮ ವೈಭವದಿ ವಿರಾಜಿಸುವ ವಿಜಯನಿಗೆ।
ಅವಜಯವು ದೊರಕುವುದು ಅಸದಳವು ಕೇಳು ॥ ೧ ॥

**ದೃಶ್ಯ : ಹಿಮಾಲಯ ಪರ್ವತದ ಗಂಗಾನದಿ ಪ್ರದೇಶ**

**ಜಲಕನ್ಯೆಯರ : ಗೀತೆ** **ರಾಗ : ಭೌಳಿ - ಆದಿತಾಳ**

ತುಂಗ ತರಂಗೆ ಗಂಗೆ ಜಯ ಜಯ ಜಾಹ್ನವಿ ದಯಾಂತರಂಗೇ
ಹಿಮಗಿರಿನಂದಿನಿ ಕಲುಷವಿಭಂಜನಿ ಶಂಕರ ಜಟಾನಿವಾಸಿನಿ
ಸುರನರ ತೋಷಣಿ ಮೀನವಿಲೋಚನಿ ಸಾಗರ ಗಮನ ವಿಲಾಸಿನಿ
ಪತಿತೋದ್ಧಾರಿಣಿ ಪಾಪನಿವಾರಿಣಿ ಸುರಧುನಿ ಮಹಿಮೋತ್ತುಂಗೇ
ಹರಿಪದವಾಸಿನಿ ಕಮಲಸುಹಾಸಿನಿ ತರಳಿತ ಸಲಿಲಾಪಾಂಗೇ

**ದೃಶ್ಯ : ಶ್ರೀ ಕೃಷ್ಣರುಕ್ಮಿಣಿ ಅಂತಃ ಪುರ**
(ಯುಗಳ ಗೀತೆ)

**ರಾಗ : ಮೋಹನ - ಆದಿತಾಳ**

**ಶ್ರೀಕೃಷ್ಣ :** ಮನಸಿಗೆ ಮುದವೀವುದು ಈ ಸುದಿನವು।
ವನಜದ, ವಿಕಸಿತ, ಮೋಹನ ತೆರದಲಿ ॥ ಪ ॥

**ರುಕ್ಮಿಣಿ :** ರಸಮಯ ಶುಭಸಮಯವು। ಈ ಸುದಿನವು
ಪ್ರಿಯತಮ, ಸನಿಹದ, ಮೋಹದ, ಭಾವವು ॥

**ಶ್ರೀಕೃಷ್ಣ :** ಪರಿಕಿಸು ಭಾಮಾಮಣೀ। ಕಣ್ಮಣಿ।

**ರುಕ್ಮಿಣಿ :** ನಿರತವು ಜಗನ್ಮೋಹನಾ ಸುಗುಣಾ

**ಶ್ರೀಕೃಷ್ಣ :** ಸಾರಸಾಕ್ಷಿನೀ ಸುರಸೌಂದರ್ಯವ
ಬೀರುತೆ, ಸಲಿಸುವೆ, ಮನ ಕತಿಮುದವ

**ರುಕ್ಮಿಣಿ :** ಸಾರಸಾಕ್ಷನೀ ಮೋಹವನೆಸೆಯುತ।
ಮೀರಿದ ಹರ್ಷವ ನೀಡುವೆರಮಣ ॥

## ದೃಶ್ಯ : ಧರ್ಮರಾಯನ ಸಮಾಲೋಚನ ಮಂದಿರ

**ಅರ್ಜುನ : ಹಾಡು** — **ರಾಗ : ವಸಂತ - ಆದಿತಾಳ**

ಏನಿದು ಚೀತ್ಕಾರ ಮನಸಿಗೆ ಬಹುಭಾರ ।
ಭಾನು ಸಂಚಾರದಿ ಮನಸಿನ ಕುವಿಚಾರ ॥ ಪ ॥
ದಿನದಿನದಲಿ ಮುದ ಒದಗಿದ ಸಮಯದಿ
ಘನಪರಿತಾಪವುಸದನದಿ ಮೊರೆವುದು ॥ ಅ.ಪ. ॥
ನಿರತಸುಜನತತಿ ಹರಸುವ ಘೋಷವ ।
ಮರೆಸುವುದು ಸಂಮುದವನು ಕಲಕುತ ॥ ೧ ॥

**ಭೀಮ : ಹಾಡು** — **ರಾಗ : ಹಂಸಧ್ವನಿ - ಆದಿತಾಳ**

ಫಡಫಡ ನಿನ್ನೀ ಬಿರುನುಡಿಗಳನು । ತಡೆಯೆನು
ಬಿಡುಬಿಡು ಕಡು ಮೂರ್ಖ ॥ ಪ ॥
ಜಡಮತಿತನದಿಂ । ಕೆಡುನುಡಿ ನುಡಿದರೆ ಸುಡುವೆನು
ಬಾಯನು ತಡೆಖೂಳ ॥ ಅ.ಪ. ॥
ಪರಿ ಪರಿಯಿಂದಲಿ ತರಿವೆನು ಶಿರವನು ।
ಪರಿ ಪರಿ ಹರಟದೆ ನಡೆಖೂಳ ॥ ೧ ॥

**ಧರ್ಮರಾಯ : ಹಾಡು** — **ರಾಗ : ಮಾರ್ಗಹಿಂದೋಳ - ಆದಿತಾಳ**

ಭ್ರಾಂತಿ ಏತಕೆ ವಿಕ್ರಾಂತ ಸೋದರರೆ ॥ ಪ ॥
ಸಂತಸದ ಸಮಯದಿ । ಕ್ರಾಂತಿತರವೆ ನಿಮಗೆ
ಪಂಥ ತೊರೆದ ನರನು । ಶಾಂತಿ ಸುಖದಿ ಬಾಳ್ವ ॥ ಅ.ಪ. ॥
ನಿರತ ನಿಮ್ಮ ನಿಜವ । ಕಾಣದಂತಹಿತವ ।
ತೊರೆದು ಮೂಢಮತಿಯ, ಸುಖದಿ ಬಾಳ್ವುದುಚಿತ ॥ ೧ ॥

**ವ್ಯಾಸ : ಹಾಡು** — **ರಾಗ : ಮಲಯಮಾರುತ - ಆದಿತಾಳ**

ವಂದಿಪೆ ಚಂದ್ರಾಭರಣ ಪ್ರಭೋ । ಸುಂದರ ಗಿರಿಜಾರಮಣ ಶಂಕರಾ ॥ ಪ ॥
ಇಂದ್ರ ಮುಖಾಖಿಲ । ಬೃಂದಾರಕಗಣ ವಂದಿತ ಚರಣಾರವಿಂದ ಪಿನಾಕೀ ॥ ಅ.ಪ. ॥
ಪರಮ ಕೃಪಾಕರ ಶಂಕರ ನಿನ್ನಯ ಚರಣವ ನಂಬಿದೆ ಪರಿಪಾಲಿಸುನೀ ॥ ೧ ॥

**ಧರ್ಮರಾಯ : ಹಾಡು** **ರಾಗ : ಸಿಂಹೇಂದ್ರ ಮಧ್ಯಮ - ಮಿಶ್ರ ಚಾಪು**

ಏನ ಪೇಳಲಿ ಗುರುವೆ, ಸಹಿಸೆನಾನೀ ಮನದ ದುಗುಡವ ॥ ಪ ॥
ಬಂಧುಬಾಂಧವರೆಲ್ಲರನ್ನು । ಕೊಂದ ಪಾಪಕ್ಕಾಗಿ ಇಂದು,
ಒಂದುಪಾಯವ ಅರುಹಿ ಎನ್ನನು, ಚಂದದಿಂದ ಕಾಯ್ಯೆ ಗುರುವೆ ॥ ಅ.ಪ. ॥

## ದೃಶ್ಯ : ರಸ್ತೆ

**ಭೀಮ : ಕಂದ**

ಸುರನರೋರುಹದೊಳಿರ್ದೊಡೆ ।
ತರಹರಿಸಿತರ್ಪೆ ನಾವರ ಅಶ್ವವನು ।
ತಾರದಿರ್ದೊಡೆ ವರ ಕುಂತೀನಂದನನೇ ।
ವರಕಲಿ ಭೀಮನೆ ವಾಯು ಸಂಜಾತನೆ ॥

**ವೃಷಕೇತು : ಹಾಡು** **ರಾಗ : ಹಂಸಧ್ವನಿ - ಆದಿತಾಳ**

ಚಿಂತಿಸದಿರು ಜನಕ । ಮನಭ್ರಾಂತಿಯ ಹರಿಸುವೆ ಶಾಂತಿಯುತಳಿನೀ ॥ ಪ ॥
ಯಜ್ಞ ದಶ್ವವ ಬೇಗನೆ ತಹೆವು ಭಗ್ನ ಮಾಡದೆ ಭೋಗ ಭಾಗ್ಯವ ।
ಯಜ್ಞಕಾರ್ಯ ನಿರ್ವಿಘ್ನದಿನಡೆಸುತ ಅಗ್ನಿರೂಪದಿ ಪ್ರಜ್ವಲಿಸುವೆ ನೀ ॥ ಅ.ಪ. ॥

**ಮೇಘನಾಥ : ಹಾಡು** **ರಾಗ : ಮೋಹನ - ಆದಿತಾಳ**

ಪೋಗಿ ಬರ್ಪೆವು ಜವದೊಳಗೀಗ ಮಿಗೆ ಹರುಷದಲಿ ಬೇಗನೆ ತಹೆವು ॥ ಪ ॥
ಸುರಾಸುರರುತಾ । ನಮಗೆದಿರಾದೊಡೆ । ವರ ಅಶ್ವವನು ತರದೆ ಬಿಡೆನುನಾ ॥ ಅ.ಪ.॥
ಪರಮಪುರುಷನ ದಯೆಯೊಂದಿರುತಿರೆ ವರಯಾಗವನು ರಚಿಸುಜನಕನೇ ॥೧॥

## ದೃಶ್ಯ : ಯೌವನಾಶ್ವನ ದರ್ಬಾರ್

**ಯೌವನಾಶ್ವ : ವೃತ್ತ॥** **ರಾಗ : ನಾಟಿ**

ದೋರ್ದಂಡ ಪ್ರತಾಪಶೌರ್ಯದೊಳ್ । ಊರ್ವಿಯೊಳು ಮಿಗಲೆನಿಸಿ ಮೆರೆವ ।
ವರಭದ್ರಾಧೀಶನಾದ । ಎನಗೆ ಸಮರಾರಿಹರು ಧರೆಯೊಳ್

ಯೌವನಾಶ್ವ : ಹಾಡು　　　　ರಾಗ : ನಾಟಿ - ಆದಿತಾಳ

ಸಮರ ಕಾಣೆ ಜಗದೊಳ್ । ಸರಿಸಮರ ಕಾಣೆ ಜಗದೊಳ್ ॥
ಅಸಮಪ್ರಭವದಿ ವಿರಾಜಿಸುತಲಿಹ । ವಸುಮತೀಶ ಈ ಯೌವನಾಶ್ವನಿಗೆ ॥ ಪ ॥
ಸುರಪ್ರಭವವನು ಮೀರಿಮೆರೆಯುತಿಹ । ಉರುತರಭಾಗ್ಯದಿ ಸದಾ ಮೆರೆವನಾ ॥ ಅ ಪ

ಯೌವನಾಶ್ವ : ಹಾಡು　　　　ರಾಗ : ಹಂಸಧ್ವನಿ - ಆದಿತಾಳ

ನಿಲ್ಲಿ ನಿಲ್ಲಿ ನೀವ್ । ಖುಲ್ಲ ನೀಚರೆ । ಸೊಲ್ಲನಡಗಿಸುವೆ ಜವದೊಳಗೆ ॥ ಪ ॥
ಕಳ್ಳರಂದದಿ ಎಲ್ಲಿಗೊಯ್ವಿರಿ । ಬಲ್ಲಿದಶ್ವವನು ದುರ್ಮದಾಂಧರೆ ।
ಬಿಲ್ಲುಬಾಣದಿಂ ಗೋಣಮುರಿವೆನು । ನಿಲ್ಲದೆ ನಿಮ್ಮಯ ಸೊಲ್ಲನಡಗಿಪೆ ॥ ಅ ಪ ।

## ದೃಶ್ಯ : ಉದ್ಯಾನವನ

ಚಿತ್ರಾಂಗದೆ : ಹಾಡು　　　　ರಾಗ : ಶುಭಪಂತುವರಾಳಿ - ಝುಂಪೆತಾಳ

ಅಗಲಿಕೆಯ ಸಿಡಿಲೆರಗಿ । ದಹಿಸುತಿದೆ ದೇಹವಿದು
ಹಾರಲೆಳಸುವುದೆನ್ನ ಪ್ರಾಣಪಕ್ಷಿ ॥ ಪ ॥
ಕೈಲಾಸನಾಥನೆ ಕೈಮುಗಿದು ಬೇಡುವೆನು ।
ನಿನ್ನಯ ಕರುಣೆಯಿಂ । ವರಕೊಡುವುದೆನಗೆ ॥ ಅ.ಪ. ॥
ಪಾರ್ಥನಿರುವೆಡೆಯೊಳಿಹ ಕೊಳದಲ್ಲಿ ನೀರಾಗಿ ।
ಹಿಡಿದ ಕನ್ನಡಿಯಲ್ಲಿ ಜ್ಯೋತಿಯಾಗಿ । ಸವ್ಯಸಾಚಿಯ
ಗೃಹಾಂಗಣದಲ್ಲಿ ಬಯಲಾಗಿ । ಆತ್ಮವನು ಅರ್ಪಿಸುವ ಆಸೆ ಎನಗೆ ॥ ೧ ॥

## ದೃಶ್ಯ : ಬಭ್ರುವಾಹನನ ದರ್ಬಾರ್

ಬಭ್ರುವಾಹನ : ಹಾಡು　　　　ರಾಗ : ಕಲ್ಯಾಣಿ - ಆದಿತಾಳ

ಸಾಹಸದಿ ಸರಸದಿ ನಾಮೆರೆಯುವೆ । ಅತಿಗುಣನು ಬಲಯುತನು ॥ ಪ ॥
ಈ ಪರಮ ವಿಭವದಿ ನಿರತರಿಪುಬಲ ಪರಿಹರಿಸಿ ॥ ಅ.ಪ ॥
ಸಾರಸಾಕ್ಷ ಮುರಹರದಯದಿ । ವರಶೂರನಾಗಿ ಜಗದಲಿ ಮೆರೆವೆ ।
ಸಾರುಗಾಣಿಸುವ ಪಾಪ ನಾಶನನು । ಪಾವನಾತ್ಮಳಾ ಮಾತೆಯ ಬಲದಲಿ ॥ ೧ ॥

**ಬಭ್ರುವಾಹನ : ಕಂದ**

ಬಂಧಿಸಿರಿ ಆತುರಗವಂ । ಚಂದದಲಿ ಸಮರಕನುವು ಗೊಳಿಸಿ ॥
ಮುಂದೊದಗುವ ಸಮರ ದೋಳ್ ।
ನರನಂದಗೆಡಿಸುತಲಿ ಪೊಂದುವೆ ಜಯಶ್ರೀಯನಾ ॥

**ದೃಶ್ಯ : ಚಿತ್ರಾಂಗದೆ ಅಂತಃಪುರ**

**ಬಭ್ರುವಾಹನ : ಹಾಡು** **ರಾಗ : ಹಿಂದೋಳ - ಆದಿತಾಳ**

ಮಾತೆ ಮತಿವಂತೆಯೆ ಬಿಡುವ್ಯಥೆಯ । ಪ್ರಾತಳಾದ ನಿನ್ನಭಿಮತದಲಿ ।
ಸಂಪ್ರೀತಿ ಪಡೆವೆನಾ ಸದಾ ವಿಭವದಲಿ ॥ ಪ ॥
ಕದನದಲ್ಲಿ ಕಲಿನರನ ಶಿರವ ತರಿದಿಡುತ ಜಗದೊಳಗೆ ಮೆರೆಯುವೆನಾ ॥ ಅ.ಪ॥
ವೀರತನದಿಂದ ಶೌರ್ಯದಿ ರಾಜಿಸಿ । ಧೀರನಾಗಿ ಮೆರೆವೆ ಕರುಣೆಯಿಡು ॥ ೧ ॥

**ಚಿತ್ರಾಂಗದೆ : ಹಾಡು** **ರಾಗ : ಷಡ್ವಿದಮಾರ್ಗಣೆ - ಝಂಪೆತಾಳ**

ಏನಮಾಡಿದೆ ಈಗ ರಾಜ ವಂಶದಿ ಜನಿಸಿ ।
ದಾನವರ ಮತವಿದುವೆ ನಿನ್ನೊಳಾಯ್ತು ॥ ಪ ॥
ಧರೆಯೊಳಗೆ ಜನಕನಿಗೆ । ಅಪಯಶವ ತರುವಂತ ।
ಸುತನಿರಲು ಈ ಜಗವು ಶೂನ್ಯವಲ್ತೆ ॥ ಅ.ಪ. ॥
ಪರಮಪುರುಷನು ಆ ಮಾಧವನ ಚರಣದಲಿ ।
ಮನವಿಡುತ ಪಿತನನ್ನು ಸೇವಿಸುವುದುಚಿತವಿದು ॥ ೧ ॥

**ದೃಶ್ಯ : ಯುದ್ಧಶಿಬಿರ**

**ಬಭ್ರುವಾಹನ : ಹಾಡು** **ರಾಗ : ರಂಜಿನಿ - ಆದಿತಾಳ**

ಭಾರತ ಭೂಮಿಯ ಧರ್ಮಜನನು ಜರೆ ।
ಸಾರಿದಿರೀ ಯಜ್ಞಾಶ್ವದ ರಕ್ಷಣೆಗೆ ॥ ಪ ॥
ಘೋರಕಾರ್ಯವ ಗೈದಿಹೆನಾನು ।

ವಿಚಾರವರಿಯದೆ ದುಡುಕುತನದಲಿ ॥ ಅ.ಪ. ॥

ದೈವ ಸಮಾನರು । ರಣಭೀಕರರು ।
ಮಾಧವಸಖರು । ಮಮ ಪಿತರು ॥ ೧ ॥
ಪರಿಯನು ಅರಿಯದೆ । ತರಳನು ಗೈದಿಹ ।
ಉರುತರ ಕಾರ್ಯವ । ಮನ್ನಿಪುದು ಚಿತವು ॥ ೨ ॥

**ಅರ್ಜುನ : ಹಾಡು** **ರಾಗ : ಹಂಸಧ್ವನಿ - ಆದಿತಾಳ**

ನಾಕುದುರುಳನೆ ಕಠೋರ ವಚನವಿದು । ಮಹಿಯೊಳಗೆ ಸಹಿಸುವೆನೆ ॥ ಪ ॥
ಜಾರತನದಲಿ ಜನ್ಮವತಳೆದಿಹೆ । ಜಾರಸುತ ನೆನಿಸಗೀ ।
ಛಲವೆ । ಮೀರಿ ನುಡಿದೊಡನೆ ತಲೆ ಹಾರಿಸುತೀಗಲೇ ।
ಕೃತಾಂತ ನಗರಿಗೆ ವಶವನು ಮಾಡುವೆ ॥ ಅ.ಪ. ॥
ವೇಶ್ಯಕುಲದಿ ಸಂಭವಿಸಿದೆ ದೂರ್ತನೆ । ಚಂದ್ರ ವಂಶ ಕುಲಜನಲ್ಲನೀ ॥
ಕುರುಸಂಗ್ರಾಮದಿ ಮರಣವಾಂತ । ಅಭಿಮನ್ಯು ಕುವರನಲ್ಲದೆ ಪೆರರಲ್ಲವು ॥ ೧ ॥

## ದೃಶ್ಯ : ರಣರಂಗ

**ಸೀಸಪದ್ಯಗಳು** **ರಾಗಮಾಲಿಕೆ**

ಬಭ್ರುವಾಹನ : ವಿಶ್ವ ವಿಧ್ವಂಸಕ ಪ್ರಳಯಾಗ್ನಿ ಕುಂಡದಿಂ ।
ಸಿಡಿದೆದ್ದು ಲೋಕಗಳನೆಲ್ಲ ಸುಡುವ ।
ಮಂತ್ರ ಸಿದ್ದ ಮಹಾಸ್ತ್ರವೃಷ್ಟಿಯಂ
ಸೃಷ್ಟಿಸುವ ಶಕ್ತಿ ಎನಗಿದೆ ರಣಶಕ್ತನಾನಾಗಿಹೆ ॥

ಅರ್ಜುನ : ಕುರುಕ್ಷೇತ್ರ ರಣಭುವಿಯೋಳ್ ಅನಮವೀರರಂ
ಕಡಿದಿಹ ಪಾಶುಪತ ಬ್ರಹ್ಮಾಸ್ತ್ರಗಳಂ
ಆರ್ಜಿಸಿಹ ಎನ್ನೊಳು ಕದನವು ಸದರವೆ ಮೂಢಾ ॥

ಬಭ್ರುವಾಹನ : ಪಾಶುಪತ ಬ್ರಹ್ಮಶಿರ ನಾರಾಯಣಾಸ್ತ್ರಗಳಂ
ಗೆಲ್ವ ದಿವ್ಯಾಸ್ತ್ರವಂ ಆರ್ಜಿಸಿಹೆ ಪಾರ್ಥ

ಕ್ಷಣದೋಳ್ ನಿನ್ನಯ ಮದವನಡಗಿಸದೆ
ಬಿಡನು ಈ ಚಿತ್ರಾಂಗದಾಸೂನು ॥

**ಅರ್ಜುನ :** ಜಾರಪುತ್ರನಿಗೆ ಈ ವಿದದ ಘೋರ ಪ್ರತಾಪವು ಅಸಹಜವು ।
ಅನಾಚಾರಿಯೆ ನಿಲ್ಲಿಸು ನಿನ್ನೀ ದುರುಳತನದ ನುಡಿಯ ।
ಸೈರಿಸೀ ನರನ ಶರಾಘಾತವ ॥

## ದೃಶ್ಯ : ನಾಗಲೋಕ

**ಉಲೂಪಿ : ಹಾಡು** **ರಾಗ : ಕೇತಾರಗೌಳ - ಆದಿತಾಳ**

ವರಶಕ್ತಿ ಪರಿಪಾಲಿಸೌ ದೇವಿ । ದುರಿತನಿವಾರಿಣಿ ।
ಪಾಪವಿಮೋಚಿನಿ । ಸಕಲ ಲೋಕಜನ । ಮುಕ್ತಿ ಪ್ರದಾಯಿನಿ ॥ ಪ ॥
ಸುರನರ ಸೇವಿತೆ ವರಸರ್ವೇಶ್ವರಿ । ಗರಳ ಕಂದರ ಈಶಮನೋಹರಿ ॥ ಅ.ಪ. ॥
ಮಂಗಳಾಂಗಿಯೆ ನಿನ್ನ ಇಂಗದೆ ಭಜಿಸುವೆ ಸಂಗಮೇಶ್ವರ ನಂಗನೆಯೆ ॥ ೧ ॥
ತುಂಗ ಕಲಿತವರ ಭೃಂಗ ಕುಂತಳೆ । ಲಿಂಗರಾಜ ಕವಿ ಪರಿಪಾಲಿಪಳೆ ॥ ೨ ॥

## ದೃಶ್ಯ : ರಣರಂಗ (ಮತ್ತೊಂದು ಭಾಗ)

**ಭೀಮ : ಹಾಡು** **ರಾಗ : ಕಾನಡ - ಆದಿತಾಳ**

ಏಕೆ ನಿರ್ದಯನಾದೆ ಶ್ರೀಕಾಂತಹರಿಯೆ ।
ಸಾಕೆನಿಸಲಿಲ್ಲವೆ ಭೂಭಾರಹರಣ ॥ ಪ ॥
ಪಾಕಶಾಸನ ಸುತನ । ತನಯನ ಮೇಲಿನ್ನು
ಬೇಕಾಯಿತೇ ಸಮರ ನಿನಗಿನ್ನು ದೇವ ॥ ಅ.ಪ. ॥
ವೀರಭಿಮನ್ಯು ಘಟೋದ್ಗಜರಳಿದಿಹರು ।
ವಾರುಗಾಣದ ಬಾಂಧವರೆಲ್ಲ ಮಡಿದಿಹರು ॥ ೧ ॥
ಈ ರಣದಲಿ ನನ್ನ ಅನುಜನು ಮಡಿದನೆ ।
ಸಾರಸಾಕ್ಷನೆ ಹರಿಯೆ ರಕ್ಷಿಸುನನ್ನನು ॥ ೨ ॥

**ಕೃಷ್ಣ : ಕಂದ**

ವೀರಸುತನೀ ಬಭ್ರುವಾಹನ
ಭಾರತದ ಗಂಭೀರ ಸದ್ಗುಣ

ವಿಚಾರವರಿಯದೆ ದುಡುಕುತನದಲಿ ॥ ಅ.ಪ. ॥
ದೈವ ಸಮಾನರು । ರಣಭೀಕರರು ।
ಮಾಧವಸಖರು । ಮಮ ಪಿತರು ॥ ೧ ॥
ಪರಿಯನು ಅರಿಯದೆ । ತರಳನು ಗೈದಿಹ ।
ಉರುತರ ಕಾರ್ಯವ । ಮನ್ನಿಪುದು ಚಿತವು ॥ ೨ ॥

**ಅರ್ಜುನ : ಹಾಡು** **ರಾಗ : ಹಂಸಧ್ವನಿ - ಆದಿತಾಳ**

ನಾಕುದುರುಳನೆ ಕಠೋರ ವಚನವಿದು । ಮಹಿಯೊಳಗೆ ಸಹಿಸುವೆನೆ ॥ ಪ ॥
ಜಾರತನದಲಿ ಜನ್ಮವತಳೆದಿಹೆ । ಜಾರಸುತ ನೆನಿಸಗೀ ।
ಛಲವೆ । ಮೀರಿ ನುಡಿದೊಡನೆ ತಲೆ ಹಾರಿಸುತೀಗಲೇ ।
ಕೃತಾಂತ ನಗರಿಗೆ ವಶವನು ಮಾಡುವೆ ॥ ಅ.ಪ. ॥
ವೇಶ್ಯಕುಲದಿ ಸಂಭವಿಸಿದೆ ದೂರ್ತನೆ । ಚಂದ್ರ ವಂಶ ಕುಲಜನಲ್ಲನೀ ॥
ಕುರುಸಂಗ್ರಾಮದಿ ಮರಣವಾಂತ । ಅಭಿಮನ್ಯು ಕುವರನಲ್ಲದೆ ಪೆರರಲ್ಲವು ॥ ೧ ॥

## ದೃಶ್ಯ : ರಣರಂಗ

**ಸೀಸಪದ್ಯಗಳು** **ರಾಗಮಾಲಿಕೆ**

**ಬಭ್ರುವಾಹನ :** ವಿಶ್ವ ವಿಧ್ವಂಸಕ ಪ್ರಳಯಾಗ್ನಿ ಕುಂಡದಿಂ ।
ಸಿಡಿದೆದ್ದು ಲೋಕಗಳನೆಲ್ಲ ಸುಡುವ ।
ಮಂತ್ರ ಸಿದ್ಧ ಮಹಾಸ್ತ್ರವೃಷ್ಟಿಯಂ
ಸೃಷ್ಟಿಸುವ ಶಕ್ತಿ ಎನಗಿದೆ ರಣಶಕ್ತನಾನಾಗಿಹೆ ॥

**ಅರ್ಜುನ :** ಕುರುಕ್ಷೇತ್ರ ರಣಭುವಿಯೋಳ್ ಅಸಮವೀರರಂ
ಕಡಿದಿಹ ಪಾಶುಪತ ಬ್ರಹ್ಮಾಸ್ತ್ರಗಳಂ
ಆರ್ಜಿಸಿಹ ಎನ್ನೊಳು ಕದನವು ಸದರವೆ ಮೂಢಾ ॥

**ಬಭ್ರುವಾಹನ :** ಪಾಶುಪತ ಬ್ರಹ್ಮಶಿರ ನಾರಾಯಣಾಸ್ತ್ರಗಳಂ
ಗೆಲ್ವ ದಿವ್ಯಾಸ್ತ್ರವಂ ಆರ್ಜಿಸಿಹೆ ಪಾರ್ಥ

ಕ್ಷಣದೊಳ್ ನಿನ್ನಯ ಮದವನಡಗಿಸದೆ
ಬಿಡನು ಈ ಚಿತ್ರಾಂಗದಾಸೂನು ॥

**ಅರ್ಜುನ :** ಜಾರಪುತ್ರನಿಗೆ ಈ ವಿದದ ಘೋರ ಪ್ರತಾಪವು ಅಸಹಜವು ।
ಅನಾಚಾರಿಯೆ ನಿಲ್ಲಿಸು ನಿನ್ನೀ ದುರುಳತನದ ನುಡಿಯ ।
ಸೈರಿಸೀ ನರನ ಶರಾಘಾತವ ॥

## ದೃಶ್ಯ : ನಾಗಲೋಕ

**ಉಲೂಪಿ : ಹಾಡು** **ರಾಗ : ಕೇತಾರಗೌಳ - ಆದಿತಾಳ**

ವರಶಕ್ತಿ ಪರಿಪಾಲಿಸೌ ದೇವಿ । ದುರಿತನಿವಾರಿಣಿ ।
ಪಾಪವಿಮೋಚಿನಿ । ಸಕಲ ಲೋಕಜನ । ಮುಕ್ತಿ ಪ್ರದಾಯಿನಿ ॥ ಪ ॥
ಸುರನರ ಸೇವಿತೆ ವರಸರ್ವೇಶ್ವರಿ । ಗರಳ ಕಂದರ ಈಶಮನೋಹರಿ ॥ ಅ.ಪ. ॥
ಮಂಗಳಾಂಗಿಯೆ ನಿನ್ನ ಇಂಗದೆ ಭಜಿಸುವೆ ಸಂಗಮೇಶ್ವರ ನಂಗನೆಯೆ ॥ ೧ ॥
ತುಂಗ ಕಲಿತವರ ಭೃಂಗ ಕುಂತಳೆ । ಲಿಂಗರಾಜ ಕವಿ ಪರಿಪಾಲಿಪಳೆ ॥ ೨ ॥

## ದೃಶ್ಯ : ರಣರಂಗ (ಮತ್ತೊಂದು ಭಾಗ)

**ಭೀಮ : ಹಾಡು** **ರಾಗ : ಕಾನಡ - ಆದಿತಾಳ**

ಏಕೆ ನಿರ್ದಯನಾದೆ ಶ್ರೀಕಾಂತಹರಿಯೆ ।
ಸಾಕೆನಿಸಲಿಲ್ಲವೆ ಭೂಭಾರಹರಣ ॥ ಪ ॥
ಪಾಕಶಾಸನ ಸುತನ । ತನಯನ ಮೇಲಿನ್ನು
ಬೇಕಾಯಿತೇ ಸಮರ ನಿನಗಿನ್ನು ದೇವ ॥ ಅ.ಪ. ॥
ವೀರಭಿಮನ್ಯು ಘಟೋದ್ಗಜರಳಿದಿಹರು ।
ಪಾರುಗಾಣದ ಬಾಂಧವರೆಲ್ಲ ಮಡಿದಿಹರು ॥ ೧ ॥
ಈ ರಣದಲಿ ನನ್ನ ಅನುಜನು ಮಡಿದನೆ ।
ಸಾರಸಾಕ್ಷನೆ ಹರಿಯೆ ರಕ್ಷಿಸುನನ್ನನು ॥ ೨ ॥

**ಕೃಷ್ಣ : ಕಂದ**

ವೀರಸುತನೀ ಬಬ್ರುವಾಹನ
ಭಾರತದ ಗಂಭೀರ ಸದ್ಗುಣ

ಸಾರಮಹಿಮ ಶಕ್ತನು ನಿಜಸುತನೆಂದೀ
ಪಾರ್ಥನರಿಯದೆ । ಜಾರಸುತನೆಂದು ಜರಿದನು
ಈ ಪಾರ್ಥನಿಗೆ ಯಾರ ವಿಚಾರ ಪರಿವುದೋ ಭೀಮ

**ಬಭ್ರುವಾಹನ : ಹಾಡು** **ರಾಗ : ಸಿಂಧುಬೈರವಿ - ಆದಿತಾಳ**

ಏತಕೆ ಧರಿಸಿದೆ ಗರ್ಭದಿ ಮಾತೆ ।
ಪಾತಕಿ ಪಾಂಡವ ಕುಲಹಂತಕನ ।
ಭೀತಿ ಮರೆತ ಖಳಘಾತಕನಾ । ನೀತಿಯಳಿದ ಪಿತೃಘಾತಕನಾ ॥ ಪ ॥
ಪಾರ್ಥಿವ ಧರ್ಮದ ಬಾಳನು ಬಯಸುತ ।
ಆರ್ಜಿಸಿದೆನು ಈ ರಣರಂಗವನು ॥ ಅ.ಪ. ॥
ಧೂರ್ತ ತನದಿ ಪರಮಾರ್ಥವ ಮರೆಯುತ ।
ಅನರ್ಥ ಸಂಭವಿಸಿತೇ । ಪಾಪಿಯಾದೆನಗೆ ॥ ೧ ॥

**ಉಲೂಪಿ : ಸಾಕಿ** **ರಾಗ : ಪಂತುವರಾಳಿ**

ಎನ್ನ ಲೋಕದಿ ಸನ್ನುತಿಯ ಮಣಿಯೊಂದ ತಂದಿಹೆನು ।
ದೇವಾ ನಿನ್ನ ಪಾದಕೆ ಅರ್ಪಿಸುವೆನೀ ಸಂಜೀವಿನಿಯಿಂ ರಕ್ಷಿಪುದು ಕಾಂತನಂ ।

**ಮಂಗಳಂ**

**ರಾಗ : ಚಕ್ರವಾಕ - ಅಟ್ಟತಾಳ**

ವಿಜಯಿಸುನೀ ವಿಜಯಿಸುನೀ । ಕನ್ನಡ ಕುಲಜನನೀ ।
ಸುಜನಾವಳಿ ಸಂಶೋಭಿತೆ ಕರ್ನಾಟಕ ರಾಣಿ ॥ ಪ ॥
ಮಳೆಗರೆಯಲಿ ಬೆಳೆ ಬೆಳೆಯಲಿ । ಎಲ್ಲೆಡೆ ಸಮೃದ್ಧಿ ।
ತಿರೆ ತಣಿಯಲಿ ಜನನಲಿಯಲಿ ಮೆರೆಯಲಿ ಸದ್ಬುದ್ಧಿ ॥ ೧ ॥
ಹರಿಹರರದ್ವಯರೂಪದೆ । ಪೊರೆಯಲೆಮ್ಮ ನಿರತ ।
ಭಾರತಾವನಿ ಚಿರಬೆಳಗಲಿ । ಭುವನದಿ ವಿಖ್ಯಾತ ॥ ೨ ॥



# ಚಂದ್ರಹಾಸ



ರಂಗಭೂಮಿಯ ಆಲ್‌ರೌಂಡರ್
**ಹೆಚ್.ಕೆ. ಯೋಗಾನರಸಿಂಹ**



ಶ್ರೇಷ್ಠ ಖಳನಾಯಕ
**ಹೆಚ್.ಟಿ. ಅರಸ್**

**ಪ್ರಾರ್ಥನೆ : ಹಾಡು** **ರಾಗ : ಭೀಮಪಲಾಸ್ - ಆದಿತಾಳ**

ದೇವಿ ಭುವನ ಮನ ಮೋಹಿನಿ । ನಿರ್ಮಲ ಸೂರ್ಯ ಕರೋಜ್ವಲ
ಧರಣಿ ಜನಕ ಜನನಿ ಜನನಿ ॥ ಪ ॥
ನೀಲ ಸಿಂಧುಜಲಪಾತ ಚರಣತವ । ಅನಿಲವಿ ಕಂಪಿತ
ಶ್ಯಾಮಲಾಂಚರ । ಅಂಬರ ಚುಂಬಿತ ವಾಹಿ ಹಿಮಾಚಲ
ಶುಭ್ರ ಕುಷಾರ ಕಿರೀಟನೇ ॥ ೧ ॥
ಪ್ರಥಮ ಪ್ರಭಾತ ಉದಿತವ ಗಣನೇ । ಪ್ರಥಮ ನಾಮರವ
ತವ ತಪೋವನೇ । ಪ್ರಥಮ ಪ್ರಸಾರಿಕ । ತವವಸ ಭವನೇ ।
ಧರ್ಮಮತ ಕಾವ್ಯಕಾರಿಣೇ ॥ ೨ ॥
ಚಿರಕಲ್ಯಾಣ ಮಹೀತುಮಿಧನ್ಯೆ । ದೇಶವಿದೇಶ ವಿಕಲಿತ ಅನ್ಯೆ ।
ಜಾಹ್ನವಿಜಮುನಾವಿಕ ಲಿತ ಕರುಣ । ಪುಣ್ಯ ಪಿಯೂಷಸ್ತನ್ಯವಾಹಿನೀ ॥

## ದೃಶ್ಯ : ರಸ್ತೆ

**ಸೂತ್ರಧಾರ : ವೃತ್ತ॥** ರಾಗ : ....

ಕ್ಷೀರಾಂಭೋದಿಶಯನಂ ಸುರೇಡ್ಯಚರಿತಂ ಕಾರುಣ್ಯ ರತ್ನಾಕರಂ ।
ರಾರಾಜತ್ಕಮನೀಯ ಕೌಸ್ತುಭಧರಂ ಧೀರಂ ಮುರಾರಿಂವರಂ ॥
ನೀರೇಜಾಕ್ಷಮನಂತಮಾದಿಪುರುಷಂ ಶ್ರೀ ರಾಜಿತೋರಸ್ಥಲಂ ।
ತೋರುತಂಕೃಪೆಯಂ ಸದಾಪೊರೆಯೆ ತಾಂ ನಾರಾಯಣಂ ಸಾದರಂ ॥

**ಸೂತ್ರಧಾರ : ಹಾಡು** **ರಾಗ : ಕಮಾಚ್ - ಆದಿತಾಳ**

ನರಹರಿ ನಿನ್ನ ನಂಬಿದೆ । ಸುರೇಶ ॥ ಪ ॥
ಮಧುಸೂದನ ಶ್ರೀ । ವಧುವರ ಸನ್ನುತ ।
ಸದಯದಿಂದೆನ್ನಯ । ಹೃದಯದಿಪಾಲಿಸು ॥ ೧ ॥
ಸುರವರವಿನುತನೆ । ಪರಮದಯಾಕರ ।
ಕರುಣಿಸುಯಮ್ಮನು । ಸರಸಿಜನೇತ್ರನೆ ॥ ೨ ॥
ಕಾಮಿತದಾಯಕ । ಚಾಮನೃಪಾಲಕ ।
ಪ್ರೇಮತನುಜಕೃಷ್ಣ । ಭೂಮಿಪತಿಯಪೊರೆ ॥ ೩ ॥

**ಅಥವಾ**

**ಸೂತ್ರಧಾರ : ಹಾಡು** **ರಾಗ : ಹಿಂಧೋಳ - ರೂಪಕತಾಳ**

ನೀರಜಾಕ್ಷಿ ಕಾಮಾಕ್ಷಿ
ನೀರದಚಿಕುರೇತ್ರಿಪುರೇ ॥ ಪ ॥
ಶಾರದಮಾನಯನೇ ಸಾರಸ ಚಂದ್ರಾನನೇ
ನೀರಜಪದೇ ವರದೇ ತಾರಯಮಾಂ ತತ್ತ್ವಪದೇ ॥ ಅ.ಪ. ॥
ಗೌರೀ ಹಿಂದೋಳಾದ್ಯುತಿ ಹೀರಮಣಿಮಯಭರಣೇ
ಶೌರಿ ವಿರಂಚಿ ವಿನುತ ಶಿವಶಕ್ತಿಮಯ ನವಾವರಣೇ
ನಾರೀ ಮಣ್ಯಾದ್ಯಾರ್ಚಿತ ನವನಾದಾಂತಃಕರಣೇ
ಸೂರಿಜನ ಸಂಸೇವಿತೆ ಸುಂದರ ಗುರುಗುಹ ಕರಣೇ ॥ ೧ ॥

**ನಟಿ : ಹಾಡು** **ರಾಗ : ತೋಡಿ - ರೂಪಕತಾಳ**

ಶೋಭಿಪಂ ಮಾಧವಂ ಶುಭಂ । ತಾಂವಿನೋದದಿಂದಂ ॥ ಪ ॥
ಸೂರಮಾರನೊಂದಿಗೆ ಸೇರಿ । ನಿರುತ ಸಂತಸದೊಳು ॥ ಅ.ಪ. ॥
ಮಾರಗೇಳಿಯೊಳು । ಮೀರಿಬಳಲಿರುವ । ನೀರಜಾಕ್ಷಿಯರು ।
ಸ್ಮರಂ । ಭರದಿನಿರುತ । ನುತಿಪರ್ ॥ ೧ ॥
ಪಾರಿಜಾತದೊಳು । ಸೇರಿಯಳಿಗಣವು । ಪೂರಸಂಗುಡಿಯು ।
ಪರಂಪರೆಯು । ಸರನೆ ನೆರೆಯೆ ॥ ೨ ॥

ಚೂತವೃಕ್ಷದೊಳು । ಕಾಂತೆಯೊಡನಿರುವ । ಕಾಂತಕೋಗಿಲೆಯು ।
ರುತಂ ಸತತವತಿಹಿತಕರಂ ॥ ೩ ॥

## ದೃಶ್ಯ : ಮೇಧಾವಿ ಮಹಾರಾಜನ ದರ್ಬಾರ್

**ಮೇಧಾವಿ : ಹಾಡು** **ರಾಗ : ಬಿಲಹರಿ - ರೂಪಕತಾಳ**

ಮಂತ್ರಿ । ವರಕಾರ್ಯತಂತ್ರೀ ನೀಂ । ಪೇಳ್ ಧರೆಯ ಸೌಖ್ಯವ ॥ ಪ ॥
ಇಳೆಯೊಳೆಲ್ಲ । ಮಳೆಗಳಾಗಿ । ಫಲವಿಶೇಷದಿಂ । ತಳೆದು ಸುಖವೆ ॥
ನಲೆ ವಿಲಾಸ । ದೊಳು ಜನರೇಂ । ನಲಿವರೆ ಪೇಳ್ ॥ ೧ ॥
ನರರು ನಿರುತ । ಪರಮಧರ್ಮಾ । ಚರಣೆಯಿಂದಲಿ ।
ಮುರಹರನ ಚರಣವನಾ । ದರದಿ ಭಜಿಸು ।
ತಿರುವರೇ ಪೇಳ್ ಮಂತ್ರೀ ॥ ೨ ॥
ಮಂತ್ರಿವರ್ಯನೇ ! ನಮ್ಮ ರಾಜ್ಯವೆಲ್ಲವೂ
ಸುಭಿಕ್ಷವಾಗಿ ಜನರು ಸುಖದಿಂದಿರುವರೆ ?

**ಮಂತ್ರಿ : ಹಾಡು** **ರಾಗ : ಹಿಂದೂಸ್ಥಾನಿ - ಆದಿತಾಳ**

ಭುವನಾಧೀಶನೆ । ಭೂರಿವಿಲಾಸನೆ । ಅವಧರಿಸೈ ಮುದದಿಂ ॥ ಪ ॥
ವಿವರಿಪೆ । ರಾಜ್ಯದಿರವಂ । ರಾಜೀವಸಖಸಮ । ತೇಜೋವಿಲಸಿತನೇ ॥ ಅ.ಪ. ॥
ನಿತ್ಯೋತ್ಸವದಿಂ । ರಾಜಿಪುದೈಪ್ರಜೆ । ಯುತ್ಸಾನಂದದಲಿ । ಸುವಿಮಲ ।
ಸತ್ಯಧರ್ಮದಿ । ಸಮಸ್ತರಿಳೆಯೊಳು । ನುತ್ತ್ವರಸಿಸುತಿಹರ್ಪ ॥ ೧ ॥
ಕಾಲಾನುಕೂಲವಿ । ಶಾಲವೃಷ್ಟಿಗಳಿಂ । ಮೇಲಸೆ ಫಲವಾಂತು ।
ಪ್ರಜೆಗಳು । ಲೀಲೆಯಿಂವನ । ಮಾಲಾಧರನವಾದ । ಸಾಳೀಕವ ಭಜಿಪರ್ ॥ ೨ ॥

**ಮೇಧಾವಿ : ಹಾಡು** **ರಾಗ : ಬಿಲಹರಿ - ರೂಪಕತಾಳ**

ಪೇಳೈ । ಸೈನ್ಯಾಧಿನಾಥನೆ । ಸೈನ್ಯದ ರೀತಿಯ ॥ ಪ ॥
ಶತ್ರುಭೂಪರ । ನ್ನೊತ್ತಿಸೈನ್ಯವು । ಮುತ್ತಿಪಿಡಿಯುತ ।
ಲೆತ್ತಲು । ಮಿತ್ರರಂತೆಮಾ । ಡುತ್ತಲಿಹುದೆ ಬಿತ್ತರಿಸುತೆ ।
ಕೀರ್ತಿಯೆನೀಂ । ಪೇಳೈ ॥ ೩ ॥

**ಸೈನ್ಯಾಧಿಪತಿ : ಹಾಡು** **ಹಿಂದೂಸ್ಥಾನಿಕಾಪಿ - ಆದಿತಾಳ**

ಲಾಲಿಸು ನೃಪತೀ । ಪೇಳುವೆ ಸುಮತೀ । ಲೀಲೆಯಿಂದ ಸೈನ್ಯದ ಪರಿಯಂ ॥ ಪ ॥
ಅರಿನರಪರಶಿರ । ಮುರಿಯುತೆ ಧುರದಲಿ । ಸುರುಚಿರತರ ಸಿರಿಗಳ ತಂದು ।
ಸುರೇಂದ್ರ ವಿಭವ । ನರೇಂದ್ರ । ವಿಭುವೆ । ವಿರೋಧಿ ನಿಕರವ ನಳಿದಿಹುದೈ ।
ಪಿಡಿಯುತೆ । ಕೆಡುಕರ । ಪಡೆಗಳ । ಬಿಡದುರೆ । ಕಡಿಯುತೆ ।
ಪೊಡವಿಯೊಳಗಡಿಗಂ ॥ ಶುಭೋದಯದಿಂದು । ಸುಭಾವದೆ
ನಿಂದು । ವಿಭಾವ ಸುಪ್ರಭಮೆರೆಯುವುದೈ ॥ ೨ ॥

## ದೃಶ್ಯ : ವಿಷ್ಣುಮಂದಿರ

**ಮೇಧಾವಿ, ಚಿತ್ರಭಾನು : ಹಾಡು** **ರಾಗ : ರಂಜನಿ - ರೂಪಕತಾಳ**

ಪಾಲಿಸೋ ತಂದೆಯೆ ।
ಪಾಮರರಾದೆಮ್ಮ ॥ ಪ ॥
ಬಳಲುತಿಹೆವು ಭವದೀ
ಗತಿ ಹೀನರಾದೆವು ಜಗದೀ
ಮುದವನೀಡು ಮಾಧವ
ಅನವರತವು ನಿನ್ನ ನಂಬಿಹೆವು ದೇವಾ ॥ ೧ ॥

## ದೃಶ್ಯ : ಕುಂತಳನಗರ ಹೊರವಲಯ

**ದಾದಿ : ಹಾಡು** **ರಾಗ : ಧರ್ಮವತಿ - ಆದಿತಾಳ**

ಅಳದೆಲೆ ಮಲಗೊ ಹಾಯಾಗಿ ಕಂದ
ತೊಳಲದಿರೋ । ಶ್ರೀಹರಿಕೃಪೆಯಿಂದ ॥ ಪ ॥
ತಂದೆ ಮಹಾರಾಜ । ತಾಯಿ ಮಹಾರಾಣಿ ।
ಆದೊಡೇನು ನೀ ತಬ್ಬಲಿಯಾದೆ ॥ ಅ.ಪ. ॥
ಕಂದ ನೀನು ಕಣ್ದೆರೆದಾಡುವ ಮುನ್ನ
ಕ್ರೂರವಿಧಿಗೆ ನೀ ಗುರಿಯಾದೆ ॥
ನಿನ್ನವರಾರಿಲ್ಲ ಅನ್ಯರುಗತಿಯಿಲ್ಲ
ಇನ್ನು ನಾರಾಯಣನೆ ನಿನ್ನವನಯ್ಯ॥ ೧ ॥

**ದಾದಿ : ಹಾಡು** **ರಾಗ :**

ಅಳಲದೆ ಮಲಗೋ ಹಾಯಾಗಿ ಕಂದ
ಹಾಡುವೆನೋ ಎನ್ನಂತ್ಯದ ಜೋಗುಳ ಗೀತೆಯೊಂದ ॥ ಪ ॥
ವಿಷವಾದರು ನಿನಗೆ ಅಮೃತವಾಗಲಿ ।
ಕೊಲ್ಲ ಬಂದವರೇ ಕಾಪಾಡಲಿ ॥
ದೈವಬಲವೇ ವಜ್ರಕವಚವಾಗಲಿ ।
ಇರುವೆಡೆಯೇ ತಾಯ್ ಮಡಿಲಾಗಲಿ ॥
ಧರ್ಮ ಪೊರೆಯಲೀ - ಸತ್ಯ ಉಳಿಸಲಿ - ಶುಭವಾಗಲಿ ॥ ೧ ॥

**ಬಾಲಚಂದ್ರಹಾಸ : ಹಾಡು** **ರಾಗ : ಸಂಕ್ರಂದನ ಪ್ರಿಯ - ಆದಿತಾಳ**

ಬಾ ತಂದೆ ನಾರಾಯಣಾ ।
ಬಾ ನೋಡು ನಿನ ಕಂದನಾ ।
ಕರುಣಾ ಘನ, ಕೃಪೆ ಮಾಡೀದಿನ ।
ನಿನ್ನ ಕಾಣದೆಲೆ ಇಂದು ಹಿಂದಿರುಗೆನಾ ॥
ತಂದೆ ನೀನೆಂದು । ಬಂದೆ ನಾನಿಂದು
ಈ ಕಂದನ ಇಂದು ಸಂತೈಸೆಯಾ ॥

**ಪರಪುಟ್ಟ, ಬಾಲಚಂದ್ರಹಾಸ ಮತ್ತು ಬಾಲಕರು : ಶ್ಲೋಕ ಮತ್ತು ಹಾಡು**

ಗುರುಬ್ರಹ್ಮಾ ಗುರು ವಿಷ್ಣು । ಗುರುದೇವೋ ಮಹೇಶ್ವರಃ ।
ಗುರು ಸಾಕ್ಷಾತ್ ಪರಬ್ರಹ್ಮ ತಸ್ಮೈ ಶ್ರೀ ಗುರವೇ ನಮಃ ॥

**ರಾಗ : ಭೀಮಪಲಾಸ್**

ಮಹಾಗುರು ದೇವಶರಣು । ಮಹಾಮಹಿಮ ಜ್ಞಾನಧಾಮ ಶರಣು
ಲೋಕ ಸತ್ಯ ಸಂದರ್ಶನ । ನಿತ್ಯಾನಿತ್ಯ ವಿವೇಚನ ।
ಭವ ತಾಪಪಾಪಗಳ ದಮನ । ಅದ ತಿಳಿಯೆ ಗುರು ನೀ ಕಾರಣ ॥

## ದೃಶ್ಯ : ದುಷ್ಟಬುದ್ಧಿಯಮನೆ

**ದುಷ್ಟಬುದ್ಧಿ : ಕಂದ**

ಈ ಪುರದೊಳೆನಿತಿಲ್ಲ ಅನಾಥರಾಗಿಹ ಬಾಲ
ರೀ ಪರಿಯೊಳೆತ್ತಣವ
ಅರಸುತನೆಂದರಿಯೆವು ಈ ಪಸುಳೆಯಂ
ರಾಜ್ಯ ಕಾರ್ಯದೊಳಗಿಹೆ ಇದರ ಚಿಂತೆನಮಗೇಕೆ

## ದೃಶ್ಯ : ಅರಣ್ಯ

**ಚಂದ್ರಹಾಸ : ಶ್ಲೋಕ ಮತ್ತು ಹಾಡು** **ರಾಗ : ಖರಹರಪ್ರಿಯ**

ವಂದೇ ನೀಲಸರೋಜ ಕೋಮಲರುಚಿಂ । ವಂದೇ ಜಗದ್ವಂದಿತಂ ।
ವಂದೇ ಸಾಧಕ ವಂಚಕಗ್ರಹಗಣಂ ವಂದೇ ಜಗತ್ಕಾರಣಂ ॥

**ರಾಗ : ಸಂಕ್ರಂದನಪ್ರಿಯ**

ವಂದೇ ಪೀರ ದುಕೂಲಮಂಬುವ ನಿಭಂ । ವಂದೇ ಜಗನ್ಮೋಹನಂ ।
ವಂದೇ ತಾರಕ ಪೀರ ಮಧ್ಯನಿಲಯಂ । ವಂದೇ ಸದಾ ಮಾಧವಂ ॥

**ರಾಗ : ಸಂಕ್ರಂದನಪ್ರಿಯ - ಆದಿತಾಳ**

ಬಾ ತಂದೆ ನಾರಾಯಣ । ಶರಣಾಗತ ಪಾಲನ । ಭವತಾರಣ ।
ಹೇಕರುಣಾ ಘನ । ನೀ ಕಾಪಾಡು ಕಾಪಾಡು ಕಲಿನಾಶನ ॥

**ರಾಗ : ಹಂಸಾನಂದಿ - ಆದಿತಾಳ**

ಜೀವಕೋಟಿಗಳ ಯಾತ್ರೆಯೊಳು । ಭಾವಪ್ರಭಾವದ ಮಧ್ಯದೊಳು
ಸಾವು ಹುಟ್ಟು ಸಂಕೋಲೆಯ ನಡುವೆ ಓ ದೇವ ದಣಿವ ನಿನ್ನ ನಂಬಿ ಬಂದೆ ॥

## ದೃಶ್ಯ : ಅರಣ್ಯದ ಮತ್ತೊಂದು ಭಾಗ

**ಕುಳಿಂದಕ : ಹಾಡು**

ಬಾರೈ ಮಂತ್ರೀಶ ಸಾರು ಬೇಟೆಗೆನೀಂ
ಕ್ರೂರ ಮೃಗಳನು ಕೊಲ್ಲಲು ಬಾರೈ

## ದೃಶ್ಯ : ಅರಣ್ಯ

**ಚಂದ್ರಹಾಸ : ಹಾಡು** **ರಾಗ : ಕಾಂಬೋಧಿ - ಆದಿತಾಳ**

ಪರಮ ಪುರುಷ ಪರಮಾತ್ಮ ನಿನ್ನಯ ಸ್ಮರಣೆಯೊಂದೆ ಎನ್ನ ಸಕಲಾರ್ಥ
ಮುರಹರ ಶ್ರೀಧರ ಗತಿ ನೀನೇತವ ಚರಣಭಕ್ತಿಯೆ ರಾಗ, ಭೋಗ, ಯೋಗ ॥

## ದೃಶ್ಯ : ಚಂದನಾವತಿಯ ಒಂದು ಪ್ರಾಂತ್ಯ

**ಮೇಧಾವಿನಿ : ಸಾಕಿ**

ಕತ್ತಲೆಯ ಮನೆಗೆ ಮಣಿದೀಪ
ಮಾದಂತೆ ಸಲೆ ಬತ್ತಿದ ಸರೋವರಕೆ
ನವಜಲ ಮೊದವಿದಂತೆ ಬಿತ್ತರದ ಕಾವ್ಯ ರಚಸೆಗೆ
ದೇವತಾಸ್ತುತಿನೆಗಳ್ದಂತೆ, ಭೂತಳದೊಳ್
ಸಂತಾನಮಿಲ್ಲದ ನಮ್ಮೀ ಬಾಳ್ಗೆ ಉತ್ತಮ ಕುಮಾರ ಲಬ್ಧಂ

**ನೃತ್ಯಗೀತೆ** **ರಾಗಮಾಲಿಕೆ**

ಅದಿಗೋ ಬರುತಿಹನೆ ಶ್ರೀರಾಮ ಅನುಪಮ ಸುಂದರ
ರವಿಕುಲ ಸೋಮ ॥ ಪ ॥
ಸೀತೆಯ ಭಾಗ್ಯವೋ ಮಿಥಿಲೆಯದೋ ಓ.ಓ.ಓ
ರಘುರಾಮನು ಹರನಧನುವ ಪಣವ ಗೆಲಿಯ ಒಲಿಯು ॥ ಅ.ಪ. ॥
ಅಚ್ಚರಿಯಂ ಸಭೆ ಬೆಚ್ಚುತೆ ಭ್ರಮಿಸುತೆ ॥
ಎತ್ತ ಬಲ್ಲನೆ ತರಳ ಶಿವ ಮೆಚ್ಚಿ ಹಿಡಿದ ಧನುವ
ಎಚ್ಚರವಿಲ್ಲದೆ ಯತ್ನಿಸುತಿಹನಲ್ಲ ।
ಹುಚ್ಚನೆ ಇವನೆಂದು ಅಣಕಿಸುತಿರೆ ಕೇಳಿ ॥ ೧ ॥
ರಾಮನು ಪಣವನು ಗೆಲ್ವನೋ ಸೋಲ್ವನೋ ।
ಭೂಮಿ ಜಾತೆಯ ಪುಣ್ಯವೆಂತಿಹುದು ॥
ಆ ಮಹಾಸುರನೆ ಎತ್ತದೆ ಮುಗಿ ಬಿದ್ದ ॥
ನೇಮವಿತ್ತು ಪಣಕೆ ಜನಕನು ಕೆಟ್ಟಾ ॥ ೨ ॥
ಅರರೇ ಇದು ಸಿಡಿಲಕಾಲ ಭೈರವನ ಘರ್ಜನೆಯ ಭುಗಿಸಿಡಿಲು ॥
ಮೆರೆದ ಜನರು ನೃಪರೆಲ್ಲ ತತ್ತರಿಸಿ ಸಿಡಿದರು ಮಿಡಿದರು ಎದೆ ನಡುಗಿ ॥

ರಾಮ ಧನುವ ಮುರಿದೀಡಾಡುತ್ತ ನೋಡಲಿ ವಿಜಯದಿಂ ಬೆಳಗಿಹನೆ ॥
ಭೂಮಿಜಾತೆ ಜಯಮಾಲೆಯ ರಾಮನ ಕೊರಳಿಗೆ ಧರಿಸುತ ನಿಂತಿಹಳೆ ॥
ಭೂಮಿಪಾಲ ವರಜನಕನು ಅಮಿತಾನಂದದಿ ಧಾಪಿಸಿ ಹರಸುತಿರೆ ॥
ನೇಮದಿಂದ ನಸು ನಾಚುವ ಸೀತೆಯು ಕೋಮಲ ಕರ ಪಲ್ಲವನೆ ಪಿಡಿದು ॥ ೩ ॥

## ದೃಶ್ಯ : ಅರಮನೆಯ ಪಾರ್ಶ್ವ

**ದುಷ್ಟಬುದ್ಧಿ : ಕಂದ**

ಏನಿದೆತ್ತಣದ ಕೌತುಕ
ಕುಳಿಂದಂಗೆ ಸೂನು ಜನಿಸಿರ್ದಪನೆ
ಬಂಜೆಯಾಗಿಹಳವನ ಮಾನಿನಿ
ಕೇಳಲಚ್ಚರಿಯಪ್ಪುದೆನಗೆ

## ದೃಶ್ಯ : ಅರಣ್ಯ

**ಸಿದ್ಧಾಂತಿ: ಹಾಡು** **ರಾಗ : ಮಧ್ಯಮಾವತಿ - ಆದಿತಾಳ**

ಬಲವು ಬೇಕು ಗ್ರಹದ ಬಲವು ಬೇಕು ।
ತಿಳಿಯಬೇಕು । ತಿಳಿದು ಬದುಕಬೇಕು ॥ ಪ ॥
ಬಲವಾದ ಲಗ್ನವು ಬೇಕು । ಲಗ್ನಕ್ಕೆ ಯೋಗವು ಬೇಕು
ಯೋಗದೆಸೆಯು ಕೂಡಿರುವಂಥಾ ನರನಾದರೆ ಬದುಕಲಿಬೇಕು ॥ ಅ.ಪ ॥
ಗೋಚಾರದ ಗಣಿತವನೋಡಿ । ಗ್ರಹಚಾರ ತಿಳಿಯಲುಬೇಕು ।
ಗ್ರಹಚಾರ ತಿಳಿದ ಮೇಲೆ ಎಚ್ಚರಿಕೆಯಿರಲೇಬೇಕು ॥ ೧ ॥
ಅಂಗಾರಕ ಕೆಟ್ಟಿರುವಾಗ ತುರಿಗಜ್ಜಿ ಬರಲೇಬೇಕು ।
ಚಂದ್ರ ತಾನು ಮುನಿದಿರುವಾಗ ! ಶೀತ ಶ್ಲೇಷ್ಮ ಹೆಚ್ಚಲೇಬೇಕು
ಹನ್ನೆರಡಕ್ಕೆ ಶನಿ ಬಂದಾಗ ।
ಬದುಕಿದ ಹೆಣದಂತಿರಲೇಬೇಕು ॥ ೨ ॥

## ದೃಶ್ಯ : ಕುಂತಳನಗರ ಉದ್ಯಾನವನ

**ವಿಷಯೆ ಮತ್ತು ಸಖಿಯರು : ಹಾಡು** **ರಾಗ : ನಾಟಿಕುರಂಜಿ - ಆದಿತಾಳ**

ಮಾರ್ನುಡಿಸಖಿಯೆ । ಮರೆಯದೆಲೆ ।
ಅಂದುನಾಟಯಸಿದ ಸುಂದರ ಕನಸ ॥ ಪ ॥

ಅಮೃತಕಲಶ ಕನ್ನಡಿಗಳ ಪಿಡಿದು ।
ಕಮಲಕನ್ಯೆಯರು ಕಿನ್ನಡಿ ಮಿಡಿದು ।
ಅಮಿತ ಜ್ಯೋತಿ ಆನಂದವನೆಸೆದು ।
ಆಡುತ ಪಾಡುತೆ ಹರಸಿದುದನುನೀ ॥ ೧ ॥

**ಚಂದ್ರಹಾಸ : ಹಾಡು** **ರಾಗ : ಕಲ್ಯಾಣಿ - ಆದಿತಾಳ**

ಆನಂದ ಈ ವನದಂದ ॥ ಮನಸೆಳೆವ ತಂಪಿಡುವ ।
ಕಣ್ಣಿಣಿ ಚೆಲುವನೆಸೆದು ಮೆರೆದಿರೆ ॥ ಪ ॥
ಸುಂದರ ಕುಸುಮಲತಾಳಿಯ ಬಳುಕಿಸಿ ।
ನಾಚಿಸಿ ಬೀಸುವ ಮಂದಾನಿಲದಿಂದ ॥ ಅ.ಪ. ॥
ಅರಳಿನಗುತ ಓಲಾಡುವ ಸುಮ ಬೃಂದ
ಪೀರಿಮಕರಂದ ಝೇಂಕರಿಸುವ ಭೃಂಗ ॥
ಮರೆಸಿ ಮೈಮರೆಸಿ ಮಾನಸವನು ಸೆಳೆಯುವ ।
ಧರಣಿಯೊಳತಿಶಯ ರಮ್ಯಮಾದ ಸೌಂದರ್ಯವನವಿದು ॥ ೧ ॥

## ದೃಶ್ಯ : ಅರಮನೆ ಉಪ್ಪರಿಕೆ

**ವಿಷಯೆ : ಹಾಡು** **ರಾಗ : ಖರಹರಪ್ರಿಯ - ಆದಿತಾಳ**

ಬಾ ಬೇಗ ಮನಮೋಹನ - ಸ್ವಾಮಿ ।
ತುಂಬು ಹುಣ್ಣಿಮೆಯಂತೆ ।
ದುಂಬಿ ಹಂಬಲದಂತೆ ॥ ಪ ॥
ಕಾಮಿನಿ ಕೈಪಿಡಿದು ಮೋಹದ ನಗೆ ಬೀರಿ ।
ಆಡಿದ ಮಾತು ಏನಾಯಿತೊ ।
ಮೈಮರೆಸೊ ಶೃಂಗಾರ ಕಥೆಯಾಯಿತೋ ।
ರಮಣಿಯೊಡನೆ ಒಲಿದ ವೇಳೆ ಮರೆಯದೆ ।
ಸುಮದ ಮೇಲೆ ಅನಲಧಾರೆ ಸುರಿಯದೆ ॥ ೧ ॥
ತಿಂಗಳ ಬೆಳಕೆಲ್ಲ ಬೇಸಿಗೆ ಬಿಸಿಲಾಯ್ತು ।
ತಣ್ಣನೆ ಗಾಳಿ ಬಿಸಿಯಾಯ್ತು ।
ಮದನನು ಇದ ನೋಡಿ ಹೃದಯದ ಒಡನಾಡಿ ।

ಒಡಲೆ ಬಾಡಿದ ಹೂವಾಯಿತು ।
ನಿನ್ನಾಣೆ ಈ ಬಾಧೆ ನಾ ತಾಳೆನೊ ।
ರಮಣಿಯೊಡನೆ ಒಲಿದ ವೇಳೆ ಮರೆಯದೆ ।
ಸುಮದ ಮೇಲೆ ಅನಲ ಧಾರೆ ಸುರಿಯದೆ ॥ ೨ ॥

## ದೃಶ್ಯ : ವಿವಾಹ ಮಂಟಪ

(ಚಂದ್ರಹಾಸ - ವಿಷಯೆ ಯುಗಳ ಗೀತೆ)

**ಚಂದ್ರಹಾಸ : ಶ್ಲೋಕ** — ರಾಗ : ಸುರುಟಿ - ಆದಿತಾಳ

**ವಿಷಯೆ :** ವೀರಧೀರನ ಕೊರಳಿಗೆ ಸುಮಹಾರ ಹಾಕುವ ಸಖನಿಗೆ
ತೋರಮುತ್ತಿನ ಹಾರ ಪದಕದ ಶೃಂಗಾರಮಾದಾಕಾರಗೆ

**ಚಂದ್ರಹಾಸ :** ಸುಂದರಾಂಗನೆ ಪ್ರೇಮಭಾವದೊಳಿಂದು ನಾಂ ವರಿಸುವ
ಚಂದದಿಂದದಿ ಕಂಠದೇಶಕೆ ಕುಂದಹಾರವ ಹಾಕುವೆ

## ದೃಶ್ಯ : ಕುಂತಳ ನಗರ

**ದುಷ್ಟಬುದ್ಧಿ : ಹಾಡು** — ರಾಗ :

ನಾನು ಬರದುದಲ್ಲ ಕಮಲಾಸನನ ಲಿಖಿತವೊ
ಏನಪೇಳಲೀಗ ನಾನು ಅನುವ ತಿಳಿಯದೂ ॥ ೧ ॥
ನಾನೊಂದನು ಯೋಚಿಸಲು ತಾನೊಂದಾದುದೆ
ಸೂನನಲ್ಲಿ ತಪ್ಪಿನಿವೆಲ್ಲ ಹಾನಿ ಬಂದಿತೆ ॥ ೨ ॥
ಹಗೆಯುವನ ಕೊಲ್ಲಿಸುವ ಬಗೆಯ ಯೋಚಿಪೆ
ಮಗಳು ವಿಧವೆಯಾದರೇನು ಹಗೆಯ ತೀರಿಸುವೇ ॥ ೩ ॥

**ಅಥವಾ**

**ದುಷ್ಟಬುದ್ಧಿ : ಹಾಡು** — ರಾಗ ವಿಜಯನಾಗರಿ - ಆದಿತಾಳ

ದುರ್ವಿಧಿ ಈ ಪರಿ ಗೈದುದೆ ಮೋಸ ॥ ಪ ॥
ಮರ್ಮವನರಿಯದೆ ಪರಿತಪಿಸುತಿಹೆ ॥ ಅ.ಪ. ॥

ಜಾಮಾತನಾದನೇ ಚಂದ್ರಹಾಸನು ಎನಗೆ
ಜೀವ ಉಳಿಸೆ ಅವನ ವಿಧವೆಯಾದರು ವಿಷಯೆ ॥ ೧ ॥

## ದೃಶ್ಯ : ಚಂಡಿಕಾಲಯ

**ಚಂದ್ರಹಾಸ : ಕಂದ**

ತಾಯೆ ಪರಮ ಕಲ್ಯಾಣಿ ಶಂಕರ
ಪ್ರಿಯೆ ಸರ್ವೇಶ್ವರಿ ಜಗನ್ಮಾತೆ
ಸನ್ನುತಚ್ಛಾಯೆ ಸಾವಿತ್ರಿ, ಶಾರದೆ ಸಕಲ ಶಕ್ತಿರೂಪಿಣಿ ಕಾಳಿ ಕಾತ್ಯಾಯಿನಿ
ಶ್ರೀಯೆ ವೈಷ್ಣವಿ ವರದೆ ಚಂಡಿ ಚಾಮುಂಡಿ
ನಿರಪಾಯೆ ನಿಗಮಾಗಮಾರ್ಚಿತೆ ಮಂತ್ರಮಯಿ
ಮಹಾ ಮಾಯೆ ರಕ್ಷಿಸು ಕೈಮುಗಿದು ಬೇಡುವೆನು ತಾಯ

**ಚಂದ್ರಹಾಸ : ಶ್ಲೋಕ**

ಹೇ ಜನನಿ ಶರ್ವಾಣಿ ಜಾಹ್ನವೀಧರರಾಣಿ
ಬಯಸಿ ಬಲಿಗೊಂಡೆಯಾ ಇವರ ತಾಯೇ
ಆ ಜವನಗೆಲಿದವನ ಸತಿಯೆ ನೀ ದಯತೋರಿ
ಇವರ ಪ್ರಾಣವನಿತ್ತು ಪೊರೆಯೆ ನೀ ತಾಯೇ ಅಂಬಾ ॥

**ಚಂದ್ರಹಾಸ : ಹಾಡು** — ರಾಗ : ಹಿಂಧೋಳ - ಆದಿತಾಳ

ಅಂಬಾ ಅಭಯಂಕರಿ ಶಂಕರಿ ತಾಯೆ ।
ನೀಡಮ್ಮ ಅಭಯ ಜಗದಂಬಾ ॥ ಪ ॥
ಕಾಮಿತಾರ್ಥಫಲದಾತೆಯಲ್ಲವೇನಮ್ಮಾ
ನೀ ಸೋಮಧರನ ಸತಿ ದಯೆಯೊಳಲ್ಲವೇನಮ್ಮಾ
ದೇವಿ ಮಹಾಶಕ್ತಿ ಬದುಕಿಸಿವರ ಪೊರೆಯಮ್ಮ
ನೀ ಪ್ರೇಮದಿಂದ ಈ ಘೋರ ದೃಶ್ಯ ಕಳೆಯಮ್ಮಾ
ಪಾಲಿಸೆಮ್ಮ ಪರಮೇಶ್ವರಿ ಪ್ರಾಣವೀಯೆ ಕರುಣಾಕರಿ ।
ಅಭಯಂಕರಿ ಶಂಕರಿ ಅಂಬಾ ॥

## ದೃಶ್ಯ : ವಿವಾಹ ಮಂಟಪ

**ಎಲ್ಲರೂ : ಹಾಡು** **ರಾಗ : ನೋಟ್ - ಆದಿತಾಳ**

ಸರ್ವಸೌಖ್ಯಮಾಗಿ ಬಾಳು । ನಿರುತರಾಜಿಸು ॥
ಸಾರ್ವಭೌಮ ಸುಂದರಾ ಉಡುರಾಜತೇಜನೇ । ರಾಜಾಧಿರಾಜನೆ ॥ ೧ ॥
ಮಂಗಳಾಂಗಿಯನ್ನು ಕೂಡಿ । ಪರಮಮೋದದಿ ॥
ಸಂಗಸುಖದಿಬಾಳುವ ಸುಕುಮಾರನಂ ಪಡೆ । ರಾಜಾಧಿರಾಜನೆ ॥ ೨ ॥
ಶಕ್ರನನುಪೋಲುವಂಥ । ಅಮಿತವಿಕ್ರಮಾ ।
ಚಕ್ರಧಾರಿ ಕರುಣಿಸುವನು । ನಿರುತ ನಿನ್ನನು । ರಾಜಾಧಿರಾಜನೇ ॥ ೩ ॥
ಧರೆಗೆರಾಜನೆನಿಸಿ ನೀನು । ಪರಮಸೌಖ್ಯದಿ ।
ನಿರುತಬಾಳು ಕರುಣಿಸುವನು । ಹರಿಯುಮೋದದಿ ॥ ರಾಜಾಧಿರಾಜನೆ ॥

### ಮಂಗಳ

**ರಾಗ : ಫರಜು - ಆದಿತಾಳ**

ಲಕ್ಷ್ಮೀಪತಿಯೆ ಶುಭಮಂಗಳ ॥ ಪ ॥
ಪಕ್ಷಿವಾಹನ ನಿಟಿ । ಲಾಕ್ಷನಸಖನೆ ॥ ಅ.ಪ. ॥
ಮುನಿಗಣವಂದಿತ । ವಿನಮಿತಪಾದಿತ ।
ದೀನರಪಾಲಿಪ । ಘನನಿಧಿಭೂಪ ॥ ಮಂಗಳಂ ॥ ೧ ॥
ನಂದಕುಮಾರಾ । ಸುಂದರಾಕಾರಾ ।
ಮಂದರಗಿರಿಧರ । ಸಿಂಧುಗಂಭೀರಾ ॥ ೨ ॥
ಧರೆಯೊಳುದೇವನ । ಪುರದೊಳು ನೆಲಸಿಹ ।
ವರವೇಣುಗೋಪಾಲ । ವರಭಕ್ತಮಂದಾರ ॥ ಮಂಗಳಂ ॥ ೩ ॥



# ದಶಾವತಾರ


ನಾಟಕಕಾರರು
ಬಿ. ಪುಟ್ಟಸ್ವಾಮಯ್ಯ


ಶ್ರೇಷ್ಠ ಅಭಿನೇತ್ರಿ
ಬಿ. ಜಯಮ್ಮ


ಗಾನಕೋಗಿಲೆ
ಪಿ. ಕಾಳಿಂಗರಾವ್

**ಪ್ರಾರ್ಥನೆ : ಹಾಡು** — **ರಾಗ : ಯಮನ್ - ಆದಿತಾಳ**

ಶಾರದೇ ಗಾನವಿಶಾರದೇ ವರದೇ
ಶಶಿಧರ ಸಮಾದರ ಅಸಮಮನೋಹರೆ
ಸಾರಸಭವಮುಖ ಸಾರಸಸದನೇ
ಸರಸಿಜನಯನೇ ಸಾರಸವದನೇ
ಸದಯೇ ಹೃದಯೆ ವಿಭೋದಯ ಪಾಲಿಸು ॥ ೧ ॥
ಗಾನ ಸುಧಾರಸ ಪಾನವಿಲೋಲೆ
ಘನ ಗುಣಶೀಲೆ ಶಾಂತಿ ವಿಶಾಲೆ
ಕಲಿತೆ ಲಲಿತೆ ಕಲೆ ಕಾವುದು ಕೋಮಲೆ ॥ ೨ ॥

**ಸೂತ್ರಧಾರ : ವೃತ್ತ ॥** — **ರಾಗ : ನಾಟಿ**

ಶ್ರೀ ವೇದೋದ್ಧಾರಮತ್ಸ್ಯಂ ನಗಧರಕಮಠಂ ಭೂಪ್ರಿಯಶ್ರೀವರಾಹಂ ।
ಭಾವಜ್ಞಶ್ರೀನೃಸಿಂಹಂ ಬಲಿನುತಪಿಲಸದ್ವಾಮನಂ ಜಾಮದಗ್ನ್ಯಂ ॥
ಲಾವಣ್ಯಾಬ್ಧಿಂ ದುರಾಮಂ ಯದುಕುಲತಿಲಕಂ ಬುದ್ಧನಾಕಲ್ಕಿರೂಪಂ ।
ದೇವಂ ಸೌಭಾಗ್ಯವಂ ಮಾಳ್ಕೆಮಗೊಲಿದನಿಶಂ ಶ್ರೀಧರಂ ಪದ್ಮನಾಭಂ ॥

**ಸೂತ್ರಧಾರ : ಹಾಡು** — **ರಾಗ : ಖರಹರಪ್ರಿಯ - ಆದಿತಾಳ**

ವನಜನಾಭನೆ ಪಾಲಿಸೊ ಧನುಜಾಂತಕನೆ ॥ ಪ ॥
ಮಾನಿನಿ ದ್ರೌಪದಿಯ ಮಾನವ ಕಾಯ್ದವನೆ
ಧ್ಯಾನಿವೆ ನಿನ್ನನು ದಾನಿಯೇ ಬೇಗಾ ॥ ೧ ॥

ಗಾನಲೋಲ ಶ್ರೀ ವೇಣುಗೋಪಾಲನೆ
ಮೌನಿ ಹೃದ್ವಾಸನೆ ಘನಮಹಿಮನೆ ಬೇಗ
ದಾಸರ ದೈವವೆ ಭಾಸುರಾಂಗ
ದಾಸನ ಪೊರೆಯುವ ವ್ಯಾಸಪುರಾಧೀಶನೆ ॥ ೨ ॥

**ನಟಿ : ಹಾಡು** **ರಾಗ : ಬೇಗಡೆ - ಆದಿತಾಳ**

ವರ್ಷ ಋತುವಿದು । ವನಜಬಾಣಹಿತವೆನಿಪುದು ॥ ಪ ॥
ಹರ್ಷಮಿತ್ತು ಜಗಕೆ ತಾಪ । ಹಾರಿಯೆನಿಸಿ ರಂಜಿಸಿಹುದು ॥ ಅ ಪ. ॥
ನೀಲಮೇಘಗಳನು ನೋಡಿ । ನೀಲಕಂಠನಿಕರವೆಲ್ಲ ॥
ಲೀಲೆಯಿಂದೆ ಗರಿಯ ಕೆದರಿ ಕೇಳಿಯಾಡಿ ನರ್ತಿಸುವುದು ॥ ೧ ॥
ನಲಿದು ನಟಿವ ನವಿಲ ನಾದ । ಳಿಯು ತರುಣ ತರುಣಿಯರಿಗೆ ।
ನಳಿನತರನ ಚಾಪಟಂಕೃತಿ । ಗಳನು ಕಿವಿಗೆ ಬೀರುತಿರ್ಪುದು ॥ ೨ ॥

**ಹಿನ್ನಲೆ ನೃತ್ಯ ಗೀತ**

ಪ್ರಳಯ ಪಯೋಧಿಜಲೇ ಧೃತವಾನಸಿ ವೇದಂ
ವಿಹಿತ ವಹಿತ್ರ ಚರಿತ್ರಮಖೇದಂ
ಕೇಶವ ಧೃತ ಮೀನ ಶರೀರ. ಜಯ ಜಗದೀಶಹರೇ ॥
ತವ ಕರಕಮಲವರೇ ನಖಮದ್ಭುತ ಶೃಂಗಂ
ದಲಿತ ಹಿರಣ್ಯಕಶಿಪು ತನುಭೃಂಗಂ
ಕೇಶವ ಧೃತ ನರಹರಿ ರೂಪ. ಜಯ ಜಗದೀಶಹರೇ ॥
ಮ್ಲೇಚ್ಛ ನಿವಹ ನಿಧನೇ ಕಲಯಸಿ ಕರವಾಲಂ
ಧೂಮಕೇತುಮಿವ ಕಿಮಪಿ ಕರಾಲಂ
ಕೇಶವ ಧೃತ ಕಲ್ಕಿ ಶರೀರ. ಜಯ ಜಗದೀಶಹರೇ ॥
ಶ್ರೀ ಜಯದೇವ ಕಾವೇರಿದಮುದಿತಮುದಾರಂ
ಶೃಣು ಸುಖದಂ ಶುಭದಂ ಭವಸಾರಂ
ಕೇಶವ ಧೃತ ದಶವಿಧರೂಪ. ಜಯ ಜಗದೀಶಹರೇ ॥

## ದೃಶ್ಯ - ಕ್ಷೀರ ಸಾಗರ (ವೈಕುಂಠ)

**ನಾರದ : ಹಾಡು** **ರಾಗ : ಕಾನಡ - ಆದಿತಾಳ**

ಕರುಣಾಭರಣಾ ಕಮಲಾರಮಣಾ
ವರದಾ ಸುರಲೋಕ ವಂದಿತ ಚರಣಾ
ಹೇ ಗೋವಿಂದಾ ಹೇ ಮುಕುಂದ
ಶ್ರೀ ವೈಕುಂಠ ನಿವಾಸಿ ಸನಾತನ
ಶ್ರೀ ವನಮಾಲಾ ಭೂಷಣ ॥ ಹೇ ಗೋವಿಂದ॥
ದನುಜ ಹರಾ ದಯಾರಸನಿಕರಾ
ದೀನ ಜನಾಮೋದ ದಾಮೋದರಾ
ಭಾವಾತೀತಾ ಮಹಿತ ಪ್ರಭಾವಾ
ದೇವಾನಿಗಮಾಂತ ಸನ್ನುತ ಭಾವಾ ॥ ಹೇ ಗೋವಿಂದ॥

**ಜಯವಿಜಯರು : ಹಾಡು** **ರಾಗ :...**

ಸರಿಸಮರಾರ್ ಸುರರಲಿ ಸರಿ ಕಾಣೆವೈದುರದಲಿ ॥ ಪ ॥
ಹರಿಹರರಪರಾಜಿಪ ಸ್ಥೈರ್ಯಂ
ನರಸಾಮಾನ್ಯರಂನಡುಗಿಪ ಶೌರ್ಯಂ ॥ ೧ ॥
ನಾನಾರೂಪನ ನಾಕಾಧಿಪನ
ದೇವೇಂದ್ರ, ನಾಗೇಂದ್ರ, ನಂದೀಶನ
ಎದುರಾಗೆ ಸುರಪತಿಗಳು ಶಿರಬಾಗೆ
ಅಧಿಪತಿಗಳು ನಾವಾಗೆ
ಜಯ ವಿಜಯಗೆ ಶರಣಾಗೆ ಬಾಗದೆ ತ್ರಿಭುವನದಲಿ ॥ ೨ ॥

**ಜಯ ವಿಜಯರು : ಹಾಡು** **ರಾಗ : ಸುರುಟಿ - ಆದಿತಾಳ**

ಸಕಲ ಭುವನ ಪಾಲಾ ಜಯಜಯ
ಸಕಲಾತ್ಮಕ ಲೀಲಾ ಸೇವಾ ॥ ಪ ॥
ಸಕಲಲೋಕನುತ ಸುಕಲಾವಂದಿತ
ವಿಕಸಿತ ಸುಮಯುತ ಅಕುಟಿಲ ಶ್ರೀಯುತ ॥ ಅ.ಪ. ॥

ಸುಂದರೇಶಗಾತ್ರ, ಜಯ ಜಯ
ಬೃಂದಾವನಲೋಲಾ
ಇಂದಿರರಮಣ ಮುಕುಂದ ಮೃಡಾನತ
ಇಂದು ಸನ್ನಿಭವದ ಮಂದರ ಗಿರಿಧರ ॥ ೧ ॥

## ೧. ಮತ್ಸ್ಯಾವತಾರ

### ದೃಶ್ಯ : ಅರಣ್ಯ

**ನಾರದ : ಹಾಡು** — **ರಾಗ : ಮೋಹನ - ಆದಿತಾಳ**

ಶ್ರೀವನಿತಾರಮಣ । ನಾರಾಯಣ ॥
ಕಾವುದು ಜಗವ ಪ್ರ । ಭಾವ ನಿಧಾನ ॥ ಪ ॥
ಪಾವನಚರಣ । ಭವಭಯಹರಣ । ದೇವವರಾದಿಸು । ರಾವಳಿಶರಣಾ ॥
ಭಾವಿತಘನಗುಣ । ಸೇವಿತ ಮುನಿಗಣ । ಶ್ರೀವಿತರಣವಿನ । ತಾವಳಕರುಣಾ ॥

**ಸೋಮಕ : ಹಾಡು** — **ರಾಗ : ಕಮಾಚ್ - ಏಕತಾಳ**

ಪಿಡಿದು ಖಳನ । ಕಡಿದು ಹರಿಯ ಪ್ರೊಡೆಯುನಿರಿದಪೆ ॥ ಪ ॥
ಪರಮದನುಜದೈತ್ಯವಂಶ । ಗುರುಭೃಗುಮುನಿಪತ್ನಿಯು ।
ನಿರಿದ ದುಷ್ಟನ । ನಮಗರಿಷ್ಟನ ॥ ೧ ॥
ವಧಿಸಿ ಪಿಡಿಯು । ತಧಮಹರಿಯ । ನೆದೆಯುನಿಂದು ವಿದಳಿಸಿ ।
ರುಧಿರಪೀರ್ವೆನು । ಮುದದಿ ಸಾರ್ವೆನು ॥ ೨ ॥

**ಗಾಯಿತ್ರಿ : ಗೀತ**

ಹರಿ ನೀನೆ ಕಾವುದೆನ್ನನು ದೀನಬಂಧು,
ಶರಣಜನ ಕಲ್ಪತರು ಕಾರುಣ್ಯ ಸಿಂಧು ।
ಪರಮ ಪುರುಷನು ನೀನು, ಸೃಷ್ಟಿಗಾದಿಯು ನೀನು,
ಸುರಲೋಕ ವಂದಿತನು ಶ್ರೇಷ್ಠ ದೈವ
ಹರಿಸಿ ದೈತ್ಯರ ಬಾಧೆ ವೇದಗಳನುದ್ಧರಿಸಿ
ಪೊರೆವುದೈ ಕರುಣಾಳು, ಶ್ರೀಹರಿ, ಮುರಾರಿ !

**ಮುನಿಗಳು : ಹಾಡು** **ರಾಗ : ಹಂಸಧ್ವನಿ - ಚಾಪುತಾಲ**

ಜಯ ಜಯಾಖಿಲಲೋಕಸರ್ಜನಕಾರಣಾಘನಿವಾರಣ ।
ಜಯ ಜಯಾನತಚಾರನಾಶ್ರಿತ । ದೀನಜನಸಂತಾರಣ ॥ ಪ ॥
ವೇದಪರನವಿನೋದ ಮೌನಿಜನಾವೃತಮರವಂದಿತ ।
ನಾದಬಿಂದುಕಳಾದಿಮೂಲ ಸುರಾಧಿರಾಜನಿಸೇವಿತ ॥ ೧ ॥
ಶಾರದಾಪ್ರಿಯ ಸೃಷ್ಟಿಕರ್ಮ ವಿಶಾರದಾನತ ಮೋದದ ।
ಸಾರಸಾಸನ ಸತ್ಯಸಂಪದ ಸಾರಧರ್ಮದಯಾಸ್ಪದ ॥ ೨ ॥

**ದೇವತೆಗಳು : ಹಾಡು** **ರಾಗ : ಕಲ್ಯಾಣಿ - ಆದಿತಾಳ**

ಜಯಶುಭದಾತ । ಶ್ರೀನಾಥಾ ॥ ಪ ॥
ನಯಗುಣಭರಿತ ನಾರದವಿನುತ
ಭಯಪರಿ ಹರಸುರಚಯನುತ ಚರಿತಾ ॥ ಅ.ಪ. ॥
ದೇವದೇವನತಪಾಲನ ಮಹಿಮ
ಶ್ರೀವಿಲಾಸ ಜಯ ನಿರುಪಮ ಸುಷುಮಾ
ಸೇವಿತ್ಕಮರ ಕುಲಾವನ ನಿಪುಣಾ
ಶ್ರಿತ ಸುಖವಿತರಣ ರಮಣಾ ॥ ೧ ॥

## ೨. ಕೂರ್ಮಾವತಾರ

### ದೃಶ್ಯ : ಅರಣ್ಯ

**ನಾರದ : ಹಾಡು** **ರಾಗ : ಕಲ್ಯಾಣಿ - ಆದಿತಾಳ**

ಜಯ ನಾರಾಯಣ । ಜಯ ಸುಖಕಾರಣ ।
ಭಯಪರಿಹರಣ । ಭಕ್ತಸಂತರಣ ॥ ಪ ॥
ರವಿಶಶಿಲೋಚನ । ರಸಿಕಜನಾವನ ।
ದಿವಿಜಸಂತೋಷಣ । ದಿತಿಸುತದಮನ ॥ ೧ ॥
ಘನಮಹಿಮಾಲಯ । ವನನಿಧಿನಿಲಯ ।
ವನಧಿಸುತಾಪ್ರಿಯ । ವರಶೇಷಶಯನ ॥ ೨ ॥

**ಅಪ್ಸರೆಯರು : ಹಾಡು** **ರಾಗ : ಸಾರಂಗ - ಆದಿತಾಳ**

ಶ್ರೀದೇವೇಂದ್ರಾ । ಶ್ರೀಸಾಂದ್ರ ।
ಸುರಕುಲಶುಭಕರ । ಸುರರಿಪುಭೀಕರ ॥ ಪ ॥
ತ್ರಿಭುವನಪಾಲನ । ಪ್ರಭುವರ ನಿರುಪಮ ।
ವಿಭವದಯಾಮಯ । ವಿಜಯ ಶುಭನಿಚಯ ॥ ಅ.ಪ. ॥
ಸುರ ನರ ಭುಜಗ ವಿನುತಚರಿತ । ಸೂರ್ಯಸುಧಾಕರರುಚಿಲಸಿತ ।
ಪರಪೌಲೋಮೀವದನಾಂಬುಜದಿನ ।
ಕರ ಘನಗಂಭೀರ ದಯಾ । ನಿಲಯ ॥ ೧ ॥

**ಶಚೀದೇವಿ : ಹಾಡು** **ರಾಗ : ಧನ್ಯಾಸಿ - ರೂಪಕತಾಳ**

ಏನನರ್ಥವೋ । ಅಕಟಾ । ಮೌನಿಶಾಪದಿಂ ॥ ಪ ॥
ಹೀನಭಾಗ್ಯರು । ನಾವಿ । ನ್ನೇನ ಮಾಳ್ಪುದೋ । ದೇವಾ ॥ ಅ.ಪ. ॥
ಪರಸಿ ಪ್ರೀತಿಯಿಂದ ಮೌನಿ ಕರುಣಿಸಿದಾ ಪುಷ್ಪಮಾಲೆಯ ।
ಕರಿಯಕುಂಭಕೆಸೆದನೆತ । ಕಿರದೆ ಕಾಂತನಂತು ಮದದಿ ॥ ೧ ॥
ಪರಮವಿಭವದೆಸೆವ ನಾವು । ಸಿರಿಯ ಕಳೆದು ದೀನರಾಗಿ ।
ಮರುಗುತಿನ್ನು ಬಾಳಲೆಂತು । ಭರಿಸಿ ಮುಂದೆ ತಾವಗಳನು ॥ ೨ ॥

**ಮೋಹಿನಿ : ಹಾಡು** **ರಾಗ : ಕಾಪಿ - ಝಂಪೆತಾಳ**

ಇಂದೆನಗಾದುದಾನಂದ ಸುಧಾರಸ । ಬಂದಿರೆ ಸಿಂಧುವ ಮಂಥನದಿ ॥ ಪ ॥
ಬೃಂದಾರಕೇಂದ್ರನ । ಸಾಂದ್ರವೈಭವವಸ್ತು । ಬೃಂದನಾಗರದಿಂದ
ಹಿಂದಿರುಗೆ ॥ ಅ.ಪ. ॥
ಆ ಜರೆಯನು ವಾರಿಸಿ । ಮರಣವ ನೀಗಿಸಿ ।
ಪೊರೆವ ಸುಧಾರಸವಿದು ಸುರರ ॥ ಹರುಷವನುರ್ಕಿಸಿ । ಸಿರಿಯನು
ಪೆರ್ಜಿಸುತಿರುವುದು ಜಯಮಿತ್ತು ಸಂಗರದಿ ॥ ೧ ॥
ಸುರರ ವಿಲಾಸವಸುರರ ವಿನಾಶವು । ಪರಿಪರಿ ಪೆರ್ಚುವ ತೆರದಿಂದ ॥
ವಿರಚಿಸುತಿಳೆಯೊಳು । ಪರಿಪರಿ ಧರ್ಮವು ।
ಪರಿವರ್ಧಿಸುವ ಪರಿಯೆಸಗುವೆನು । ನಾನು ॥ ೨ ॥

ದಾನವರು : ಹಾಡು

ರಾಗ : ..........

ಮೆರೆಸಿ ದಾನವರ ವೀರಶೌರ್ಯಗಳ
ಲೋಕಾಧೀಶ್ವರರೆನಿಸಿಹೆವು
ಸುರನರಕಿನ್ನರರೆಮ್ಮ ನುತಿಸುವರು
ನಮಗೆಣೆ ಜಗದೊಳಗಾರಿಹರು ?

## ೩. ವರಾಹಾವತಾರ

### ದೃಶ್ಯ : ವೈಕುಠ ಪ್ರಾಂತ

ನಾರದ : ಹಾಡು

ರಾಗ : ಚಾರುಕೇಶಿ - ಝುಂಪೆತಾಳ

ಮನವೆಂಬ ಸರಸಿಯಲ್ಲಿ ಆಡುಬಾ ಹಂಸ. ಅಲ್ಲಿ
ಅಡಗಿರುವ ರತ್ನಗಳ ಹುಡುಕು ಬಾ ಹಂಸ.
ಘನತರದ ಭಾವ ಪದ್ಮಗಳಲ್ಲಿ ಅರಳುತಿವೆ,
ಸಳಿಯುತಿದೆ ಸಾಧನೆಯ ಜಲತರಂಗ;
ಪರಿಮಳಕೆ ಮನಸೋತು ಝೇಂಕರಿಸುತಿದೆ ಮೇಲೆ
ನೀಲಾಂಬುಧ ಶ್ಯಾಮ ದೇವಭೃಂಗ.
ಸಂಪ್ರದಾಯಗಳೆಂಬ ಸಂಕಲೆಗಳನು ಕಳೆದು
ಗಗನಕೇರಿದೆ ಅಲ್ಲಿ ಬುದ್ಧಿಯೋಗ.
ಕಾಲಧರ್ಮವ ಮೀರಿ ವಿಶ್ವದಂತವ ಸೇರಿ
ಸಚ್ಚಿದಾನಂದದಾ ನೆಲೆಯನರಸುತಿದೆ.
ಯೋಗಾನುಸಂಧಾನ ಅಳವಡಿಸೆ ಮಾನವನೆ
ಅನುಭಾವಿ, ವೀಕ್ಷಕನು, ತತ್ವದರ್ಶಿ
ಆತ್ಮರೂಪದ ಪರಂಜ್ಯೋತಿ ಬೆಳಗುವುದಲ್ಲಿ
ಅಂತರಂಗದ ಚಲುವು ಹಣತಿಯಲ್ಲಿ.

ಸನಕಾದಿಗಳು : ಹಾಡು

ರಾಗ : ಮುಖಾರಿ - ಆದಿತಾಳ

ಶ್ರೀರಮಣೀರಮಣಾ ನಾರಾಯಣ ॥
ವಾರಿರುಹಾಸನ । ವಂದಿತಚರಣ ॥ ಪ ॥

ನೀರದನೀಲ । ನಿರುಪಮಶೀಲ ॥
ಸಾರದಯಾಮಯ ಸಕಲ ಶುಭೋದಯ ॥ ೧ ॥
ತ್ರಿಗುಣಾತ್ಮಕ ಶ್ರೀ । ನಿಗಮಾಗಾರ ॥
ಜಗಧಾರ ॥ ಜನ್ಮನಿವಾರ ॥ ೨ ॥

**ಜಯ ವಿಜಯರು : ಹಾಡು** **ರಾಗ : ಕಲ್ಯಾಣಿ - ಆದಿತಾಳ**

ವಾಸುದೇವ ವಸುಗಣವಿನುತ । ವನರುಹನಯನಾ ॥ ಪ ॥
ದಾಸತಾರಣಗುಣ । ದಾನವಹರಣ ॥ ಅ.ಪ. ॥
ಲೋಕಭರಣ ಮಹಾ । ಶೋಕನಿವಾರಣ
ಪ್ರಾಕಟಗುಣಕೃಪಾಲೋಕ ಶ್ರೀರಮಣಾ

**ಜಯ ವಿಜಯರು : ಹಾಡು** **ರಾಗ : ........**

ನಾರಾಯಣ ಜಯ, ನಾರಾಯಣ ಜಯ,
ನಾರಾಯಣ ವೈಕುಂಠಪತೇ !
ದುಃಖಹರಣ, ದುರಿತೌಘ ವಿದಾರಣ,
ನಾರಾಯಣ ಕಲ್ಯಾಣರತೇ !
ಘನನೀರದ ಸಂಕಾಶ ಶರೀರಾ,
ಧೃತಕೌಸ್ತುಭಮಣಿ ಮಂಜುಳ ಹಾರಾ !
ಭಕ್ತಿವಂದಿತಾಮರ, ಕಮಲಾಕ್ಷ
ಕಮಲಾಲಿಂಗನ ಪುಳಕಿತ ವಕ್ಷಾ !

**ನಾರದ : ಹಾಡು** **ರಾಗ : ಸಾರಂಗ - ಆದಿತಾಳ**

ಭುವನಪಾಲ ಶ್ರೀವಿಲೋಲ । ವಿವಿಧ ವಿಭವಸುಖವಿಶಾಲ ॥ ಪ ॥
ಸಕಲಭುವನವಿನುತಕೀರ್ತಿ । ನಿಖಿಲಲೋಕ ಚಕ್ರವರ್ತಿ ।
ಪ್ರಕಟತಾರಿಹರಣ ಶಕ್ತಿ ॥ ೧ ॥
ನಿರುಪಮಾನಬಲಸಮೇತ । ನೀರಜಾಪ್ತಕೋಟಿಕಾಂತ ।
ನಿಗಮಗೀತ ದಿವ್ಯಚರಿತ ॥ ೨ ॥

**ಹಿರಣ್ಯಾಕ್ಷ : ಹಾಡು** **ರಾಗ : ನೋಟ್ - ಏಕತಾಳ**

ದುರಾತ್ಮಳಂ ಧರಿತ್ರಿಯಂ ತರುತ್ತೆ ತೂಳ್ವೆ ವಾರ್ಧಿಯೊಳ್ ॥ ಪ ॥
ದೇವತೆಗಳಿಗಾಧಾರಳೆನಿಸಿದಾ । ಭೂವಧುವಂ ಸದೆದಿಡುವೆನು ನಾಂ ॥ ೧ ॥
ಆಧರಣಿಯ ಪರಿಪಾಲಿಸೆ ಬರ್ಪಾ । ಮಾಧವನನು ಹರಿಹರಿದಿಡುವೆಂ ॥ ೨ ॥

**ಭೂದೇವಿ : ಹಾಡು** **ರಾಗ : ತೋಡಿ - ರೂಪಕತಾಳ**

ಏನಗೈವೆ ಯಾರೊಳೊರೆವೆನೆನ್ನ ಕಷ್ಟವಂ ॥
ದಾನವಾಧಮನಿಗೆ ಸಿಕ್ಕಿ । ದೀನಲಾದೆನಕ್ಕಟಾ ॥ ಪ ॥
ದುರುಳನೆನ್ನ ಬಾಧಿಸುತ್ತೆ ನರಳಿಸಿರ್ಪನು ।
ಕರುಳ ಬಗಿಯುತೇಕೆ ಹರಿಯು । ಹರಿಸನೀದುರಾತ್ಮನಂ ॥ ೧ ॥
ಪಿಡಿದು ನನ್ನ । ಜಡಧಿಯೊಳಗೆ । ಕೆಡಹಲಿಚ್ಚಿಸಿ ॥
ಬಿಡದೆ ಛಲದೆ । ನಡೆತರುವನಿಂ । ದಡಸಿ ಧೂರ್ತನು ॥ ೨ ॥

**ಭೂದೇವಿ : ಹಾಡು** **ರಾಗ : .........**

ದೀನ ಪಾಲ ಮಾನಿನಿಯ ಮೊರೆಯ ಕೇಳಿ ಪಾಲಿಸು
ದೀನಳಾದೆನ್ನೆ ಮುರಾರಿ ಬಲಪಿದಾರಿ ಶ್ರೀಹರಿ ॥ ಪ ॥
ಕಾವುದೈ ಕೃಪಾಳುಧವ ಕಾವುದೆನ್ನ ಮಾಧವ
ಕಾವುದೈ ಗಜೇಂದ್ರಪಾಲ ದಯಾಪಹಾ ಭಯಾಪಹಾ ॥ ೧ ॥
ರಕ್ಷಿಸೈ ಭಯಾರ್ತೆಯನು ಪಕ್ಷಿವಾಹನನೆನ್ನನು
ರಕ್ಷಿಸೈ ಅಮೇಯಮಯ ಮಹೋದಯಾ ಮಹಾಪ್ರಿಯ ॥ ೨ ॥

**ಬ್ರಹ್ಮಾದಿದೇವತೆಗಳು : ಹಾಡು** **ರಾಗ : ಶ್ರೀರಾಗ - ಆದಿತಾಳ**

ಶ್ರೀವರ ಜಯ ವಸುಧಾವರ ಶುಭಕರ ।
ಪಾವನ ಪದವಿನತಾವನಕೋವಿದ ॥ ಪ ॥
ದೀನಜನಾರ್ತಿನಿವಾರಣಶೀಲ । ದಾನವಕುಲಘನ ಕಾನನಕೀಲ ॥ ೧ ॥
ಮಂಗಳರೂಪ ವಿಹಂಗವರೂಢ । ತುಂಗದಯಾಗಮ । ಸಂಘನುಗೀತ ॥ ೨ ॥

# ೪. ನರಸಿಂಹಾವತಾರ

## ದೃಶ್ಯ : ಅಂತರಿಕ್ಷದಲ್ಲಿ ನಾರದನ ಪ್ರವೇಶ

**ನಾರದ : ಹಾಡು** **ರಾಗ : ಶಂಕರ್ - ರೂಪಕತಾಳ**

ಸಿಂಧುಸುತಾನಂದಲೀಲ । ಸಿಂಧುರವರದಾನಶೀಲ ॥
ಬೃಂದಾರಕಬೃಂದಪಾಲ । ಸುಂದರಸುಗುಣಾಲವಾಲ ॥ ಪ ॥
ನಾದಬಿಂದುಕಲಾಮೂಲ । ಮೋದಾನ್ವಿತ ಪಿಪುಲಬಲ ॥
ವೇದಾವಳಿ ಗೀತ ವಿಮಲ । ಭೂದರಧರ ದೈತ್ಯಕಾಲ ॥
ನೀರಜಾತಮೂಲ ನಜಲ । ನೀರದಸಮದಿವ್ಯಕಲ ॥
ಧೀರಾಶ್ರಿತತಾರಣೈಕ । ಭೂರಿ ಜಯಾನಂದಲೋಲ ॥ ೧ ॥

**ಹಿರಣ್ಯಕಶಿಪು : ಹಾಡು** **ರಾಗ : ಹಂಸಾನಂದಿನಿ - ಆದಿತಾಳ**

ತೋರು ಬೇಗ ಹರಿಯ
ತೋರದಿರೆ ಸೇರು ಯಮನ ನಿಲಯ
ಧರಾಮಂಡಲದಿ ಶೋಭಿಪನಭದಿ
ಮೆರೆವನದಿಗಳಲಿ ಪಾರಾವಾರದಿ
ಸಾಸಿರನಾಮವಲೇಸಿನಿಂಧರಿಸಿದ
ನಿಶಾಚರರ ಪರಮ ವೈರಿ ಹರಿಯನು

**ಪ್ರಹ್ಲಾದ : ಗೀತ**

ಹರಿಯಲ್ಲದಿನ್ನುಂಟೆ ಬೇರೆ ಪರದೈವ
ಹರಿಯೆ ಸರ್ವಾಧಿಕನು ದೇವರದೇವ
ಹರಿಯೆ ಸರ್ವೋತ್ತಮನುವಿಶ್ವದಾದಿಯು ಅಂತ್ಯ
ಪರಮ ಪುರುಷನು ಲೋಕ ಸಂರಕ್ಷಕ
ಹರಿಮೋಕ್ಷದಾಯಕನು ಭಕ್ತಿಗಮ್ಯನು ನಿರತ
ಹರಿಕೃಪೆಗೆ ಸರಿಯೆನಿಪ ಭಾಗ್ಯವಿನ್ನಹುದೇ

**ಕಯಾಧು : ಹಾಡು** ರಾಗ : ಚಕ್ರವಾಕ - ಆದಿತಾಳ

ತಾಯಿ ಕರುಳಿನ ಕರೆಯ ಕೇಳಿ
ಕಾವುದೆನ್ನಯ ಕಂದನಾ,
ಬೇಯುತಿದೆ ಸಂದೇಹದುರಿ ಕಡೆ
ಹಾಯಿಸೈ ಕರುಣಾಘನಾ !
ಸಿಡಿವ ಬೆಂಕಿಯೊಳಿಟ್ಟರೋ ?
ಫಣಿ ದಂಶನಕ್ಕೆಡೆ ಗೊಟ್ಟರೋ ?
ಕಡಲಿಗೆಸೆದರೊ, ಕಾಡಿಗೊಯ್ದರೊ,
ಕಾಣೆನವರೇಂ ಗೈದರೋ ?
ಬಾಲ ಚಂದ್ರಮನಂತೆ ಬೆಳಗುವ
ತನಯನಂ ಹಾ ! ದುರ್ವಿಧಿ !
ಕಾಲಮೇಘದ ತೆರದೆಮಸಗಿತೆ
ದುಃಖಕಿದು ಪರಮಾವಧಿ !

**ಕಯಾಧು : ಹಾಡು** ರಾಗ : ಹಿಂದಿ - ಏಕತಾಳ

ತನುಜಂಗೇ । ತೆರದಿ । ವಿಷಮೀಯಲಿ ॥ ಪ ॥
ನಿಲಯದಲ್ಲಿ । ಲೀಲೆಯಿಂದಾಡುವ ।
ಬಾಲಂಗದೇ । ತೆರದಿ । ವಿಷಮೀಯಲಿ ॥ ೧ ॥
ಕೂಸುವ ಕೊಲ್ಲುವ । ಮಾನಿನಿಯಿರ್ಪಳೇ ।
ನಾನೇಪರಿ । ಸುತಗೆ । ವಿಷಮೀಯಲಿ ॥ ೨ ॥

**ಪ್ರಹ್ಲಾದ : ಹಾಡು** ರಾಗ : ಸಾರಂಗ - ಚಾಪುತಾಳ

ಶ್ರೀಲೋಲ । ವನಮಾಲ । ಶಿಷ್ಟಜನವರಿಪಾಲ ।
ಕಾಲಾಂಬುಧರನೀಲ । ಕಲಿತಸದ್ಗುಣಶೀಲ ॥ ಪ ॥
ಲೀಲಾಮಯಾ ನಿನ್ನ । ನಾಳೀಕಪದತೀರ್ಥ ।
ಹಾಲಾಹಲವ ಕುಡಿವೆ । ಪಾಲಿಸೆನ್ನನು ದೇವ ॥ ೧ ॥
ನಿಜಭಕ್ತಪಾಪಹರ । ಋಜುಗುಣಾನಂದಕರ ।
ಸುಜನಾಳಿಸೌಖ್ಯಕರ । ವಿಜಿತಾಹಿತಪ್ರಕರ ॥ ೨ ॥

ಜನಕ ನೀನೇ ನನಗೆ । ಜನನಿ ಕಮಲಾದೇವಿ ।
ತನುಜನನು ಪಾಲಿಸುತೆ । ಘನಕೀರ್ತಿ ಯಾಂತವುದು ॥ ೩ ॥

## (ಹಿರಣ್ಯಕಶಿಪು - ಪ್ರಹ್ಲಾದರ ದ್ವಂದ್ವಗೀತೆ)

**ಹಿರಣ್ಯ, ಪ್ರಹ್ಲಾದ : ಹಾಡು** — **ರಾಗ : ಮಾಂಡ್ - ಆದಿತಾಳ**

**ಕಶಿಪು :** ಎಲ್ಲಿಹ ಶ್ರೀನಾಥ ಮಾಧವನೆಲ್ಲಿಹ ಶ್ರೀನಾಥ

**ಪ್ರಹ್ಲಾದ :** ಎಲ್ಲೆಲ್ಲು ಇಹನುತಾತ ಮಾಧವ ಎಲ್ಲೂ ಇಹನು ತಾತ

**ಕಶಿಪು :** ಹೆಂಗಸೇನೋ ಜಾತ ಮಾಧವ ಹೆಂಗಸೇನೊ ಜಾತ

**ಪ್ರಹ್ಲಾದ :** ಭಂಗಗೈವತಾತ ಮಾಧವ ಭಂಗೈವ ತಾತ ಮಾಧವ ಭಂಗಗೈವತಾತ

**ಕಶಿಪು :** ಭಿಕ್ಷುವೇನೋಜಾತ ಮಾಧವ ಭಿಕ್ಷುವೇನೊ ಜಾತ

**ಪ್ರಹ್ಲಾದ :** ಪಕ್ಷಿಗಮನ ತಾತ ತ್ರಿಜಗವನು ರಕ್ಷಿಪನವತಾತ

**ಕಶಿಪು :** ರಣಕೆ ಬೀರುವೆನು ನಾಂ ಹರಿಯನು ರಣಕೆ ಬೀರುವೆನು ನಾಂ

**ಪ್ರಹ್ಲಾದ :** ಕೆಣಕಿ ನೋಡು ತಾತ ಹರಿಯನು ಕೆಣಕಿ ನೋಡು ತಾತ

**ಕಶಿಪು :** ಜಾರನೇನೋ ಜಾತ ಮಾಧವ ಜಾರನೇನೋ ಜಾತ

**ಪ್ರಹ್ಲಾದ :** ಬ್ರಹ್ಮಚಾರಿ ತಾತ ಮಾಧವ ಬ್ರಹ್ಮಚಾರಿ ತಾತ

**ಕಶಿಪು :** ಸಿಗಿದು ಬಿಡುವೆ ಜಾತ ಹರಿಯನು ಸಿಗಿದು ಬಿಡುವೆ ಜಾತ

**ಪ್ರಹ್ಲಾದ :** ಸುಲಿದು ಬಿಡುವ ತಾತ ನಿನ್ನನು ಸುಲಿದು ಬಿಡುವ ತಾತ

**ಪ್ರಹ್ಲಾದ : ಹಾಡು** — **ರಾಗ : ಹಂಸಾನಂದಿನಿ ....**

ಖ್ಯಾತಶಂಖ ಚಕ್ರಕರನೆ ದೇವ ಪಾಲಿಸೈ ॥ ಪ ॥
ಪೀತಾಂಬರವರನೆ ಧರನೆ ದೇವ ಪಾಲಿಸೈ ॥ ಅ.ಪ. ॥
ಮಣಿಗಣರುಚಿ ಕೂಟ ಮಕುಟ ಮಂಗಳಾಂಗನೆ
ಪ್ರಣತಭಕ್ತಪಾಲ ಪರಮಪುಣ್ಯಸಂಗನೆ ॥ ೧ ॥
ನಿರುಪಮ ಕರುಣಾಳು ಖಿಳಲೋಕನಾಯಕ
ಗರುಡವಾಹನ ವೇದವಿದಾತ ವಿಶ್ವದಾಯಕ ॥ ೨ ॥

# ೫. ವಾಮನಾವತಾರ

## ದೃಶ್ಯ : ಅರಣ್ಯ

**ನಾರದ : ಹಾಡು** **ರಾಗ : ಬೇಹಾಗ್ - ಆದಿತಾಳ**

ಸುರಕುಲಸುಖಂಕರ । ರಮಾವರ ।
ಪರಮದಯಾಕರ । ಭವಬಂಧನಹರ ॥ ಪ ॥
ವಾಸವವಿನುತ । ವರಗುಣಭರಿತ । ವಾಸುಕಿವರಶಯನ । ನಾರಾಯಣ ॥ ೧ ॥
ಪಾತಕಹರಣ । ಪಾವನಚರಣ । ಶ್ರೀತರುಣೀರಮಣ । ವರಾವರ ॥ ೨ ॥

**ನಾರದ : ಹಾಡು** **ರಾಗ : ಷಣ್ಮುಗಪ್ರಿಯ - ಆದಿತಾಳ**

ಶೇಷತಲ್ಪಶಯನ ಶ್ರೀರಮಣ ॥
ನೀಲಮೇಘಘನ ಶ್ಯಾಮಲ ವದನಾ ॥ ಪ ॥
ಕರುಣಾಭರಣ ಕಮಲಾರಮಣಾ
ಸಿರಿವರ ನಿನ್ನಯ ಧ್ಯಾನ ಪಾವನ ॥ ಅ.ಪ. ॥
ಗರುಡ ಗಮನ ತವ ಚರಣ ಕಮಲವ
ನಿರತ ಭಜಿಪೆ ವರಧನ್ಯ ಜೀವನಾ

**ಬಲಿ: ಹಾಡು** **ರಾಗ : ಕಲ್ಯಾಣಿ - ಆದಿತಾಳ**

ಶ್ರೀಹುತವಹನ ಸ। ಮಾಹತದುರಿತ
ಸ್ವಾಹಾದೇವೀಸಮಾಲಿಂಗಿತ ॥ ಪ ॥
ತ್ರೈಜಗದಾಶ್ರಿತ । ತೇಜೋಭರಿತ । ನೈಜವ್ರತಾವಪಿ ।
ರಾಜಿತ ಪೂತ ॥ ಸವನಾಧಿ ರಾಜ ಸಪ್ತಜಿಹ್ವ ಸರ್ವ ಭಕ್ಷಕ ।
ದಿವಿಜಾಳಿಗೀತ । ದಿವ್ಯಚರಿತ । ದೀನರಕ್ಷಕ ॥
ಪರಮ ಕೃಪಾಭರಣಶಿಖಾ । ಧರಸುಗುಣಾ ಕರ ಜಯ ಜಯ ॥ ೧ ॥

**ಬಲಿ-ವಿಂಧ್ಯಾವಳಿ : ಹಾಡು** **ರಾಗ : ಶಂಕರಾಭರಣ - ಆದಿತಾಳ**

ಶ್ರೀಪರಮಪಾವನ ವಾಸುದೇವ । ಪಾಪಾಪಹ ನಿರ್ಲೇಪ ಶ್ರೀನಿಧಾನ ॥ ಪ ॥
ಪರಮ ಪುಣ್ಯದಿಂದೀ । ಚರಣಸೇವೆಯು ।

ದೊರೆತುದಿಂದುನಮ್ಮ । ದುರಿತವಳಿದುದು ॥ ಅ.ಪ. ॥
ತೇಜೋಮಯಾಶ್ರಿತಪಾಲನ । ರಾಜೀವನಖಪ್ರಭ ವಾಮನ ॥
ಭಾವದಂಧಕಾರ । ಮಾಯವಾಗುತೆ ।
ತೀವಿತಂತರಂಗ । ದಿವ್ಯತೇಜದಿಂದ ॥ ೧ ॥

ಬ್ರಹ್ಮಾದಿಗಳು : ಹಾಡು ರಾಗ : ಕಾನಡ - ಆದಿತಾಳ

ಜಯ ಜಯ ವಾಮನ । ಜಲಜಸಮಾನನ ॥
ಜಯ ವಿಜಯನಿಧಾನ । ಕೃಪಾಧನ ॥ ಪ ॥
ಸುರರಿಪುಸೂದನ । ಸುಂದರಪಾವನ ।
ಸೂರ್ಯ ಸುಧಾಕರ । ಸುರಚಿಮನೋಹರ ॥
ವರಮಹಿಮಾಶ್ರಯ । ವಸುಗುಣಾದಿಪ್ರಿಯ ।
ಮಂಗಳಮೀವುದು । ಮಹಿತ ಶುಭೋದಯ ॥ ೧ ॥

## ೬. ಪರಶುರಾಮಾವತಾರಂ

### ದೃಶ್ಯ : ಅರಣ್ಯ - ಋಷ್ಯಾಶ್ರಮ

ನಾರದ : ಹಾಡು ರಾಗ : ಅಠಾಣ - ರೂಪಕತಾಳ

ಶ್ರೀವರ ಗಾನಲೋಲ ಶ್ರಿತಸುರಮುನಿಪಾಲ ॥ ಪ ॥
ಪಾವನ ಘನಲೀಲ ಪರತರಶುಭಶೀಲ ॥ ಅ.ಪ. ॥
ದೇವ ದೇವ ಸಂಸೇವಿತ ಪದಕಮಲ ಸುವಿಮಲ
ಭೂವರಾಳಿ ಸಂಪೂಜಿತಪೂತ ಪಾದಾಂಬುಜಯುಗ ॥ ೧ ॥

ಮುನಿಪತ್ನಿಯರು : ಹಾಡು ರಾಗ : ಯದುಕುಲಕಾಂಭೋದಿ - ಚಾಪುತಾಳ

ನದಿಗೆ ಪೋಗುವ ಬನ್ನಿ । ನಾರೀಮಣಿಯರೆಲ್ಲ ।
ಉದಕವ ತರೆ ನಾಥರಾಹ್ನಿಕಕೆ ॥ ಪ ॥
ಎದುರು ಮೂಡಣದೆಸೆಯೊ । ಉದಿಸಿದೆ ಕೆಂಬೆಳಗು ।
ಮುದದಿಂದೆ ಸಾರುವ । ಸುದತಿಯರೇ ॥ ಅ.ಪ. ॥

**ಶ್ರೀಮತಿ :** ಅರುಣೋದಯವಿದೀಗ । ಸರಿಯಾದ ಕಾಲವು ।
ತರಲಾಹ್ನಿಕಕೆ ಜಲವ । ಭರದಿಂದಲಿ ॥
**ಭಾಮತಿ :** ತೆರಳಿ ಶೀತೋದಕ । ದುರೆ ಮಿಂದು ಮಡಿಯುಟ್ಟು ।
ನೆರೆ ಗಂಗಾಪೂಜೆಯ । ವಿರಚಿಸುವ ॥ ೧ ॥

**ಕಿನ್ನರ ದಂಪತಿಗಳು : ಗೀತ**

ಹೊಳೆದಾಟುವವರೆಲ್ಲ ಬನ್ನಿ ! ಹೋ ! ಹೋ !
ಹರಿಗೋಲ ಹಿಡಿದು ಕಾದಿರುವೆ ನಾನಿಲ್ಲಿ,
ಹೊಳೆಯಾಚೆ ದಡದಲ್ಲಿ ಮನಮೆಚ್ಚುವುದ್ಯಾನ
ಎಲ್ಲೆಲ್ಲು ಅಡವಿ ನೀವಿರುವೆಡೆಯಲ್ಲಿ
ಬರಿದೆ ಚಿಂತಿಸಲೇಕೆ ? ಬನ್ನಿ ಬರುವವರೆಲ್ಲ,
ಆನಂದ ಹೊನಲಾಗಿ ಹರಿವುದಲ್ಲಿ.

**ರೇಣುಕೆ : ಹಾಡು** **ರಾಗ : ವಸಂತ - ಚಾಪುತಾಳ**

ಏನನರ್ಥವಿದಾದುದು । ಕಾಲವು ಮೀರಿ ॥ ಪ ॥
ಜ್ಞಾನಪಲ್ಲಟವೊಂದಿ । ನಾನಂಧಳಾದೆನೇ ॥ ಅ.ಪ. ॥
ಆರ್ಯಪುತ್ರನಿಗೆ ಸ । ಪರ್ಯಾಹ್ನಿಕಕೆ ಜಲವ ।
ಸೂರ್ಯೋದಯಕೆ ಮುನ್ನ । ತ್ವರ್ಯದೊಳೊಯ್ಯದೆ ॥ ೧ ॥
ಕುಂಭವಾಗದು ಮರಳಿಂ । ಸಿಂಬೆಗಿಲ್ಲವು ಸರ್ಪ ।
ಅಂಬುಜಬಾಂಧವ ಬಿಂಬವುದಿಸುವುದು ॥ ೨ ॥
ತಾಪಸವರಕಾಂತ । ಕೋಪರೊಳೆನಗಿನ್ನು ।
ಶಾಪವನೀವನೋ । ತಾಪವೇಂ ಬರ್ಪುದೋ ॥ ೩ ॥

**ಪರಶುರಾಮ : ಹಾಡು** **ರಾಗ : ಕೇತಾರ - ಆದಿತಾಳ**

ವಂದಿಪೆ ಚಂದ್ರಾಭರಣಾ । ಸುಂದರಗಿರಿಜಾರಮಣಾ ॥ ಪ ॥
ಇಂದ್ರಮುಖಾಖಿಲ । ಬೃಂದಾರಕಗಣ ।
ವಂದಿತಚರಣಾನಂದವಿತರಣಾ । ಇಂದಿಗೆ ನಿನ್ನಯ । ಸಂದರ್ಶನವನು ।
ಪೊಂದುತೆಧನ್ಯತೆ । ಯೊಂದಿದೆನೀಶಾ ॥ ೧ ॥

ಪರಮಕೃಪಾಕರ ಶಂಕರ ನಿನ್ನಿಂ ।
ಪರತರಶಸ್ತ್ರಾಸ್ತ್ರಾಗಮಸುಕುಲಾ ॥
ಪರಿಣತಿಯೊಂದಲು ಬಂದಿಹೆನಿಲ್ಲಿಗೆ ।
ಕರುಣಿಸಿ ಬೋಧಿಪುದೆನ ಗೊಲಿದೀಶಾ ॥ ೨ ॥

**ಪರಶುರಾಮ : ಹಾಡು** **ರಾಗ : ಕಲ್ಯಾಣಿ - ಚಾಪುತಾಳ**

ಲೀಲಾಮಯ ಶಂಕರಾ । ಪಾಲಿಸು ದೇವ ॥ ಪ ॥
ಫಾಲಲೋಚನಶೇಷ । ಮಾಲ ಶುಭೋದಯ ॥ ಅ.ಪ. ॥
ಸಕಲಕಲಾವಿದ । ನಿಖಿಲಾರ್ಥಸಂಪದ ।
ಅಕುಟಿಲಜ್ಞಾನದಾ। ಯಕಚಿನ್ಮಯ ॥
ಪ್ರಕಟಿತಮಹಿಮ ತಾ। ರಕಮಾಲಾಭೂಷಣ ।
ಶಿಖರಿಜಾನನಪದ್ಮ ವಿಕಸನಭಾಸ್ಕರ

**ರೇಣುಕೆ : ಹಾಡು** **ರಾಗ : ಸಾವೇರಿ - ಚಾಪುತಾಳ**

ಅಯ್ಯೋ ! ವಿಧಿಯೇ । ಪ್ರಿಯನ ವಧೆಯೇ ॥ ಪ ॥
ಕ್ರೂರನದಾವನೀ । ಘೋರವನೆಸಗಿ ।
ಮೀರಿದ ಸಂಕಟ । ಕಾರಣನಾದನೋ ॥ ೧ ॥
ದುರಿತವ ಕಾಣದ । ಪರತರಸಾಧುವ ।
ಕರುಣವದಿಲ್ಲದೆ । ಯಿರಿದನದಾವನೋ ॥ ೨ ॥

**ದೇವತೆಗಳು : ಹಾಡು** **ರಾಗ : ಪಹಡಿ - ಆದಿತಾಳ**

ಜಯ ಭೃಗುವಂಶಲಲಾಮ । ಸುಮಹಿಮ ।
ಜಯ ದಿನಕರಸಮತೇಜೋಧಾಮ ॥ ಪ ॥
ಶರಶಸ್ತ್ರಕಲಾ । ಪರಿಣತ ವೀರ । ಶಂಕರಪ್ರಿಯಶಿಷ್ಯ ಧೀರ ॥ ೧ ॥
ದುರ್ಮದಭೂಮಿಪ । ನಿರ್ಮೂಲನಕರ । ನಿರ್ಮಮಕಾರಶುಭಾಕರ ॥ ೨ ॥
ಸುಜನಸುಖದಾತ । ಶೌರ್ಯವಿಖ್ಯಾತ । ಸೂರ್ಯಕೋಟಿರುಚಿ । ಸುರುಚಿರತೇಜ ॥ ೩ ॥

# ೭. ರಾಮಾವತಾರ

## ದೃಶ್ಯ : ಅಂತರಿಕ್ಷಮಾರ್ಗ

**ನಾರದ : ಹಾಡು** **ರಾಗ : ಧೀರ ಶಂಕರಾಭರಣ - ಆದಿತಾಳ**

ಶ್ರೀವಿನೋದಲೀಲಾಮಯ । ಮುಕುಂದ ।
ಜೀವಕೋಟಿರಕ್ಷಾಕರ ನಿರ್ವಿಕಾರ ಪಾವನಾತ್ಮ ಶ್ರೀ । ಪಾಪದೂರ ಪಾಹಿ ॥ ಪ ॥
ಪಾದಭಕ್ತಜಾಲ । ಪಾಪರಾಶಿಕೀಲ ।
ಸಾಧುಯೋಗಿ ನಿತ್ಯಾ । ಮೋದದಾನಶೀಲ ॥
ವೇದಶೀರ್ಷಗೀತ । ವಿಶ್ವಪೂಜಿತ ॥
ಶ್ರೀಧರಾದಿತೇಯಾ । ಶ್ರಿತ ಭದ್ರ ಹಾತ ॥ ೧ ॥

**ಆಂಜನೇಯ : ಗೀತ**

ಶ್ರೀರಾಮ ಜಯರಾಮ ಕಲ್ಯಾಣ ರಾಮ,
ಜಾನಕೀ ಪ್ರಿಯಕಾಮ ರಾಮ ಶುಭನಾಮ.
ದಶರಥಾತ್ಮಜ ರಾಮ, ರವಿಕುಲ ಲಲಾಮ,
ಪಿತೃವಾಕ್ಯ ಪಾಲನಾರ್ಜಿತ ಕೀರ್ತಿಸೋಮ.
ಭಕ್ತಜನ ಕಲ್ಪತರು, ಕಾರುಣ್ಯ ಧಾಮ,
ಧನುಜ ವಿಧ್ವಂಸಿ, ರಣರಂಗ ನಿಸ್ಸೀಮ.

**ರಾವಣ : ಹಾಡು** **ರಾಗ : ಹಿಂದುಸ್ಥಾನಿ - ಆದಿತಾಳ**

ಎಂತಿಹಳಾಸುಂದರಿ । ಕಾಂತೆ ತಳೋದರಿ । ಲಾವಣ್ಯಮಂಜರಿ ॥ ಪ ॥
ಜನಕಜೆಯನುಪಮ । ಕನಕಲತಾಂಗವ ।
ಸೆನೆಯುತೆ ಬಳಲಿದೆ । ಮುನಿಸಿಜಶರದಿಂದೆ ॥ ೧ ॥
ಮೃಗನೇತ್ರಿಯ ಘನ । ಜಘನದೆ ಘನಪ ।
ನ್ನಗಸಮವೇಣಿಯು । ಸೊಗಯಿಸುತಿರಲು ॥ ೨ ॥
ಕೋಕನದಾಂಬಕೆ । ರಾಕಾಶಶಿಮುಖಿ ।
ಲೋಕೋತ್ತರರೂ । ಪಾ ಕಲಿತೆಯು ತಾನೆಂ ॥ ೩ ॥

**ಸೀತೆ : ಗೀತ**

ಮನಸಿನ ಚಿಂತೆ, ತನುತಳೆದಂತೆ,
ಹರಡಿದೆ ಎಲ್ಲೆಡೆ ಗಾಡಾಂಧಕಾರ.
ಗಗನದ ಚಂದ್ರನು ಬೆಳಗುತಲಿರುವನು,
ಘನಿಸಿದಂತೆ ಈ ನಿಶಾವಿಕಾರ.
ಲಂಕಾವಾಸಿನಿ, ದುಃಖಭೋಗಿನಿ,
ತೊಳಲುತಿರುವೆ ನಾಂ ವನದೆ ನಿರಂತ !
ಬಯಸುತೆ ಮಾಯದ ಹೊನ್ನ ಹರಿಣವನು
ಪಡೆದೆನೆ ಹಾ ! ಈ ಘೋರ ದುರಂತ.

**ಆಂಜನೇಯ : ಶ್ಲೋಕ**

ನಮೋನಂತಾಯ ಶಾಂತಾಯ
ನಮೋ ರಾಮಾಯ ವಿಷ್ಣುವೇ ॥
ನಮೋ ಪುಣ್ಯ ಚರಿತ್ರಾಯ
ರಘೂನಾಂ ಪತೆಯೇ ನಮಃ ॥
ರಾಮರತ್ನಮಹಂ ವಂದೇ
ಚಿತ್ರಕೂಟ ಪತಿಂ ಹರಿಂ ॥
ಕೌಸಲ್ಯಾ ಭಕ್ತಿ ಸಂಜಾತಂ
ಜಾನಕೀ ಪ್ರಾಣವಲ್ಲಭಂ ॥

**ಆಂಜನೇಯ, ರಾವಣ : ದ್ವಂದ್ವ ಗೀತೆ** **ರಾಗ : ಹಂಸಧ್ವನಿ - ಆದಿತಾಳ**

**ಆಂಜನೇಯ :** ಫಡಫಡ ! ಕೆಡಕಿನ । ನುಡಿಗಳ । ನುಡಿಯುತೆ ।
ಪೊಡವಿಯ । ಸುತೆಯನು । ವಂಚಿಪೆಯಾ ॥
ಬಿಡದೆ ನಿನ್ನ । ಬಡಿದು ಮುನ್ನ ಪೊಡವಿಗಿಳಿಪೆಭಾರವ
ಛೀ । ದುಷ್ಟ । ಛೀ । ಧೂರ್ತ ಛೀ । ದುರಾತ್ಮನೇ ॥ ಪ ॥

**ರಾವಣ :** ಎಲವೆಲವೋ ಖಳ । ಕಲಕಲ ಗಳಪುತೆ ।
ಬಲುಮೋಸದೆ ಬಂದೆಯ ನೀಚಾ ॥ ಛಲದೆ ನಿನ್ನ ।

ಬಲಿಯ ಕೊಂಡು । ನಲಿವೆ ಬಾರೊ ಕೋಡಗಾ ।
ಛೀ . ಭ್ರಷ್ಟ । ಛೀ । ದುಷ್ಟ । ಛೀ । ಮದಾಂಧನೇ ।।ಪ ।।

**ಆಂಜನೇಯ :** ರಾಕ್ಷಸ ನಿನ್ನನು । ಶಿಕ್ಷಿಸುತಾಂ ಮಿಗೆ ಕುಕ್ಷಿಯಸೀಳುವೆ ನೀ ಕ್ಷಣದಿ ।।
ಈಕ್ಷಿಸಿಂದು । ಲಕ್ಷಿಸಿ ರಿಪು । ಪಕ್ಷನಾನೆನುತ್ತಲಿ ।।
ಕಾಮಾಂಧ । ಕಾಠಾಂಧ । ಗರ್ವಮಂದಿರ ।। ೧ ।।

**ರಾವಣ :** ಬೆದರಿಪ ಬಡಕಪಿ । ಸದೆಯುವನೀದಶ । ವದನನು ನಿನ್ನನು
ನಿಮಿಷದೊಳು । ಕದನದಿನ್ನು । ಮುದದೆ ನಿನ್ನ । ಉದರವನ್ನು । ವಿದಳಿಸಿ।।
ಸಂತೋಷ । ವಂತಾಳ್ವೆ । ಭ್ರಾಂತಕೋಡಗಾ ।। ೨ ।।

## ೮. ಕೃಷ್ಣಾವತಾರ

### ದೃಶ್ಯ : ಅಂತರಿಕ್ಷ ಮಾರ್ಗ

**ನಾರದ : ಗೀತ**

ಶ್ರಿತಕಮಲಾ ಕುಚಮಂಡಲ ಧೃತಕುಂಡಲ ಏ !
ಕಲಿತ ಲಲಿತ ವನಮಾಲ ಜಯಜಯ ದೇವಹರೇ.
ದಿನಮಣಿ ಮಂಡಲ ಮಂಡನ ಭವಖಂಡನ ಏ !
ಮುನಿಜನ ಮಾನಸ ಹಂಸ ಜಯಜಯ ದೇವಹರೇ.
ಅಮಲಕಮಲದಳಲೋಚನ ಭವಮೋಚನ ಏ !
ತ್ರಿಭುವನ ಭವನ ನಿಧಾನ ಜಯಜಯದೇವಹರೇ.

**ನಾರದ : ಹಾಡು** **ರಾಗ : ಮಾಂಡ್ - ಆದಿತಾಳ**

ನೀರಜದಳನಯನಾ ಹರೇಕೃಷ್ಣ
ನಿರುಪಮಗುಣ ನಿಧಿಯೇ ।। ಪ ।।
ಮಂದರೋದ್ಧರ ಮಾಮನೋಹರ
ಬೃಂದಾವನಾ ಆನಂದ ಮುಕುಂದ ।। ೧ ।।
ನವತುಳಸೀವನ ಮೂಲಾಧಾರಿ
ಕುವಲಯದಳ ಲೀಲಾ ಗೋಪಾಲ ।। ೨ ।।

**ಶ್ರೀಕೃಷ್ಣ : ಹಾಡು** — ರಾಗ : ಬೇಹಾಗ್ - ಆದಿತಾಳ

ತಾರಾಧಿಪಾನನೇ ರುಕ್ಮಿಣೀ । ನೀರೇ ಮನೋಹರರೂಪಿಣೀ ॥ ಪ ॥
ಸ್ಮರಿಸುತೆ ನಿನ ಸುಂ।ದರತರರೂಪವ ।
ಸ್ಮರಶರಹತಿಯಿಂ । ತರಹಿರಿಸುವೆ ನಾಂ ॥ ೧ ॥
ಲಾಲಿಸಿ ನಿನ್ನಯ । ಲಾವಣ್ಯಕಳಾ ।
ಲೀಲೆಯ ನೊಂದೆನು । ಬಾಲಾಮಣೀ । ಪ್ರಿಯೇ ॥ ೨ ॥

**ಶಿಶುಪಾಲ: ಹಾಡು** — ರಾಗ : ಹಂಸಧ್ವನಿ - ಆದಿತಾಳ

. ಆರು ಸರಿಸಮರು ಧರೆಯೊಳಗಿರುವರು ಕಾಣೆ ನಮಗೆ ॥ ಪ ॥
ಶೂರರೆಂದೆನಿಸುತಲಿ ಮೀರಿನಾಂ ಮೆರೆಯುತಲಿರುವೆನು ॥ ಅ.ಪ. ॥
ಪರಮ ಗುಣಾಕರನೆನಿಸಿ ಸುರಪ ಸುಖ ಅನುಭವಿಸಿ
ಆರರೆ ಮೆರೆವೆವು ಸಿರಿಯಿಂದಿರುವೆವು
ಧುರದೊಳು ಜಯುವ ಭರದಿ ಪಡೆದಿಹೆವು ॥ ೧ ॥

**ರುಕ್ಮಿಣಿ : ಹಾಡು** — ರಾಗ : ಬೇಹಾಗ್ - ಆದಿತಾಳ

ಯದುಪುಂಗವಾ। ಕೃಷ್ಣಾ । ಮುದಮೀವುದೈ ॥ ಪ ॥
ಮಧುರಾವಲೋಕದಿಂ । ಸುದತಿಯ ಪಾಲಿಸೈ ॥ ಅ.ಪ. ॥
ದಿನದಿನಂ ನಿನ್ನನು । ನೆನೆ ನೆನೆದೆನ್ನಯ ।
ತನುಮನಂ ತಾಪವಂ । ತಳೆದಿರ್ಪುದೈ ಪ್ರಿಯಾ ॥ ೧ ॥
ಹರಿಗರ್ಹಮಾಗಿಹ । ವರವಸ್ತುವೀಗಲೇ ।
ನರಿಗಾಗಲಿರ್ಪುದು । ತ್ವರೆಯಿಂದ ರಕ್ಷಿಸೈ ॥ ೨ ॥
ಜಯದಾನಶೀಲ ನಿ । ನ್ನಯ ಪ್ರೀತಿಬೇಡುವೀ ।
ಪ್ರಿಯೆಯಲ್ಲಿಯೆಂದಿಗೆ । ದಯೆಗೆಯ್ವೆ ಮೋಹನಾ ॥ ೩ ॥

**ಎಲ್ಲರೂ : ಹಾಡು** — ರಾಗ : ನೋಟ್ - ಏಕತಾಳ

ಜಗದೀಶಾ ಮಾಧವ । ಜಯಕೀರ್ತಿವೈಭವ । ಜ್ಞಾನಾನಂದಾರ್ಣವ ॥ ಪ ॥
ಸಗಧಾರೀ ವಟು । ನಕ್ತಂಚರ । ಹಾರೀ । ಶ್ರೀಹರೀ ॥ ಅ.ಪ. ॥

ನಾಕೇಂದ್ರಶ್ರೀಕರ । ಲೋಕಾನಂದಾಕರ । ವೈಕುಂಠಮಂದಿರ ॥
ಕಾಕೋದರ ತಲ್ಪಾ ಕೃಪಾ । ಲೋಕಾ ಪಾಲಿಸೈ ॥ ೧ ॥

## ೯. ಬೌದ್ಧಾವತಾರ

### ದೃಶ್ಯ : ಕೈಲಾಸ ಪ್ರಾಂತ

**ನಾರದ : ಹಾಡು** **ರಾಗ : ಬೇಹಾಗ್ - ಆದಿತಾಳ**

ಶರನಿಧಿಶಯನಾ ಶ್ರೀನಾಥಾ ।
ಶರಣಾಗತಜನ ಸೌಖ್ಯಸಂದಾತ ॥ ಪ ॥
ಭೂಧರಧಾರಣ । ಭೂಧುರಹರಣಾ ।
ಮಾಧವ ಪೊರೆ ಮಧು । ಸೂದನ ನೀಂ ॥ ೧ ।
ಆಗಮನುತಮಹಾ । ಯೋಗಿಜನಾಶ್ರಿತ ।
ರಾಗರಹಿತ ದಯಾ । ಸಾಗರಾ ॥ ೨ ॥

**ಬುದ್ಧಸನ್ಯಾಸಿ : ಹಾಡು** **ರಾಗ : ಬೇಗಡೆ - ಚಾಪುತಾಳ**

ಪರಮಾಶ್ಚರ್ಯವು ನೋಡಲು ಲೋಕದ ಭ್ರಾಂತಿ ॥ ಪ ॥
ಕರ್ಮಭ್ರಾಂತಿಗೆ ಸಿಲ್ಕಿ । ಮರ್ಮವನರಿಯದೆ ।
ಧರ್ಮವ ತ್ಯಜಿಸಿಹ । ದುರ್ಮತಿಗಳ ರೀತಿ ॥ ೧ ॥
ಜನಮಾಂತರವ ನಂಬಿ । ಮನದೆ ಭ್ರಾಂತಿಯು ತುಂಬಿ ।
ತನುವಂ ಶೋಷಿಸಿ ವ್ರತವನು ಮಾಡಿ ದಣಿವರು ॥ ೨ ॥
ಸತ್ಯವಲ್ಲದ ವೇದ । ವತ್ಯಂತಪ್ರಿಯವಾಗಿ ।
ನಿತ್ಯ ಪಠನೆಗಿದ । ಗತ್ಯವೆಂದೆನಿಸಿತು ॥ ೩ ॥

## ೧೦. ಕಲ್ಕ್ಯವತಾರ

### ದೃಶ್ಯ : ಭೂಲೋಕ

**ನಾರದ : ಹಾಡು** **ರಾಗ : ಯಮನ್ - ಆದಿತಾಳ**

ಭವಭಯಸಂತರಣಾ । ಭಾಸುರಲೀಲಾಭರಣ ॥ ಪ ॥
ಜಲಧರನೀಲ । ಶಾಂತಿವಿಶಾಲ । ಜ್ಞಾನಿಜನಾವನಶೀಲಾ । ಮಾಧವ ॥ ೧ ॥
ನಾರಸನಯನ । ಸಾಗರಶಯನ । ಸತ್ಯದಯಾಮಯ ವಿಜಯ । ಮಾಧವ ॥ ೨ ॥

ಎಲ್ಲರೂ : ಹಾಡು ರಾಗ : ಮೋಹನ - ಆದಿತಾಳ

ಪಡೆದೆವು ಮನದಮಿತಾನಂದವ ॥ ಪ ॥
ಕಡೆಗೆ ದುಷ್ಟರಂ । ಬಡಿದು ಧರ್ಮವಂ ।
ಬಿಡದೆ ವರ್ಧಿಪಂ । ತಡಸಿಗೈದೆ ನೀಂ ॥
ಪೊಡವಿಯಜನರೊಲಿದಡಸಿ ಮುದಂ ನಿ ।
ನ್ನಡೆಗೆರಗುವರುರೆ । ಸಡಗರದಿಂದಲಿ ॥೧ ॥
ಕಲಿಯ ದೋಷಗಳ್ ಕಳೆದು ಧರ್ಮವೇ ।
ಬೆಳೆದು ಲೋಕದೊಳ್ । ತೊಳಗುವಂದದಿ ॥
ಛಲವದು ಮೀರಿ । ಬಲವನು ತೋರಿ ।
ಸಲೆ ರಚಿಸಿ ಬುಧಾ । ಕುಲವನೆ ಕಳೆದಿಹೆ ॥ ೨ ॥

ಎಲ್ಲರೂ : ಮಂಗಳ ರಾಗ : ಕೇತಾರ - ಆದಿತಾಳ

ಮಂಗಳಂ ದಶಾವತಾರಗೆ । ಮಹಾತ್ಮನಿಗೆ ॥ಪ ॥
ಮಂಗಳಮಯ । ತುಂಗದಯಾ । ಪಾಂಗದೇವನಿಗೆ ॥ ಭಂಗರಹಿತ ।
ಸಾಂಗನಿಗಮ । ಸಂಘವಿನುತ । ರಂಗನಿಗೆ ॥ ೧ ॥
ಸುಜನಪೋಷಣ । ಕುಜನಶೋಷಣ । ವಿಜಯ ಭೂಷಣಗೆ ॥ ಅಜದಿವಿಜ ।
ವ್ರಜವಿನುತ್ಯ । ತ್ರಿಜಗದೀಶ । ಭುಜಗಶಯನಗೆ ॥ ೨ ॥
ಪರಮ ಶಾಂತಿ । ಮಹಿತಗೆ ಶ್ರೀ । ತರುಣಿಯರಸಗೆ ॥ ಸುರಚಿರಶುಭ ।
ಚರಿತಗೆಗುಣ ಭರಿತಗೆ ಶ್ರೀನರಹರಿಗೆ ॥ ೩ ॥



# ತ್ರಿಜನ್ಮ ಮೋಕ್ಷ





**ಪ್ರಾರ್ಥನೆ : ಹಾಡು** **ರಾಗ : ಅಭೇರಿ - ಆದಿತಾಳ**

ಸೃಷ್ಠಿಯ ಉದರದಿ ಧರಿಸಿಹ ಜನಕ ನಮ್ಮನು ಕಾಯ್ವೆ ವಿನಾಯಕ ।
ಪ್ರಥಮ ಪೂಜೆಯಿದು ನಿನಗೆ ಸಮರ್ಪಣೆ
ನಿನಗಿಂತ ಮಿಗಿಲಾದ ದೈವವ ಕಾಣೆ ॥ ಪ ॥
ಮನಸಾರೆ ನಾನಿನ್ನ ನುತಿಸುವೆನಯ್ಯ
ಹೃದಯ ಮಂದಿರಕೆ ಬರಲಾರೆಯಾ ಸ್ವಾಮಿ ॥ ಅ.ಪ ॥
ಗರಿಕೆ ಪತ್ರೆಯಿದೋ ನಿನ್ನಯ ಪಾದಕೆ
ಬೇಡುವೆವು ನಿನ್ನ ಕರುಣೆಯ ಹರಕೆ
ಓಂಕಾರಮಯ ವಿಶ್ವ ವ್ಯಾಪಕ ಶಿವಸುಕುಮಾರನೆ ನೀನೇ ಗಜಮುಖ
ಸಿದ್ಧಿಬುದ್ಧಿ ಪ್ರಿಯನೀನೇ ಜ್ಞಾನ ನಿನ್ನ ನಾಮದ ಸ್ಮರಣೆ ಅಮೃತಪಾನ ॥ ೧ ॥

**ಸೂತ್ರಧಾರ : ಶ್ಲೋಕ** **ರಾಗ : ನಾಟಿ**

ಗಜಾನನಂ ಭೂತಗಣಾದಿ ಸೇವಿತಂ
ಕಪಿತ್ಥಜಂಬೂಫಲ ಸಾರಭಕ್ಷಿತಂ
ಉಮಾಸುತಂ ಶೋಕವಿನಾಶ ಕಾರಣಂ
ನಮಾಮಿ ವಿಘ್ನೇಶ್ವರ ಪಾದ ಪಂಕಜಂ

**ಸೂತ್ರಧಾರ : ಹಾಡು** **ರಾಗ : ಹಂಸಧ್ವನಿ - ಆದಿತಾಳ**

ಗಜವದನಾ ಬೇಡುವೆ ಗೌರೀತನಯಾ ॥ ಪ ॥
ತ್ರಿಜಗ ವಂದಿತನೇ ಸುಜನರ ಪೊರೆವನೆ ॥ ಅ.ಪ ॥

ಪಾಶಾಂಕುಶಧರ ಪರಮಪವಿತ್ರ ಮೂಷಿಕವಾಹನಮುನಿಜನ ಪ್ರೇಮ ॥ ೧ ॥
ಮೋದದಿನಿನ್ನಯ ಪಾದವ ತೋರೋ ಸಾಧುವಂದಿತನೆ ಆದರದಿಂದಲಿ ॥ ೨ ॥
ಸರಸಿಜನಾಭ ಶ್ರೀ ಪುರಂಧರ ವಿಠಲನ ನಿರತನೆನೆಯುವಂತೆ
ದಯಮಾಡೋ ॥ ೩ ॥

**ಸೂತ್ರಧಾರ : ಹಾಡು** **ರಾಗ : ಅಠಾಣ - ಮಿಶ್ರಝಂಪೆ ತಾಳ**

ಸರಸ್ವತಿ ಭಗವತಿ ಭಜಿತ
ಶ್ರಿತಜನ ಸಕಲಾಭೀಷ್ಠದಾಯಿನಿ
ಶ್ರೀ ಸರೋಜದಯಿತಾಂ ಮಹಿತಾಂ
ವಾಸವಾದಿನುತ ವಾಸುದೇವ ಭಕ್ತಾಂ ॥ ಪ ॥
ಸನಕಾದಿ ಮುನಿವರೇಣ್ಯ ಸಂಸ್ತುತಾಂ
ಕನಕಾಂಬರ ರತ್ನಹಾರ ವಿಭೂಷಿತಾಂ
ಅನುಪಮ ಕರುಣಾರಸ ಪರಿಪೂರ್ಣ
ಸುಲಲಿತ ಕವಿತಾದಿ ತೋಷಿತ ಸ್ವಾಂತಾಂ
ವನರುಹನಯನಾಂ ವಾರಣ ಗಮನಾಂ
ನಿರುಪಮ ವೀಣಾ ಪುಸ್ತಕಾಕ್ಷಮಾಲಾ ಸಹಿತಾಂ

## ೧. ನರಸಿಂಹಾವತಾರ

### ದೃಶ್ಯ : ರಸ್ತೆ

**ನಾರದ : ಹಾಡು** **ರಾಗ : ಜೋನ್‌ಪುರಿ - ಆದಿತಾಳ**

ಪಾಪನಾಶನ ದೇವ ॥ ತಾಪ ಭಂಜನದೇವ
ಸುರವಂದಿತಾ ದೇವ ದೀನತ್ಮರಾ ಪರಿಪಾಲಿಸು ದೇವ ॥ ಪ ॥
ಮೂಲೋಕ ಕಾವನ ಪರಮಪುರುಷನಾ
ಭಕ್ತರ ಪಾಲಿಪ ದೀನವನಾ ॥ ಅ.ಪ. ॥

### ದೃಶ್ಯ : ವೈಕುಂಠ ಮಹಾದ್ವಾರ

**ಜಯವಿಜಯರು : ಹಾಡು** **ರಾಗ : ಕನ್ನಡ - ಆದಿತಾಳ**

ನಾವೇ ಜಗದೊಳು ಮಾನ್ಯರು
ಮತಿಯುತರುಮಾನಿತರು ॥ ಪ ॥

ದೇವದೇವಸಮೂಹಕೆ ಮಿಗಿಲೆನಿಸಿಗುವ ಸಂಭಾವಿತರು ॥ ಅ.ಪ. ॥
ಶ್ರೀಮನ್ಮಹಾವಿಷ್ಣುವಿಗೂ ಮೇಲೆನಿಸಿದ ಉರುತರದ ॥
ಸ್ಥಾನವಿದಗಳಿಸಿ ಮೆರೆವೆವು ವೀರ
ದ್ವಾರಪಾಲಕರೆನಿಸಿ ಈ ಜಗದಿ ॥ ೧ ॥

**ಸನಕಾದಿಗಳು : ಹಾಡು** **ರಾಗ : ಕಲ್ಯಾಣಿ - ಆದಿತಾಳ**

ನಾರಾಯಣಂ ಭಜನಾರಾಯಣಂ
ನಾರಾಯಣಂ ವೇದ ಪಾರಾಯಣಂ ॥ ಪ ॥
ನಾರದ ವಂದಿತ ನಾರಾಯಣಂ । ವರ
ನಾದಕಳಾತ್ಮಕ ನಾರಾಯಣಂ ॥ ೧ ॥
ಲಕ್ಷ್ಮೀಕಾಂತ ನಾರಾಯಣಾ
ಮೋಕ್ಷದಾಯಕ ನಾರಾಯಣಂ ॥ ೨ ॥

**ಜಯವಿಜಯರು : ಹಾಡು** **ರಾಗ : ಕಾನಡ - ಆದಿತಾಳ**

ದೇವದೇವ ಜಗದೋದ್ಧಾರ
ನಗಧರ ಹಿತಕರ ಕರುಣಾಮೂರ್ತಿ ॥ ಪ ॥
ಸದಯಾಹೃದಯಾ । ಸನ್ನುತವಿಜಯಾ ।
ವಿಧಿಹರವಿನುತಲಕ್ಷ್ಮೀರಮಣ ॥ ಅ.ಪ. ॥

**ವಿಷ್ಣು : ಕಂದ**

ಪ್ರಥಮಜಾಹಿರಣ್ಯಾಕ್ಷಹಿರಣ್ಯಕಶ್ಯಪಂ
ದ್ವಿತೀಯಜಾ ರಾವಣ ಕುಂಭಕರ್ಣಂ
ತೃತೀಯಜಾ ಶಿಶುಪಾಲದಂತವಕ್ರರೆನಿಸಿ
ಜನಿಸಿ ಮಹಿಯೊಳ್

(ವಿಷ್ಣು-ಲಕ್ಷ್ಮಿಯರ ಯುಗಳ ಗೀತೆ)

**ರಾಗ : ಕಲ್ಯಾಣಿ - ಆದಿತಾಳ**

**ಲಕ್ಷ್ಮಿ :** ಹರಿಯೇನು ಈ ಮಾಯ ಇಂತಾದುದು
ಅರಿವಾಗ ದಾರಿಗೂ ಅಳವಾದುದು ॥ ಪ ॥

**ವಿಷ್ಣು :** ಶರಣರಿಗೆ ಮಮಕಾರ ಹೊರ ಬಂದಿದೆ
ಸರಿಹೋಗಿಸಲು ಎನಗೆ ಹೊಣೆಯಾಗಿದೆ ॥ ಅ.ಪ. ॥

**ಲಕ್ಷ್ಮಿ :** ಆಪದ್ಬಾಂಧವನೆಂದು ಮೊರೆ ಕೇಳ್ದೊಡೆ
ಭೂಪತನರಾಗುವ ಪರಿಗೈವರೇ ॥ ೧ ॥

**ವಿಷ್ಣು :** ಕರೆದೊಯ್ದು ವಿಧಿ ತನ್ನ ಕರ್ತವ್ಯಕೆ
ಬಲಿಗೈವುದೆಲೆದೇವಿ ತನ್ನಿಷ್ಟಕೆ ॥ ೨ ॥

**ಲಕ್ಷ್ಮಿ :** ಸಾಕಾರ ಜಗಕೆಲ್ಲ ನೀವಲ್ಲವೇ
ಲೋಕೇಶ ಕೈಬಿಡುವುದು ನ್ಯಾಯವೇ ॥ ೩ ॥

## ದೃಶ್ಯ : ಆಕಾಶಮಾರ್ಗ

**ನಾರದ : ಹಾಡು** **ರಾಗ : ಬೇಹಾಗ್ - ಆದಿತಾಳ**

ಮಂಗಳವದನಾ ತೇಜೋನಯನಾ
ಮೃದುಲಭಾಷಿತ ಲಕ್ಷ್ಮೀರಮಣಾ ॥ ಪ ॥
ಸುಖ ಪ್ರದಾಯಕ ಸಕಲ ವಿದಾಯಕ ॥
ಸುಖಪ್ರದಾಯಕ ಘನತರ ಜಗನ್ನಾಯಕ ॥ ಅ.ಪ. ॥
ಪಾಪನಿವಾರಣ ತಾಪಸಶರಣಾ
ಕಾರ್ಯದೆ ತೊಡಗಿ ಪಾಲಕನಾಗಲು
ಮರ್ತ್ಯದಿ ಜನ್ಮವ ತಾಳುವನೆಪದಿ
ಚಿತ್ತಶಾಂತಿಯ ದರ್ಶನ ನೀಡುವ ॥ ೧ ॥

**ದೇವೇಂದ್ರ : ಹಾಡು** **ರಾಗ : ಹಂಸಧ್ವನಿ - ಆದಿತಾಳ**

ಪ್ರತಿಭಟರೆನಿಪರೆದಿತಿಸುತರು
ಅತುಳ ಸಾಹಸದಿ ಮೆರೆವ ಎನಗವರು ॥ ಪ ॥
ಘೋರವಜ್ರವನು ಪಿಡಿದಿರೆ ನಾನು
ಧುರಕೆನಿಲ್ಲುವಧೀರನಾವನು
ಖೂಳ ದೈತ್ಯರಂ ಸೀಳಿ ತುಳಿಯುವೆ
ಬಳಿಕ ಮೋದವನು ತಳೆದು ಬಾಳುವೆ ॥ ಅ.ಪ. ॥

**ನಾರದ : ಹಾಡು** **ರಾಗ : ಕಾಮವರ್ಧಿನಿ - ರೂಪಕತಾಳ**

ದೇವ ದೇವದಿವಿಜವಂದ್ಯ ದೇವನಾರಸಿಂಹನೇ ॥ ಪ ॥
ನಾರದಾದಿ ಮೌನಿಸ್ತೋತ್ರ, ಸಕಲಲೋಕ ರಕ್ಷಕನೆ ॥ ಅ.ಪ. ॥
ಭಕ್ತಜನರ ಕಾವ ಬಿರುದುಪೊತ್ತ ಪರಮಪುರುಷನೇ
ಭಕ್ತಿಯಿಂದ ನಿನ್ನ ನೆನೆವ ಶಕ್ತಿ ನೀಡು ಕೇಶವನೇ ॥ ೧ ॥
ದನುಜವೈರಿ ದೇವ ಶೌರಿ ಮನದಿ ನಿರತ ವಾಸಿಸೈ
ವನಜನೇತ್ರ, ದಿವ್ಯ ಚರಿತ ಸನ್ಮತಿಯನು ನೀಡೈ ॥ ೨ ॥

## ದೃಶ್ಯ : ಹಿರಣ್ಯಕಶಿಪುವಿನ ದರ್ಬಾರ್

**ಹಿರಣ್ಯಕಶಿಪು : ವೃತ್ತ ॥** **ರಾಗ : ನಾಟಿ**

ವಿಧಿಯಿಂದದ್ಭುತ ಮಾದನೇಕ ವರಮಂಪೊಂದುತ್ತೆ
ಭೂಲೋಕಕ್ಕಿಂತಧಿಪರ್ ನಾವೆನಿಸಿರ್ಪಂ । ಪ್ರವರಶುಕ್ರಾಚಾರ್ಯ
ರಾಶೀರ್ವಚನಂ ಸುಧೆಯಂ ಸೇವಿಪರಾಗಿ ದಿಗ್ವಿಜಯದಿಂ
ಪ್ರಖ್ಯಾತರಾಗಿರ್ಪ ನಮ್ಮ ದಟಂ ದಕ್ಕದಾ ಸಾವಸಿರ್ಪನುಸಹೋದರಾ

## ದೃಶ್ಯ : ಕಾಡು ರಸ್ತೆ

**ಹಿರಣ್ಯಾಕ್ಷ : ಹಾಡು** **ರಾಗ : ಮೋಹನ - ಆದಿತಾಳ**

ವಸುಂಧರೆಯು ತಾನು ಕಾಣದಿರೆ ವಸುಂಧರೆಯು ತಾನು ॥ ಪ ॥
ಬಿಸುಜಲೋಚನೆಯುವಂಚಿಸುತೆನ್ನಂ ।
ಬಿಸುಜನಾಭನೊಳು ಮೊರೆಯನಿಡಲುಮಿಗೆ
ಪೊಡವಿಯೊಳು ಮುಡಿಪಿಡಿದು ಸೆಳೆಯುತಲಿ
ಚೆಂಡಾಡುವೆನು ಅಂಡಾತ್ಮಕಳಾದೋರ್ದಂಡದೆಲೆ ॥ ಅ.ಪ. ॥

**ಭೂದೇವಿ : ಹಾಡು** **ರಾಗ : ಚಕ್ರವಾಕ - ರೂಪಕತಾಳ**

ಬಳಲಿ ಕರೆಯ ನೀಡುವೆ
ಕರುಣೆರಕ್ಷೆ ಬೇಡುವೆ ॥ ಪ ॥
ದೀನಬಂಧು ಶ್ರೀಹರಿ

ವೇದನೆ ಕಡೆ ಹಾಯಿಸೋ ||ಅ.ಪ.||
ದುರುಳ ಬಾಧೆ ಸಹಿಸಲಾರೆ
ಶಾಂತಿಪಥವ ತೋರಿಸೋ
ಹರಿಯೊಲುಮೆಯು ಜೊನ್ನಕಾಂತಿ
ದಯದಿ ಬೇಗ ಪಾಲಿಸೋ || ೧ ||

## ದೃಶ್ಯ : ಹಿರಣ್ಯಕಶಿಪು ದರ್ಬಾರ್

**ಹಿರಣ್ಯಕಶಿಪು : ಕಂದ**

ಧರೆಕರಮದಿರುತಿರ್ಪುದು
ಗಿರಿಶಿಖರ ಪ್ರಕೃತಿ ಕೆಡುದುರುಳಿಪವೆಂಬ ವೋಲ್
ಬಿರುಗಾಳಿ ಬೀಸುತಿರ್ಪುದು. ಈ
ಪರಿಯ ಅಪಶಕುನಗಳಿಂದದೇನನರ್ಥ ಕರವೇ

## ದೃಶ್ಯ : ರಸ್ತೆ

ನಾರದ : ಹಾಡು — ರಾಗ : ವಸಂತ - ಆದಿತಾಳ

ಕಂದನಮನವೀಣೆಯಾ ಹರಿಯೇ
ಚಂದದಿ ನೀನೇನುಡಿಸೋದೊರೆಯೇ || ಪ ||
ಭಕುತಿಯ ಪಾವನ ಗಾನವಪಾಡುತ
ಲೋಕವೆ ಮೊಳಗುವ ನಿರ್ಮಲನಾದದಿ || ಅ.ಪ. ||
ಜ್ಞಾನದ ಗೀತೆಯ ಸತ್ಯದ ರಾಗದಿ
ಜ್ಞಾನದ ಲಯದೊಳು ಮೊಳಗುವ ವೀಣೆ
ಜನ್ಮದ ಸತ್ವವ ಕರ್ಮದ ರೂಪವ
ಸೃಷ್ಠಿಯ ಸೊಬಗಿನ ಭಾವವ ತೋರುವ || ೧ ||

## ದೃಶ್ಯ : ರಸ್ತೆ

ನಾರದ : ಹಾಡು — ರಾಗ : ಮಾಂಡ್ - ಆದಿತಾಳ

ಕರುಣಾಸಾಗರ ಕಾಮಜನಕಜಯ
ಗಾನಲೋಲ ಶ್ರೀ ಘನಲೀಲಾ

ಮಾಯಾ ಮೋಹಿತ ಸುರಜಾಲಾ ॥ ಪ ॥
ವೇದ ಗೋಚರ ವಸುಧಾಧಾರ
ಮೋದ ವಿತರಣ ಮುನಿಶರಣ ॥ ಅ.ಪ. ॥
ಮಹಿಮಾಕರ ಶ್ರೀ ನಾನಾಲೀಲ
ಮಾನಿತ ಶೀಲ ನಂದ ವಿಶಾಲ
ಮಧುಸೂಧನ ಶ್ರೀ ಮಾನಿನಿಲೋಲ
ಭವ ಸಂತಾರ ಶುಭಶೀಲ ॥ ೧ ॥
ಸರ್ವಲೋಕ ಸುಖದಾತ
ಪೂರ್ವ ಸುಪರ್ವಾನೀಕ ವಿಘಾತ
ನಾಕಾಧೀಶ್ವರ ಗೀತಪ್ರತಾಪ
ನರಹರಿ ಭಾಸುರ ನವರೂಪ ॥ ೨ ॥

### ದೃಶ್ಯ : ದೇವೇಂದ್ರನ ದರ್ಬಾರ್

**ದೇವೇಂದ್ರ : ಹಾಡು** **ರಾಗ : ಅಠಾಣ - ರೂಪಕತಾಳ**

ಲೋಕನಾಥನೆಮ್ಮಯ ವ್ಯಾಕುಲವ
ಹರಿಸಿಪೊರೆವಾ ॥ ಪ ॥
ಶರಣ ಜನರ ಮೊರೆಯನಾಲಿಸಿ
ಹರಿಯುತಾನು ವರಾಹನೆನಿಸಿ
ಉರುತರ ಹಿರಣ್ಯನ ಕೊಂದು
ಧರೆಯಪೊರೆದು ಶರಣನೆನಿಸಿದ ॥ ಅ.ಪ. ॥

### ದೃಶ್ಯ : ರಸ್ತೆ

**ನಾರದ : ಹಾಡು** **ರಾಗ : ಸಾರಮತಿ - ಆದಿತಾಳ**

ಕ್ಷೀರಾಬ್ಧಿ ವರಧಾಮ ನಾಗಶಯನ
ಸನಕಾದಿ ಮುನಿವಂದ್ಯ ಶ್ಯಾಮಲಕಾಯ ॥ ಪ ॥
ಭೂಭಾರ ಪರಿಹಾರ ಸರ್ವಧಾರಿ
ದೈತ್ಯವಿಹಾರ ವಿನಾಶಕಾರಿ ॥ ಅ.ಪ. ॥

## ದೃಶ್ಯ : ತಪೋವನ
(ಹಿರಣ್ಯ ಕಶಿಪು ತಪಸ್ಸುಮಾಡುತ್ತಿರುವುದು)

**ಹಿರಣ್ಯಕಶಿಪು : ಹಾಡು** — **ರಾಗ : ತೋಡಿ - ಅಟ್ಟತಾಳ**

ಚಂದ್ರಶೇಖರ ಕರುಣಾಕರ ಹರ ಸಾಂದ್ರ ಜಟಾಧರ ಭಾಸುರ ॥ ಪ ॥
ಭೂತೇಶಸನ್ನುತ ಭೂತಿ ಭಾಸಿತ ಹಿತ ಸಾಧದೋಷಾದಿವಿವರ್ಜಿತ ಹರ ॥ ಅ.ಪ ॥
ಬಾಲಕಪೋಷಕ ಶೀಲಕಾಲಾಂತಕ ನೀಲಕಂಧರಮುನಿಪಾಲಕಹರ ॥ ೧ ॥
ಗೌರೀಮನೋಹರ ಶೂರಗಜಾಸುರ ಧಾರಣಜನವರ ಭಾಸುರಹರ ॥ ೨ ॥

**ಮನ್ಮಥ : ಹಾಡು** — **ರಾಗ : ಕಲ್ಯಾಣಿ - ಆದಿತಾಳ**

ಹೂಬಾಣ ಹೂಡುವೆ ನೀಗ ಬೇಗ ॥ ಪ ॥
ಹೂಡಿ ಹೋರಾಡಿ ನಾ ಮಾಡುವೆ ಮೋಡಿ ॥ ಅ.ಪ. ॥
ಸುರರ (ಜಗವ) ಉಳಿಸಲು ತೊರೆಚೆ ನಾನೆಲ್ಲ
ಹರನೆಂದಿಗೂ ತಾ ಉಳಿಸನೆನ್ನಾದರೂ ॥ ೧ ॥
ಪ್ರಥಮದಿ ಹರನನು ಪ್ರಹರಿಪೆ ಪೂಶರದಿ
ಪಥವಗಿವೆನು ಬೇರೆ ಹಿತವಪಾಧಿನೆ ಸುರರ ॥ ೨ ॥

## ದೃಶ್ಯ : ಹಿರಣ್ಯಕಶಿಪು ಅರಮನೆ

**ಹಿರಣ್ಯ ಕಶಿಪು : ಹಾಡು** — **ರಾಗ : ಹಂಸಧ್ವನಿ - ಆದಿತಾಳ**

ವರವನು ಪಡೆದೆನು ಸರಸಿಜಭವನೊಳು
ಮರಣದ ಭಯವೇ ಇರದಾತೆರದೊಳು ॥ ಪ ॥
ವೈರಿಹರಿಯನು ಛಲತೋರಿ ಗೆಲುವೆನು ॥
ಖೂಳ ವೈರಿ ಹರಿಯನು ಛಲ ತೋರಿ ಗೆಲುವೆನು
ನಲಿ ನಾರಿ ಬಲ ತೋರಿ ಬಲುಮುದದಿಗೆಲುವೆನಾಂ ॥ಅ.ಪ. ॥

## ದೃಶ್ಯ : ಪಾಠಶಾಲೆ

**ಪ್ರಹ್ಲಾದ : ಹಾಡು** — **ರಾಗ : ಕಲ್ಯಾಣಿ - ಆದಿತಾಳ**

ನಾರಾಯಣ ಶ್ರೀಮನ್ನಾರಾಯಣ ।
ಲೋಕಪಾರಾಯಣ । ಭಕ್ತಜನಾವನ ॥ ಪ ॥

ಪನ್ನಗಶಯನ । ಪಾಪನಿವಾರಣ ।
ಪಾವನನಾಮ । ಪುಣ್ಯಚರಿತ್ರ ॥ ಅ.ಪ. ॥
ಅಗಣಿತ ಮಹಿಮ । ಅನಂತರೂಪ ।
ಆನಂದದಾಯಕ । ಆಶ್ರಿತವತ್ಸಲ ॥
ವಾರಿಜನಯನ । ವಾಮನರೂಪ ।
ವಾರಣೋದ್ಧಾರಾ ಶ್ರೀ ಲಕುಮಿರಮಣಾ ॥ ೧ ॥

**ಪ್ರಹ್ಲಾದ : ಹಾಡು** **ರಾಗ : ಕಲ್ಯಾಣಿ - ಆದಿತಾಳ**

ಸಕಲ ಜನರೆಲ್ಲ ಭಜಿಸಿರಿ । ಗೋವಿಂದನ ನಾಮವ ॥ ಪ ॥
ಪ್ರಕಟಿಸುವೆನು ನಿಜ । ಭಕ್ತಿಮಾರ್ಗದಲಿ ।
ಸಕಲಾಗಮನುತ । ಸಾರಮಧುರವಿದ ॥ ಅ.ಪ. ॥
ಇಂದಿರಾರಮಣ ಗೋವಿಂದ । ಸನಕಾದಿ ಸಾರದ ಮುನಿ ವಂದ್ಯ ।
ಅರವಿಂದ ನಾಭಮುಕುಂದನ ನಾಮವ ॥ ೧ ॥
ಭಾವಶುದ್ಧಿಯಲಿ ಭಜಿಸಬಹುದು । ರಾಜೀವನೇತ್ರನ ।
ಆವತನದಲ್ಲಿ ನೋಡಬಹುದು ॥ ಪಾವನಾತ್ಮಕನಸೇವೆ
ಮಾತ್ರದಲಿ ಆವಿರ್ಭವಿಸುವಾನಂದ ಮಹಿಮೆ ಇದ ॥ ೨ ॥

**ಅಮರ್ಕಗುರು : ಹಾಡು** **ರಾಗ : ಹಂಸಾನಂದಿ - ಆದಿತಾಳ**

ಉಮಾಪತೇ ಪೊರೆಯೈ
ನಮೋ ಹರಾ ॥ ಪ ॥
ಬಾಲಚಂದ್ರಶೇಖರಾ
ಶೂಲಪಾಣಿ ಶಂಕರಾ
ಪಾಲಿಸು ಅನವರತಂ
ಲೋಲಶಿವ ॥ ಅ.ಪ. ॥

**ಪ್ರಹ್ಲಾದ : ಹಾಡು** **ರಾಗ : ಹಂಸಾನಂದಿ - ಆದಿತಾಳ**

ರಮಾಪತೇ ಪೊರೆಯೈ
ನಮೋ ಹರೀ ॥ ಪ ॥

ನೀಲಮೇಘ ಶ್ಯಾಮ
ಶ್ರೀಲಕ್ಷ್ಮಿಕಾಂತಂ
ಪಾಲಿಸು ಅನವರತಂ
ಲೀಲಾಮಯಂ ॥ ಅ.ಪ.॥

## ದೃಶ್ಯ - ಖಯಾದು ಪೂಜಾಮಂದಿರ

**ಕಯಾದು : ಹಾಡು** — **ರಾಗ : ಮಾರ್ಗ ಹಿಂದೋಳ - ಆದಿತಾಳ**

ಸಲಹಮ್ಮ ಸುಖದಾತೆ ಸಂಪ್ರೀತೆಯೇ
ಸಲಿಸಮ್ಮ ಸದ್ಭಾವ ಜಗದಾತ್ರಿಯೇ ॥ ಪ ॥
ಈ ಬಾಳಮಂದಿರಕೆ ನೀಕಾಂತಿ ಚಂದ್ರಿಕೆ
ಅನುರಾಗ ಬೆಳಗಮ್ಮ ಕೃಪೆ ತೋರುತೆ ॥ಅ.ಪ॥
ಪತಿಸೇವ ಸಂಕಲ್ಪ ಸತಿಯಾತ್ಮಕೆ
ಸಮರಸವೆ ಸಾಧನೆಯು ನವ ಹರುಷಕೆ
ಪತಿಪಾದ ಸಿರಿ ಸಗ್ಗ ಅಮ್ಮಾ
ಪತಿಪಾದ ಸಿರಿ ಸಗ್ಗ ಅದನುಳಿಸುತೆ
ಸೊಗಸುಧೆಯ ಹರಿಸಮ್ಮ ಜಗದಾಂಬೆಯೆ ॥ ೧ ॥

**ಪ್ರಹ್ಲಾದ : ಹಾಡು** — **ರಾಗ : ಭಾಗೇಶ್ವರಿ - ರೂಪಕತಾಳ**

ವಾಣಿ ಕೃಪೆಯನು ತೋರಿ ಜ್ಞಾನ ಪ್ರತಿಭೆಯನು ಬೀರಿ
ಬಾಳ ಬೆಳಗುವಗುರುವೆ ತಾಮೊದಲ ದೈವಾ ॥ ಪ ॥
ಮಂಗಳವ ಬಯಸುವಾ ಮಮತೆಯಿಂ ಸಲಹುವಾ ॥
ಪ್ರೇಮ ಮೂರುತಿ ತಾಯೆ ಮತ್ತೊಂದು ದೈವ ॥ ಅ.ಪ ॥
ಈ ಜನ್ಮವನು ಹೊರುವ ಸಕಲ ವಸ್ತುವ ಕೊಡುವ
ಎಮ್ಮ ಜನ್ಮದನಾಡು । ತಾನೊಂದು ದೈವ ॥ ೧ ॥
ಸತ್ಯವನು ನುಡಿಯುತೇ ಅದರಂತೆ ನಡೆಯುತೆ
ಗುಣನಿದಿಯು ತಾನಾಗೆ ಮಾನವನೆ ದೈವಾ ॥ ೨ ॥
ಧರ್ಮವೆಂಬುದು ದೈವ ಕರ್ತವ್ಯ ಪರದೈವ
ಜಗವ ಬೆಳಕುಗೊಳಿಪ ಪರಮ ಸೃಷ್ಟಿಯೆ ದೈವ ॥ ೩ ॥

ಎಲ್ಲಾ ದೈವಕೆ ಮಿಗಿಲು ಸೃಷ್ಟಿ ಪಾಲಕನೆನಲು
ಶ್ರೀಹರಿಯು ಒಬ್ಬನೇ ಸಕಲದೈವಾ ॥ ೫ ॥

**ದೃಶ್ಯ : ರಸ್ತೆ**

**ನಾರದ : ಹಾಡು** **ರಾಗ : ಹಿಂದೋಳ - ಆದಿತಾಳ**

ಹರಿನಾರಾಯಣ
ದುರಿತನಿವಾರಣ ಲಕ್ಷ್ಮೀರಮಣ ॥ ಪ ॥
ನೀರಜನಯನಾ ನೀರಧಿಶಯನ
ಕರುಣಾಭರಣ ಲಕ್ಷ್ಮೀರಮಣ ॥ ಅ.ಪ. ॥
ವೇದ ರೂಪ ಮುನಿ ವಂದಿತ ಚರಣ
ಬೇಧ ರಹಿತ ಶ್ರೀ ಪದ್ಮಾಭರಣ
ನಾದಬಿಂದು ಕಳಾತೀತ ಸುಗುಣ
ಮೋದವಿತ್ತುಪೊರೆ ನಿತ್ಯ ಸತ್ಯಗುಣ ॥ ೧ ॥

**ದೃಶ್ಯ : ಅರಣ್ಯ**

**ಪ್ರಹ್ಲಾದ : ಹಾಡು** **ರಾಗ : ಪುನ್ನಾಗವರಾಳಿ - ಆದಿತಾಳ**

ಭವಕರ್ಮವಿನ್ನೇಕೋ
ಘನರೂಪಿ ನೀ ಸಾಕೋ ॥ ಪ ॥
ಪ್ರೇಮಮಂದಿರ ನಿನ್ನ ಚರಣಾ
ಅಲ್ಲಿ ಸುಂದರ ಜೀವಶರಣ
ಪಕ್ಷಿವಾಹನ ಹರಿಯೆ ಬಾರೋ
ನಿತ್ಯ ನಿರ್ಮಲ ದಾರಿ ತೋರೋ ॥ಅ.ಪ.॥

**ದೃಶ್ಯ : ಅಂತಃಪುರ**

**ಕಯಾದು : ಹಾಡು** **ರಾಗ : ಶುಭಪಂತುವರಾಳಿ - ಆದಿತಾಳ**

ನಲುಮೆ ಕಂದ ದೂರವಾದ ಕಾಲಚಕ್ರ ಸೆಳೆತದಿ ॥ ಪ ॥
ಆವ ಪಾಪವಿದು ಎನ್ನ ಹೃದಯ ಬರಿದು ಮಾಡಿತು ॥ ಅ.ಪ. ॥

ಪತಿಯು ಕ್ರೂರನಾದ ಭರದೊಳು ಸುತನ ಪರಿಯದೇನೋ ಅರಿಯೆ
ಪತಿತಳಾದ ಎನ್ನ ಪೊರೆವ ಹಿತವರಾರು ಕ್ಷಿತಿಯೊಳು ॥ ೧ ॥
ಮೋಹಮಮತೆ ಸುಧಾಚಂದ್ರ ಕುಲಕೆ ಶಾಂತಿ ನೀಡುತೆ
ಭಾಗ್ಯಹೀನಳಾದೆ ನಾನು ಸ್ವರ್ಣಕಾಂತಿ ಅಳಿದಿರೆ
ಕಾಲಪಾಶದೆದುರು ನೋಡಿ ತಪ್ಪಿಸಿ ಬದುಕು ದೂಡಿದೆ ॥ ೨ ॥

**ಕಯಾದು : ಹಾಡು** **ರಾಗ : .....**

ಇದಾವ ಪಾಪ ಫಲ ಅಕಟ ವಿಧಿ ॥ ಪ ॥
ಎದೆ ಜರಿಯೆ ಬಿರಿಯೆ ಸರಿಯೆ ವಿಧಿ ॥ ಅ.ಪ ॥
ಈವೆನೆ ದೇವ ವಿಷವನಾಹಾ
ಆವಾವ ದೋಷಕರ ಏವೆನು ಬಾಲಕಜೀವಹರ ॥ ೧ ॥
ಭಾವಕ ದಾಯಿ ಭಜಕಾದಾಯಿ
ದೇವೇಶ ಕಿಂಕರ ತಾ ಭವಭಯಹಾರಕ ಭಾವಕೃತ ॥ ೨ ॥

**ಹಿರಣ್ಯಕಶಿಪು : ಹಾಡು** **ರಾಗ : ಹಂಸಾನಂದಿ - ಆದಿತಾಳ**

ತೋರು ಬೇಗ ಹರಿಯ ತೋರದಿರೆ ಸೇರು ಯಮನ ನಿಲಯ ॥ ಪ ॥
ಧರಾಮಂಡಲದಿ ಶೋಭಿವನಭದಿ ಮೆರೆವನದಿಗಳಲಿ ವಾರಾವಾರಿಧಿ
ನಾಸಿರ ನಾಮವ ಲೇಸಿನಿಂ ಧರಿಸಿದ ನಿಶಾಚರರ ಪರಮ ವೈರಿ ಹರಿಯನು ॥ಅ.ಪ॥

**ಪ್ರಹ್ಲಾದ : ಹಾಡು** **ರಾಗ : ಸಿಂಹೇಂದ್ರ ಮಧ್ಯಮ - ಆದಿತಾಳ**

ಕರುಣಾಳು ಶರಣೆಂಬೆ ದಯತೋರೆಯಾ
ನೊಂದಾತ್ಮಕಾನಂದ ನೀ ತಾರೆಯಾ ॥ ಪ ॥
ಮತಿಯನ್ನು ಹೀನಜನಕೆ ನೀನೀಡುವೆ
ಗತಿಯನ್ನು ಹೀನಮನಕೆ ನೀ ತೋರುವೆ
ನಿನ್ನಡಿಯ ನಂಬಿರುವ ನಿನಕಂದನಾ
ಎಡೆಬಿಡದ ಅಡಿಯಿಡಿಸೋ ನಿನ ಭಕುತನಾ ॥ಅ.ಪ॥
ನವ ಜೀವ ನವಶಕ್ತಿನಾ ಬಯಸುವೆ

ಬದುಕಲ್ಲಿ ಮುದ ತುಂಬೆನಾ ಸುಖಿಸುವೆ
ಚೈತನ್ಯ ರೂಪಿಯು ನೀನಲ್ಲವೇ
ಈ ಬಾಳಸುಮವರಳೆ ನಾ ಕಾದಿಹೆ ॥೧॥

## ೨. ರಾಮಾವತಾರ

### ದೃಶ್ಯ : ರಸ್ತೆ

**ನಾರದ : ಹಾಡು** **ರಾಗ : ಹಿಂದೋಳ - ರೂಪಕತಾಳ**

ಕ್ಷೀರವಾರಿಧಿ ಶಯನ ತಾನು ಮನುಜ ರೂಪವ ತಳೆದುಬಂದನು
ದುಷ್ಟ ಶಿಕ್ಷಣ ಶಿಷ್ಠ ರಕ್ಷಣ ಸತ್ಯಸ್ಥಾಪನೆ ಗೈಯ್ಯಲೆಂದು ॥ ಪ ॥
ಮಾನವೋತ್ತಮ ರಾಮನಾಗಿ । ಜನಕ ನಂದಿನಿ ಜ್ಯೋತಿಯಾಗಿ
ಲೋಕಕೆಲ್ಲಾ ಗುರುವೆ ಆಗಿ ತ್ರೇತಾಯುಗದ ನೇತ್ರನಾಗಿ ॥ ಅ.ಪ॥

### ದೃಶ್ಯ : ರಾವಣನ ದರ್ಬಾರ್

**ರಾವಣ : ವೃತ್ತ ॥** **ರಾಗ : ನಾಟಿ**

ನವಗ್ರಹಗಳೇ ಎನ್ನ ಮೆಟ್ಟಿಲು, ಬಡದೇವೇಂದ್ರನ ಸದೆದವನೆ
ಕುಮಾರ ಇಂದ್ರಜಿತು, ಆನೆಯಂ ಉಸಿರಿನಿಂ ಸೆಳೆದವನೆ ತಮ್ಮ
ಕುಂಭಕರ್ಣ ಮಹಾ ತಂತ್ರನಿಪುಣ ಮಾವ ಮಾರೀಚ
ಶತ್ರುಗಳಂ ಕ್ಷಣದೊಳ್ ಕ್ಷಯಿಪ ಅಕ್ಷಯಕುಮಾರ ಸಿರೆ ಈ ಭುವನ
ಬ್ರಹ್ಮಾಂಡದೊಳ್ ಎನಗಾರ್ ಸರಿಸಮರು

**ರಾವಣ : ಹಾಡು** **ರಾಗ : ಹಂಸಧ್ವನಿ - ಆದಿತಾಳ**

ನೆರೆ ಮೆರೆಯುವೆ ಧುರದಲಿ ಶೌರ್ಯದಿ
ಮಹಾ ವಿಭವ ಘನ ಬಾಹುಬಲದಿ ॥ ಪ ॥
ಧರೆಯೊಳಗಾರು ಸರಿಸಮರೆನಗೆ ಅಮಿತ ಪರಾಕ್ರಮದಿ ।
ಧುರದೊಳು ಮದಾಂಧ ರಿಪುಗಳ ಶಿರತರಿಯುವೆ ॥ ಅ.ಪ ॥

**ಅಥವಾ**

**ರಾವಣ : ಹಾಡು** **ರಾಗ : ದರ್ಬಾರಿ ಕಾನಡ - ಆದಿತಾಳ**

ಭಲಾ ಭಳಿರೆ ಭುವನ ಭೀಕರ ನಾಂ
ಅರರೆ ಎನಗೆ ಸರಿಸಮಾನ  ಇ ಹರೆಧರೆಯೊಳು ॥ ಪ ॥
ಸುರರ ಬಲವ ಹಿಡಿದು ಪಿಡಿದು ತಗಿದು ಬಿಸುಡುವೆನಾಂ ॥ ಅ.ಪ. ॥
ಚಂಡವೈರಿಗಳಿಗೆ ನಾಂ ಪ್ರಚಂಡನೆನಿಸುತೆ
ಭಂಡರೆದೆಯ ದಿಂಡ ಮುರಿದು ಪುಂಡರಗನು ಕೊಂದು ನಾಂ ॥ ೧ ॥

**ಕುಂಭಕರ್ಣ : ಹಾಡು** **ರಾಗ : ಹಿಂಧೋಳ - ಖಂಡಜಾತಿತಾಳ**

ಭೂತಲಕೆ ಬಲಿ ಕೊಡುವೆ ವಾಪಿರಾಮನ ಭಗದಿ
ಪೌಲಸ್ತ್ಯ ಸೋದರರ ಕೆಣಕಿ ಬದುಕುವರುಂಟೆ
ಪರಶಿವನೆ ಮುನಿಯಲಿ. ಗಿರಿಧರೆಯು ನಡುಗಲಿ
ಬಿಡದೆ ಕೊಲ್ಲುವೆನು ಬಡ ಮಾನವರಾ ॥

**ಶೂರ್ಪನಖಿ : ಹಾಡು** **ರಾಗ : .... ತಾಳ ......**

ಉರಿವುದು ಮೂಗು । ಹರಿವುದು ರಕ್ತ
ಬಾಳುವುದೇಂ ಇದರಿಂ ಬಂಡಾಟ
ನರ ಅಧಮಲಕ್ಷ್ಮಣ । ಕೊಯ್ದನು ಮೂಗ
ಉರಿಯ ಸಹಿಸೆನಣ್ಣಾ ಉರಿ ಉರಿಯಾ ॥

**ರಾವಣ : ಹಾಡು** **ರಾಗ : ಹಂಸಧ್ವನಿ - ಆದಿತಾಳ**

ಭಲಂಭಳಿರೇ ನಾಂಪೋಪೆನಿಂದು ಜವದೀ ॥ ಪ ॥
ಕೆಡುಗ ರಾಮನಿಹ ಅಡವಿಯನ್ನು ನಾಂ
ಒಡನೆ ಸೇರುತೆ ಸಡಗರದಿಂ
ಮುದದಿ ಜಾನಕಿಯ ಬಿಡದೆನಾಂಬಹು
ಸಡಗರದಿ ಕಾನನದಿಂ ಪಿಡಿತರುವೆ ॥ ಅ.ಪ. ॥

## ದೃಶ್ಯ : ರಸ್ತೆ

**ಮಾರೀಚ : ಹಾಡು** **ರಾಗ : ಹಿಂದೋಳ - ಆದಿತಾಳ**

ರಾವಣನೆಂತಹ ಸುವಿಚಾರ
ನ್ಯಾಯನೀತಿಗಳ ತೊರೆದಿಹನೀಕ್ರೂರ ॥ ಪ ॥
ಪರಸತಿಯರು ಎಂಬ ಪರಿಯನು ತಿಳಿಯದೆ
ನರಕ ಭಾಜನನಾಗ ಲೋಚಿಪುದೇ ॥ಅ.ಪ. ॥

## ದೃಶ್ಯ : ಅರಣ್ಯ - ಪರ್ಣಶಾಲೆ

**ಸೀತೆ : ಹಾಡು** **ರಾಗ : ಜಂಜೂಟಿ - ಆದಿತಾಳ**

ಆಲಿಸೂ ನೀಲಾಬ್ಜದಳ ನಯನಾ ವನವಿರಾಜ ಮಾನನೇ ॥ ಪ ॥
ಕಾಂಚನ ಮೃಗವಿದ ನೀವ್ ತಂದು ಕೊಟ್ಟರೆ ನಾಸಂತಸದಿರುವೆ
ವನ ವಿರಾಜಮಾನನೇ ॥ ಅ.ಪ. ॥
ಕಂಡದ ಬಯಸುವ ಚಂಡಿ ನೀ ನೆನ್ನದೆ ತಂದು ಕೊಡಿರಿ ಮೃಗವ
ವನ ವಿರಾಜಮಾನನೆ ॥ ೧ ॥

**ಲಕ್ಷ್ಮಣ : ಹಾಡು** **ರಾಗ : ಹಂಸಾನಂದಿ - ರೂಪಕತಾಳ**

ಕ್ರೋಧವೇಕೆ ಮಾತೆ ಮನದಿ ಭೇದವೇಕೆ ನೀನೆಣಿಸಿದೆ ॥ ಪ ॥
ನಾನಾತೆರ ಕಾನನದಿ ದೀನತೆಯನು ತಳೆದುಮನದಿ
ಸೂನುವಿನಾತೆರದಿ ಸೇವೆ ಮಾನಿನಿಯೆ ಗೈದು ಫಲವೇ ॥ ಅ.ಪ. ॥

**ಮಾಯಾರಾವಣ : ಹಾಡು** **ರಾಗ : ಕಾಮವರ್ಧಿನಿ - ರೂಪಕತಾಳ**

ಶಂಭೋ ಮಹಾದೇವ
ಶಂಕರಗಿರಿಜಾರಮಣ ॥ ಪ ॥
ಶಂಭೋ ಮಹಾದೇವ
ಶರಣಾಗತ ಜನರಕ್ಷಕ
ಅಂಭೋರುಹಲೋಚನಾ ಪಾದಾಂಬುಜ ಭಕ್ತಿಂದೇಹಿ ॥ ಅ.ಪ. ॥

## ದೃಶ್ಯ : ಅರಣ್ಯದ ಮತ್ತೊಂದು ಭಾಗ

## (ರಾವಣ - ಜಟಾಯು : ದ್ವಂದ್ವಗೀತೆ)

ರಾಗ : ಹಂಸಧ್ವನಿ - ಆದಿತಾಳ

**ರಾವಣ :** ಪಥ ಪಥ ಬಿಡು ಬಡಗೃಧ್ರವೇ
ತಡೆಯ ಬಂದಿಹೇ ನ್ಯಾಯವೇ ॥

**ಜಟಾಯು :** ಲೋಕಮಾತೆಯನು ನೀನೆಲಾ
ಏಕೆಳೆದೊಯ್ಯುವೆ ಬಿಡು ಅವಳಾ ॥

## ದೃಶ್ಯ : ಪರ್ಣಕುಟೀರ

**ರಾಮ : ಹಾಡು** ರಾಗ : ಮಲಯಮಾರುತ - ಆದಿತಾಳ

ಪುಣ್ಯವತೀ ತಾಳುಧೃತಿ ಬರುತಿಹೆನೇ ನಿನ್ನ ವಿರಹವತಿ ॥ ಪ ॥
ಕೋಕಿಲ ಭಾಷಿತೆ । ಕೋಮಲ ಪ್ರಿಯಲತೆ
ತಾಪವ ಹರಿಸುತೆ । ಇರಿಸುನೀಂ ಸ್ಥಿರತೆ ॥ ಅ.ಪ ॥
ಸೆರೆಯ ತೊಡೆಯಲು ನಿಶೆಯ ಹರಿಸಲು
ಸಾರಿಬರುತಿಹೆ ಚಿತ್ತವೇಗದಿ ॥ ೧ ॥

## ದೃಶ್ಯ : ಋಷ್ಯ ಮೂಕ ಪರ್ವತ ಪ್ರದೇಶ

**ರಾಮ : ಹಾಡು** ರಾಗ : ಕಾಂಭೋದಿ - ಮಿಶ್ರ ಚಾಪುತಾಳ

ಆ ರಾಮ ದೊಳುನಿನ್ನ ಯಾರು ಕದ್ದೊಯ್ದರೋ
ಕ್ರೂರಮೃಗಗಳು ನಿನ್ನ ಸೀಳಿ ಕೊಂದವೋ ಕಾಣೇ
ಅಯ್ಯೋ ಎನ್ ಜಾನಕಿಯೆ ಮಮ ಪ್ರಾಣನಾಯಕಿಯೆ
ಹಾ ಎನ್ನ ತೊರೆದೆಯಾ ಸೀತಾ ಸೀತಾ ಸೀತಾ

**ಆಂಜನೇಯ : ಹಾಡು** ರಾಗ : ಧನ್ಯಾಸಿ - ಆದಿತಾಳ

ವನರುಹಲೋಚನ ಆರಿವರಾಹಾ
ವಂದಿಸೆ ಯೋಗ್ಯರು ತೋರುವರಾಹಾ ॥ ಪ ॥

ವಿಶ್ವಪಾಲನ ಕಾರ್ಯಕೆ ಬಂದಿಹ
ತೇಜೋಮೂರ್ತಿಗಳಾಗಿರಬಹುದೇ
ಕರದೊಳು ಚಾಪವ ಪಿಡಿದಿಹರೇಕೆ
ಶಿರದಲಿ ಜಟೆಯನು ಕಟ್ಟಿಹರೇಕೆ
ನಾರು ಮಡಿಯನು ಧರಿಸಿಹರೇಕೆ
ವಿಶ್ವಪಾಲನ ಕಾರ್ಯಕೆ ಬಂದಿಹ
ತೇಜೋಮೂರ್ತಿಗಳಾಗಿರಬಹುದೇ ॥ ೧ ॥

**ದೃಶ್ಯ : ಕಿಷ್ಕಿಂದ ಪ್ರಾಂತ್ಯ**

**ಸುಗ್ರೀವ : ಹಾಡು** **ರಾಗ : ಶ್ರೀರಾಗ - ಆದಿತಾಳ**

ದಯಾಮಯಬೇಡುವೆ
ಭಯಹರನೆ ಸುಯಶವನು ಬಯಸುವೆನು ॥ ಪ ॥
ಭಯಾರ್ತನಾಗಿಹೆ ಸಹಾಯವರಿಯದೆ
ಪಯೋನಿಧಿಯೆ ನೀಂ ಪರಿಹರಿಸುವುದು ॥ ಅ.ಪ ॥

**ದೃಶ್ಯ : ಋಷ್ಯಮೂಕ ಪರ್ವತ**

**ರಾಮ : ಹಾಡು** **ರಾಗ : ನಾದನಾಮಕ್ರಿಯೆ - ಆದಿತಾಳ**

ಸರಸವನಾಡಲು ಬಾರೆಯಾ
ಸಾರಸಮುಖಿ ಮುಖ ತೋರೆಯಾ ॥ ಪ ॥
ಶರವ ಮುರಿದು ವರಿಸಿಹೆ ನಿನ್ನ
ಘೋರ ಕಾನನದಿ ಮರೆಯಾದೆಯ ನೀ
ಕ್ರೂರ ದೈತ್ಯನ ವಶಳಾದೆಯ ನೀ
ನಾರಿ ಮಣಿಯೆ ಮುಖ ತೋರೆಯಾ ॥ ೧ ॥

**ದೃಶ್ಯ : ಲಂಕಾನಗರ**

**ಆಂಜನೇಯ** **ರಾಗ : ರಂಜನಿ - ಆದಿತಾಳ**

ಸಾಕಿ : ಮಾತಾ ಎಲ್ಲಿ ಅರಸಲಿ ನಿನ್ನ ಹೇ ಜನಕಜಾತೆ
ಹಾಡು : ಕಾಣುವೆನೆ ನಾನು ನಿನ್ನ ತಾಯೆ

ರಾಮನ ಬದುಕಿನ ಮಂಗಳ ಲಕ್ಷ್ಮೀ ॥ ಪ ॥
ಸ್ವಾಮಿಯ ಮನದ ಶೋಕವ ಅಳಿಸಲು
ನಿನ್ನಯ ಚರಣದಿ ಶಿರವನಿಡಲೂ ॥ ಅ.ಪ. ॥
ಬಂದಿರುವ ನಿನ್ನ ಕಂದಗೆ ದರುಶನ
ನೀಡುತೆ ಸಲಹೌ ಕರುಣಾಮೂರ್ತಿ
ಸೀತಾ ರಾಮ ಎಂಬ ನಾಮ ಆಯಿತೆ ಎನ್ನಯ ನಿತ್ಯ ಜೀವನ ।
ರಘುಪತಿ ರಾಘವ ರಾಜಾ ರಾಮ । ಪತಿತ ಪಾವನ ಸೀತಾರಾಮ ॥ ೧ ॥

## ದೃಶ್ಯ : ಅಶೋಕವನ

**ಸೀತೆ : ಹಾಡು** **ರಾಗ : ಚಕ್ರವಾಕ - ತ್ರಿಪುಟತಾಳ**

ಎನಿತು ಕಾಯಲಿ ಬವಣೆಯಲಿ ಮಮ ಜೀವಿತೇಶ್ವರ ಬಾರೆಯಾ ॥ ಪ ॥
ಕಾಲಕರ್ಮವೋ ಬಾಳಸಿರಿಯೋ ಬದುಕು ಭಗ್ನವೆ ಆಗಿದೆ ॥ ಅ.ಪ ॥
ನಿಷ್ಠೆಯಿಂದಿಹ ನೀತಿವನಿತೆಗೆ ಕಷ್ಟವೇತಕೆ ಹೇ ವಿಧಿ
ಚಿಂತೆ ಚಿತೆಯೊಳು ಭ್ರಾಂತಿಬಲೆಯೊಳು ನಿನ್ನ ಮೈಥಿಲಿ ಸಿಲುಕಗೇ
ತಾಪಹರಿಸಲು ರೂಪತೋರಲು ದಾಶರಥಿಯೇ ಬಾರೆಯಾ ॥ ೧ ॥

**ರಾವಣ : ಹಾಡು** **ರಾಗ : ನಾಟಿಕುರಂಜಿ - ಆದಿತಾಳ**

ಛಲವೇತಕೆ ನಿನಗೆಲಲನೆ ಒಲಿಯೆನಗೆ ಸುಖಸದನೆ ॥ ಪ ॥
ಬಲುದುಗುಡದಿ ನೆನೆಯೆ ಮನದಿನಿಯನ
ಖಳನವ ನಿನಮನದಳಲನು ನಿಲಿಪನೆ ॥ ಅ.ಪ ॥
ಸೀತೆ ನಿನಗಿದುವೆ ತರವೇ ಪರಮ ಗುಣಯುತಳೆ ।
ಮತಿಯನಳಿದು ಸತತವು । ಹಿತದಿರುವುದು ಮರೆತು ।
ಕೊರಗು ತಿರುವರೆ । ಈ ತೆರದ ನೀತಿ ಸರಿಯೆನಿನಗಿದು ॥ ೧ ॥

**ಮಂಡೋದರಿ : ಹಾಡು** **ರಾಗ : ಮೋಹನ - ಆದಿತಾಳ**

ಅಬಲೆಯಳ ಹಗರಣದ ಕ್ರೋಧಾಗ್ನಿ ಜ್ವಾಲೆ
ಭುಗಿ ಭುಗಿಲು ಎಂದೆನುತ ಏಳುತಿದೆ ಮೇಲೆ ॥ ಪ ॥

ಸುಡುತಿಹುದು ಲಂಕೆಯನು ಆ ದುಃಖ ಜ್ವಾಲೆ
ಚಂಚಿಗನು ಬಳಸಿಹನು ಸಾಧ್ವಿಯಳ ಮೇಲೆ

**ಆಂಜನೇಯ : ಹಾಡು** — **ರಾಗ : ತೋಡಿ - ಆದಿತಾಳ**

ರವಿ ಕುಲಜ್ಯೋತಿಯೆ ಶ್ರೀರಾಮ
ಪುಣ್ಯ ಮೂರ್ತಿಯೆ ರಘುರಾಮ ॥ ಪ ॥
ಜಾನಕಿರಮಣ ದಶರಥ ನಂದನ
ಸೀತಾವಲ್ಲಭ ರಘುರಾಮ ॥ ಅ.ಪ. ॥

**ಆಂಜನೇಯ : ಹಾಡು** — **ರಾಗಮಾಲಿಕೆ**

ಕಂಡರಿವೆಯಾ ನಿನ್ನ ಕಂದನಂ ಮಾತೆ
ಶ್ರೀರಾಮ ನಾವರೆಯು ಭೃತ್ಯನು ನಾ ಶುಭದಾತೆ

ನಿನ್ನ ಕಾಣುವ ಕುಶಲ ದೃಷ್ಟಿಯೊಳ್
ಶತಯೋಜನ ಶರಧಿಯಂ ದಾಂಟಿ ಬಂದೆ
ನೊಲವಿನೊಳ್ ಈ ಕಿಂಕರನ ನೀನಂಬುಸಿಬಿಡೊಳ್
ಕರುಣೆಯಿಂ ನೀ ಹರಿಸಿ ಕಾಪಾಡು ಪ್ರೀತಿಯೊಳ್

ನಿನ್ನ ಶುಭವಾರ್ತೆ ತಿಳಿಯೆ ರವಿಸುತನಾಣತಿಯು
ಶಿರದಲ್ಲಿ ಧರಿಸಿ ಮುಂದರಿಯೆ ತವ ನಾಮ ಜಪಿಸುತ್ತ
ರಾಮಮುದ್ರಿಕೆಯನೀಯೆ ಬಂದಿಹೆನು
ಈ ಪವನಜನಂ ನೀನಂಬು ತಾಯಿ

**ದೃಶ್ಯ : ರಸ್ತೆ**

**ಇಂದ್ರಜಿತು : ಹಾಡು** — **ರಾಗ : ಹಂಸಧ್ವನಿ - ಆದಿತಾಳ**

ಸುಂದರ ತರನಂದನವನ ದಂದವ ಮದದಿಂದ
ಭಂಗಪಡಿಸಿ ಇಂದಿನ ದಿನ ಬಂಧುಗಳನೆ ಕೊಂದ ॥ ಪ ॥
ಅಧಮಾಧಮ ಮುದ ಕಪಿಯೆ ಕದನಕೆನೀ ಎದುರಾಗೆಲೊ
ಗಿರಿ ಗುಹೆಯಲಿ ಉರುತರದ ಫಲಭರಿತದ ತರುಗಳಲಿ
ಪರಿಪರಿಯೊಳು ಜೀವಿಪ ಕಪಿ ಸುರವೈರಿಗೆ ಶರಣಾಗೆಲೋ ॥ ಅ.ಪ ॥

## ದೃಶ್ಯ : ರಾವಣನ ದರ್ಬಾರ್

**ರಾವಣ : ಹಾಡು** — **ರಾಗ : ಹಂಸಧ್ವನಿ - ಆದಿತಾಳ**

ಪಿಡಿದು ತನ್ನಿ ಆ ಬಡವಾನರನಾ ಕಡಿದಿಡುವೆನುನಾಂ ಖಳನವನಾ ॥ ಪ ॥
ತುಡುಕುತನದಿ ವನದಂದವ ಕೆಡಿಸಿದ ಜಡಮತಿಯನು ಬಿಡದೆ ॥ ಅ.ಪ. ॥

**ಪ್ರಹಸ್ತ : ಕಂದ**

ಇದೊನೋಡು ದನುಜಕುಲಪಾಲ
ನಿಧಿಚಂದ್ರಂ ಭುವನವಿನುತ ಸಾಂಧ್ರ
ತ್ರಿದಶ ಭಯಂಕರನೀದಶವದನಂ
ರಂಜಿಪ ಅಪಾರ ವೈಭವ ಸದನಂ

**ವಿಭೀಷಣ : ಹಾಡು** — **ರಾಗ : ಹಿಂದೋಳ - ಆದಿತಾಳ**

ರಾಮಪಾಲಿಸೆನ್ನಾ ಜಗದಭಿರಾಮ ಪಾಲಿಸೆನ್ನಾ ॥ ಪ ॥
ನಿಂದೆಯನ್ನು ನಾಂ ತಾಳಲಾರದೆ ತಂದೆನಿನ್ನಯ ಬಳಿಗೆ ಬಂದೆನೋ
ಕುಂದನೆಣಿಸದೆ ಕೌತುಕಪಡದೆ ಇಂದೆನಗಾಶ್ರಯ ನೀಡುನೀ ತಂದೆ ॥ ಅ.ಪ. ॥

**ಆಂಜನೇಯ : ಹಾಡು** — **ರಾಗ : ಬೇಹಾಗ್ - ರೂಪಕತಾಳ**

ಕಂಡೆ ಜಾನಕಿಯಾ ಕುಶಲವಾ ॥ ಪ ॥
ಆಕೆಗಾ ವಿವೇಕಿ ರಾವಣ ವ್ಯಾಕುಲವ ಪಡುತೇ ಕವಿಧದೊಳು
ಲೋಕಮಾತೆಯ ಶೋಕವನದಿ ರಾಮ
ಶೋಕಿಸುತ ಇಹಳೈ ಭೂಸುತೆ ॥ ೧ ॥

## ದೃಶ್ಯ : ಸಮುದ್ರತೀರ

**ವಿಭೀಷಣ : ಹಾಡು** — **ರಾಗ : ಪುನ್ನಾಗವರಾಳಿ - ಆದಿತಾಳ**

ರಾಮಪಾಲಿಸೆನ್ನಾ ಜಗದಭಿರಾಮ ಪಾಲಿಸೆನ್ನಾ ॥ ಪ ॥
ನಿಂದೆಯನ್ನು ನಾಂ ತಾಳಲಾರದೆ ತಂದೆನಿನ್ನಯ ಬಳಿಗೆ ಬಂದೆನೋ
ಕುಂದನೆಣಿಸದೆ ಕೌತುಕಪಡದೆ ಇಂದೆನಗಾಶ್ರಯ ನೀಡುನೀ ತಂದೆ ॥ ಅ.ಪ. ॥

## ದೃಶ್ಯ : ರಣರಂಗ

### (ಇಂದ್ರಜಿತು - ಲಕ್ಷ್ಮಣ ದ್ವಂದ್ವ ಗೀತೆ)

**ರಾಗ : ಹಂಸಧ್ವನಿ - ಆದಿತಾಳ**

**ಇಂದ್ರಜಿತು :** ಪಥ ಪಥ ನಿನ್ನನು ಕಡಿವೆನು ದುರಾತ್ಮ
ಪಿಡಿದೊಡೆದುಶಿರವ ಪಡೆದಪೆನು ಜಯವ

**ಲಕ್ಷ್ಮಣ :** ಅಧಮನೆ ವಿಧ ವಿಧ ಒದರುವೆಯ ನೀಚ
ವಧೆಗೈದು ನಿನ್ನ ಮುದವಾಂತೆ ಮುನ್ನ

**ಇಂದ್ರಜಿತು :** ಬಾಣಗಳನು ಬೀರಿ ತ್ರಾಣವನುರೆಪೀರಿ
ಕಡಿದಿಡುವೆ ಮುನ್ನ ಬಡನರನೆ ನಿನ್ನ

**ಲಕ್ಷ್ಮಣ :** ಏಕಿದು ಬಡಿವಾರ ನಾಕೆಲೊ ಬಡವೀರಾ
ಎದುರಾಗಿ ಬರುವೆನೆದೆ ಸೀಳಿ ಬರುವೆ

**ಕುಂಭಕರ್ಣ : ಹಾಡು** **ರಾಗ : ಹಂಸಧ್ವನಿ - ಆದಿತಾಳ**

ದುರಾತ್ಮ ಹೇಡಿದುರ್ಮದಾಂಧ ರಾಮ ಲಕ್ಷ್ಮಣ
ಪರಾಕ್ರಮಂಗಳನ್ನೆ ತೋರಿ ಗೈದರೇ ವಿಲಕ್ಷಣ
ಶೂರ ಸುರನು ಜಾತೆ ಗಂಗ ಭಂಗಗೈದ ನೀಚನು
ಘುರಂಗೊಳುತ್ತೆ ಸಾಗಿ ಕಾಲನಾಲಯವನು ತೋರ್ವೆ

### (ರಾಮ - ಕುಂಭಕರ್ಣ : ದ್ವಂದ್ವ ಗೀತೆ)

**ರಾಗ : ಹಂಸಧ್ವನಿ - ಆದಿತಾಳ**

**ರಾಮ :** ದೈತ್ಯ ದಾನವಾದಿ ಕುಲವನಿರಿದು ತರಿದು [illegible]
ಮೃತ್ಯು ನಾನೆ ಬಂದೆ ನೀಗ ನೀಗು ಹರಟೆ ಎಲ್ಲವ

**ಕುಂಭಕರ್ಣ :** ಮುಷ್ಟಿಯಿಂದ ಪಿಡಿದುನಿನ್ನ ಪಿಷ್ಟಮಾಡುತೆ
ತುಷ್ಟಿಯಾಂತು ಪೋಪೆನಿಂದು ಜಯವ ಪೊಂದುತೆ

## ೩. ಶ್ರೀಕೃಷ್ಣಾವತಾರ

### ದೃಶ್ಯ : ರಸ್ತೆ

ನಾರದ : ಹಾಡು                                                   ರಾಗ : ಕಾಂಭೋದಿ - ಆದಿತಾಳ

ನಿರಂತರವು ನಿನ್ನ ನುತಿಪೆನು ಕರುಣಾಕರಾ ಪಾಲಿ ಕರುಣಾಂತ ಶೀಲ || ಪ ||
ಪರಮಾತ್ಮನೇ ಸರ್ವ ಭವನಾಶನೇ ಚರಣಂಗಳನು ರೆನಂಬಿಹಾ
ಶರಣೆಂಬೆನು ಪೊರೆಯೊದೇವ || ಅ.ಪ. ||
ಮಾನವ ಕೋಟಿಯ ಪಾಪವ ಹರಿಸಿ ಪಾವನಗೊಳಿಸೊ ಸರ್ವೇಶಾ
ಚಿನ್ಮಯನೇ ಚಿದಾನಂದನೇ ಕರ್ಮಂಗಳ
ನಿರ್ಣಯಿಸಿ ನಿರ್ವಹಿಸೋ ಸರ್ವೋತ್ತಮಾ || ೧ ||

ನಾರದ : ಹಾಡು                                                   ರಾಗ : ಹಿಂದೋಳ - ಆದಿತಾಳ

ಭಜರೇ ಗೋಪಾಲಂ ಮಾನಸ
ಭಜರೇ ಗೋಪಾಲ || ಪ ||
ಭಜಗೋಪಾಲ ಭಜಿತ ಕುಚೇಲಂ
ತ್ರಿಜಗನ್ಮೂಲಂದಿತಿಸುತ ಕಾಲಂ || ಅ.ಪ. ||
ಆಗಮಸಾರಂ ಯೋಗವಿಚಾರಂ
ಭೋಗ ಶರೀರಂ ಭುವನಾಧಾರಂ || ೧ ||
ಕದನ ಕಠೋರಂ ಕಲುಷವಿದೂರಂ
ಮದನ ಕುಮಾರಂ ಮಧು ಸಂಹಾರಂ || ೨ ||
ನತ ಮಂದಾರಂ ನಂದ ಕಿಶೋರಂ
ಹತ ಚಾಣೂರಂ ಹಂಸವಿಹಾರಂ || ೩ ||

### ದೃಶ್ಯ : ಧರ್ಮರಾಯನ ದರ್ಬಾರ್

ಎಲ್ಲರೂ : ಹಾಡು                                                   ರಾಗ : ಮೋಹನ - ಆದಿತಾಳ

ಶ್ರೀಧರ ಶುಭಕರ - ಮೋದಿತಸುರವರ
ಮಾಧವಜಯ ಜಯ ಶ್ರೀ ಲೋಲ
ಭೂಧರ ಮುರಳೀಧರ ವೇದಶಿರೋಮ
ಸಾಧು ಶುಭೋದಯ ಮಾಧವ ಜಯಜಯ ಗೋಪಾಲ || ೧ ||

ಅರ್ಜುನ : ಹಾಡು ರಾಗ : ಬಿಲಹರಿ - ಆದಿತಾಳ

ಮಾನವೇಂದ್ರನೆ ಈ ಅನುಮಾನವೇಕೆ ದಾನವಾರಿಯಾನೆನೆ ಮನದಿ
ಬೇಗ ॥ ಪ ॥
ಹಾನು ರಾಗದೇ ನಾರಸಾಕ್ಷನೀಗ ಸೇರಿಸಿನ್ನನು ಸಂತಸಂಗಳೀವ ॥ ಅ.ಪ. ॥
ದೇವ ದೇವ ವಾಸು ದೇವ ನೊಲುಮೆಯ ಭಾವದಿಂದೆ ನಮ್ಮ
ಕಾವನಾವಗಮುಂ ಭೂವಧೂವರ ಭುವನ ಮುಖ್ಯವೀರ
ಸಾವಧಾನನಾಗೈ ಸಜ್ಜನಾಗ್ರಗಣ್ಯ ॥ ೧ ॥

ಎಲ್ಲರೂ : ಹಾಡು ರಾಗ : ಹಂಸಾನಂದಿ - ಆದಿತಾಳ

ಪರಮಾತ್ಮನೇ ಪೊರೆಕರುಣಾಕರ ಮಾಧವಾ ಮುರವೈರಿದೇವಾ ॥ ಪ ॥
ದೀನರ ಕಾಯುವ ಭಾರವು ನಿನ್ನದೈ ಮಾರಜನಕ ಹರಿ ಶ್ರೀವಾಸುದೇವಾ ॥ ಅ.ಪ.॥

ಕೃಷ್ಣ : ಹಾಡು ರಾಗ : ನಾಟಿಕುರಂಜಿ - ರೂಪಕತಾಳ

ಮನೋಭೀಷ್ಟ ವದೇಂನುಡಿ ಜನೇಶ ಕುಲಶಿರೋಮಣಿ ॥ ಪ ॥
ಅನಾರತಂ ವಿನೋದ ದೊಳು ವಿಶೇಷದಿಂಮನಗೊಂಡುದು ॥ ಅ.ಪ ॥
ಧರಿತ್ರಿಯೊಳು ಧರಾಧಿಪರ ಧನಾದಿಗಳ ಕರಂ ಬಯಸಿ
ನಿರಂತರಂ ದುರಾಸೆಯೊಳು ಮುಳುಂಗುವೋಲ್ ನಯುಂಗಡದು ॥ ೧ ॥

ಧರ್ಮ : ಹಾಡು ರಾಗ : ಸಾರಮತಿ - ಆದಿತಾಳ

ಬಾಲರನಿವರಾ ಖಳನಾಬಳಿಗೆ
ಕಾಳಗಗೆಂತು ಕಳುಹಲೀ ॥ ಪ ॥
ಲೀಲಾ ಜಾಲನೇ ನೀಂ ಪೇಳು
ಶ್ರೀ ಲಕ್ಷ್ಮೀ ಕಾಂತ ಸುಧೀ ಮಹಿತಾ ॥ ಅ.ಪ ॥
ಮುಂದೇಂ ಗತಿಯೋ ತೋರದು ಮನಕೆ
ಮುದದಿ ಕಾವುದು ಶೌರಿ ನತ ಸುಖಕಾರಿ
ಬೃಂದಾರಕ ವರ ಮಂಧರ ಗಿರಿಧರ
ದಂದುಗವಳಿಸು ನಂದ ಗೋಪಿತನಯ ॥ ೧ ॥

## ದೃಶ್ಯ : ಕಾಲಭೈರವ ದೇವಸ್ಥಾನ

ಜರಾಸಂಧ : ಹಾಡು ರಾಗ : ಹಿಂದೂಸ್ಥಾನಿ ಕಾಪಿ - ಆದಿತಾಳ

ಹೊಡೆದರೆ ಪರಿ ನೀಚರು
ನಿರುಪಮಾನ ಸುರಾರಿಯಾ ಭೇರಿಗಳ ॥ ಪ ॥
ವೀರಭಟವಾರಿಶರಾಗಾರದಲಿ ಸೇರಿಸಲು
ನಾರಿ ಖಳರೀರೀತಿಯೊಳಾ ಭೇರಿಗಳ ॥ ಅ.ಪ ॥

(ಭೀಮ - ಜರಾಸಂಧ : ಯುಗಳಗೀತೆ)

ರಾಗ : ಹಂಸಧ್ವನಿ - ಆದಿತಾಳ

ಭೀಮ : ದನುಜಾಧಮ ಮನೋದದ್ಗಟ ಹಟದೊಳು ಬೊಗಳುವೆ ಛೀ
ಜರಾಸಂಧ : ಹೀನ ಜಾತನೆ ಘನವಲ್ಲವೋ ಹರಟೆಯ ಬಿಡು ಬಿಡು ಛೀ
ಭೀಮ : ಅಖಿಲಾಂಡದ ಜನಕದ್ಭುತನೆನಿಸಿದ ಕಾಲನುನಾಂ ಕಡುಖಳ
ಜರಾಸಂಧ : ಶಿಖಿಯಂದದಿ ನಿನ್ನಯ ಶಿರವನು ತರಿವೆನು ನಾಂ ಧುರಧೀರ

## ದೃಶ್ಯ : ದುರ್ಯೋಧನನ ದರ್ಬಾರ್

ದುರ್ಯೋಧನ : ಹಾಡು ರಾಗ : ಹಂಸಧ್ವನಿ - ಆದಿತಾಳ

ಆರು ಸರಿಸಮರು ಪರಿಕಿಸಲರಿಯೆನು
ಧರಾ ತಲದಿ ಎನಗಾರು ಸರಿಸಮರು ॥ ಪ ॥
ಧೀರ ನೆಂದೆನಿಸುತ ಮೀರಿನಾಂ ಮೆರೆಯುವೆ ॥ ಅ.ಪ ॥
ಉರುತರದಿಂದಲಿ ಪೊಡವಿ ಪರೆಲ್ಲರ ಕಡಿದಿಡುವೆನು ನಾಂ ನಡಗರದಿ
ಅತಿ ಮುದದಿಂದಲಿ ತರಿದು ಬರುವೆನು
ಉರುವೆನಿಸಿ ಧುರದೊಳಗೆ ಮೆರೆಯುವೆನು ॥ ೧ ॥

ನಾರದ : ಹಾಡು ರಾಗ : ಕಮಾಚ್ - ಆದಿತಾಳ

ಕರುಣಾಮಯ ಶ್ರೀ ಕೇಶವ ಮಾಧವ
ನಾರಾಯಣ ಹರಿ ಮುಕುಂದ ಮಾಧವ ॥ ಪ ॥

ಸುರನರಸೇವಿತ ಆರ್ತಜನಾನ್ವಿತ
ಅಣುನಗತ್ತೂರುತ ಮುನಿ ಜನವಂದಿತ ॥ ಅ. ಪ. ॥
ಇಂದಿರ ರಮಣಾ ವಂದಿತ ಚರಣ
ಸುಂದರ ನಯನಾನಂದಿತ ಜ್ಞಾನ
ಸರ್ವಜನಾವನ ಸಾಗರಶಯನ
ಕರ್ಮನಿವಾರಣ ನಿರ್ಮಲವದನಾ ॥ ೧ ॥

**ಶಕುನಿ : ಹಾಡು** **ರಾಗ : ಯಮನ್‌ಕಲ್ಯಾಣಿ - ಆದಿತಾಳ**

ನೀನೇಕೆ ದುಡುಕುವೆ ಸುಯೋಧನ ॥ ಪ ॥
ಸಾಧಿಸುವರೆ ವೈರವನೀವರಿ ಮೋದವೀಯದೆ ಭೇದಿಸುವರೆ ॥ ಅ.ಪ ॥
ಹರುಷವ ತೊರೆಯುತೆ ವಿರಹದೊಳೀವರಿ
ಕುರುಕುಲ ತಿಲಕನೆ ಮರುಗುವುದೇತಕೆ ॥ ೧ ॥

**ದೃಶ್ಯ : ರಸ್ತೆ**

**ನಾರದ : ಹಾಡು** **ರಾಗ : ಕಲ್ಯಾಣಿ - ಆದಿತಾಳ**

ಗೋಪಾಲ ಮಾಂ ಪಾಲಯಾ ಕೃಪಾಲಯಾ ॥ ಪ ॥
ಗೋಪಿ ವಿಧೇಯಾ ಸುರ ಮೌನಿಗೇಯ ॥ ಅ.ಪ. ॥
ನೀರಧಿ ಗಂಭೀರ ನಿಗಮಾಂತ ಸಂಚಾರ
ಧಾರಿತ ಮಂದರ ದಾನವಸಂಹಾರ
ನೀರಜನೇತ್ರ, ಶ್ರೀ ಘನಲೀಲಗೋಪಾಲ ॥ ೧ ॥
ರಾಧಿಕಾ ಸಮಸಾಯಕಾ ಸರ್ವಾಧಿಕಾ
ಸಾಧಕ ಫಲದಾಯಕಾ ಜಗದಾಧಾರ.
ಬಾಧಿತ ಭವಜಾಲ । ಮಾಧುರ್ಯ ಗುಣಶೀಲಾ
ಮೋದಿತ ವ್ರಜಬಾಲ ಮುರಳೀವಿಲೋಲ ॥ ೨ ॥

**ನಾರದ : ಹಾಡು** **ರಾಗ : ಕುರಂಜಿ - ಆದಿತಾಳ**

ಬ್ರೂಹಿ ಮುಕುರದೇತಿ ರಸನೆ ॥ ಪ ॥
ಕೇಶವಮಾಧವ ಗೋವಿಂದೇತಿ
ಕೃಷ್ಣಾನಂದ ಸದಾನಂದೇತಿ ॥ ಅ.ಪ. ॥

ರಾಧಾರಮಣ ಹರೇರಾಮೇತಿ
ರಾಜೀವಾಕ್ಷಘನ ಶ್ಯಾಮೇತಿ
ಅಕ್ರೂರ ಪ್ರಿಯ ಚಕ್ರಧರೇತಿ
ಹಂಸ ನಿರಂಜನ ಕಂಸ ಹರೋತಿ ॥ ೧ ॥

## ದೃಶ್ಯ : ಶಿಶುಪಾಲನ ದರ್ಬಾರ್

**ಶಿಶುಪಾಲ : ಹಾಡು** **ರಾಗ : ಹಂಸಧ್ವನಿ - ಆದಿತಾಳ**

ಆರ ಸರಿಸಮರು ಧರೆಯೊಳಗಿರುವರು ಕಾಣೆನೆಮಗೆ ॥ ಪ ॥
ಶೂರರೆಂದೆನಿಸುತಲಿ. ಮೀರಿನಾಂ ಮೆರೆಯುತಲಿರುವೆನು ॥ ಅ.ಪ ॥
ಪರಮ ಗುಣಾಕರ ನೆನಿಸಿ ಸುರಪ ಸುಖ ಅನುಭವಿಸಿ ।
ಆರರೆ ಮೆರೆವೆವು ಸಿರಿಯಿಂದಿರುವೆವು
ಧುರದೊಳುಜಯುವ ಭರದಿ ಪಡೆದಿಹೆವು ॥ ೧ ॥

**ದಂತವಕ್ರ : ಹಾಡು** **ರಾಗ : ಮಾರ್ಗಹಿಂದೋಳ - ಆದಿತಾಳ**

ನೀಚನವನತಿ ಧುರಾಗ್ರವೆಸಗಿದನೆ ಮಗಧ ನೃಪನನಿಂದು ತರಿದಿಹನೆ ॥ ಪ ॥
ಬಂಧುವೆನಿಸಿದ ನರನೃಪಾಲನ ಮಂದಮತಿಯು ಅಖಿಳ ಮುರಹರಿಯು
ಹಿಂದು ಮುಂದು ಯೋಚಿಸದೆ ಕೊಂದಿಹನೆ
ಇಂದವನ ಬಂಧಿಸುತೆ ಕೊಂದಿಡುವೆ ॥ ಅ.ಪ. ॥

## ದೃಶ್ಯ : ಅರಣ್ಯ

**ಆಂಜನೇಯ : ಹಾಡು** **ರಾಗ : ಪೂರ್ವಿ ಕಲ್ಯಾಣ - ಆದಿತಾಳ**

ರಘುರಾಮ ಶ್ರೀ ಸುಗುಣಾಭಿರಾಮ ಅಘದೂರ ಪೊರೆ ನಿಗಮಾದಿ ಸುತ್ಯ ॥ ಪ ॥
ಧರೆಗಿಂದು ಬಂದ ಪರಮಾತ್ಮ ನೀನೇ ಶರಣಾಗತರ ಪರಿಪಾಲಿಸು
ಸಿರಿದೇವಿ ಸೀತಾ ಪತಿನೀನು ರಾಮ ವರಲಕ್ಷ್ಮಣ ನೀನುರೆ ಕಾವುದೆನ್ನ ॥ ಅ.ಪ ॥

**ಭೀಮ : ಹಾಡು** **ರಾಗ : ಹಂಸಧ್ವನಿ - ಆದಿತಾಳ**

ಈಗಲೆ ದುರಂತ ಗೈಯ್ಯುವೆನು
ನೀಗು ಹರಟೆಯನು ಎಲೆಮೃಗಧಗನೆ || ಪ ||
ಕಲಿ ಭೀಮನ ಪೌರುಷವರಿಯದೆಲೆ
ಬಲುಗರ್ವದೆ ಮನಬಂದ ತೆರದಲಿ
ಅಲುಗುತಿರುವೆ ನಾನಾ ವಿಧದಿಂದಲಿ
ಬಲಿಯಿಡುವೆ ಎಲೆಮೃಗವೆ ನಿಲ್ಲಿಸುಹರಟೆ || ಅ.ಪ. ||

**ದೃಶ್ಯ : ಹಿಮವತ್ಪರ್ವತದ ತಪ್ಪಲು**

**ಪುರುಷಾಮೃಗ : ಹಾಡು** **ರಾಗ : ಚಾರುಕೇಶಿ - ಆದಿತಾಳ**

ಲೋಕೇಶದಾತ । ದಿವ್ಯಜ್ಞಾತ ।
ಮುನಿವರ ಪೂಜಿತ ಮಂಗಳ ದಾತ || ಪ ||
ಗಂಗಾಧರನೇ ಗಜವದನನ ಪಿತನೇ
ಮಂಗಳಕರ ಶ್ರೀ ಮಹಿಮಾ ರೂಪಾ || ಅ.ಪ. ||
ಪರಶಿವನೇ ಕೃಪಾಕರನೇ ಮಂಗಳಕರಶ್ರೀ ಮಹಿಮಾ ರೂಪಾ || () ||

**ಭೀಮ : ಹಾಡು** **ರಾಗ : ಅಠಾಣ - ಆದಿತಾಳ**

ಅಂತ ರಂಗದೊಳು ಮನವನಿಲಿಸಿಬಲು
ಶಾಂತ ಭಾವದೊಳು ತಪವನಾ ಚರಿಪ
ಎಂತಾ ಸತ್ಯ ಸಂಧನಿವ || ಪ ||
ಫಣೆಯೊಳು ಭಸ್ಮ ತ್ರಿಪುಂಡವ ಧರಿಸಿ
ನಿರುತವು ಹರನನು ನೆನೆಯುತ ಕುಳಿತಿಹ || ಅ.ಪ. ||

**ಪುರುಷಾಮೃಗ : ಹಾಡು** **ರಾಗ : ಹಿಂದೋಳ - ಆದಿತಾಳ**

ಶಂಭೋ ಶಿವಶಂಭೋ ಕೈಲಾಸವಾಸ ಮಹೇಶ
ಭವಪಾಶ ನಾಶ ಸರ್ವೇಶಾ || ಪ ||

ಢಮ ಢಮ ಢಮ ಢಮರುಗ ಧಾರಿ
ಢಮ ಢಮ ಢಮ ಢಮರುಗ ಧಾರಿ
ಢಮ ಢಮ ಢಮ ಢಮರುಗ ಧಾರಿ
ನಿರಂತರವು ಪೊರೆದೀನೋದ್ಧಾರಿ ॥ ಅ.ಪ. ॥

**ಪುರುಷಾಮೃಗ : ಹಾಡು** **ರಾಗ : ಹಿಂದೋಳ - ಆದಿತಾಳ**

ಹರಹರ ಮಹಾದೇವ ಗಿರೀಂದ್ರಜಾಧವ ವೀರನುತ ಶಿವ ॥ ಪ ॥
ಯಮಿಜನ ಸದಯಾ ಪೂರ್ಣವಿಧುತಭಯ ಪ್ರೇಮ ಸುನಿಲಯಾ ಸುರಗೇಯಾ
ಭೀಮ ನಿರಾಮಯ ಭಾಗ್ಯಮಹೋದಯ ಮುಕ್ತಾವಾಯ
ನಿರ್ಮಾಯಾ ॥ ಅ.ಪ. ॥

**ದೃಶ್ಯ : ಇಂದ್ರಪ್ರಸ್ಥ ಅರಮನೆ**
**(ಅರ್ಜುನ - ದ್ರೌಪದಿಯರ ಯುಗಳಗೀತೆ)**

**ರಾಗ : ಹಂಸಧ್ವನಿ - ಆದಿತಾಳ**

**ಅರ್ಜುನ :** ಸೊಗಸು ಬೀರುವುದು ಸೌರಭದ
ನಗೆಮುಖಚಲುವಿನ ಸುಂದರರದಾ ॥ ಪ ॥
ಪಗಲಿರುಳೆಂಬ ಭೇದವ ಕಾಣದೆ
ಬಗೆಹರಿಯುತಿದೇ ಬೇಸರ ಮನದೆ ॥ ಅ.ಪ. ॥

**ದ್ರೌಪದಿ :** ಸುಂದರ ಸೌಧದ ಚಂದದ ಬಿಂಬವ
ಇಂದುರೆ ನಿರುಕಿಸೆ ಮನಮುದವಾ
ಪೊಂದಿಹುದೂ ಸುರ ಸುಂದರನೇ
ಮಂದಹಾಸದ ನಂದನವನವಿದೂ ॥ ೧ ॥

**ಅರ್ಜುನ :** ಹಾವ ಭಾವವೇ ತುಂಬಿಹುದೂ
ದೇವ ಶಿಲ್ಪಿಯ ಕಲೆಯು ಇದೂ
ಜೀವ ಕಳೆಯ ತದ್ರೂಪವಿದೂ
ಆವೆಡೆಯಲ್ಲಿಯೂ ತೋರುವುದೂ ॥ ೨ ॥

## ದೃಶ್ಯ : ರಸ್ತೆ

**ದುರ್ಯೋಧನ - ಶಕುನಿಯರ : ಹಾಡು** ರಾಗ : ಅಭೇರಿ - ಆದಿತಾಳ

**ದುರ್ಯೋಧನ :** ಶಕುನಿ ಸಹಿಸೆನೀ ಅಪಮಾನ ।
ಮುಖ ತಗ್ಗಿಸುವ ಅಪಮಾನವನಾಂ ॥ ಪ ॥

**ಶಕುನಿ :** ಚಿಂತೆ ಏತಕೆ ಕುರುಭೂಪ
ಇರಿಸುನೀ ಮನದೊಳು ಅವರಪ್ರತಾಪ ॥

**ದುರ್ಯೋಧನ :** ಮಂದಿರವಾ ನೋಡಲೆಂದೆನುತಾ ಪೋದೆ
ಅಂಧನಮಗನೀಂ ಎಂದು ನಿಂದಿಸಿದಳು ॥

**ಶಕುನಿ :** ನಿನ್ನನು ನಿಂದಿಸಿದುದಕೆ ಪ್ರತಿ ಫಲವ
ಮುನ್ನಮೆ ನೀಡುವೆ ಬಿಡುನೀಂ ವ್ಯಥೆಯ ॥

## ದೃಶ್ಯ : ಯಾಗ ಭವನ

**ದ್ರೋಣ : ಹಾಡು** ರಾಗ : ಮಾರ್ಗಹಿಂದೋಳ - ಆದಿತಾಳ

ಧರ್ಮನಂದನಾ ಪೆರ್ಮೆಯಿಂದ ಪೇಳ್ವೆ
ನಿರ್ಮಲಾತ್ಮನೆ ಸರ್ವವೆಲ್ಲವನ್ನು ॥ ಪ ॥
ವರಯಜ್ಞವ ನರನಾಥನೇ
ತ್ವರಿತದೊಳು ನೆರೆಸಾಗಲೆಂದೂ ॥ ಅ.ಪ. ॥

**ಧರ್ಮರಾಯ: ಹಾಡು** ರಾಗ : ಸಾರಮತಿ - ಆದಿತಾಳ

ಸ್ವಾಗತಾ ಹರಿಯೇ ಗುರುವೇ ದೊರೆಯೇ ॥ ಪ ॥
ಯಾಗಾಧಾರನೆ ಸೌಭಾಗ್ಯ ದಾತನೆ
ನಾಗಶಯನನೇ ತ್ಯಾಗಮೂರ್ತಿಯೇ ॥ ಅ.ಪ. ॥
ಲಕ್ಷ್ಮೀಕಾಂತನೇ ಸಾಕ್ಷಿರೂಪದಲಿ
ಅಕ್ಷಯವರಗಳಾ ಈ ಕ್ಷಣಕರುಣಿಸು ॥
ಈಕ್ಷಿಸುಕರುಣಾ ಕಟಾಕ್ಷದೆ ಎನ್ನ
ಪಕ್ಷಿವಾಹನನೆ ಮೋಕ್ಷಾಧ್ಯಕ್ಷನೇ ॥ ೧ ॥

**ಭೀಷ್ಮ : ಕಂದ**

ಈತಂ ಧೇನುಕಾ ಪೂತನಿ ಶಕಟರಂ ಕೊಂದಿಕ್ಕಿದಂ ಕುಕ್ಕಿದಂ ।
ಈತಂ ಕಂಸ ಸುನೀತ ಮುಖ್ಯ ಖಳರಂ ಮೆಟ್ಟಲ್ಕೆ ಪುಟ್ಟಿರ್ದವಂ
ಈತಂದೇವರದೇವ ಈತನೇ ಶಿವಂ ಭೂಮಿಧರಂ ಮಾಧವಂ

**ಶಿಶುಪಾಲ : ಹಾಡು** **ರಾಗ : ನೋಟ್ - ಆದಿತಾಳ**

ಮನದೊಳಗುದುಸಿದ ಕ್ರೋಧಕೆನಾನು
ಬಲಿಯನು ಕೊಡುವೆನು ಮೂರ್ಖರನು ॥ ಪ ॥
ಧೀರನಾನಿರಲು ಬಿಡುವೆನೆ ಖಳರಾ
ಸಾರಿ ಕೊಲ್ಲುವೆನು ರಣದೊಳಗೆ ॥ ಅ.ಪ ॥

**ದೃಶ್ಯ : ರಸ್ತೆ**

**ಜಯವಿಜಯರು : ಹಾಡು** **ರಾಗ : ಕಾನಡ - ಆದಿತಾಳ**

ದೇವ ದೇವ ಜಗದೋದ್ಧಾರ ಜಗಧಾ ಹಿತಕರ ಕರುಣಾಮೂರ್ತಿ
ಸದಯ ಹೃದಯಾ ಸನ್ನುತವಿಜಯಾ ವಿಧಿ ಹರವಿನುತಾ ಲಕ್ಷ್ಮೀರಮಣ

**ಮಂಗಳ**

**ರಾಗ : ಮಧ್ಯಮಾವತಿ - ಆದಿತಾಳ**

ಜಯವಿಠಲಜಯಮಂಗಳಾಂಗ
ಪಯೋಜಾಭರಣ ಕೃಷ್ಣ ॥ ಪ ॥
ಶ್ರೀ ಮಂದಿರಾಶ್ರೀತ ಜನಾಧರ ಸೀಮಾತೀತಘನಮಹಿಮ
ಸುರಾರಾಧಿತ ಸುವಿಮಲ ಚರಿತನರಹರಿ ಮಂಗಳ ದಾನಶೀಲ ॥ ೧ ॥



# ಮಹಾಕವಿ ಕಾಳಿದಾಸ



ಸಂಗೀತ ವಿದ್ವಾನ್, ರಂಗನಟ
**ಸಿ. ಹೊನ್ನಪ್ಪಭಾಗವತರ್**

ನಾಟಕಕಾರರು
**ಕು.ರಾ. ಸೀತಾರಾಮ ಶಾಸ್ತ್ರಿ**

**ಪ್ರಾರ್ಥನೆ : ಹಾಡು** **ರಾಗ : ಕಲ್ಯಾಣಿ - ಆದಿತಾಳ**

ಶುಭಕರ ದಾಯಕ ಉಮಾಮಹೇಶ್ವರ
ಇಭಮುಖ ಜನಕ ಚಂದ್ರಶೇಖರ ॥ ಪ ॥
ಅಭಯಂಕರ ಶ್ರೀ ಸುರಗಂಗಾಧರ
ವಿಭವ ಕರುಣಿಸು ದಯಾಸಾಗರ ॥ ಅ.ಪ. ॥
ಭೃಂಗೀಶ್ವರ ವರ ನಟನ ಸುವೈಭವ
ಅಂಗಜಾರಿ ಹೇ ದೇವೋತ್ತಮ ಶಿವ
ಸಂಗೀತ ಪ್ರಿಯ ಗೋಪ ತುರಂಗ
ಮಂಗಳ ಮಹಿಮಗೆ ಕರುಣಾಪಾಂಗ
ದಾತಾದಯಿತಾ ಸುರನುತ ದಯಾಕಲಿತ
ಉಮಾಮಹಿತ ಮುನೀಂದ್ರನುತ ॥ ೧ ॥

**ದೃಶ್ಯ : ರಸ್ತೆ**

**ಸೂತ್ರಧಾರ : ವೃತ್ತ॥** **ರಾಗ : ನಾಟಿ**

ಶ್ರೀ ಲಕ್ಷ್ಮೀರಮಣಂ ಸುರೇಡ್ಯಚರಣಂ ಲೋಕಕ್ರಿಯಾ ಕಾರಣಂ ।
ಲೀಲಾನಂದಮಯಂ ಪ್ರಶಸ್ತವಿಜಯಂ ಭಕ್ತಾಳಿ ಭಾಗ್ಯೋದಯಂ ॥
ಪೌಲೋಮೀಂದ್ರನುತಂ ಮನೋಜ್ಞಚರಿತಂ ಚಂದ್ರಪ್ರಭಾಸುಸ್ಮಿತಂ ।
ನಾಲೀಕಾಯತಲೋಚನಂ ಕುಶಲಮಿಗಾ ದೇವಕಿ ನಂದನಂ ॥

**ಸೂತ್ರಧಾರ : ಹಾಡು** **ರಾಗ : ಶುದ್ಧಸಾವೇರಿ - ಆದಿತಾಳ**

ಶ್ರೀ ರಮಾರಮಣ । ಕ್ಷೀರಾಂಬುಧಿಶಯನ ॥ ಪ ॥
ನೀರಜಭವಬಲ ವೈರಿಮುಖಾಮರ ವಾರವಿನತ ಪದಸಾರಸ ಪೊರೆಯೆಮ್ಮ ॥ ಅ.ಪ ॥
ಪ್ರಬಲದನುಜಮಥನ ಶುಭಸಂತತಿ ಸದನ ಇಭವರದಾಯಕ
ತ್ರಿಭುವನ ನಾಯಕ ವಿಭವಮಹಿತ ವಿನತಾವನಕೋವಿದ ॥ ೧ ॥
ಮಂಗಳಕರ ಶ್ರೀ ದಶಾವತಾರಧರ ತುಂಗ ಮಹಿಮ ಕರುಣಾಕರ ಚಕ್ರಧರ
ಅಂಗಜಪಿತಸುರ ಗಂಗಾಜನಕ ವಿಹಂಗಮನೋಜ್ಞ ತುರಂಗ ನೃಸಿಂಹ ॥ ೨ ॥

**ಸೂತ್ರಧಾರ : ಹಾಡು** **ರಾಗ : ಆರಭಿ - ರೂಪಕತಾಳ**

ಶ್ರೀ ಸರಸ್ವತೀ ನಮೋಸ್ತುತೆ
ವರದೇ ಪರದೇವತಾ ॥ ಪ ॥
ಶ್ರೀಪತಿಗೌರೀ ಪತಿ ಗುರು ಗುಹವಿನುತೇ ವಿಧಿಯುವತೇ ॥ ಅ.ಪ. ॥
ವಾಸನತ್ರಯವಿವರ್ಜಿತವರಮುನಿಭಾವಿತಮೂರ್ತೇ
ವಾಸವಾದ್ಯಖಿಲ ನಿರ್ಜರವರವಿತರಣ ಬಹುಕೀರ್ತೇ
ದರ ಹಾಸಯುತ ಮುಖಾಂಬುರುಹೇ ಅದ್ಭುತ ಚರಣಾಂಬುರುಹೇ
ಸಂಸಾರ ಭೀತ್ಯಾಪಹೇ ಸಕಲಮಂತ್ರಾಕ್ಷರ ಗುಹೇ

## ದೃಶ್ಯ : ಸಿಂಧೂಲ ಮಹಾರಾಜನ ಅರಮನೆ

(ಸಿಂಧೂಲ, ಬಾಲಭೋಜ, ಮುಂಜರಾಜ, ಬುದ್ಧಿಸಾಗರ ಹಾಗೂ ಇತರರು ಇರುವರು)

**ಬಾಲಭೋಜ : ಹಾಡು** **ರಾಗ : ಮಿಶ್ರಕಾಫಿ - ಆದಿತಾಳ**

ಸಿರಿಯ ರಮಣ ಚರಣ ನಳಿನ
ಸ್ಮರಣೆಯೊಳು ನೀ ಮನವ ನಿಲಿಸೈ ॥ ಪ ॥
ಪರಮ ಕರುಣಾಕರನ ಭಜನ
ದುರಿತ ಹರಣ ಶರಧಿ ಶಯನ
ಗರುಡಗಮನ ಹರಿಯ ಚರಣ
ನಳಿನ ಯುಗದೊಳ್ ಮನವ ನಿಲಿಸೈ ॥ ೧ ॥

## ದೃಶ್ಯ : ಅರಮನೆಯ ಮುಂಭಾಗ

**ಸಿದ್ಧಪುರುಷ : ಹಾಡು** **ರಾಗ : ಯಮನ್ - ಆದಿತಾಳ**

ಖೇಲನದಾಲಯವು ಇಳಾರಂಗಂ ॥ ಪ ॥
ಜಲಮಯವಾಗೇ ಇಳೆಯಿದೆ ಶಯ್ಯೆ ॥ ಅ.ಪ. ॥
ಕಾಯವಿದು ಮಾಯವು ಹೇಯಾಲಯವು
ತಾಪದೊಳೇನಿಹುದೋ ಮಹಾಮೋಹ ॥ ೧ ॥

## ದೃಶ್ಯ : ಮುಂಜರಾಜನ ಆಸ್ಥಾನ

**ಮುಂಜರಾಜ : ಹಾಡು** **ರಾಗ : ಹಂಸಧ್ವನಿ - ಆದಿತಾಳ**

ಸುರಚಿರ ಸಿಂಹಾಸನವ ಭರದಿ ನಾನೇರ್ವೆ ॥ ಪ ॥
ಧೀರನಾಗಿ ಎನ್ನಯ ಪರಾಕ್ರಮ ತೋರ್ವೆ ॥ ಅ.ಪ. ॥
ಮಂಡಲದೊಳ್ ಪ್ರಜೆಗಳ ಭಂಡರನ್ನು ಶಿಕ್ಷಿಸಿ
ಚಂಡವಿಕ್ರಮ ನಾನಾಗಿ ಮೆರೆವೆ ॥ ೧ ॥

**ಮುಂಜರಾಜ : ಹಾಡು** **ರಾಗ : ಹಂಸಧ್ವನಿ - ಆದಿತಾಳ**

ಸಂತಸಂ ಸುಸ್ವಾಂತಕೀಗಳೇ ಶ್ರೀಮಂತನಾದನು ॥ ಪ ॥
ಸಾರಸುಖವೆನಗೀಗ ರಾಜ್ಯ ಅಪಾರವಾಗಿಹುದು
ಮೀರಿ ಮೆರೆವೆನು ಧೀರನಾಗುತ್ತೆ ಶೂರನಾಂ ಸುರರಾಜನಂತೆ ॥ ೧ ॥
ಚಂಡ ಭಾನುವಿನಂತೆ ನಾನಿರೆ
ಮಂಡಲಾಧಿಪರೊಳ್
ಪುಂಡರಂ ಕಡಿಖಂಡ ಗೈಯ್ಯುತೆ
ಚಂಡ ವಿಕ್ರಮನಂತೆ ಮೆರೆವೆನೊ ॥ ೨ ॥

**ಸಿದ್ಧ ಪುರುಷ : ಕಂದ**

ಕರದೊಳ್ ರಾಜಿಸುತಿಹವಿವುಂ
ವರರಾಜಸುರ ಲಕ್ಷಣಂಗಳೀ ಪರಿ ಭುವಿಯೊಳ್ ॥
ಸುರರಾ ಜನಂತೆ ಧರಣಿಯ

ಪರಿಪಾಲಿಸಿ ಪಡೆಯುವ
ಕೀರ್ತಿಯಾ ಚಂದ್ರಾರ್ಕಂ ॥

**ಬಾಲಭೋಜ : ಹಾಡು** ರಾಗ : ನೋಟ್ - ತಾಳ ....

ಛೀ ನೀಚ । ಛೀ ನೀಚ ॥ ಪ ॥
ದುರಾತ್ಮಕನೆ ಕಡೆ ತಲೆ ತೆಗೆದಿಡುವೆನು ದುರುಳ ಏತೆರನಾಡಿದೆ ॥ ಅ.ಪ.॥
ಪರಮ ಪಾತಕಿ ಘೋರನಾಯಕ ದುಡುಕ ಬೇಡವೊ
ಬರಿದೇ ಜನನಿಯುಜರಿವಗೇ ಘಡ ಪರಾಭವ ಮಾಳ್ಪದುರಾತ್ಮಕನೆ
ಕಡಿದಿಡುವೆನು ತಲೆ ದುರುಳ ಏತರನಾಡಿದೆ ॥ ೧ ॥

**ಮುಂಜರಾಜ : ಕಂದ**

ಪರದೇಶಿಯೆ ನಿನಗೇತಕೆ
ಪರರೆಸಗುವ ಕಾರ್ಯದೊಳಪೇಕ್ಷಿಸಿ ಕೆಡುವೇ ।
ಧರಣೀಶನಾನೆಂಬುದ ನರಿಯದೆ
ಪರಿಗಣಿಸದಿಹ ಧೂರ್ತನೆದಂಡಿಪೆ ನಿನ್ನಾ ॥

**ಸಿದ್ಧಪುರುಷ : ಕಂದ**

ಹೆಗ್ಗಡಿಸಿನುಡಿವೆ ಗರ್ವದೇ
ಧಿಕ್ಕರಿಪನಿನ್ನಾ ಸೊಕ್ಕನೀಗಲೆ ಮುರಿದಾ
ಕಿಕ್ಕಿರಿಯುವಂತೆ ರಕ್ಕಸವೆಕ್ಕನಗಳಾ
ತೋರಿ ನಿನ್ನಂದ ನೀಕಕ್ಕಿತ ನೀಗಳ್ ॥

**ದೃಶ್ಯ : ರಸ್ತೆ**

**ಮುಂಜರಾಜ : ಹಾಡು** ರಾಗ : ತೋಡಿ - ಆದಿತಾಳ

ಮನದೊಳುನೊಂದೆನು ಮರುಗಿ ಮರುಗಿ ಆಹಾ ॥ ಪ ॥
ಸಭೆಯೊಳು ಬಾಲನು ಸರಿಸಮನಾಗಿ
ಜಗದಪಮಾನವ । ಮಾಡಿದನದರಿಂದ ॥ ಅ.ಪ.॥
ಜಗತಿಯೊಳೆನ್ನಯ ನೀತಿಯು ಮೀರಿ ಮಾತಿನ ಶೂಲದಿ ಘಾತಿಸಿದನು ಹಾ ॥ ೧ ॥

**ಭಟನಾಯಕ : ಹಾಡು** **ರಾಗ : ಕಮಾಚ್ - ಆದಿತಾಳ**

ಜೋಕೆ ಕೇಳ್ ಜೋಕೆ ಕೇಳ್ ಏಕಿದು ಕಾಕುಮಾತಾಡುವೆ ನಾಕಿನ್ತು || ಪ ||
ದುಡುಕಿ ನುಡಿದೆ ಮೂಢ ಬೇಡವೀ ಛಲಾ ।
ತಡೆದು ನುಡಿಯೊ ಮೂಢ ಕಾಲನಾನೆಲಾ ।
ಕೆಡುವೆ ನಿಜದಿ ದೃಢದಿ ನೀನು ಕೆಡುವೆ ಎಲವೊ ಮೂಢ || ೧ ||

## ದೃಶ್ಯ : ಸುಬಾಹು ಮಹಾರಾಜನ ದರ್ಬಾರು

**ಸುಬಾಹು : ಹಾಡು** **ರಾಗ : ಜಂಜೂಟಿ - ರೂಪಕತಾಳ**

ಪೇಳ್ಳೆ ಸಚಿವಾಗ್ರ ಗಣ್ಯನೆ ಇಳೆಯಲ್ಲಿನ ಏಳ್ಗೆಯಾ || ಪ ||
ಕ್ರತು ನಿರತರೇ ಸಕಲ ಭೂಸುರರ್ ಹಿತವರಾರತಿ
ಶಿಷ್ಟ ಕ್ಷತ್ರಿಯರ್ ಸತತ ಗೋಪರಿಪಾಲನಾವ್ರತ
ಹಿತರೆ ವೈಶ್ಯರು ಧರ್ಮವ ಪೇರ್ಚಿಪರ್ || ೧ ||

## ದೃಶ್ಯ : ಉದ್ಯಾನವನ

**ಚೂಡಾಮಣಿ - ಸಖಿಯರು : ಹಾಡು** **ರಾಗ : ಬೇಹಾಗ್ - ತ್ರಿಶ್ರನಡೆ ಏಕತಾಳ**

ಮದಲಾಲಸ ಮುಖಿ - ಮಂಜುಳ ಸಖಿ ಬಾರ ನೀ ಸುಖಿ || ಪ ||
ಆಲೋಲೆ ಸಖಿ ಈ ವನವಾಗಿ ಮಂಗಳವಾಗಿ - ನೋಡು ರಾಜಿಪ || ಅ.ಪ. ||
ಇಂದು ವಿರಾಜಿಪ - ಬಂಧುರವಾಗಿಹ
ಸುಖ ಕಲಾಧರ - ವನವನಿತೆ ಸುಮನಸಗಳಿಂದ || ಸಖಿ ||
ಸೊಬಗ ತಾಳುತೆ - ಪರಿಕಿಸಲು ಕುಂಜ ವಿರಾಜ
ಪುಂಜಿತವಿದು ಕುಂಜಲೋಚನೆ || ೧ ||

**ಚೂಡಾಮಣಿ : ಹಾಡು** **ರಾಗ : ಯಮನ್ - ಆದಿತಾಳ**

ನೋಡು ವನವ ನಲಿವುದೆಂತು || ಪ ||
ಕೂಡುತೆ ಸರಸದಿ ನಲಿನಲಿದಾಡುವ || ಅ.ಪ. ||
ಬಾ ಸಖಿ ಪೋಗುವ ಸಂತಸಪೊಂದುವ ।
ಸಂತಸದಿಂದಲಿ । ನಲಿ ನಲಿದಾಡುವ || ೧ ||

**ಸಖಿಯರು: ಹಾಡು** **ರಾಗ : ಭೀಮಪಲಾಸ್ - ಆದಿತಾಳ**

ಏತಕೆ ಚಿಂತಿಪೆ ನಾಕಿನ್ನು ಬಿಡು ಬಿಡು ಪ್ರಿಯಸಖಿ ॥ ಪ ॥
ಸುಖವನು ಪಡೆಯುವೆ ಸರಸಿಜನೇತ್ರಿಯೆ ॥ ಅ.ಪ. ॥
ಕುವಲಯದೊಳಾಗಿಯ ಕವಿ ಎನಿಸುವನ
ಕರವನು ಪಿಡಿಯುವೆ ಕುವಲಯನೇತ್ರಿಯೆ ॥ ೧ ॥

## ದೃಶ್ಯ : ಕಾಡುಪ್ರದೇಶ

**ಕುರುಬ : ಹಾಡು** **ರಾಗ : ಕುರಂಜಿ - ತ್ರಿಶ್ರನಡೆ ಏಕತಾಳ**

ರಾಗಿ ಬೀಸೋ ರಾಜ್ಯದೊಳಗೆ ರಂಗು ನೋಡಣ್ಣ ಬಲುಕಪ್ಪು
ರಂಗಂದ್ರೆ ವರಂಗಿ ಹಣ್ಣಿನ ರಂಗೇ ನೋಡೇ ಚಂದ ಬಲುಕೆಂಪು ॥ ಪ ॥
ಹಿಟ್ಟಿನ ಮುದ್ದೆ ಮ್ಯಾಲವರೆ ಕಾಳು ಪಟ್ಟಾಗುಂಡೆ ಹೊಟ್ಟುಂಬ
ಬಿಟ್ಕಂಡವ್ರೆ ಬಾರು ಮೀಸೆಗಳ ಬೂಟಾಟಿಕೆ ದಾಸಯ್ಯ ॥ ೧ ॥

## ದೃಶ್ಯ : ವಿವಾಹ ಮಂಟಪ

**ಚೂಡಾಮಣಿ : ಹಾಡು** **ರಾಗ : ಸಾಳಗಭೈರವಿ - ಆದಿತಾಳ**

ಮಾರನೋ ಈ ಮೋಹನಾಂಗ ಮೋದವ ತಂದೀವ ನೀಗ ॥ ಪ ॥
ಸುಂದರ ರಾಕೇಂದು ವದನ ಮಂದಹಾಸದಿಂದ ಮೆರೆವ ॥ ಅ ಪ. ॥
ಬಂಧುರ ಅರವಿಂದ ನಯನ ಕುಂದ ಕುಸುಮಾಕಾರ ಸದನ
ಅಂದಗಳಿಗಾನಂದ ಸದನ ಮದನ ಮೋಹಾಕಾರನಿವನು ॥ ೧ ॥

## ದೃಶ್ಯ : ಅಂತಃಪುರ

**ಚೂಡಾಮಣಿ : ಹಾಡು** **ರಾಗ : ಬೇಹಾಗ್ - ಆದಿತಾಳ**

ಸಖಿನೋಡೆ ಸುಂದರಾಂಗನ ॥ ಪ ॥
ಚಿತ್ರ ಮಂಚವನೇರಿ ನಿದ್ರಿಸುತ್ತಿರುವ ಸಖಿನೋಡೇ ॥ ಅ.ಪ. ॥
ದೇವಗಂಧರ್ವನೋ ಮಾರನೋ ಶೂರನೋ ಸುಕುಮಾರನ
ಚೆಲುವಿಕೆಗೆನ್ನಯಮನ ಕುಸುಮ ಶರಕೇಳಿಕೆಗೆ ಸಿಲುಕಿಹುದೆ ॥ ೧ ॥

## ದೃಶ್ಯ : ಶಯ್ಯಾಗೃಹ

**ಚೂಡಾಮಣಿ : ಹಾಡು** **ರಾಗ : ಕಮಾಚ್ - ಮಿಶ್ರಚಾಪು ತಾಳ**

ಮಾತಾಡಬಾರದೇನೋ ಮಾರರಮಣನೆ ॥ ಪ ॥
ಮಾತನಾಡದೆ ನೀನು - ಮೌನದಿಂದಿರುವರೆ
ಮೋಹನಾಂಗನೆ ನೀನು - ಮನ್ನಿಸಿ ದಯಮಾಡಿ ॥ ೧ ॥
ಮಡದಿಯಾದೆನ್ನನು - ಮಮತೆಯಿಂದಲಿ ನೋಡಿ
ಮೋಹಸಾಗರದಲ್ಲಿ - ಮುಳುಗಿಸಲು ಬಂದು ॥ ೨ ॥

**ಕುರುಬ : ಹಾಡು** **ರಾಗ : ಕುರಂಜಿ - ಆದಿತಾಳ**

ಅಳಬ್ಯಾಡ್ಕಣೆ ಸುಮ್ಕಿರೇ ನನ್ಹೆಂಡ್ರವ್ವ ಅಳಬೇಡ್ಕಣೆ ಸುಮ್ಕಿರೇ ॥ ಪ ॥
ಯಾರ್ಗಿಂತ ಏನ್ಕಡಿಮೆ - ವಾರ್ಗೆ ಸಂದಾಕಿಲ್ವ
ಧೀರ್ನಂತ ಸೂರ್ನಂತ - ಮಾರ್ನಂತ ರೂಪುಕಣೇ ॥ ೧ ॥
ಬಯ್ಯೋಕಿಲ್ಲ ನಾ ಬಡಿಯೋಕಿಲ್ಲ
ನೀನೇಳ್ದಂಗೆ ಕೇಳ್ಕೊಂಡು ನಾಲೆನಾದ್ರು ಒಕ್ಕೊಡ್ತೀನಿ ॥ ೨ ॥

**ಚೂಡಾಮಣಿ : ಹಾಡು** **ರಾಗ : ಬೇಹಾಗ್ - ಆದಿತಾಳ**

ನಾನರಿಯದೆ ಮೋಸಹೋದೆ ॥ ಪ ॥
ರೂಪು ನೋಡಿ ಬರಿ ಈ ಪುರುಷನನೀ ಕಪಟದ ಪರಿಯನು ಕಾಣದೆಲೆ ॥ ಅ.ಪ.॥
ಮಂತ್ರಿಯ ತಂತ್ರವ ತಿಳಿಯದೆ ಕುಮತಿ ಯಾದೆನು ನಾನು ಬಲು ಮರುಳಾದೆ ।
ಈ ಪರಿದುರ್ವಿಧಿ ಮಾಡಿದುದೇ ॥ ೧ ॥

## ದೃಶ್ಯ : ಕಾಡು

**ಭೋಜರಾಜ : ಹಾಡು** **ರಾಗ : ದರ್ಬಾರಿ ಕಾನಡ - ಆದಿತಾಳ**

ಮನದೊಳಗೆ ದುಗುಡವಾಂತೆನೆ ಸ್ವಾಂತದೊಳ್ ಭ್ರಾಂತನಾದೆ ॥ ಪ ॥
ದುರುಳ ಮುಂಜನು ವಿರೋಧವ ಮಾಡೆ ಚರಿಸುವೆನೀವರೆ ಭಾಸಿಯಾಯಿತು ॥ ೧ ॥
ಘನವದೀಪರಿ ಭ್ರಮಣಮಾಡುದೇ ದೈವವೇ ಹಾ ಈ ಪರಿಯಾಯ್ತೆ ॥ ೨ ॥

## ದೃಶ್ಯ : ಕಾಳಿಕಾದೇವಾಲಯ
## (ದೇವಿಸ್ತುತಿ ಮಾಡುವನು)
## (ರಾಗಮಾಲಿಕೆ)

**ಭೋಜರಾಜ : ಹಾಡು** — **ರಾಗ : ತೋಡಿ - ಆದಿತಾಳ**

ದೇವಿ ಭಗವತಿ ಪಾವನೆ ತಾಯೆ ॥ ಪ ॥
ಜಯತು ಜಯತು ತಾಯೆ
ಭಯವಿಧಾರಿಣಿ
ಆವ ಜನ್ಮದ ಫಲವೋ
ನಾವು ಧನ್ಯರಾದೆವು ॥ ೧ ॥

**ರಾಗ : ಭೈರವಿ - ಆದಿತಾಳ**

ಪರಮಪಾವನೆ ಪಾಲಿಸೆ
ವರ ಕಾಳಿಕಾ ದೇವಿ ॥ ಪ ॥
ಸ್ಮರಿಸುವೆ ನಘಸಂಹಾರೇ
ಚರಣಾಬ್ಜದೊಳು ತಾಯೇ
ಪರಮ ಪಾವನೆ ಪಾಲಿಸೆ ॥ ಅ.ಪ. ॥
ತ್ರಿಪುರ ಸುಂದರಿ ನಿನ್ನ ದರಶನದಿಂದ
ಧನ್ಯರಾದೆವು ನಾವು
ಅಭಯವ ಬೇಡುವೆವು ॥ ೧ ॥

## ದೃಶ್ಯ : ಕಾಳಿಕಾದೇವಾಲಯ
## (ಕುರುಬ ಕಾಳಿದಾಸ ಆದನಂತರ)

**ಕಾಳಿದಾಸ : ಶ್ಲೋಕಗಳು**

ಮಾಣಿಕ್ಯ ವೀಣಾ ಮುಪಲಾಲಯಂತಿ ।
ಮದಾಲಸಾಂ ಮಂಜುಳವಾಗ್ವಿಲಾಸಾಂ।
ಮಾಹೇಂದ್ರನೀಲದ್ಯುತಿ ಕೋಮಲಾಂಗೀ।
ಮಾತಂಗ ಕನ್ಯಾಂ ಮನಸಾಸ್ಮರಾಮಿ ॥ ೧ ॥

ಚತುರ್ಭುಜೇ ಚಂದ್ರಕಳಾವತಂಸೇ । ಕುಚೋನ್ನತೇ ಕುಂಕುಮರಾಗ ಶೋಣೇ
ಪುಂಡ್ರೇಕ್ಷು ಪಾಶಾಂಕುಶ ಪುಷ್ಪಬಾಣ ಹಸ್ತೇ ನಮಸ್ತೇ ಜಗದೇಕ ಮಾತಃ ॥ ೨ ॥

ಮಾತಾ ಮರಕತಶ್ಯಾಮಾ। ಮಾತಂಗೀ ಮಧುಶಾಲಿನೀ ।
ಕುರ್ಯಾತ್ ಕಟಾಕ್ಷಂ ಕಲ್ಯಾಣೀ ಕದಂಬವನವಾಸಿನೀ ॥ ೩॥

ಜಯಮಾತಂಗ ತನಯೇ । ಜಯನೀಲೋತ್ಪಲದ್ಯುತೇ ।
ಜಯಸಂಗೀತ ರಸಿಕೇ । ಜಯ ಲೀಲಾಶುಕಪ್ರಿಯೇ ॥ ೪ ॥

**ಚೂಡಾಮಣಿ : ಹಾಡು** **ರಾಗ : ಬಿಲಹರಿ - ಅಟ್ಟತಾಳ**

ಮಿತಿಮೀರಿ ನಡೆಯುವರೇ । ಮಾನಿತನಾಗಿ ॥ ಪ ॥
ಕೇಳಿಕೊಂಡರು ಮಾತ । ಕೇಳಲಾರದೆ ಎನ್ನ ಗೋಳಾಡಿಸುವೆ ಇಂತು
ಕಳವಳಗೊಳಿಸುತ ॥ ೧ ॥
ವೈವಾಹಕ್ರಮದಿಂದ ಜೀವಿತೇಶ್ವರನೆಂದು
ಭಾವಿಸಲಿಲ್ಲವೇ । ಈ ವಿಧವರಿಯುತ ॥ ೨ ॥

**ಕಾಳಿದಾಸ : ಹಾಡು** **ರಾಗ : ಬೇಹಾಗ್ - ಆದಿತಾಳ**

ಕೇಳಲಹುದೇ ಜನನಿ ಈ ನುಡಿ ಗುಣಮಣಿ
ಕಷ್ಟದೊಳಗೆ ಮುನಿಸಾಡುವರೆ ಗುಣಿ ॥ ಪ ॥
ಪ್ರಮಾದವಹುದು ನಡೆ ನೀಸಾರಿ ಛೇ ಬಿಡು ಸ್ವೇಚ್ಛಾಕಾರಿಣಿಯಾಗಿ
ದೂರುತೆನ್ನನು ಕಾಡುವರೇನೆ ದೂರದಿ ನಡೆ ನೀ ಭರದಿ ಸುವಾಣಿ ॥ ೧ ॥

**ಕಾಳಿದಾಸ : ಹಾಡು** **ರಾಗ : ಮಾಂಡ್ - ಆದಿತಾಳ**

ಶಂಭೋ ಶಂಕರ ಗೌರೀಶ
ನತಜನ ಪಾಲ ಮಹೇಶ ॥ ಪ ॥
ಕೈಲಾಸೋನ್ನತ ಶಿಖರ ನಿವಾಸ । ಶಶಿಧರ ಸುಮಧುರ ಹಾಸ ।
ತಾಂಡವಲೀಲ ನಟನವಿಲಾಸ । ಬ್ರಹ್ಮಾನಂದ ಭಾವಾವೇಶ ॥ ೧ ॥

**ರಾಗ : ಶುದ್ಧಪೀಲ್ - ಆದಿತಾಳ**

ಫಾಲಲೋಚನ ಪಾಪವಿದೂರ ।
ನಿತ್ಯಾನಂದ ನಿರಾಕಾರ ।
ಪಾವನ ಪುರುಷ । ಪನ್ನಗ ಭೂಷ ।
ಪಾಲಯಮಾಂ । ಪರಮೇಶ । ಮಹೇಶ ॥ ೧ ॥

## ದೃಶ್ಯ : ಧಾರಾನಗರ ಭೋಜರಾಜನ ಸಭೆ

**ಭೋಜರಾಜ : ಹಾಡು** **ರಾಗ : ಬೇಗಡೆ - ಮಿಶ್ರಚಾಪುತಾಳ**

ಇಂದು ಮೂಡಿಹನು ಆನಂದದ ಜಲಧಿಯೊಳಿಂದು ಮೂಡಿಹನು ॥ ಪ ॥
ಅಂದವೇನೇನೆಂದು ಪೇಳ್ವೆ ಪೊಂದಿದೆ ಆನಂದ ಭಳಿರೇ ॥ ಅ ಪ ॥
ಧೀರನಾಗಿ ಧಾರಿಣಿಯ ವಿಚಾರ ಕಾರ್ಯದಲ್ಲಿ ನಾನು ವೀರನೆನಿಸಿ
ರಾಜಿಸುವೆನು ಭೂರಿ ಭಾಗ್ಯ ಭೋಗದೊಳಗೆ ॥ ೧ ॥

**ಬುದ್ಧಿಸಾಗರ : ಕಂದ**

ವರಧರ್ಮನೀತಿಸತ್ಯದಾ
ಸರಣಿಯನನುಸರಿಸಿ ರಾಜ್ಯಭಾರವ ನೆಸಗಲ್
ಕರುಣಾರಸಪೂರಿತ
ಧರಣೀಶನೆ ಪ್ರಜೆಗಳಮಿತ ಸೌಖ್ಯದೊಳಿಹರ್ಗೈ ॥

**ಕಾಳಿದಾಸ : ವೃತ್ತ ॥** **ರಾಗ : ನಾಟಿ**

ವಿದ್ವದ್ರಾಜ ಶಿಖಾಮಣೇ ತುಲಯಿತುಂ ಧಾತಾತ್ವದೀಯಂಯಶಃ ।
ಕೈಲಾಸಂಚ ನಿರೀಕ್ಷ್ಯ ತತ್ರ ಲಘುತಾಂ ನಿಕ್ಷಿಪ್ತವಾನ್ ಪೂರ್ತಯೇ
ಉಕ್ಷಾಣಂ ತದುಪರುಮಾ ಸಹಚರಂ ತನ್ಮೂರ್ಧ್ನಿಗಂಗಾಜಲಂ ।
ತಸ್ಯಾಗ್ರೇ ಫಣಿಪುಂಗವಂ ತದುಪರಿ ಸ್ಫಾರಂಸುಧಾದೀಧಿತಿಮ್ ॥

**ಕಾಳಿದಾಸ : ಶ್ಲೋಕ**

ಮಹಾರಾಜ ಶ್ರೀಮಾನ್ ಜಗತಿ ಯಶಸಾಃತೇ ಧವಲಿತೇ
ಪಯಃ ಪಾರಾವಾರ ಪರಮ ಪುರುಷೋಯಂ ಮೃಗಯತೇ ॥
ಕಪರ್ದಿ ಕೈಲಾಸಂ ಕರಿಕಮರ ಭೌಮಂ ಕುಲಿಶಭೃತ್
ಕಲಾನಾಥಂ ರಾಹುಃ ಕಮಲ ಭವನೋ ಹಂಸಮಧುನಾ ॥

**ಕಾಳಿದಾಸ : ಹಾಡು** **ರಾಗ : ಕೇದಾರ ಗೌಳ - ಆದಿತಾಳ**

ರಾಜೇಂದ್ರಾ, ನಾಂ । ರಚಿಸಿಹೆನ್ನೈ । ಪ್ರಭು । ರಂಜಿಪ ಸುಕಾವ್ಯಗಳ ॥
ನವರಸಯುತ ಕೃತಿಗಳ ॥ ಪ ॥

ಶಿವ ಪಾರ್ವತಿಯರ । ಲೀಲೆಗಳ । ಸವಿಯನು ವಿವರಿಸಿ ವಿರಚಿಸಿದೆ ।
ಕುಮಾರನುದಿಸಿ । ಮಹಿಮೆಯ ತೋರಿ ॥
ಅಮಿತಾನಂದವ । ಅಮರರಿಗೆ ॥ ಕರುಣಿಸಿದ ಸುರರಿಪುಹರ ॥ ೧ ॥

**ರಾಗ : ಹಂಸಾನಂದಿ**

ಮೇಘ ಸಂದೇಶವ ಪೇಳುವೆ ನೊಲಿದು ।
ರಾಗಾವೇಶದೆ ನಿಜಸತಿಗೆ ॥
ರಮಣನು ಕಳುಹಿದ ವಿರಹದ ಪರಿಯ ।
ಸುಮಧುರ ಕೃತಿಯಿದು ।
ನರವಿನುತನೆ । ಧರೆಯರಸನೆ । ವರಚರಿತನೆ ॥ ೨ ॥

**ರಾಗ : ಕಾನಡ**

ವಾಗಾದಿಯನು । ಶ್ರೀ ಕಾವ್ಯವನಾ ।
ರಘುವಂಶವನೆ। ಪೇಳಿಹೆನ್ಯೆ । ದೇವಾ ॥
ರಾಘವ ಚರಿತೆಯನು ಕೇಳ್ಗೆ ॥
ಅನುರಾಗದಿ ನೀವ್ । ಕವಿಜನಹಿತ ।
ನವಗುಣಯುತ । ಭುವನ ವಿನುತ ॥ ೩ ॥

## ದೃಶ್ಯ : ರಸ್ತೆ

**ಚೂಡಾಮಣಿ : ಹಾಡು** **ರಾಗ : ಜೋನ್‌ಪುರಿ - ಆದಿತಾಳ**

ಅಗಲಿದೆ ಮದೀಯ ಮನೋಹರನೆ ॥ ಪ ॥
ದುರಿತವೆನ್ನೊಳೂ ॥ ಮರೆಯಾಗಿರ್ಪುದು ॥
ನೀರಜನೇತ್ರ, ತೋರೆಲೊ ನಿನ್ನ ಮೋಹವೆನ್ನೊಳು ಮನದೊಳಗಿರ್ದ
ಸಾಕುಮಾಡು ನೀಂ ಸರಸವಿದೆಲ್ಲವ ಅಕಟಕಟ ಇದು ಎಂಥ ವಂಥಮೋ ॥ ೧ ॥

**ಚೂಡಾಮಣಿ : ಹಾಡು** **ರಾಗ : ಶುಭಪಂತುವರಾಳಿ - ಝಂಪೆತಾಳ**

ಓಂಕಾರ ರೂಪಿಣಿ ಕಲ್ಯಾಣಿ ಜನನಿ ॥ ಪ ॥
ಶೋಕಾಪಹಾರಿಣಿ ಲೋಕೈಕ ರಾಣಿ ॥ ಅ.ಪ. ॥
ಪತಿಯ ಕುಲವರಿಯೆನೆ ! ಕಾತರಿಸುತಿಹೆನೆ !
ಏತಕೀ ಪರಿಯೆನ್ನ ಕೈ ತೊರೆಯಮ್ಮ ? ॥ ೧ ॥

ಮದಿಸಿ ಮೈಮರೆತೆನೆ ? ಮೇರೆ ಮೀರಿದೆನೆ ?
ದಾರಿನಾಕಾಣೆನೆ ! ನೀ ಕಾಯೆ ತಾಯೆ ॥ ೨ ॥
ವಂದಿಪೆ ಮಹನೀಯ ವಿಜಿತ ಮಾಯೇ
ಚಿರ ನಿರಾಮಯೆ ನಾರಾಯಣಿಯೇ ॥ ೩ ॥
ಚಿನ್ಮಯ ಸೋಗವೀಯೇ ಬೇಡುವೆ ತಾಯೇ
ಪೂಜಿತೆ ರಾಜಿತೇ ಲೋಕಮಾತೇ ॥ ೪ ॥

## ದೃಶ್ಯ : ಚಂದ್ರಶಾಲೆ
(ಭೋಜರಾಜ - ಕಾಳಿದಾಸರ ಯುಗಳ ಗೀತೆ)

**ಭೋಜರಾಜ :** ಚಂದ್ರನು ಮೂಡುವನಿದೋ - ಆನಂದದಿಂದ ॥ ಪ ॥
ಇಂದುವನಾರಾಧಿಸೆ - ಇಂದೀವರಾನಂದಿಸೆ
ಕಂದರ್ಪನು ಮಂದಾನಿಲದಿಂದೋಡುತ ಬಂದಿಹನು ॥ ೧ ॥

**ಕಾಳಿದಾಸ :** ಷೋಡಶ ಕಳಾಧರನಾದರೂ ತಾ ಕಾಮುಕರ
ಕಾಡಿಪನು ಬೇಡಿವನ ಕೂಡಾಟವ ಕೇಳಿಗನು ॥ ೧ ॥

**ರತ್ನಕಲೆ : ಹಾಡು** — **ರಾಗ : ಬಿಲಹರಿ - ಆದಿತಾಳ**

ಮದನಾಂಗ ಸುಂದರ ಮನಮೋಹನ ॥ ಪ ॥
ಮನವನು ಸೆಳೆದು ಮರುಳು ಮಾಡಿದ ಎನ್ನ ॥ ಅ.ಪ. ॥
ವದನಕಾಂತಿ ನೋಡೆ ಈತನ ವದನಕಾಂತಿ ನೋಡೆ
ಎನ್ನಯ ಹೃದಯವು ಮುದದಿ ನಲಿಯುತಿದೆ ।
ಸದನಕೆ ಕರೆದೊಯ್ದು ಸುಖವನು ಪಡೆಯುವೆ ।
ಇದುವೆ ಸುಸಮಯವು ಒದಗಿ ಬಂದಿಹುದಿಂದೆ ॥ ೧ ॥

**ರತ್ನಕಲೆ : ಹಾಡು** — **ರಾಗ : ಭೈರವಿ - ಆದಿತಾಳ**

ಭೋಗಭಿಕ್ಷವನೀಯದೇ ಪೋಗುವರೇನೋ ॥ ಪ ॥
ಬೇಕಾಗಿ ಮುನಿಸುವೆ ಬೇಡವೋಬೇಡವೋ
ಏಕಾಂತದೊಳು ಸೇರುವಾ । ಬಾಕಾಂತನೇ ॥ ೧ ॥

## ದೃಶ್ಯ : ರಸ್ತೆ

**ಕಾಳಿದಾಸ : ಹಾಡು** — ರಾಗ : ದರ್ಬಾರಿ ಕಾನಡ - ಆದಿತಾಳ

ಸುಮಬಾಣಹತಿಗೆ ವಶನಾನಾದೆ || ಪ ||
ಸುಂದರಿ ಮನವಪಹಾರಂಗೈದಳು
ಅಂದಿನಿಂದ ನಾಂ ಕುಂದುತಲಿಹೆನು
ಕಾಮನ ಶರವು ಎನ್ನೊಳು ಮೂಡಿದೆ
ಭಾಮಿನಿ ಮೋಹವ ಸಾಧಿಸುವೆನೆ ನಾ ||೧||

## ದೃಶ್ಯ : ರತ್ನಕಲೆ ಮನೆ

**ಕಾಳಿದಾಸ : ಕಂದ**

ಮತ್ತದ್ವಿರೇಪ ಕುಂತಳೇ
ಚಿತ್ತಜ ತಾಂ ಜಗವ ಸೂರೆಗೈಯ್ಯಲ್ ಪಿಡಿದಾ
ಉತ್ತಮಕುಸುಮಾಸ್ತ್ರಂಗಳ
ಬತ್ತಳಿಕೆಯ ಭಾವಿಸಲ್ ಭಾಮಾ ಮಣಿ ತಾಂ ||

**ಕಾಳಿದಾಸ : ಹಾಡು** — ರಾಗ : ಕಲ್ಯಾಣಿ - ರೂಪಕತಾಳ

ಮಧುರವಾಣಿ ನಾಗವೇಣಿ । ಮುದವನೀಡೆ ಬಾರೆ ನೀರೆ || ಪ ||
ಕುಸುಮಬಾಣ ಅಸ್ತ್ರಕೀಗ ಬಾರೆ ನೀರೆ ಚಾರುಸುಂದರಿ || ಅ.ಪ ||
ಕಮಲನೇತ್ರೆ, ಚಾರುಗಾತ್ರೆ, । ವಿರಹತಾಪ ತಾಳಲಾರೆ ।
ಹರುಷದಿಂದ ಮನ್ನಿಸೆನ್ನ ಬಾರೆನೀರೆ ಚಾರುಸುಂದರಿ || ೧ ||

## ದೃಶ್ಯ : ರಸ್ತೆ

**ಕಾಳಿದಾಸ : ಹಾಡು** — ರಾಗ : ಬಿಲಹರಿ - ತಾಳ (ಛಾಪು)

ವಿನೋದವೇನೊ ಮಾರನೇ ಮನೋಜ ಪೇಳೊ ಧೀರನೇ || ಪ ||
ಘಾತುಕನೆಲೊ ನೀ ಮೀನಾಂಕ ನಿನಗೇ ಯೋಗಿಗಳಾದರು ಬಾಗ್ವೆ || ೧ ||
ಕೌಸುಮ ಶರದೀಗೋಳಾಡಿಸುವೇ ಜಾಗ ಶಿಖಾಮಣಿ [illegible] ||೨||

## ದೃಶ್ಯ : ಭೋಜರಾಜನ ಆಲೋಚನಾ ಮಂದಿರ

**ಡಿಂಡಿಮ : ಶ್ಲೋಕ**

ಕಮಲೇ ಕಮಲೋತ್ಪತ್ತಿಃ ಶ್ರೂಯತೇ ನತುದೃಶ್ಯತೇ ।
ಬಾಲೇ ತವಮುಖಾಂಭೋಜೇ ದೃಷ್ಟಮಿಂದೀವರ ದ್ವಯಂ ॥

## ದೃಶ್ಯ : ರತ್ನಕಲೆ ಮನೆ

**ಕಾಳಿದಾಸ : ಕಂದ**

ಕುಂದಣದಿ ಬಿಗಿದ ಮುತ್ತಿನ ಚಂದದ
ಲಾವಣ್ಯ ಕಳೆಯ ಕಳೆಯುತ್ತ
ಮಹಾನಂದಕಾಧಾರವೆನಿಸುವ
ಇಂದಿರನೇತ್ರೆ, ನಿನ್ನತೊಡೆಗಂಬವು ಕೇಳ್

**ಭೋಜರಾಜ : ಹಾಡು** ರಾಗ : ಭಾಗೇಶ್ವರಿ - ಖಂಡಚಾಪುತಾಳ

ಏನೀಗನಾಂಗೈವೆ ಮಹಾಪಾಪಹಾರಿಸಿದು ನಾನೀವಿಚಾರದಲಿ ಏನೆಂದು ಮಾಳ್ಪೆ ॥ ಪ
ಶೋಕಾ ಕುಲ ನಾನಾದೆ ನೀ ಕಾಯುಬೇಕೆನ್ನ
ಏಕಿಂತು ಮರೆಯಾದೆ ಬಾ ಕಾಳಿದಾಸನೆ ॥ ೧ ॥
ಕವಿಕಾಳಿದಾಸನ ಕಳೆದೆನು ನಾನಯ್ಯ
ಕುಮತಿಯು ನಾನಾಗಿ ಕೊರಗುವೆನು ಮನದಲ್ಲಿ ॥ ೨ ॥

## ದೃಶ್ಯ : ಭೋಜರಾಜನ ಸಭೆ

**ಚೂಡಾಮಣಿ : ಹಾಡು** ರಾಗ : ಕುರಂಜಿ - ಆದಿತಾಳ

ಪತಿದಾನವನು ಕೊಡುರಾಜಾ । ಪ್ರಭುವರ ಭೋಜರಾಜ ॥ ಪ ॥
ಮಹಾರಾಜನೆ ಗತಿನೋಡ್ವೆ । ಮನದಿಷ್ಟವನು ಸಲಿಸೈ ॥ ಅ.ಪ. ॥
ಗತಿಯಾಗಿ ನಾನದೆಂತು । ಕ್ಷಿತಿಯಲ್ಲಿ ಬಾಳ್ವುದೆಂತು ।
ನೀ ಮನ್ನಿಸೈ ಜನಪಾಲಾ ಕಮನೀಯ ಕೀರ್ತಿಲೋಲ ॥ ೧ ॥

## ದೃಶ್ಯ : ರತ್ನಕಲಿ ಮನೆ

**ಕಾಳಿದಾಸ : ಶ್ಲೋಕ**

ಅದ್ಯಧಾರಾ ನಿರಾಧಾರ ನಿರಾಲಂಬ ಸರಸ್ವತಿ ।
ಪಂಡಿತಾಖಂಡಿತಾ ಸರ್ವೇ ಭೋಜರಾಜ ದಿವಂಗತೇ ॥
ಅದ್ಯಧಾರಾ ಸದಾಧಾರಾ ಸದಾಲಂಬ ಸರಸ್ವತೀ
ಪಂಡಿತಾ ಮಂಡಿತಾಸರ್ವೇ ಭೋಜರಾಜ ಭುವಂಗತೇ ॥

**ಕಾಳಿದಾಸ : ಹಾಡು** **ರಾಗ : ಕಲ್ಯಾಣಿ - ಆದಿತಾಳ**

ಶೃಂಗಾರ ವಾಹಿನಿ । ಮನಮೋಹಿನಿ ।
ಪ್ರಿಯ । ಕಾಂತಾಮಣಿ । ಕಾಮಿನಿ । (ಮಧುರ ।) ॥ ಪ ॥
ಪ್ರೇಮಾನುರಾಗಿಣಿ । ಪ್ರಾಣೇಶ್ವರೀ । (ಪರಮ ।)
ಪ್ರಣಯ । ಬೀರಿ । ಬೀರಿ । ಮನಕಾನಂದವ (ತರುವ ।) ॥ ಅ.ಪ. ॥
ಚಿಂತೆಯ । ಪರಿಹರಿಸಿ ।
ಚಿರ । ಶಾಂತಿಧಾರೆಯ ಹರಿಸಿದೆ । (ಹೃದಯದ ।)
ಶೋಕವ ನೀ ಹರಿಸಿ ।
ಅಮರ । ಲೋಕವನೇ ರಚಿಸಿದೆ ।
ದನೀಸಾರಿಗರಿ್ರೀ । ಸ್ವರಕೆ ನೀ । ನಲಿದು ಬಾ ।
ತಜ್ಜಣು ತಕಿಟ । ಲಯಭರಿತ । ಗತಿಗಮನೆ ॥ ೧ ॥

### ಮಂಗಳ

ಜಯಶ್ರೀ ಪರಮೇಶ್ವರ ಜಯ ಮಂಗಳ ಭಾಸುರ ॥ಪ ॥
ಜಯವಿಕಾಸ ನವವಿಲಾಸ ಶೈಲವಾಸ ಜಯಗಿರೀಶ ಕಲುಷಹರಣ
ಕಾಮಕಲನ ಘನ ಸುಗುಣ ಸುರ ಶರಣ ಜಗದೀಶ ॥ ೧ ॥
ದಿವ್ಯಲಿಂಗ ಸಮಧೂತ ದಿನಕರ ಶತಕೋಟಿ ಕಾಂತ
ದಿಗದಿನಾಥ ವಿನುತ ಪೂತ ಶಿವನಾಥ ॥ ೨ ॥



# ರಾಜಾ ವಿಕ್ರಮ ಅಥವಾ ಶನಿಪ್ರಭಾವ


ನಾಟಕಕಾರರು
ಬಿ.ಸಿ. ಶ್ರೀನಿವಾಸ್


ಗಾಯಕ, ನಟ
ಎಸ್. ಶ್ರೀಕಂಠಮೂರ್ತಿ


ಶ್ರೇಷ್ಠ ಖಳನಾಯಕ
ಹೆಚ್.ಟಿ. ಅರಸ್

**ಪ್ರಾರ್ಥನೆ : ಹಾಡು** **ರಾಗ : ಶುದ್ಧಧನ್ಯಾಸಿ - ಆದಿತಾಳ**

ನಮೋ ನಮೋ ಶನಿರಾಜಾ
ಓಂ ನಮೋ ನಮೋ ಗ್ರಹತೇಜ ॥ ಪ ॥
ನಮೋ ಮಕರ ಕುಂಭಾಧಿಪತೇ
ನಮೋ ರವಿಪುತ್ರ ನಮೋಸ್ತುತೇ ॥ ಅ.ಪ. ॥
ಕಾಲ ಸಹೋದರ ನಮೋ ನಮೋ
ಕಾಲ ಚಕ್ರ ಜಿತು ನಮೋ ನಮೋ
ನೀಲ ರತ್ನ ನೀಲಾಂಶುಕ ಪುಷ್ಪ
ಸುಮಾಲ ಭೂಷಣ ನಮೋ ನಮೋ ॥ ೧ ॥

**ಸೂತ್ರಧಾರ : ವೃತ್ತ ॥**

ಶ್ರೀ ವೈವಸ್ವತನಿಂದುಹಾಸಗುಚರಂ ಛಾಯಾಸುತಂ ಸದ್ಗುಣಂ ।
ಘಾವಾಸಂ ಘನನೀಲವರ್ಣನಖಿಲಾಯುಷ್ಕಾರಕಂ ಸುಸ್ಥಿರಂ ॥
ಶ್ರೀ ವಿಖ್ಯಾತಿಯುತಂ ನುತಂ ಮಕರಕುಂಭಾಧೀಶ್ವರಂ ನಿತ್ಯಮಾ ।
ದೇವಂ ಮಾಳ್ಕೆ ಶನೈಶ್ಚರಂ ನಮಗೆ ತಾನೆಂದುಂ ಸದಾನಂದವಂ ॥ ೧ ॥

**ಸೂತ್ರಧಾರ : ಹಾಡು** **ರಾಗ : ಕಲ್ಯಾಣಿ - ಆದಿತಾಳ**

ಛಾಯಾತನಯ । ಜಯ ಘನವಿನಯ ॥ ಪ ॥
ಮಾಯಾತೀತ । ಮಾನ್ಯಾಮರಹಿತ । ಮನುಮೌನಿನುಗೀತಾ ವಿಖ್ಯಾತ ॥

ದೀನಜನಾವನ । ದಿನಕರತೇಜ । ಜ್ಞಾನದಾನಲೀಲ । ಮಣಿಮಾಲ ॥
ಧ್ಯಾನನಿರತಶ್ರೀ । ಮೌನಿಗಣಾರ್ಚಿತ । ನಿಮತಾಖಿಲದೇವ । ಮಹಾದೇವ ॥ ೧ ॥

**ದೃಶ್ಯ : ಆಕಾಶಮಾರ್ಗ**

**ನಾರದ : ಹಾಡು** **ರಾಗ : ರಾಗಮಾಲಿಕೆ - ಆದಿತಾಳ**

ಜಯ ಜಯ ಜಗದೀಶಾ । ಮಾಂಪಾಹಿ ಪರಮೇಶ್ವರಾ ಗೌರೀಶಾ ॥ ಪ ॥
ಗ್ರಹದಲಿ ಪ್ರಥಮನೆ ಪೂರ್ಣ ಪ್ರಕಾಶನ ಹೇ ಸೂರ್ಯ ದೇವನೆ ।
ಹೇ ಸೂರ್ಯದೇವನೆ ಸಾಷ್ಟಾಂಗ ವಂದನೆ ॥ ಜಯ ॥
ಶಾಂತಸ್ವರೂಪನೆ ಶಶಿಕಳಾಂಕನೆ ಹೇಚಂದ್ರ ದೇವನೇ ।
ಅಂಗಾರಕನೆ ಭೂಮಿಕುಮಾರನೆ ಮಂಗಳದೇವನೇ
ಸಾಷ್ಟಾಂಗ ವಂದನೆ ॥ ಜಯಾ॥
ಚಂದ್ರ ತಾರೆಯರ ಪ್ರೇಮಕುಮಾರನೆ ಹೇ
ಬುಧ ದೇವನೇ ಸಾಷ್ಟಾಂಗ ವಂದನೆ ॥ಜಯಾ॥
ಶುದ್ಧಾದೇವಿಯ ಗರ್ಭ ಸಂಜಾತನೆ
ಹೇದೇವಗುರುವೇ ಸಾಷ್ಟಾಂಗವಂದನೆ ॥ಜಯಾ॥
ವಿಕ್ರಮವಿಜಯನೆ ವಿಪ್ರ ಶ್ರೇಷ್ಠನೆ
ಹೇಶುಕ್ರದೇವನೆ ಸಾಷ್ಟಾಂಗ ವಂದನೆ ॥ಜಯಾ॥
ಉಪಗ್ರಹ ಪರಿವೃತ ಅಸಮವೈಭವನೆ ಹೇ
ಶನಿದೇವನೆ ಸಾಷ್ಟಾಂಗ ವಂದನೆ ॥ಜಯಾ॥
ಅಷ್ಟಮನವಮತಿ ರಾಹುಕೇತುಗಳೇ
ನವಗ್ರಹಾಧಿ ಪತೀ ಸಾಷ್ಟಾಂಗ ವಂದನೆ ॥ಜಯಾ॥

**ದೃಶ್ಯ : ಉಜ್ಜಯಿನಿನಗರ - ವಿಕ್ರಮಾದಿತ್ಯನ ದರ್ಬಾರು**

**ವಿಕ್ರಮ : ಹಾಡು** **ರಾಗ : ಬೇಗಡೆ - ಅಟ್ಟತಾಳ**

ಸುಖವಪಡುತಿಹರೇ ಸಮ್ಮತದಿ ಪ್ರಜೆಗಳು ॥ ಪ ॥
ಸುಖವಪಡುತ ಸುಮತಿಗಳಾಗುತ ।
ಪ್ರಕಟ ವೈಭವದಿಂದ ಮೆರೆಯುತ ।

ಅಖಿಳ ಸಂಪದದಿಂದ ಕೂಡುತ ।
ಮಕುಟ ಪೀತಾಂಬರಿಯನೆನೆಯುತ ॥ ೧ ॥

**ಮಂತ್ರಿ : ಹಾಡು** — **ರಾಗ : ಬೇಹಾಗ್ - ಆದಿತಾಳ**

ಸುಖದೊಳಗಿರುತಿಹರ್ಯೆ ಅಖಿಳರು ॥ಪ॥
ಸಕಲ ಶಾಸ್ತ್ರಗಳ ಭಕುತಿಯಿಂ ಪಾಲಿಸಿ ।
ನಿಖಿಳವೇದಗಳ ತಾವ್ ಪಠಿಸಿ ।
ಅಕಳಂಕನ ಶ್ರೀ ಆದಿಕೇಶವನ ।
ಅನವರತವು ಭಜಿಸಿ ಆನಂದದಿಂದಲಿ ॥ ೧ ॥

**ಸೈನ್ಯಾಧಿಪತಿ : ಹಾಡು** — **ರಾಗ : ಜಂಜೂಟಿ - ಆದಿತಾಳ**

ಜನಪಲಾಲಿಸು ಮಾತ । ವಿನಯದೊಳರುಹುವೆ ।
ದಿನದಿನದಲಿ ನಡೆದ ವಿಜಯವನು ॥
ರಣದೊಳು ಪರನೃಪ ಶರಣಾಗತನಾಗಿ ।
ಭರದಿಂದಿತ್ತಿಹ ಕರಪತ್ರವನು ॥ ೧ ॥

**ಮಂತ್ರಿ : ಹಾಡು** — **ರಾಗ : ಸುರುಟಿ - ಆದಿತಾಳ**

ಅರಸ ಚಿಂತಿಸಲೇಕೆ । ಒರೆವೆ ಪರಿಹಾರವ ।
ತ್ವರಿತದೊಳೀಗಲೆ ಲಾಲಿಪುದು ।
ಕರೆಸು ಪುರೋಹಿತ ಶಂಕರ ಶಾಸ್ತ್ರಿಯ ।
ಪರಿಯನೆಲ್ಲವನು ಅರುಹುವರವರು ॥ ೧ ॥

## ದೃಶ್ಯ : ರಸ್ತೆ

**ಬ್ರಾಹ್ಮಣರು : ಹಾಡು** — **ರಾಗ : ಶಂಕರಾಭರಣ - ಆದಿತಾಳ**

ಏನು ಬರೆದೆಯೊ ಬ್ರಹ್ಮ ಎಷ್ಟು ನಿರ್ದಯವೋ
ಅಭಿಮಾನವನು ತೊರೆದು ಪರರ ಬೇಡುವುದ ॥ ಪ ॥
ಗೇಣೊಡಲ ಪೊರೆವುದಕೆ ಪೋಗಿ ಪರರನು ಪಂಚ ಬಾಣ

ಸಮರೂಪ ನೀನೆಂದುಪೇಳೆ, ಆದ ನಿನ್ನೊಳಗಿಲ್ಲ
ನಾಳೆಬಾ ಎಂದೆನಲು ಗೋಣತಿರುಗುವ ಎತ್ತಿನಂತೆ ಬಳಲುವುದ ॥ ಅ.ಪ. ॥

ಅಥವಾ

**ಬಡಬ್ರಾಹ್ಮಣ** — ರಾಗ : ತೋಡಿ - ಆದಿತಾಳ

ಬಡತನ ಬರಬಾರದು
ಪೊಡವೀಶ ಕೇಳಯ್ಯಾ ॥ ಪ ॥
ಮಂದನ ಕಾಟದೆ ಬಂದಿತು ಸಂಕಟ
ಅಂದವ ವರ್ಣಿಸಲಸದಳವು
ಹರಿಹರ ಸುರರನು ಕರೆಕರೆಗೊಳಿಸಿದ
ನರರನು ಬಿಡುವನೆ ಆ ಶನಿಯು ॥ ೧ ॥

ದೃಶ್ಯ : ವಿಕ್ರಮಾದಿತ್ಯನ ದರ್ಬಾರ್

**೧ನೇ ಬ್ರಾಹ್ಮಣ : ಶ್ಲೋಕ**

ಜಪಾಕುಸುಮ ಸಂಕಾಶಂ ಕಾಶ್ಯಪೇಯಂ ಮಹಾದ್ಯುತಿಂ
ತಮೋರಿಂ ಸರ್ವಪಾಪಘ್ನಂ ಪ್ರಣತೋಸ್ಮಿ ದಿವಾಕರಂ

**ಹಾಡು** — ರಾಗ : ಶಂಕರಾಭರಣ - ಆದಿತಾಳ

ಸೂರ್ಯನ ಮಹಿಮೆಯ । ಅರುಹುವೆ ಲಾಲಿಸು ।
ಊರ್ವೀಶನೆ ನಾಂ ಹರುಷದೊಳು ॥
ಜಲಜ ಬಾಂಧವನವ । ಒಲಿದು ಸ್ತುತಿಪರಿಗೆ ।
ಫಲಗಳನೀವನು ಇಳೆಯೊಳು ಕಾಯ್ವನು ॥ ೧ ॥

**೨ನೇ ಬ್ರಾಹ್ಮಣ : ಶ್ಲೋಕ**

ದಧಿ ಶಂಖ ತುಷಾರಾಭಂ ಕ್ಷೀರೋಧಾರ್ಣವ ಸಂಭವಂ
ನಮಾಮಿ ಶಶಿನಂ ಸೋಮಂ ಶಂಭೋರ್ ಮುಕುಟ ಭೂಷಣಂ

**ಹಾಡು** — ರಾಗ : ಶಂಕರಾಭರಣ ಆದಿತಾಳ

ಕುಂಭಿಣಿಗೊಡೆಯ ಕೇಳೆಂಬ ನುಡಿಯನು ಸೋಮನು ।
ಅಂದದಗ್ರಹಜಗಕೆ । ಸಂಭ್ರಮಕರನೈ ॥

ಬೆಂಬಿಡದನುದಿನ । ಬೇಡಿದಿಷ್ಟವನಿತ್ತು ।
ಹಂಬಲವನು ಬಿಡಿಸಿ । ಕಾಯುವನೈ ॥೧॥

**೩ನೇ ಬ್ರಾಹ್ಮಣ : ಶ್ಲೋಕ**

ಧರಣೀ ಗರ್ಭ ಸಂಭೂತಂ ವಿದ್ಯುತ್ಕಾಂತಿ ಸಮಪ್ರಭಂ
ಕುಮಾರಂ ಶಕ್ತಿ ಹಸ್ತಂಚ ಮಂಗಲಂ ಪ್ರಣಮಾಮ್ಯಹಂ

**ಹಾಡು** **ರಾಗ : ಕಮಾಚ್ - ರೂಪಕತಾಳ**

ಕ್ರೂರ ಕುಜನ ಪರಿಯಲಾಲಿಸೈ ।
ಒರೆಯುವೆನೀಗಲೆ ಧರಣೀವರ । ಮರೆ ಮಾಜದೆಸಿಮ್ಮೊಳು ।
ಪಾಪಿಗಳನು ಕೋಪದಿ ಬಲು ತಾಪಕೆ ಗುರಿಗೈಯ್ಯುವನು ।
ಪಾಪಕಂಜಿ ನಡೆವರ ಕಾಪಾಡುವ ಕೈಪಿಡಿಯು ತಲವ ॥ ೧ ॥

**೪ನೇ ಬ್ರಾಹ್ಮಣ : ಶ್ಲೋಕ**

ಪ್ರಿಯಾಂಗು ಕಲಿಕಾ ಶ್ಯಾಮಂ ರೂಪೇಣಾಪ್ರತಿಮಂ ಬುಧಂ
ಸೌಮ್ಯಂ ಸೌಮ್ಯ ಗುಣೋಪೇತಂ ತಂಬುಧಂ ಪ್ರಣಮಾಮ್ಯಹಂ

**ಹಾಡು** **ರಾಗ : ಕಲ್ಯಾಣಿ - ರೂಪಕತಾಳ**

ಜಾಣ ಬುಧನು ಜಗದೊಳು । ವಣಿಜನು ಕುಲದೊಳು ।
ಕ್ಷೋಣಿ ಜನರ ಕಾಡಿಸದೆ । ಕೊಡುತಲಿಹನು ಭಾಗ್ಯವನ್ನು ॥ ೧ ॥

**೫ನೇ ಬ್ರಾಹ್ಮಣ : ಶ್ಲೋಕ**

ದೇವಾನಾಂಚ ಋಷೀಣಾಂಚ ಗುರುಂ ಕಾಂಚನ ಸನ್ನಿಭಂ
ಬುದ್ಧಿಭೂತಂ ತ್ರಿಲೋಕೇಶಂ ತಂ ನಮಾಮಿ ಬೃಹಸ್ಪತಿಂ

**ಹಾಡು** **ರಾಗ : ಕಲ್ಯಾಣಿ - ರೂಪಕತಾಳ**

ಜ್ಞಾನಿಗುರುವು ಇಳೆಯೊಳು । ಬ್ರಾಹ್ಮಣನು ಕುಲದೊಳು ।
ದೋಷರಹಿತ ಕಚನ ಜನಕ । ನೀತಿಬೋಧನ ಯಜ್ಞ ರಕ್ಷಕ ॥ ೧ ॥

**೬ನೇ ಬ್ರಾಹ್ಮಣ : ಶ್ಲೋಕ**

ಹಿಮಕುಂದ ಮೃಣಾಲಾಭಂ ದೈತ್ಯಾನಾಂ ಪರಮಂ ಗುರುಂ
ಸರ್ವಶಾಸ್ತ್ರ ಪ್ರವಕ್ತಾರಂ ಭಾರ್ಗವಂ ಪ್ರಣಮಾಮ್ಯಹಂ

**ಹಾಡು** **ರಾಗ : ಮೋಹನ - ಅಟ್ಟತಾಳ**

ಮೇದಿನಿ ಪಾಲಕೇಳಾದರದಿಂದ । ಆ ದಯಾನಿಧಿ ಶುಕ್ರನೈದೆ
ತಾನಧಿಕ । ಸುರವನ ಪದವಿಯ ಕೊಡುವನವನು ।
ನೆರೆನಂಬಿದ ಬಡವರಿಗವನು ॥ ದನುಜವಂಶಕೆ ತಾನು ಘನವಾದ ಗುರುವು
ಎನಿತು ಪೇಳಿದರು ಆತನಿಗೆ ಸಮರುಂಟೆ ॥ ೧ ॥

**೭ನೇ ಬ್ರಾಹ್ಮಣರು : ಶ್ಲೋಕ**

ನೀಲಾಂಜನ ಸಮಾಭಾಸಂ ರವಿಪುತ್ರಂ ಯಮಾಗ್ರಜಂ
ಛಾಯಾ ಮಾರ್ತಾಂಡ ಸಂಭೂತಂ ತಂ ನಮಾಮಿ ಶನೈಶ್ಚರಂ

**ಹಾಡು** **ರಾಗ : ಕಾಂಭೋದಿ - ರೂಪಕತಾಳ**

ಸೂರ್ಯತನುಜ । ಧೀರಶನಿಯು । ನೀಲ ವರ್ಣನು ।
ಕಾಕವಾಹನ ಮಕರ ಕುಂಭ । ರಾಶಿಗೊಡೆಯನು ॥ ೧ ॥

**೮ - ೯ನೇ ಬ್ರಾಹ್ಮಣ :**

**ರಾಹು : ಶ್ಲೋಕ :** ಅರ್ಧಕಾಯ ಮಹಾವೀರ್ಯಂ ಚಂದ್ರಾದಿತ್ಯ ವಿಮರ್ಧನಂ
ಸಿಂಹಿಕಾ ಗರ್ಭ ಸಂಭೂತಂ ತಂ ರಾಹುಂ ಪ್ರಣಮಾಮ್ಯಹಂ

**ಕೇತು : ಶ್ಲೋಕ :** ಪಲಾಶ ಪುಷ್ಪಸಂಕಾಶಂ ತಾರಕಾ ಗ್ರಹಮಸ್ತಕಂ
ರೌದ್ರಂ ರೌದ್ರಾತ್ಮಕಂ ಘೋರಂ ತಂ ಕೇತುಂ ಪ್ರಣಮಾಮ್ಯಹಂ

**ಹಾಡು** **ರಾಗ : ಶಂಕರಾಭರಣ - ಆದಿತಾಳ**

ರಾಹು ಕೇತುಗಳೆಂಬ ರಾಕ್ಷಸಗ್ರಹಗಳು
ಒಂದೇ ಶರೀರದಿಂ ಆದವರವರು ।
ರಾಹು ಚಂದ್ರನ ಪಿಡಿದು । ಕೇತುಸೂರ್ಯನ ಪಿಡಿದು ।
ಗ್ರಹಣ ಕಾರ್ಯಗಳ ನಡೆಸುವರವರು ॥ ೧ ॥

ವಿಕ್ರಮ : ಹಾಡು — ರಾಗ : ಶಂಕರಾಭರಣ - ಆದಿತಾಳ

ಎಂಥ ಕುವರನ ಪಡೆದ ದಿನಪನು । ಕಂತುವೈರಿಯ ದಯದಲಿ ।
ಇಂಥ ಪುತ್ರನ ಪಡೆದವಗಿಗನಂತ ಭಾಗ್ಯವುದರೆಯೊಳು ॥ ಪ ॥
ದೀನಪೀಡಿಸುವಂಥ ಪಾಪಿಯು । ಸುತನೆ ಇವನು ಜಗದೊಳು ।
ಅತಿನಮರ್ಥನೆಂದು ಪೇಳ್ವರೇ । ಕ್ಷತ್ರಿಯ ಸುರರೆ ಧರೆಯೊಳು ॥ ೧ ॥

ಶನಿದೇವ : ಹಾಡು — ರಾಗ : ಹಂಸಧ್ವನಿ - ಆದಿತಾಳ

ಏನೆಂದುಜರಿದೆ ಅಧಮನೆ । ಏನೆಂದು ಜರಿದೆ ಎನ್ನನು ।
ಏನೆಂದುಜರಿದೆ ॥ ಪ ॥
ಕಾಕವಾಹನದಿ ಪೋಗುವ ಸಮಯದಿ ಏನೆಂದುಜರಿದೆ ॥ ಅ.ಪ. ॥

ಶನಿದೇವ : ಹಾಡು — ರಾಗ : ಹಂಸಧ್ವನಿ - ಆದಿತಾಳ

ಫಡನುಡಿನುಡಿದೆಯೊ ಭೀಖಳ ॥ ಪ ॥
ದುಡುಕಿ ಪೇಳ್ವಿಯೊ ಹೇಡಿ ವಿಚಾರ ।
ಕಾಡುತೆ ನಿನ್ನನು ಪಿಡಿಯುವೆನಾ ॥ ಅ.ಪ. ॥
ಎಲ್ಲರಂತೆ ನಾ ನಲ್ಲಕೇಳೆಲೋ
ಖುಲ್ಲ ಉಲ್ಲಾಸದಿ ಬೊಗಳುವೆ ತರವೇನೆಲೋ ॥ ೧ ॥
ನಾಕೆನ್ನೊಳು ಪ್ರೀತಿ ತೋರುವೆ ಖುಲ್ಲನೆ ತರವೇನೆಲೋ ॥ ೨ ॥

ಶನಿದೇವ : ಕಂದ

ಆರನು ಕಂಡು ಲೆಕ್ಕಿಸದೆ
ಧರೆಯೊಳಗೆ ನಾ ಬಾಳ್ವೆ ಎಂದಾಡಿದೇ
ಆತನೇ ನಾನು । ರವಿಸುತನೆಂದು
ಮೆರೆವಾ ಶನಿರಾಜಾ ॥

ವಿಕ್ರಮ : ಹಾಡು — ರಾಗ : ತೋಡಿ - ರೂಪಕತಾಳ

ಭಾನುಪುತ್ರ ಪಾಲಿಸೆನ್ನ ನೀನು ಕ್ರೂರನಾಗದೆ ।
ನಾನುಗೈದ ತಪ್ಪುಗಳನು ಮಾನಸಕ್ಕೆ ತಾರದೆ ॥ ಪ ॥

ವಂದಿಪೆನಾ ನಿಮ್ಮ ಪಾದದ್ವಂದ್ವಗಳಿಗೆ ದೇವನೆ ।
ಕಂದನೆಂದು ಕರುಣದಿಂದ ತಂದೆ ಪಾಲಿಸೆನ್ನನು ॥ ೧ ॥

**ಶನಿದೇವ : ಹಾಡು** ರಾಗ : ಬಿಲಹರಿ - ಆದಿತಾಳ

ಏನೋ ವಿಕ್ರಮ ಹೀನಮಾತಾಡುವರೆ ॥ ಪ ॥
ಜ್ಞಾನಪುಟ್ಟಿತೇನೋ ಖೂಳನೆ ನಿನಗೆ
ಅನ್ಯಾಯವಾಗಿ ಜರಿವುದು ತರವೆ ॥ ೧ ॥
ಕನ್ಯರಾಶಿಗೆನಾ । ಬರುವೆನೀದಿವವೆ ।
ಅನ್ಯಾಯವಾಗಿ ಕೆಡುವುದು ಸರಿಯೆ ॥ ೨ ॥

**ಶನಿದೇವ : ಹಾಡು** ರಾಗ : ಹಂಸಧ್ವನಿ - ಆದಿತಾಳ

ನಡೆನಡೆನಡೆ ದೂರ ನಿನ್ನ ಬಿಡುವುದಿಲ್ಲವೊ ಘೋರ ।
ಪೊಡವಿಗಧಿಕ ಕುಂಕುಮ ಪುರದೊಡೆಯ ಬಂದರೂ
ಬಿಡೆನು ನಿನ್ನನಾಂ ಬಿಡೆನು ನಿನ್ನನಾಂ ॥

**ಶನಿದೇವ : ಹಾಡು** ರಾಗ : ಹಂಸಧ್ವನಿ - ಆದಿತಾಳ

ತೊಲಗೊ ಸಾರೊ ಖಳಕೆಡುಕ ।
ಭಂಡಪುಂಡ ಲಂಡ ನಿನಗಿದು ತರವೇನೆಲೋ ॥
ಅರಿಯದೆ ಜರಿದೆ ಎನ್ನನು ನೀಂ
ಪರಿಪರಿ ಕಾಡುವೆ ನಿನ್ನನು ನಾಂ ।
ಕರಗಳ ಕೊರೆಸುವೆ ನಿನ್ನಯನಾಂ ।
ಅಡಿಗಳ ಕಡಿಸುವೆ ಭರದೊಳು ನಾಂ ॥

**ದೃಶ್ಯ : ರಸ್ತೆ**
**(ಕುದುರೆ ಸಮೇತ ಕಾರವಾನನ ಪ್ರವೇಶ)**

**ಕಾರವಾನ : ಹಾಡು** ರಾಗ : ಮಾಂಡ್ - ಆದಿತಾಳ

ಚಂದದಿ ತಂದಿಹೆ ಅಂದದ ಕುದುರೆಯ
ಬಂದುನೋಡಿರೈ ಪುರಜನರೇ ॥ ಪ ॥

ಇಂದು ಮಾರುವೆ ಈ ಚಂದದ ಹಯವನು ।
ಮಂದಮತಿಗಳಿಗಿದರ ಮಹಿಮೆ ತಿಳಿಯದೈ ॥ ೧ ॥
ರಾಯರ ಸ್ವಾರಿಗೆ ಈ ಜಗದೊಳಗೆ ।
ಸೋಜಿಗವಲ್ಲ ಈಹಯವೊಂದೇ ॥ ೨ ॥

## ದೃಶ್ಯ : ವಿಕ್ರಮನ ಆಸ್ಥಾನ

**ವಿಕ್ರಮ : ಹಾಡು** — **ರಾಗ : ಬೇಹಾಗ್ - ಆದಿತಾಳ**

ಎಂಥಾ ಕುದುರೆ ಇದು । ಎನ್ನಂಥವರಿಗೆ ತಕ್ಕಂಥ ಹಯವು ಆಹಾ ॥ ಪ ॥
ನಾಡಿನೊಳಿದಕೇ ಈಡುಗಾಣೆನು ನಾನು
ಮಾಡುವೆ ಸ್ವಾರಿಯ ಕೂಡಿ ಹರುಷದೊಳು ॥ ೧ ॥
ಇಂದ್ರನ ತುರಗವ । ನಿಂದಿಸುವಂತಿದೆ ।
ಇಂದು ಇದನು ಕೊಂಡು । ಹೊಂದುವೆ ಆನಂದವ ॥ ೨ ॥

## ದೃಶ್ಯ : ಅರಣ್ಯ

**ವಿಕ್ರಮ : ಹಾಡು** — **ರಾಗ : ಮಾಂಡ್ - ರೂಪಕತಾಳ**

ಏನಿದಯ್ಯೋ । ವಿಧಿಯು ಮಾಯ । ಎನಗೆ ತಿಳಿಯದೋ ॥ ಪ ॥
ಹಾನಿಯೊದಗಿತಕಟ ಎನಗೆ । ಏನುತೋರದೈ ॥ ಅ.ಪ.॥
ನಾನು ಸ್ವಾರಿ ಗೈದ ತುರಗ । ಮಾಯವಾಯಿತೋ ।
ದಾನವಾರಿ ಮುಂದೆ ಇದಕೆ । ಏನು ಮಾಡಲೈ ॥

## ದೃಶ್ಯ : ಪ್ರಭಾವತಿ ಅಂತಃಪುರ

**ಪ್ರಭಾವತಿ : ಹಾಡು** — **ರಾಗ : ವಲಜಿ - ಆದಿತಾಳ**

ಹೇ ದಿವ್ಯ ತೇಜಾ ಪ್ರಭೋ ಪ್ರಭಾಕರ
ಆದಿತ್ಯ ಶ್ರೀಗಾತ್ರ ಆನಂದ ದಾಯಕ ॥ ಪ ॥
ಲೋಕದ ಜೀವನೇಕ ಪ್ರಭಾವ
ನೀ ಕರುಣಿಸಿ ಎನ್ನ ಪಾಲಿಸು ದೇವಾ ॥ ಅ.ಪ. ॥

ಜಗದೇಕ ಚೇತನನೇ ಸ್ವಾಮಿ,
ನೀನೇ ಕಾಯೋ ಸ್ವಜನಾಳಿ ಪ್ರೇಮಿ
ಅನುಗಾಲ ನಂಬಿಹೆನೋ ದೇವಾ
ಅನುವಿಂದ ಸಲಹೆನ್ನ ಕರುಣಾಕರ ! ಹೇ ॥
ಪತಿಪಾದ ಸಂದರ್ಶನಾ, ಧ್ಯಾನಾ
ಹಿತದಿಂದ ನೀಯಿತ್ತು ಪರಿಪಾಲಿಸೆನ್ನ
ಸತಿಯರಿಗೆ ಪತಿಸೇವೆಯೇ ಪಾವನಾ
ಪತಿದೂರಳೆನಿಪ ಪರಿತಾಪ ಪರಿಹರಿಸೋ ॥ ೧ ॥

## ದೃಶ್ಯ : ಅರಣ್ಯ

**ವಿಕ್ರಮ : ಹಾಡು** **ರಾಗ : ಕಾಂಭೋದಿ - ಆದಿತಾಳ**

ಮಾಯಾವಿಲಾಸವಿದೇನೊ ಶನಿದೇವ ॥ ಪ ॥
ಕಾಯೋ ಕರುಣಾಳುವೆ ನೀನು ಈ ಕ್ರೂರ ॥ ಅ.ಪ॥
ತಂದೆ ನಾನೆಂದು ಮರೆತಿಹೆನೋ ದೀನಬಂಧು ।
ನೊಂದೆ ನಿನ್ನಲ್ಲಿ ಅಪಚಾರ ಮಾಡಿದೆನೆಂದು ।
ಕಣ್ತೆರೆದು ಎನ್ನ ಕಾಪಾಡೊ ದೇವಾ ।
ಬಂದೆನೋ ನಿಂದೆನೋ ತಂದೆನಿನ್ನಡಿ ನಂಬಿ ॥ ೧ ॥

## ದೃಶ್ಯ : ಪ್ರಭಾವತಿ ಅಂತಃಪುರ

**ಪ್ರಭಾವತಿ : ಹಾಡು** **ರಾಗ : ಬಿಲಹರಿ - ಆದಿತಾಳ**

ಶರಣರ ಕಾಯೋ ಜಗನ್ನಾಥ
ಕರುಣೆಯ ತೋರೋ ಭಾಗ್ಯವಿದಾತ ॥ ಪ ॥
ಮೃದುಮಧುರ ನಿನ್ನ ಪೊಗಳುವ ವೇದ
ವೇದನೆ ನೀಗುವ ಪ್ರಣವ ಸುನಾದ ॥
ಅನುದಿನ ಪಾಡುವ ಯೋಗ ವಿನೋದ
ಆನಂದ ತಾಂಡವ ಆಡುವ ಪಾದ ॥ ೧ ॥
ಅಗಣಿತ ಮಹಿಮ ಅನಂತರೂಪ
ಆಶ್ರಿತ ರಕ್ಷಕ ಆನಂದದಾಯಕ

ವಾರಿಜ ನಯನ ವಾಮನರೂಪ
ವಾರಣೋದ್ಧಾರ ಶ್ರೀ ವಾಸುದೇವ ॥ ೨ ॥

ಪ್ರಭಾವತಿ : ಹಾಡು — ರಾಗ : ರಂಜಿನಿ - ಆದಿತಾಳ

ಏಸೇ ಪಿಸುಣಿದವೋ ವಿಧಿ ನೀನೇಕೆ ಕ್ರೂರನಾದೆಯೋ ॥ ಪ ॥
ಪತಿಯನ್ನು ದೂರಮಾಡಿಸಿದೆ ಹಿತರನ್ನ ಹಿತರಮಾಡಿದೆ
ಗತಿಯಾವುದೋ ಹಿತವಾವುದೋ ಮತಿ ಶೂನ್ಯಳಾಗಿ ಬಳಲಿದೆ ॥ ೧ ॥

## ದೃಶ್ಯ : ತಾಮಲಿಂದಾಪುರ
## (ನಂದಯ್ಯ ಶ್ರೇಷ್ಠಿ ಅಂಗಡಿ)

ಶ್ರೇಷ್ಠಿ : ಹಾಡು — ರಾಗ : ಮೋಹನ - ಆದಿತಾಳ

ಸಂತೇಲಿ ಧಾರಣೆ ಎಂತೆಂತಿರುವುದು । ಹಂತ ಹಂತದಿ ನೀಕ್ಷಿಸು ।
ಸ್ಯಾಂತ್ವ ಜೀರಿಗೆ ಮೆಣಸು ಲವಂಗ । ಬಾದಾಮಿ ಗೋಡಂಬಿ ಎಪ್ಪೆಮ್ಮು ।
ಬೆಲ್ಲದ ಅಚ್ಚು ಕಲ್ಲುಸಕ್ಕರೆ । ನಿಲ್ಲದೆ ವ್ಯಾಪಾರ ಆಗಿದೆಯಾ ।
ಮಾರಿದುದಾ ಕೊಂಡಿದುದಾ । ಮರೆಯದೆ ಲೆಕ್ಕದಿ ಬರೆದಿಹೆಯಾ ॥

## ದೃಶ್ಯ : ರಸ್ತೆ

ವಿಕ್ರಮ : ಹಾಡು — ರಾಗ : ಹಂಸಧ್ವನಿ - ರೂಪಕ ತಾಳ

ಕಾಣ್ಬುದೀಪುರವು ॥ ಪ ॥
ಕೊಬ್ಬೇಬೆಯೊಳ್ ಅತಿಶಯವೆಂಬವೋಲ್ ॥ ಅ.ಪ. ॥
ಅಗ್ರಸ್ಥಾನಗಳೊಳ್ । ವಿಗ್ರಹಂಗಳು ಸಮಗ್ರಮಾಗಿ ತೋರುತಿರ್ಪುವು ॥ ೧ ॥

ವಿಕ್ರಮ : ಹಾಡು — ರಾಗ : ಲತಾಂಗಿ - ಆದಿತಾಳ

ಕಂಡೇ ನಾ ನಟರಾಜನಾ । ಕರುಣಾಕರ ಶಿವನಾ ॥ ಪ ॥
ಕಂಡೇ ಮುಪ್ಪುರವನು ಗೆಲಿದವನಾ
ಶಿವನ ಪನ್ನಗ ಧರನ ॥ ಅ.ಪ. ॥
ತಂಡೋಪ ತಂಡ ಶರಣಾಳಿ ಸಮೇತ ನಾ

ಬ್ರಹ್ಮಾಂಡಗಳೊಡೆಯ ಶಿವತಾಂಡವ ನಾಟ್ಯವ ನಾಡಿ ಮೆರೆದಿಹನು ॥ ೧ ॥
ಸಕಲ ಲೋಕಗಳ ಸೃಷ್ಟಿಸ್ಥಿತಿಲಯ ತಾಳ ಮೇಳಗಳು ಮೊಳಗಿರಲು
ಅಖಿಲ ದಿಕ್ತಟಗಳುರೆ ತುಂಬಿರೆ ಘೋಂ ಘೋಂ ಶಂಖ ನಿನಾದದೊಳು
ಏಕಮಾದ ಓಂಕಾರ ನಾದ ಈ ವಿಶ್ವವ ವ್ಯಾಪಿಸಿ ಧ್ವನಿಸಿರಲು
ಪಿನಾಕಧರನು ವಿಶ್ವೇಶ್ವರ ಭವಹರನು ಧೀಂ ಧೀಂ ಎಂದಾಡಿ ನಲಿದ ॥ ೨ ॥

## ದೃಶ್ಯ : ನಂದಯ್ಯ ಶ್ರೇಷ್ಠಿ ಅಂಗಡಿ

**ವಿಕ್ರಮ : ಹಾಡು** ರಾಗ : ಚಿತ್ತರಂಜಿನಿ - ಆದಿತಾಳ

ನಾದೋಪಾಸನೆಯು ನರರಿಗೆ ಆಧಾರವು ಮುಕ್ತಿ ಸಾಧನೆಗೆ ॥ ಪ ॥
ವೇದಗಳನೆ ಮಥಿಸಿ । ಅರೆಸಿ ಅದರಿಂ ಪಲು ಸ್ವರಗಳ ಸೃಜಿಸಿ
ಬೋಧಿಸಿರುವ ಸರಿಗಮ ಪದನಿಯ ಆದರದಿಂದಲಿ ಆರಾಧಿಸುವ ॥ಅ.ಪ॥
ಆಗಮ ಶೃತಿತತಿ ಸಾರಗಳೆಲ್ಲಾ ಪ್ರಿಂಗಳದ ಘನತರ ಪದವನೆ ಕೊಡುವ
ಯಾಗ ಯೋಗ ಭೋಗಾದಿಗಳೆಲ್ಲಾ ರಾಗ ಸುಧಾರಸದೊಳ್ ಇರುವಾಗ ॥ ೧ ॥

## ದೃಶ್ಯ : ಉದ್ಯಾನವನ

**ಆಲೋಲಿಕೆ : ಹಾಡು** ರಾಗ : ಬೇಹಾಗ್ - ಆದಿತಾಳ

ಸಖಿನೋಡೆ ವನದ ಸೊಬಗ ॥ ಪ ॥
ಮನದಮುದವ ಅಮೃತಗೊಳಿಸುವ ಸಖಿನೋಡೇ ವನದ ಸೊಬಗ ॥ ಅ.ಪ॥
ಮಲ್ಲಿಗೆ ಜಾಜಿ ಎಲ್ಲ ಕುಸುಮಗಳು ।
ಎಲ್ಲೆಲ್ಲಿಯುತಾವ್ ಚೆಲ್ಲಿಹವು ।
ಪುಲ್ಲಲೋಚನ ಶ್ರೀ ರಾಧಾರಮಣನ ।
ನಿಲ್ಲದೆ ಮನಕೆ ತಂದು ತೋರುವ ॥ ೧ ॥

## ಶ್ರೇಷ್ಠಿ ಮನೆ - ಗಾನಮಂದಿರ

**ವಿಕ್ರಮ : ಹಾಡು** ರಾಗ : ಹಂಸಧ್ವನಿ - ರೂಪಕತಾಳ

ಏನು ಚಿತ್ರಮಾಗಿಹುದು । ಮನೆಯು ॥ ಪ ॥
ನಾನು ನೋಡಲಿಂದ್ರನ ಭವನವ ಮೀರಿ ತೋರುವುದು ॥ ಅ.ಪ ॥

ಎತ್ತ ನೋಡಲು । ಮುತ್ತಿನ ತೋರಣ ಚಿತ್ತವನಾಕರ್ಷಿಸುವುದು ।
ಮತ್ತೆ ಮುತ್ತಿನ ಗೊಂಚಲುಗಳು । ಸುತ್ತ ಹೊಳೆವುವು ॥ ೧ ॥
ಸೇರಲೇನುಕಾರಣವು ಈ ಭಾರ್ಗೃಹದೊಳು ॥
ಧೀರನಾ ಶನಿರಾಯನ ಮಹಿಮೆ । ಎನಿಸಿ ತೋರ್ಪುದು ॥ ೨ ॥

**ವಿಕ್ರಮ : ಹಾಡು** **ರಾಗ : ವಾಚಸ್ಪತಿ - ಆದಿತಾಳ**

ಬಾಬಾಬಾ ಶಂಕರ ಮೊರೆಯಿಡುವೆನೋ ಪ್ರಭುವೇ ॥ ಪ ॥
ಬಾ ಸ್ವಾಮಿ ಭಕ್ತರ ಸುರಧೇನು ಭವಾನಿ ಶಿವನೆ ಕರುಣಾಳು ॥ ಅ.ಪ ॥
ಈ ಮೌನವೇಕೋ ಪ್ರಭೂ ಓ ದೇವ ॥
ನೀನೇ ನವರಸ ಕಲಾಧರ ಸಾಮಗಾನ ನಾಟ್ಯ ಲೋಲ ಪ್ರಿಯಕರ ॥ ೧ ॥
ನಾಗೇಂದ್ರ ಭೂಷಣ ಸುರಾಸುರಾದಿ ವಂದಿತ
ಯೋಗೀಂದ್ರ ಸನ್ನುತ ನಿರಾಮಯ ನಿಖಿಳಚಿತ್ರ
ಲೋಕೇಶ ಪಾರ್ವತೀನಾಥಾ ಸುಪ್ರೀತ
ನೀನೇ ನವರಸ ಕಲಾಧರ ಸಾಮಗಾನ ನಾಟ್ಯ ಲೋಲ ಪ್ರಿಯಕರ ॥ ೨ ॥

**ಆಲೋಲಿಕೆ : ಹಾಡು** **ರಾಗ : ತಿಲಂಗ್ - ಝಂಪೆತಾಳ**

ಕನಸಿನಲಿ ಕೈ ಪಿಡಿದ । ಕಣ್ಮಣಿಯು ನೀನೆಂದು
ನನಸಿನಲಿ ನೆನೆನೆನೆದು । ನಾನೆ ಬಂದಿಹೆನಿಂದು ।
ಇನಿಯನು ನೀನೆಂದು । ಮನಸಿನಾ ಬೇಡುವೆನು
ಅನುಮಾನವೇಕಿನ್ನು । ಅನುರಾಗವನು ತೋರೆಯೋ ॥
ಮನವು ಮಲ್ಲಿಗೆಯಂತೆ । ಅರಳಿಹುದು ನಿನಗಾಗಿ ।
ತನುವು ಕಂಪಿಸುತಲಿದೆ । ತಾಳೆನೋ ವಿರಹವಾ ॥
ವಿನಯದಿಂ ಸ್ತುತಿಸುವೆನೊ । ಮನುಜೋತ್ತಮನೆ ಏಳೋ ॥
ಮುನಿಸಿದೇಕೆ ಪೇಳೊ । ಮೌನವನೆ ತೊರೆಯೋ ॥

**ವಿಕ್ರಮ : ಕಂದ**

ಅರರೇ ಅಚ್ಚರಿಯೇನಿದು ಮಾಯೇ
ಮನದ ಭ್ರಮೆಯೋ ವಿಧಿ ತಂದ ವಿಭ್ರಾಂತಿಯೋ ॥

ಆರರೇ ಧರೆಯೊಳಗಿಲ್ಲದ ಈ ದೃಶ್ಯ
ಸೃಷ್ಠಿ ಕಣಕೊ ಮತ್ತಾವ ಪರಿಣಾಮಕೋ
ಮರೆತೇ ಬ್ರಹ್ಮನು ನೀಡಿಹ ನೇನೋ ಜೀವವನಿದಕೆ
ಎನಗಿರುವ ದೌರ್ಭಾಗ್ಯಕೆ ಉರಿಸಲ್ ಶೋಕದಬೆಂಕಿ
ಯೊಳೆನ್ನ ಗೈದ ಕ್ರಮವೋ ಇದು ಶನಿದೇವನ ಮಾಯೆಯೋ

**ವಿಕ್ರಮ : ಹಾಡು** **ರಾಗ : ಜಂಜೂಟಿ - ಚಾಪುತಾಳ**

ಏನಿದೇನಾಶ್ಚರ್ಯ । ಶ್ರೀನಿವಾಸ ಹರಿಯೇ
ಈ ವಿಧವನೀಗ । ಮಾಡುವನೇ ಶನಿಯು ॥ ಪ ॥
ಚಿತ್ರದಿಬರೆದ ಹಂಸೆ ಪ್ರಾಣ ಹೊಂದಿಬಂದು ।
ಹಕ್ಕಿಗೂಟದ ಮೇಲೆ । ಮುತ್ತೂ ನುಂಗುತಲಿದೆ ॥
ಏನಿದೇನಾಶ್ಚರ್ಯ । ಈವಿಧಿಯು ಮಾಯು ॥ ೧ ॥

**ವಿಕ್ರಮ : ಹಾಡು** **ರಾಗ : ಸಾರಮತಿ - ಆದಿತಾಳ**

ಏನೀ ಶೋಧನೆಯೋ ದೇವ ಗ್ರಹಮಂಡ ರಾಜ
ಶರಣಾಳಿ ಸುರ ಭೂಜ ॥ ಪ ॥
ಆವಪರಾಧವ ನಾ ಗೈದೆ ನಿನ್ನೊಳು ಶನಿದೇವಾ ದೇವಾ
ಎನ್ನಾವಪಾಪದ ಫಲವಿದುವೋ
ನೀ ಎನ್ನ ನೀಚನೆನೆಸಿ ಎನ್ನ ಕ್ರೂರನೆನಿಸಿ ದರಿಕಿವುದು ಸರಿಯೆ ॥೧॥

**ದೃಶ್ಯ : ಚಂದ್ರಸೇನನ ದರ್ಬಾರು**

**ಚಂದ್ರಸೇನ : ಹಾಡು** **ರಾಗ : ಕಲ್ಯಾಣ - ರೂಪಕತಾಳ**

ಸಚಿವ ವರನೇ ಕುಶಲದಿಂದಿಹರೇ । ವರಮಂತ್ರಿ ಶೇಖರನೇ ॥ ಪ ॥
ಧರ್ಮದಿಂದ ಸಕಲ ಜನರು । ಮರ್ಮವರಿತು ರಾಜ್ಯದೊಳಗೆ ।
ಪೆರ್ಮೆಯನ್ನು ಬಯಸುತಿಹರೆ । ನಿರ್ಮಲ ಮತಿಧಾರಕ ವರ ॥ ೧ ॥

ಮಂತ್ರಿ : ಹಾಡು ರಾಗ : ಹಂಸಧ್ವನಿ - ರೂಪಕತಾಳ

ಸತ್ಯ ಸೌಖ್ಯವಾಂತು ಜನರು । ನಿರುತ ಬಾಳುವರೈ ॥ ಪ ॥
ನಿತ್ಯ ಮಾರ್ಗವ ಬಿಡದೆ ವಿಮಲ । ಯಶವತಾಳಿಹರೈ ॥ ಅ.ಪ. ॥
ಶ್ರೀಶಕರುಣದಿಂದ ಸಕಲರು । ಸಿರಿಯನಾರ್ಜಿಸಿ ।
ಲೇಶಭಂಗವಿಲ್ಲದೆ ಸುಕ್ಷೇಮದಿಂದಿಹರೈ ॥ ೧ ॥

ಸೇನಾಧಿಪತಿ : ಹಾಡು ರಾಗ : ಕಾಂಭೋದಿ - ಆದಿತಾಳ

ಭೂಪಲಾಲಿ ಸೆನ್ನಯ । ವಾಕ್ಯವನೀಗ ॥ ಪ ॥
ಪತ್ತಿನೂರಡಲು ಬಲು । ಮುತ್ತಿ ಪಮ್ಮಿಯ ಸೈನ್ಯ ।
ಕತ್ತಿಯಿಂದಲಿ ಶತ್ರು । ಶಿರವ ಛೇದಿಸುತಿಹೆ ॥ ಅ.ಪ. ॥
ತಂಡ ತಂಡದಿ ಪೋಗಿ । ಪುಂಡರನಡಗಿಸಿ ।
ಮಂಡಲೇಂದ್ರರ ಗರ್ವ । ಖಂಡ್ರಿಸಿ ಬರುತಿದೆ ॥ ೧ ॥

## ದೃಶ್ಯ : ರಸ್ತೆ

ವಿಕ್ರಮ : ಕಂದ

ದೀನನಾಗೈ ತಂದ ದ್ವಿಜನದಾರಿದ್ರ್ಯವನು
ನೀಗಿಸುವುದೇ ಪಾಪವೇನೋ ಶನಿದೇವ
ಮಾನ ಭೀತಿಗೆ ಕಂಡ ಸತ್ಯವನು ಮುಚ್ಚಿಡದೇ
ನಿಜ ನುಡಿದುದು ಅಪರಾಧವೇ ಕಾಕವಾಹ ॥ ೧ ॥

ವಿಕ್ರಮ : ಹಾಡು ರಾಗ : ಕಾಂಭೋದಿ - ಚಾಪುತಾಳ

ಕದಿಯಲಿಲ್ಲವೋ ನಿಮ್ಮ । ವೈತ್ಯನಪದಕವನು ।
ಹೊಡೆಯ ಬೇಡಿರಿ ನಿಮ್ಮ ಪದಕೆರಗಿ ಬೇಡ್ವೆ ॥ ಪ ॥
ಪ್ರಾಣತೆಗೆದರು ನಿಮಗೆ ಬಹುಪುಣ್ಯ ಬರುವುದು ॥
ಹೀನಗತಿಯು ಎನಗೆ ಒದಗಿ ಬಂದಿಹುದೂ ॥ ಅ.ಪ. ॥
ಬಿಡಿರಪ್ಪ ಎನ್ನನು ಹೊಡೆಯಬೇಡಿರಿ ನೀವು ।
ತಡೆಯಲಾರೆನು ನಿಮ್ಮ ಅಡಿಗೆರಗಿ ಬೇಡ್ವೆ ॥

ಸಡಲಿಸಿ ಎಡಮುರಿಯ । ಬಿಡದೆ ಬೇಡುವೆನಿಮ್ಮ ।
ಪೊಡವಿ ಪಾಲಕನೆಡೆಗೆ ತಡೆಯದೆ ಬರುವೇ ॥ ೧ ॥

**ವಿಕ್ರಮ : ಹಾಡು** **ರಾಗ : ಕಲ್ಯಾಣಿ - ಚಾಪುತಾಳ**

ಭಾನುಜ ಮಹಿಮಾಕರ । ಶನೈಶ್ಚರ । ದೀನಾವನ್ನೈ ಕಾಕಧರ ॥ ಪ ॥
ಭಾನು ದೇವನ ಸೂನು ಪರಮಕೃಪಾನು ರಾಗವ ನೀನು ಬೀರುತೆ
ಮಾನ ಪ್ರಾಣಕೆ ಹಾನಿತಾರದಿ ರಾನ ತಾಳಿಗೆ ಧ್ಯಾನಿಪೆನು ನಾಂ ॥ ಅ.ಪ. ॥
ಮೇಲಾದ ನೃಪನೆನುತೆ । ರಾಜ್ಯವ ನಾನು । ಪಾಲಿಸಿ ಧರ್ಮದೊಳು ।
ಕಾಲವಶದಿಂ ನಿನ್ನ ಮಹಿಮೆಯ । ಕೀಳು ನುಡಿಯುತ ಮೀಯವಸ್ಥೆಗೆ ।

**ವಿಕ್ರಮ : ರಾಗಮಾಲಿಕೆ**

ಅಯ್ಯೋವಿಧಿಯೇ । ಹೀಗೇಕೆ ಮಾಡಿದೆಯೋ
ಅಯ್ಯೋಸಹಿಸೆ । ನಾನೀ ಸಂಕಟವಾ ॥
ಕಾನನ ದೊಳಗೆನ್ನ । ಕೈಕಾಲುಗಳ ಕಡಿಸಿ ।
ಮಾನ ಹೀನನಮಾಡಿ । ಏಕೆನ್ನ ಬಿಸುಟೆ ॥
ಏನಾಯ್ತು ನಿನಗೆಂದು । ಯಾರುಕೇಳುವರಿಲ್ಲಾ ।
ನಾನಾಗಿಕೂಗಿದರು । ಓ ಎನ್ನವರಿಲ್ಲಾ ॥
ಏಳಲಾರೆನೊ ನಾನು । ನಡೆಯಲಾರೆನೊ ನಾನು ।
ತಾಳಲಾರದೆ ಬಳಲಿ । ಗೋಳಾಡುತಿಹೆನೊ ।
ಹೇಳಲಾರದ ತೆರದಿ । ಕೀಳಾಗಿ ಜಗದಲ್ಲಿ ।
ಹಾಳಾದೆನಲ್ಲೋ । ಬಾಳು ಸಾಕಾಗಿಹುದು ॥

**ಲಕ್ಷ್ಮೀದೇವಿ : ಹಾಡು** **ರಾಗ : ಸಾರಮತಿ - ಆದಿತಾಳ**

ದೊರೆಯೆ ಪರಿ ಏನಿದು । ಕರಚರಣಕೊರೆದಿಹುದು ।
ಪರಮ ಪಾಪಿಗಳಾರೀ । ಪರಿಯನು ಗೈದರೋ ॥ ಪ ॥
ಕರವೆತ್ತಿ ಮುಗಿಯುವೆ । ತೆರಳಿರಿ ನಮ್ಮಯ ಪುರಕೆ ।
ಮರೆಯದೆ ನಿಮ್ಮ ಸೇವೆ । ತ್ವರಿತದಿ ಮಾಡುವೆ ॥ ೧ ॥

## ದೃಶ್ಯ : ತೇಲಿ ಶೆಟ್ಟಿ ಮನೆ ಮುಂಭಾಗ

ವಿಕ್ರಮ : ಹಾಡು ರಾಗ : ದೀಪಿಕ - ಆದಿತಾಳ

ಜ್ಯೋತಿಯ ಕರುಣಿಸೊ ಪರಮಾತ್ಮ । ಸೋತಿದೆ ಜಗದೊಳು ಎನ್ನಾತ್ಮ ॥ ಪ ॥
ಕಾತರದಿ ನಿನ್ನ ಕೂಗುವೆ ಜೀಯ । ಭೀತಿಯ ಕಳೆಯೋ ಮಹರಾಯ ॥ ಅ.ಪ॥
ನಾಲ್ಕೆಡೆ ತುಂಬ ನಲಿಯಲಿ ಜ್ಯೋತಿ । ವ್ಯಾಕುಲ ಅಳಿಯಲಿ ಬೆಳಗಲಿ ಕಾಂತಿ ॥
ಶೋಕವ ನೀಗಲಿ ನಲ್ಮೆಯ ಜ್ಯೋತಿ । ಲೋಕದಿ ನೆಲೆಸಲಿ ನಲ್ಮೆಯ ಶಾಂತಿ ॥೧॥

ಅಥವಾ

ವಿಕ್ರಮ : ಹಾಡು ರಾಗ : ದೀಪಿಕ - ಆದಿತಾಳ

ಬೆಳಗಿಸು ಜ್ಯೋತಿ ಕರುಣಾಮೂರ್ತಿ
ನಳನಳಿಸಿ ಕಾಂತಿ ನೆಲಸಲಿ ಶಾಂತಿ ॥ ಪ ॥
ಕಾಮಕ್ರೋಧದ ಮಾತ್ಸರ್ಯದ ಮಹದಂಧಕಾರ ಮಯವೀ ಮನವು
ಧೂಮದಂತೆ ವ್ಯಾಪಿಸುವ ಲೋಕದಿಂ ಕಾಣಲಾಗದೀ ಕಣ್ಗಳಿವು ॥ ೧ ॥
ಹೇಮ ಭೂಮಿ ಕಾಮಿನಿಗಳ ಬಂಧದಿ ಬೇಯುತಲಿಹುದೈ ಈ ತನವು
ಓ ಮಹಾದೇವ ಮಾಯದ ನಿಶೆಯ ನಿವಾರಿಸಿ ಪೊರೆಯೊ ಸರ್ವೇಶಾ ॥ ೨ ॥

ವಿಕ್ರಮ : ಸೀಸಪದ್ಯ

ಅರಸನಾಗಿರ್ದೆನ್ನ ಅಡವಿಯೊಳು ನೂಕಿ ಕಡುದೀನನಾಗಿಸಿದೆಯೋ ದಿಕ್ಕುಗೆಡಿಸಿ
ಕರೆದೊಯ್ದು ಕಾಪಾಡಿದಾ ಧಣಿಗೆ ಯೆನ್ನನೆ, ಚೋರನಾಗಿಸಿದೆ, ಕೈಕಾಲು ಕಡಿಸಿ
ಪರಿ ಪರಿಯ ಕಷ್ಟಗಳನ್ನನುಭವಿಸಿ ಗಾಣಿಗನೊಳಿರುತಿರಲು
ನೃಪಸುತೆಯ ಬಂಧಬೆರಸಿ
ಮರುಕವಿಲ್ಲದ ಕ್ರೂರ ಕಟುಕರಾ ಖಡ್ಗಕ್ಕೆ ಬಲಿಯೊಂದು ಕೊಡಿಸುತಿಹೆ ಶಿರವನಿಳಿಸಿ
ಅಪರಾಧಿ ನಾನಲ್ಲ, ಅಂಜಿಕೆಯು ಎನಗಿಲ್ಲ ಅಪ್ಪಲೀ ಮೃತ್ಯುವನು ನಾ ಬೆದರುತ್ತಿಲ್ಲ
ಒಪ್ಪಲೀ ಬಿಡಲೀ ಜಗಸತ್ಯ ಸುಳ್ಳಲ್ಲ ತಪ್ಪಿಲ್ಲದಾ ಜೀವಿಗೆಂದು ಭಯವಿಲ್ಲಾ ॥

ವಿಕ್ರಮ : ಹಾಡು ರಾಗ : ಕಲ್ಯಾಣಿ - ಆದಿತಾಳ

ಧನ್ಯನಾದೆ ಶನಿದೇವನೇ । ನಾನಿಂದು ॥ ಪ ॥
ಕಂದನೆಂದು ತಿಳಿದು । ಇಂದು ಇಲ್ಲಿ ಬಂದು ।



ಹೆಚ್.ಎಸ್. ಗೋವಿಂದಗೌಡರ ಸಂಪಾದಕತ್ವದಲ್ಲಿ ಹೊರ ಬಂದಿರುವ ಈ ಪೌರಾಣಿಕ ರಂಗಗೀತೆಗಳ ಸಂಗ್ರಹದ ಹಿಂದೆ ಗೌಡರ ಅನೇಕ ದಿನಗಳ ಪರಿಶ್ರಮ ಹಾಗೂ ಪೌರಾಣಿಕ ನಾಟಕಗಳ ಬಗ್ಗೆ ಅವರಿಗಿರುವ ಅಪಾರ ಶ್ರದ್ಧೆ, ಆಸ್ಥೆಗಳನ್ನು ಕಾಣಬಹುದಾಗಿದೆ.

ಪೌರಾಣಿಕ ನಾಟಕಗಳ ದೃಶ್ಯ ವೈಭವವನ್ನು ಇಂದು ಕಾಣಲಾಗದಿದ್ದರೂ, ಇಂದಿಗೂ ನಮ್ಮ ನಡುವೆ ಇರುವ ಹಿರಿಯ ರಂಗಚೇತನಗಳ ಸಿರಿಕಂಠದಿಂದ, ಅವುಗಳಲ್ಲಿನ ಸಂಗೀತ ಸಿರಿಯನ್ನು ಆಸ್ವಾದಿಸಲು ಅವಕಾಶವಾಗಿದೆ.

ಇದೀಗ ಗೌಡರ ಪ್ರಯತ್ನದಿಂದಾಗಿ ಪೌರಾಣಿಕ ನಾಟಕಗಳಲ್ಲಿನ ಸಾಹಿತ್ಯದ ಸೊಗಡು ಈ ಸಂಕಲನದ ಮೂಲಕ ಪುಸ್ತಕ ರೂಪದಲ್ಲಿ ಅಲ್ಲದೆ ಸಂಗೀತದ ಸೊಬಗು ಕ್ಯಾಸೆಟ್ ರೂಪದಲ್ಲಿ ಮುಂದಿನ ಜನಾಂಗಕ್ಕೆ ದೊರಕಿದಂತಾಗಿದೆ. ಇಲ್ಲಿ ಸಂಗ್ರಹಿತಗೊಂಡಿರುವ ಅನೇಕ ಹಾಡುಗಳ ಮುದ್ರಿತ ಪ್ರತಿಗಳು ಈಗ ಲಭ್ಯವಿಲ್ಲ. ಕೆಲವಂತೂ ಇನ್ನೂ ಅಪ್ರಕಟಿತವಾಗಿಯೇ ಉಳಿದಿದ್ದವು. ಇನ್ನು ಕೆಲವು ಅನಾಮಿಕ ಕೃತಿಗಳಾಗಿದ್ದು ಕೆಲ ಕಲಾವಿದರ ಸ್ಮೃತಿಪಟಲದಲ್ಲಿಯಷ್ಟೇ ಉಳಿದಿದ್ದವು. ಇದೀಗ ಇವೆಲ್ಲವುಗಳನ್ನು ಈ ಸಂಗ್ರಹದಲ್ಲಿ ದಾಖಲಿಸುವ ಸುತ್ತ್ಯ ಪ್ರಯತ್ನವನ್ನು ಗೌಡರು ನಡೆಸಿದ್ದಾರೆ.

ಹಾಸನ ಜಿಲ್ಲೆಯ ಅರಕಲಗೂಡು ತಾಲ್ಲೂಕಿನ ಹನ್ಯಾಳು ಗ್ರಾಮದಲ್ಲಿ ಹುಟ್ಟಿದ ಹೆಚ್.ಎಸ್. ಗೋವಿಂದಗೌಡರಿಗೆ ಪೌರಾಣಿಕ ನಾಟಕಗಳ ಸಂಗೀತದ ನಂಟು ಬಾಲ್ಯದಿಂದಲೇ ಒದಗಿಬಂದಿತ್ತು. ಚಿಕ್ಕಪ್ಪಂದಿರಾದ ಶ್ರೀ ಸಿದ್ದೇಗೌಡರ ಸುಬ್ಬೇಗೌಡರು ಕಲಾವಿದರಾಗಿದ್ದು, ಮತ್ತೊಬ್ಬ ಚಿಕ್ಕಪ್ಪ ಡ್ರಾಮಾ ಮಾಸ್ಟರ್ ಶ್ರೀ ಕುಂಟೇಗೌಡರ ಅಣ್ಣೇಗೌಡರು ಅರಕಲಗೂಡು ತಾಲ್ಲೂಕಿನ ಸುತ್ತ-ಮುತ್ತಲಿನ ಹತ್ತಾರು ಗ್ರಾಮಗಳಲ್ಲಿ ನಾಟಕ ಕಲಿಸುತ್ತ, ನಾಟಕ ಪ್ರಯೋಗಿಸುತ್ತ ಹೆಸರಾಗಿದ್ದವರು. ಸಹಜವಾಗಿಯೇ ಬಾಲಕ ಗೋವಿಂದಗೌಡರ ಮೇಲೆ ಇವರುಗಳ ಪ್ರಭಾವ ಗಾಢವಾಗಿ ಕಾಣಿಸತೊಡಗಿ[illegible] ಮುಂದಿನ ವಿದ್ಯಾಭ್ಯಾಸ ರುದ್ರಪಟ್ಟಣದಲ್ಲಿ. ಅನೇಕ ಹಿರಿಯ[illegible]ರ ಬೀಡು ರುದ್ರಪಟ್ಟಣ. ಇಲ್ಲಿನ ಸಾಂಸ್ಕೃತಿಕ ವಾತಾವ[illegible] ಉತ್ತಮ ಅಭಿರುಚಿಯನ್ನು ಬೆಳಸಿದ್ದರ ಪರಿಣಾಮವಾಗಿ ಇಂತ[illegible] ಸಂಗ್ರಹ ಹೊರಬಂದಿದೆ.



ಕಳೆದ ಮೂರು ವರ್ಷಗಳಲ್ಲಿ ಅನೇಕ ಊರು-ಕೇರಿಗಳಿಗೆ ಭೇಟಿ ನೀಡಿ, ನಾಟಕದ ಮಾಸ್ತರುಗಳ ಜೊತೆ ದಿನಗಟ್ಟಲೆ ಚರ್ಚೆ ನಡೆಸಿ ಈ ಸಂಗ್ರಹವನ್ನು ಹೊರತಂದಿರುವ ಗೋವಿಂದಗೌಡರ ಈ ಪ್ರಯತ್ನ ಒಂದು ಅಕಾಡೆಮಿಕ್ ಮೌಲ್ಯವನ್ನು ಪಡೆದಿರುತ್ತದೆ. ನಾಟಕಾಸಕ್ತ ಜನ ಇದನ್ನು ಆದರದಿಂದ ಸ್ವೀಕರಿಸುವುದರಲ್ಲಿ ಸಂದೇಹವಿಲ್ಲ.

ಆರ್. ನಾಗೇಶ್
ಅಧ್ಯಕ್ಷರು
ಕರ್ನಾಟಕ ನಾಟಕ ಅಕಾಡೆಮಿ, ಬೆಂಗಳೂರು